ಶ್ರೀಃ.

# ಚೆನ್ನಬಸವೇಶವಿಜಯಂ.

ಯ್. ಆರ್. ಕರಿಬಸವಶಾಸ್ತ್ರಿಗಳಿಂದ

ವಿರಚಿತವಾದುದು.



ಮೈಸೂರು
ಸ್ಟಾರ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

ಪ್ರಥಮ ಮುದ್ರಣ ಪ್ರತಿ ೨೦೦೦,

1906.

# ಪ್ರಸ್ತಾವನೆ.

---

ವೀರಶೈವಮತದ ಪೌರಾಣಿಕಗ್ರಂಥಗಳಲ್ಲಿ ಅತಿಪ್ರಸಿದ್ಧವಾದುವುಗಳು ಬಸವೇಶ್ವರಪುರಾಣ, ಚೆನ್ನಬಸವೇಶ್ವರಪುರಾಣಗಳು. ಬಸವೇಶ್ವರನು ಭಕ್ತಿಪ್ರಾಧಾನ್ಯದಿಂದ ಲೋಕೋತ್ತರನೆನಿಸಿಕೊಂಡಂತೆಯೇ ಚೆನ್ನಬಸವೇಶನು ಜ್ಞಾನಪ್ರಾಧಾನ್ಯದಿಂದ ಲೋಕಪೂಜ್ಯನಾದನು. ಇವರೀರ್ವರನ್ನು ನಾಯಕರನ್ನಾಗಿಟ್ಟು ರಚಿಸಿದುವುಗಳೇ ಮೇಲ್ಕಂಡ ಎರಡು ಪುರಾಣಗಳಾಗಿರುವುವು. ಮೊದಲನೇ ಬಸವೇಶಪುರಾಣದಲ್ಲಿ- ಬಸವೇಶ್ವರನಿಗೆ ಸಂಬಂಧಿಸಿದ ಹೆಚ್ಚು ವಿಷಯಗಳು, ಇನ್ನು ಕೆಲಶರಣರ ಚರಿತ್ರಗಳು ಮಾತ್ರವೇ ಪ್ರತಿಪಾದಿತವಾಗಿದ್ದುವು. ಚೆನ್ನಬಸವೇಶನ ವಿಷಯವು ಅದರಲ್ಲಿ ಹೆಚ್ಚಾಗಿ ಬರೆಯಲ್ಪಟ್ಟಿರಲಿಲ್ಲ. ಆದುಕಾರಣ, ಚೆನ್ನಬಸವೇಶನ ಚಾರಿತ್ರವನ್ನೂ, ತದಂಗಗಳಾದ ಇತರ ವಿಷಯಗಳನ್ನೂ ಶಿವನ ಪಂಚವಿಂಶತಿ ಲೀಲೆಗಳನ್ನೂ ಸೇರಿಸಿ, ಶ್ರೀ ವಿರೂಪಾಕ್ಷಪಂಡಿತರು "ಚೆನ್ನಬಸವೇಶ್ವರ ಪುರಾಣ" ವೆಂಬ ಗ್ರಂಥವನ್ನು ರಚಿಸಿದರು.

ಈ ಗ್ರಂಥನಾಯಕನಾದ ಚೆನ್ನಬಸವೇಶನ ವಿಷಯವಾಗಿ ವಿಚಾರ ಮಾಡಿದರೆ,- ಜಗತ್ತಿನಲ್ಲಿ ಶಿವಭಕ್ತಿಯನ್ನುದ್ಧರಿಸುವುದಕ್ಕಾಗಿ ಬಸವೇಶನು ಅವತರಿಸಿ, ತನ್ನ ಪವಿತ್ರಕರ್ತವ್ಯವನ್ನು ಆತನು ಅತುಲವಾಗಿ ನೆರವೇರಿಸಿದರೂ, ಶಿವೋಪದಿಷ್ಟವಾದ ಅಸಾಧಾರಣವೀರಶೈವಮತಷಟ್ಸ್ಥಲಜ್ಞಾನಸಾರವನ್ನು ಜಗತ್ತಿನಲ್ಲಿ ಬಿತ್ತರಿಸಿದ ಮಹಾಮಹಿಮನು ಈ ಚೆನ್ನಬಸವೇಶನೇ ಆಗಿರುತ್ತಾನೆ. ಈತನು ಬಸವೇಶನ ಅಗ್ರಜೆಯಾದ ನಾಗಾಂಬಿಕೆಯ ಉದರದಲ್ಲಿ ಶಿವಪ್ರಸಾದದಿಂದುದ್ಭವಿಸಿದನು. ಈತನ ಜನನಕಾಲವು ಚೆನ್ನಬಸವೇಶ್ವರಪುರಾಣದಲ್ಲಿ ತಿಳಿಸಲ್ಪಟ್ಟಿಲ್ಲ. ಇತರ ಕೆಲವು ಗ್ರಂಥಗಳಲ್ಲಿ ಅದು ಸೂಚಿಸಲ್ಪಟ್ಟಿದ್ದರೂ, ಪರಸ್ಪರ ವಿರುದ್ಧವಾಗಿವೆ. ಮತ್ತು ಆ ಕಾಲವು, ಶಾಸನಶೋಧನದಿಂದ ಗೊತ್ತಾಗಿರುವ ಬಿಜ್ಜಳನ ಆಳ್ವಿಕೆಯ ಕಾಲಕ್ಕೆ ಸಂಘಟಿಸುವುದಿಲ್ಲ. ಬಸವೇಶನು ಕಲ್ಯಾಣವನ್ನು ಸೇರಿ ಮಂತ್ರಿಯಾಗಿದ್ದನಂತರ ಈತನು ಜನಿಸಿದನೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಇದರಿಂದ ಬಸವೇಶನು ಮಂತ್ರಿತ್ವವನ್ನು ವಹಿಸುವುದಕ್ಕೆ ಅರ್ಹವಾದ ವಯಸ್ಸನ್ನು ಪಡೆದ ಬಳಿಕವೇ ಈತನು ಉದಿಸಿದನೆಂದು ನಿರ್ಧರಿಸಬೇಕಾಗುತ್ತದೆ. ಆದರೆ, ಈತನು ಬಸವೇಶನಿಗಿಂತ ೧೨ ವರ್ಷಕ್ಕೆ ಮಾತ್ರ ಚಿಕ್ಕವನೆಂದು ಹಿಂದಣವರು ಅಭಿಪ್ರಾಯಪಟ್ಟಿರುತ್ತಾರೆ. ಇದನ್ನು ನೋಡಿದರೆ- ಬಸವೇಶನನ್ನು ೧೨ ನೇ ವರ್ಷವಯಸ್ಸಿನಲ್ಲಿಯೇ ಮಂತ್ರಿತ್ವವನ್ನು ವಹಿಸಿದ್ದನೆಂದು ಹೇಳಬೇಕಾಗುತ್ತದೆ. ಇದು ಅಸಂಭವ. ಏಕೆಂದರೆ- ಬಸವೇಶನು ಬಿಜ್ಜಳನ ಬಳಿಯಲ್ಲಿ ಅವನು ಸಾಯುವುದಕ್ಕೆ ೬-೮ ತಿಂಗಳಿರುವವರೆಗೂ ಇದ್ದನೆಂದು ಗೊತ್ತಾಗಿದೆ. ಬಿಜ್ಜಳನ ಆಳ್ವಿಕೆಯ ಅದ್ಯಂತಕಾಲವೆಲ್ಲ

೧೨ ವರ್ಷಗಳು ಮಾತ್ರವೇ ಎಂದು ಶೋಧಕರು ಗೊತ್ತುಮಾಡಿದಾರೆ. ಇವೆರಡನ್ನೂ ಇಟ್ಟುಕೊಂಡು ನೋಡಿದರೆ, ೨೪ ವರ್ಷಗಳು ಮಾತ್ರವೇ ಬಸವೇಶನು ಭೂಮಿಯಲ್ಲಿದ್ದನೆಂತಲೂ, ಚೆನ್ನಬಸವೇಶನು ಬಸವೇಶನ ಶಿವೈಕ್ಯದ ನಂತರ ೪ ತಿಂಗಳೊಳಗೇ ಮುಕ್ತನಾದುದರಿಂದ, ಆತನು ೧೨ ವರ್ಷಗಳು ಮಾತ್ರವೇ ಭೂಮಿಯಲ್ಲಿದ್ದನೆಂತಲೂ ಹೇಳಬೇಕಾಗುತ್ತದೆ. ಇದು ಅಸಮಂಜಸವಾದದ್ದು. ಅದುಕಾರಣ, ಬಸವೇಶನು ಮಂತ್ರಿತ್ವವನ್ನು ವಹಿಸುವುದಕ್ಕೆ ಮುಂಚೆಯೇ ಚೆನ್ನಬಸವೇಶನು ಉದಿಸಿದ್ದನೆಂತಲೂ, ಬಸವೇಶನು ಕಲ್ಯಾಣದ ಮಂತ್ರಿಯಾಗುವಾಗ್ಗೆ ತಾನು ೨೦ ವರ್ಷಕ್ಕಿಂತಲೂ ಕಡಿಮೆಯಿಲ್ಲದ ಪ್ರೌಢವಯಸ್ಕನಾಗಿದ್ದನೆಂತಲೂ, ಆಗ್ಗೆ ಚೆನ್ನಬಸವೇಶನು ದೀಕ್ಷಾಸಂಸ್ಕಾರಕ್ಕರ್ಹವಾದ, ೮ ವರ್ಷಕ್ಕಿಂತ ಕಡಿಮೆಯಿಲ್ಲದ, ಎಂದರೆ ೧೦–೧೨ ವರ್ಷ ವಯಸ್ಕನಾಗಿರಬಹುದೆಂತಲೂ ಊಹಿಸಬೇಕಾಗುತ್ತದೆ. ಅನಂತರ ಇವರು ಕಲ್ಯಾಣದಲ್ಲಿ ೧೨ ವರ್ಷಗಳಿದ್ದರೆಂದು ಹೇಳಿದರೆ, ಬಸವೇಶನ ಆದ್ಯಂತಜೀವಿತಕಾಲವು ಮೂರುಪಟ್ಟು (೩೬) ವರ್ಷಗಳೆಂತಲೂ, ಚೆನ್ನಬಸವೇಶನ ಆದ್ಯಂತಕಾಲವು ಎರಡುಪಟ್ಟು (೨೪) ವರ್ಷಗಳೆಂತಲೂ ಇರುವ ಜನಶ್ರುತಿಯು ಯಥಾರ್ಥವಾಗುವುದು. ಮತ್ತು ಬಸವೇಶ ಚೆನ್ನಬಸವೇಶ ಬಿಜ್ಜಳನ ಕಾಲವು ಕ್ರಿ. ಶ. ೧೨ ನೇ ಶತಮಾನದ ಮಧ್ಯಕಾಲವೆಂಬುದನ್ನು ಶೋಧಕರು ಗೊತ್ತುಮಾಡಿದಾರೆ.

ಈ ಚೆನ್ನಬಸವೇಶನಿಗೆ ಜನನಕಾಲದಲ್ಲಿಯೇ ಪದ್ಧತಿಯಂತೆ ಲಿಂಗಧಾರಣೆಯಾದರೂ, ಅಂಥ ಲಿಂಗವು ಗುರುಮುಖದಿಂದ ಅಧ್ವಶೋಧನ ಕಳಾವಾಹನಗಳನ್ನೈದಿ ಕೊಡಲ್ಪಟ್ಟು, ಅದನ್ನರ್ಚಿಸುವುದೇ ವೀರಶೈವಧರ್ಮವಾಗಿರುವುದರಿಂದ, ಚೆನ್ನಬಸವೇಶನು ತನಗೆ ಮಾತನಾದ ಬಸವೇಶನನ್ನೇ ಗುರುಭಾವದಿಂದ ಕಂಡು, ಆತನಿಂದಲೇ ಮೇಲ್ಕಂಡ ಸಂಸ್ಕಾರವನ್ನು ಪಡೆದನು. ತನಗೆ ಹಿರಿಯನೂ ಸಂಸ್ಕಾರಾಧಿಕಾರಿಯೂ ಆಗಿದ್ದ ಬಸವೇಶನನ್ನು ಚೆನ್ನಬಸವೇಶನು ಗುರುಭಾವದಿಂದ ಕಾಣುತ್ತಿದ್ದಂತೆಯೇ, ಚೆನ್ನಬಸವೇಶನಲ್ಲಿ ಶಿವಜ್ಞಾನಾಧಿಕ್ಯವನ್ನು ನೋಡಿಯೂ, ಆತನಿಂದ ಷಟ್ಸ್ಥಲಸಿದ್ಧಾಂತಬೋಧೆಯನ್ನು ತಾನು ಪಡೆದೂ ಕೂಡ, ಬಸವೇಶನು ಆ ಚೆನ್ನಬಸವೇಶನನ್ನೂ ಗುರುಭಾವದಿಂದ ಕಂಡಿದ್ದನು. ಚೆನ್ನಬಸವೇಶನು ಶಿವಜ್ಞಾನಮೂರ್ತಿಯೇ ತಾನಾಗಿದ್ದುದರಿಂದ ಭೂತಲದಲ್ಲಿ ಬಸವಾದಿಪ್ರಮಥರೆಲ್ಲರಿಗೂ ಕಾಲೋಚಿತವಾಗಿ ಜ್ಞಾನೋದಯವನ್ನು ಮಾಡಿ, ಎಚ್ಚರಿಸಿ, ಎಲ್ಲರನ್ನೂ ಷಟ್ಸ್ಥಲಮಾರ್ಗನಿಷ್ಠರಾಗುವಂತೆ ಮಾಡುತ್ತಿದ್ದನು. ಬಸವೇಶನು ಭಕ್ತಿಪರವಶತೆಯಿಂದ ಜಂಗಮರಲ್ಲಿ ಯೋಗ್ಯತಾವಿಶೇಷವೊಂದನ್ನೂ ಲಕ್ಷಿಸದೆ, ತನ್ನ ಪ್ರಾಣದಂತೆಯೇ ಅವರನ್ನು ಕಾಣುತ್ತಿದ್ದನು. ಚೆನ್ನಬಸವೇಶನು ಹಾಗಲ್ಲ; ಜಂಗಮರು "ಜ್ಞಾನಂತ್ಯತಿಶಯಾದ್ಯೇತುಶಿವಂವಿಶ್ವಪ್ರಕಾಶಕಂ | ಸ್ವಸ್ವರೂಪತಯಾತೇತುಜಂಗಮಾಇತಿಕೀರ್ತಿತಾಃ" ಎಂಬ ವಚನವರ್ಥದಂತೆ ಸ್ವಸ್ವರೂಪಜ್ಞಾನಿಗಳಾಗಿರತಕ್ಕದ್ದೇ ಜಂಗಮಲಕ್ಷಣವೆಂದು ವಿಧಿಸಿ, ಎಲ್ಲರನ್ನೂ ಅಂತಹ ಜ್ಞಾನಿಗಳನ್ನಾಗಿ ಮಾಡುವುದಕ್ಕೆ ಆವಶ್ಯಕವಾದ ನಿರ್ಬಂಧವನ್ನು ಕೂಡ ಕಲ್ಪಿಸಿದ್ದನು. ಷಟ್ಸ್ಥಲಜ್ಞಾನಿಗಳಲ್ಲದವರು ತನ್ನರಮನೆ

ಪ್ರವೇಶಿಸಲಾಗದೆಂದು ಕಟ್ಟಪ್ಪಣೆಯನ್ನು ಮಾಡಿ, ತನ್ನರಮನೆಯ ೬ ಬಾಗಿಲುಗಳಲ್ಲೂ ೬ ಮಂದಿ ಷಟ್ಸ್ಥಲಬ್ರಹ್ಮಿಗಳನ್ನು ಕಾವಲಿರಿಸಿ, ಹೊರಗಿನಿಂದ ಬರುವವರನ್ನೆಲ್ಲ ಅವರು ಷಟ್ಸ್ಥಲವಿಚಾರವಾಗಿ ಪ್ರಶ್ನೆ ಮಾಡಿ, ಅದಕ್ಕೆ ತಕ್ಕ ಉತ್ತರವನ್ನು ಕೊಟ್ಟವರನ್ನೇ ಒಳಗೆ ಬಿಡುವಂತೆ ಏರ್ಪಡಿಸಿದ್ದನು. ಈ ಕಾರಣದಿಂದಲೇ ಚೆನ್ನಬಸವೇಶನನ್ನು ಷಟ್ಸ್ಥಲಸ್ಥಾಪನಾಚಾರ್ಯನೆಂದು ವೀರಶೈವರು ನಂಬಿರುವರು. ಈತನು ಬಾಲಬ್ರಹ್ಮಚಾರಿಯಾಗಿದ್ದು, ಗೃಹಸ್ಥಾಶ್ರಮವನ್ನು ಸ್ವೀಕರಿಸದೆ, ನಿರಾಭಾರಿ (ಯತಿ) ಯಾಗಿಯೇ ಮುಕ್ತನಾದನು. ಅಲ್ಲಮಪ್ರಭುವು ಕಲ್ಯಾಣಪಟ್ಟಣದಲ್ಲಿ ಆರೋಹಿಸಿದ್ದ ಶೂನ್ಯಸಿಂಹಾಸನದ ಪಟ್ಟವೇ ಚೆನ್ನಬಸವೇಶನಿಗೆ ಪ್ರಭುವಿನಿಂದ ವಹಿಸಿಕೊಡಲ್ಪಟ್ಟಿತೆಂದು ಪುರಾವೃತ್ತವಿರುತ್ತದೆ. (ಅದನ್ನು ವಿರೂಪಾಕ್ಷಪಂಡಿತರು ತಮ್ಮ ಗ್ರಂಥದಲ್ಲಿ ಸ್ಪಷ್ಟಪಡಿಸಿಲ್ಲ) ಈಗಿನ ಅತಿವರ್ಣಾಶ್ರಮಿಗಳಾದ ನಿರಾಭಾರಿಗಳು ಚೆನ್ನಬಸವೇಶ್ವರನ ಸಂಪ್ರದಾಯಸ್ಥರೆಂದು ಹೇಳುವುದು ಈ ಆಧಾರದಿಂದಲೇ.

ಹೀಗೆ ಭೂಲೋಕದಲ್ಲಿ ಶಿವಜ್ಞಾನವನ್ನು ಉದ್ಧರಿಸುವುದಕ್ಕಾಗಿ ಶಿವನಪ್ಪಣೆಯಿಂದ ಅವತರಿಸಿದ್ದ ಚೆನ್ನಬಸವೇಶನ ಚರಿತ್ರದ ವಿವರಣವನ್ನೇ ಮುಖ್ಯಲಕ್ಷ್ಯವನ್ನಾಗಿಟ್ಟುಕೊಂಡು, ಚೆನ್ನಬಸವೇಶ್ವರ ಪುರಾಣವನ್ನು ರಚಿಸಿದ ವಿರೂಪಾಕ್ಷಪಂಡಿತರು ವಿಜಯನಗರದಲ್ಲಿ ಈಗ್ಗೆ ೪ ನೇ ಶತಮಾನದಲ್ಲಿದ್ದರು. ಅವರಿದ್ದಾಗ್ಗೆ ಮಹಮ್ಮದೀಯರು ವಿಜಯನಗರವನ್ನು ಹಿಡಿದುಕೊಂಡು ೨೦ ವರ್ಷಗಳಾಗಿದ್ದುವು. ಇವರು ಮೇಲ್ಕಂಡ ಪುರಾಣಗ್ರಂಥವನ್ನು ಈಗ್ಗೆ ೩೨೦ ವರ್ಷಗಳಲ್ಲಿ ಎಂದರೆ— ಕ್ರಿ. ಶ. ೧೫೮೫ ರಲ್ಲಿ ರಚಿಸಿ ಮುಗಿಸಿದರು. ಆ ಕಾಲವನ್ನು ಇವರು ತಮ್ಮ ಗ್ರಂಥದ ಅಂತ್ಯದಲ್ಲಿ ವಿಶದಪಡಿಸಿರುತ್ತಾರೆ. ಇವರಿಗೆ ವಿಜಯನಗರದ ಹಿರೇಮಠದ ಸಿದ್ಧವೀರಸ್ವಾಮಿಗಳೆಂಬ ಯತಿಗಳು ಗುರುಗಳಾಗಿದ್ದರು. ಅವರು ಮಳೆಯಮಲ್ಲೇಶನ ಸಂಪ್ರದಾಯಸ್ಥರು. ಸ್ವಲ್ಪ ಹಿಂದುಮುಂದಾಗಿ ಚೆನ್ನಬಸವೇಶ್ವರಪುರಾಣರಚನೆಯ ಕಾಲದಲ್ಲೇ ಹುಟ್ಟಿರುವ ಪ್ರೌಢರಾಯಚರಿತ್ರವೆಂಬ ಗ್ರಂಥಕ್ಕೆ ಕರ್ತರಾದ ಅದ್ರೀಶಪ್ಪ ಎಂಬುವರು ಕೂಡ ತಮ್ಮ ಗುರುವನ್ನು ಮಳೆಯಮಲ್ಲೇಶನೆಂದು ಹೇಳಿಕೊಂಡಿರುತ್ತಾರೆ. ಇದರಿಂದ ವಿಜಯನಗರದ ಪ್ರಾಂತದಲ್ಲಿ ೧೬ ನೇ ಶತಮಾನದಲ್ಲಿ ಮಳೆಯಮಲ್ಲೇಶನ ಪ್ರಾಶಸ್ತ್ಯವೂ, ಶಿಷ್ಯಕೋಟಿಯ ಬಾಹುಳ್ಯವೂ ಚೆನ್ನಾಗಿತ್ತೆಂದು ವಿದಿತವಾಗುತ್ತದೆ. ಇದೇ ಸಮಕಾಲದಲ್ಲಿಯೇ ಕುಮಾರವ್ಯಾಸನ ತೊರವೆರಾಮಾಯಣವೆಂಬ ಗ್ರಂಥವೂ ಹುಟ್ಟಿರುತ್ತದೆ. ಲಕ್ಷ್ಮೀಶರಚಿತವಾದ ಜೈಮಿನಿಕಾವ್ಯದಲ್ಲಿಯೂ ಚೆನ್ನಬಸವೇಶ್ವರಪುರಾಣದಲ್ಲಿಯೂ ಅನೇಕ ಸಂದರ್ಭದೊಳಗೆ ಪದಭಾವಪ್ರಯೋಗಾದಿಗಳ ಹೋಲಿಕೆಯು ತೋರುವುದು. ಜೈಮಿನಿಯು ಕ್ರಿ. ಶ. ೧೬೬೦ ರಲ್ಲಿ ರಚಿತವಾದುದೆಂತಲೂ, ಅದು ಕಾರಣ ಚೆನ್ನಬಸವೇಶ್ವರಪುರಾಣವನ್ನು ನೋಡಿ, ಈ ಗ್ರಂಥವು ಬರೆಯಲ್ಪಟ್ಟಿತೆಂತಲೂ ಕೆಲವರು ಹೇಳುವರು. ಆದರೆ ೨೦೦ ವರ್ಷಗಳ ಹಿಂದೆ ಬರೆದ ಜೈಮಿನಿಯ ಪ್ರತಿಯೇ ಸಿಕ್ಕುವುದರಿಂದ, ೧೪೦ ವರ್ಷದಲ್ಲಿ ರಚಿತವಾಯಿತೆಂಬುದು ನಿರಾಧಾರವೇ ಸರಿ. ಮತ್ತು ಆದಿಯಲ್ಲಿ ಮಂಗಳವನ್ನು ಮಾಡುವಾಗ್ಗೆ

ಲಕ್ಷ್ಮೀಶನು "ಚಂದ್ರನಾನಂದಮಂ ನಮಗೀಯಲಿ" ಎಂದು ಬರೆದಿದ್ದರೆ, ಚೆನ್ನಬಸವೇಶ್ವರಪುರಾಣದಲ್ಲಿ "ಸೂರ್ಯನಾನಂದಮಂ ನಮಗೀಯಲಿ" ಎಂದು ಬರೆಯಲ್ಪಟ್ಟಿದೆ. ಲೋಕದಲ್ಲಿ ಆಹ್ಲಾದಜನಕತ್ವವನ್ನು ಚಂದ್ರನಿಗೆ ಹೇಳಿ ವರ್ಣಿಸುವುದು ಕವಿಸಮಯವಾಗಿದೆ. ಅದರಂತೆಯೇ ಲಕ್ಷ್ಮೀಶನು ಬರೆದಿದ್ದುದನ್ನು ನೋಡಿ, ಬಳಿಕ, "ಸೂರ್ಯನಾನಂದ" ವೆಂದು ವಿರೂಪಾಕ್ಷಪಂಡಿತರು ತಮ್ಮ ಗ್ರಂಥದಲ್ಲಿ ಬರೆದರೆಂದು ಊಹಿಸಬೇಕಾಗುತ್ತದೆ. ಮತ್ತು "ಹೂವನ್ನೆತ್ತುವುದಕ್ಕಾಗಿ ಹೋಗಿದ್ದ ತಮ್ಮ ಶಿಷ್ಯರು ತಡಮಾಡಿಕೊಂಡು ಬಂದುದನ್ನು ಕಂಡು ವಿರೂಪಾಕ್ಷಪಂಡಿತರು ಕೇಳುವಲ್ಲಿ, ಜೈಮಿನಿಯೆಂಬ ಗ್ರಂಥವನ್ನು ಒಂದು ಕಡೆಯಲ್ಲಿ ಓದುತ್ತಿದ್ದರೆಂತಲೂ, ಅದನ್ನು ಕೇಳುತ್ತಿದ್ದುದರಿಂದ ಹೊತ್ತಾಯಿತೆಂತಲೂ ಅವರು ಹೇಳಲು, ಅದರಮೇಲೆ ಅಂತಹ ಗ್ರಂಥವನ್ನು ಶಿವಪರವಾಗಿ ತಾನೇ ರಚಿಸುತ್ತೇನೆಂದು ಹೇಳಿ ಈ ಗ್ರಂಥವನ್ನು ರಚಿಸಿದರು" ಎಂಬದಾಗಿ ಕರ್ಣಾಕರ್ಣಿಕೆಯಿಂದ ಬಂದ ಐತಿಹ್ಯವಿರುತ್ತದೆ. ಇದರಿಂದಲೂ ಕೂಡ ಜೈಮಿನಿಯ ನಂತರ ಚೆನ್ನಬಸವಪುರಾಣವು ರಚಿತವಾಗಿರುವುದೆಂದು ಊಹಿಸಬೇಕಾಗುತ್ತದೆ. ವಿರೂಪಾಕ್ಷಪಂಡಿತರು ಈ ಗ್ರಂಥವನ್ನು ಹೊರತು ಬೇರೆ ಯಾವ ಗ್ರಂಥವನ್ನು ಬರೆದಿರುವರೆಂಬುದೂ ಗೊತ್ತಾಗಿಲ್ಲ.

ಚೆನ್ನಬಸವೇಶ್ವರಪುರಾಣವು ೫ ಕಾಂಡಗಳಾಗಿ ವಿಭಾಗಿಸಲ್ಪಟ್ಟು ೧–೫ ನೇ ಕಾಂಡಗಳಲ್ಲಿ ಚೆನ್ನಬಸವೇಶನ ಸ್ವಕೀಯ ವಿಷಯಗಳೂ, ಷಟ್ಸ್ಥಲಾಷ್ಟಾವರಣವಿವರಣಗಳೂ, ಪಿಂಡೋತ್ಪತ್ತಿ, ಕರಣಹಸಿಗೆ, ದೀಕ್ಷಾಕ್ರಮಗಳೂ, ಅನೇಕ ಶರಣರ ಸಂಕ್ಷಿಪ್ತಚರಿತ್ರಗಳೂ, ಸೂರ್ಯಚಂದ್ರವಂಶಪರಂಪರೆಯೂ, ಕಾಲಜ್ಞಾನವೆಂಬ ಚರಿತ್ರಭಾಗವೂ, ಹೇಳಲ್ಪಟ್ಟಿರುವುವು. ಮಧ್ಯದ ೩ ಕಾಂಡಗಳಲ್ಲಾದರೋ ಪರಶಿವನ ಪಂಚವಿಂಶತಿಲೀಲೆಗಳು ವರ್ಣಿಸಲ್ಪಟ್ಟಿರುವುವು. ಈ ಕ್ರಮದಿಂದ, ಪ್ರಕೃತವಾದ ಗ್ರಂಥದೊಳಗೆ ಅನೇಕ ಉಪಯುಕ್ತವಿಷಯಗಳನ್ನು ಸಂಗ್ರಹಿಸಿ ಹೇಳಬೇಕೆಂಬುದು ಗ್ರಂಥಕರ್ತರ ಉದ್ದೇಶವಾಗಿದ್ದಿತೆಂದು ತೋರುವುದು. ಹಿಂದಿನ ಗ್ರಂಥಕಾರರಲ್ಲಿ ಚರಿತ್ರಭಾಗಕ್ಕೆ ದೃಷ್ಟಿ ಕೊಟ್ಟು, ವಿಷಯಗಳ ನಿರೂಪಣವನ್ನು ಮಾಡಿರತಕ್ಕವರು ಅತ್ಯಂತ ವಿರಳರು. ಅಂಥ ಲೋಪವನ್ನು ಈ ಗ್ರಂಥಕರ್ತರು ಸ್ವಲ್ಪಮಟ್ಟಿಗಾದರೂ ನಿವಾರಣಗೊಳಿಸಿರುವರೆಂಬುದು ಈ ಗ್ರಂಥದ ಕಡೆಯ ಭಾಗದ ೭ ಸಂಧಿಗಳಿಂದ ವ್ಯಕ್ತವಾಗುವುದು. ಇವರ ಉದ್ದೇಶಗಳಲ್ಲಿ ಇದೊಂದು ಪ್ರಶಸ್ತವಾದ ಭಾಗವೂ ಅಡಕವಾಗಿದ್ದುದಕ್ಕಾಗಿ ಕನ್ನಡಿಗರೆಲ್ಲರೂ ಕೃತಜ್ಞರಾಗಿರಬೇಕಾಗಿದೆ. ಇವರು ತಮ್ಮ ಗ್ರಂಥಕ್ಕೆ ಪುರಾಣವೆಂದು ಹೆಸರನ್ನಿಟ್ಟಿದ್ದುದರಿಂದ ಅದರ ಸಾರ್ಥಕ್ಯಕ್ಕಾಗಿ ಸೃಷ್ಟಿ, ಪ್ರತಿಸೃಷ್ಟಿ, ವಂಶ, ಮನ್ವಂತರ, ವಂಶಾನುಚರಿತವೆಂಬ ಪಂಚಲಕ್ಷಣಗಳೂ ಇದರಲ್ಲಿರುವಂತೆ ವಿಷಯನಿಯೋಜನವನ್ನು ಮಾಡಿರುತ್ತಾರೆ. ಮತ್ತು ಷಟ್ಪದಿಯ ಕಾವ್ಯವಾದುದರಿಂದ ಮಹಾಕಾವ್ಯದಲ್ಲಿರಬೇಕಾದ ಲಕ್ಷಣಗಳೂ ಪೂರ್ಣವಾಗಿರಬೇಕೆಂಬುದಾಗಿ ಪುರ, ಸಮುದ್ರ, ಗಿರಿ, ಋತು, ಮೊದಲಾದ ಅಷ್ಟಾದಶವರ್ಣನಗಳನ್ನೂ ಸಂದರ್ಭಾನುಸಾರವಾಗಿ ಮಾಡಿರುತ್ತಾರೆ.

ಅಂತಹ ಚೆನ್ನಬಸವೇಶ್ವರಪುರಾಣವು ಪದ್ಯಮಯವಾಗಿದ್ದು, ವ್ಯುತ್ಪನ್ನರಿಗಲ್ಲದೆ ಭಾಷಾಜ್ಞಾನವುಳ್ಳ ಕನ್ನಡಿಗರೆಲ್ಲರಿಗೂ ಸುಲಭಸಾಧ್ಯವಾಗದೆ ಇದ್ದುದರಿಂದಲೂ, ಗದ್ಯಗ್ರಂಥಗಳ ಅವಶ್ಯಕತೆಯು ಈಗ ಹೆಚ್ಚಾಗಿರುವುದರಿಂದಲೂ, ನನ್ನ ಮೊದಲನೇಕೃತಿಯಾದ ಬಸವರಾಜವಿಜಯದ ಸ್ವೀಕಾರದಲ್ಲಿ ವಾಚಕರು ತೋರಿಸಿದ ಆಸಕ್ತಿಯಿಂದಲೂ, ಅದೇ ಚೆನ್ನಬಸವೇಶ್ವರಪುರಾಣಪ್ರತಿಪಾದಿತವಾದ ವಿಷಯಗಳನ್ನೇ ಲಲಿತವಾದ ಕನ್ನಡದ ಬಿಡುನುಡಿಯ ರೂಪವಾಗಿ ಬರೆದು "ಚೆನ್ನಬಸವೇಶವಿಜಯ" ವೆಂಬ ಹೆಸರಿನಿಂದ ಈ ಗ್ರಂಥವನ್ನು ರಚಿಸಿರುತ್ತೇನೆ. ಮೂಲಗ್ರಂಥದಲ್ಲಿ ಹೆಚ್ಚಾಗಿದ್ದ ವರ್ಣನಭಾಗಗಳನ್ನು ಮಾತ್ರ ಸಂಕ್ಷೇಪಗೊಳಿಸಿ, ಉಳಿದಂಶಗಳನ್ನೆಲ್ಲ ಸರಿಯಾಗಿ ವಿಸ್ತರಿಸಿ, ಅವಶ್ಯಕವಾಗಿ ತೋರಿದಕಡೆಗಳಲ್ಲಿ (ಗ್ರಂಥಕರ್ತರ ಆಶಯವು ಕೆಡದಂತೆ) ವ್ಯಾಸೋಕ್ತಪುರಾಣಗಳ ಸಾಹಾಯ್ಯದಿಂದ ಬೇಕಾದಂಶವನ್ನಾರಿಸಿ ಸೇರಿಸಿ, ಈ ಗ್ರಂಥವನ್ನು ಪೂರ್ಣಗೊಳಿಸಿರುತ್ತೇನೆ. ಅಮತ್ಸರಮತಿಗಳಾದ ಮಹಾಶಯರು ಇದರಲ್ಲಿ ಗುಣೈಕಗ್ರಹಣವನ್ನು ಮಾಡಿ, ಸಂತೋಷಿಸಿ, ನನ್ನ ಶ್ರಮವನ್ನು ಸಾರ್ಥಕಗೊಳಿಸುವರೆಂದು ನಂಬುತ್ತೇನೆ.

೨೪-೧೦-೧೯೦೬.
ಮೈಸೂರು.

ಸುಜನವಿಧೇಯ
ಯಮ್. ಆರ್. ಕರಿಬಸವಶಾಸ್ತ್ರಿ.

# ವಿಷಯಸೂಚಿಕಾ.

ಶ್ರೀರಸ್ತು.

ಶ್ರೀಗುರುದಕ್ಷಿಣಾಮೂರ್ತಯೇನಮಃ.

# ಚೆನ್ನಬಸವೇಶವಿಜಯಂ.

## ಮಂಗಳಾಚರಣವು.

ಶ್ರೀಮತ್ಸಚ್ಚಿದಾನಂದಸ್ವರೂಪನೂ ಶಾಂತನೂ ನಿತ್ಯನೂ ಆದ್ಯಂತರಹಿತನೂ ಜಗದಾದಿಗುರುವೂ ದೇವದೇವೋತ್ತಮನೂ ಭಕ್ತವತ್ಸಲನೂ ಸಗುಣನಿರ್ಗುಣನೂ ಭುಕ್ತಿಮುಕ್ತಿಪ್ರದನೂ ಸಕಲವಿದ್ಯಾಮೂಲನೂ ಆದ ಶ್ರೀಮತ್ಪಾರ್ವತೀಪತಿಯನ್ನು ನಿರ್ಮಲಮನಸ್ಸಿನಿಂದ ಧ್ಯಾನಿಸಿ, ವೇದಾಂತವೇದ್ಯನಾದ ಆ ಮಹಾದೇವನ ಪಾದಾರವಿಂದಕ್ಕಭಿವಂದಿಸಿ, ಸರ್ವಮಂಗಳಮಯನಾದ ಆ ಪರಬ್ರಹ್ಮನನ್ನು ಅಡಿಗಡಿಗೆನುತಿಸಿ, ಕರುಣಾಸಮುದ್ರನಾದ ಆ ದೇವನ ಚರಿತ್ರವನ್ನು ಹಾಡಿ ಹಾಡಿ ಧನ್ಯನಾಗುವೆನು.

ವಿಷ್ಣುಬ್ರಹ್ಮೇಂದ್ರಾದಿಸಕಲದೇವತೆಗಳೂ ಯಾವ ಮಹಾದೇವನ ಪಾದಾರವಿಂದವನ್ನರ್ಚಿಸಿ ಇಷ್ಟವರಗಳಂ ಪಡೆದರೋ ಆ ಜಗದೇಕಾರಾಧ್ಯನಾದ ಪರಶಿವನನ್ನು ನಿಷ್ಕಾಮದಿಂದಲೂ ಅನನ್ಯಭಾವದಿಂದಲೂ ಪರಿಭಾವಿಸಿ ಕೃತಕೃತ್ಯನಾಗುವೆನು.

ಹೂವಿನಲ್ಲಿ ಪರಿಮಳವೂ, ಚಂದ್ರನಲ್ಲಿ ತಂಪೂ, ಕ್ಷೀರಸಮುದ್ರದಲ್ಲಿ ಮಾಧುರ್ಯವೂ ಅಗಲದೆ ಇರುವಂತೆ ಪರಶಿವನಲ್ಲಿ ಅವಿನಾಭೂತವಾಗಿ ಸ್ವಪ್ರಕಾಶತೇಜಶಕ್ತಿಯಾಗಿ ಬೆರೆದಿರುವ ಆ ಜಗದಂಬಿಕೆಯನ್ನು ಭಕ್ತಿಭಾವದಿಂದ ಪೊಡಮಡುವೆನು.

ಜಗದಾದಿಮೂರ್ತಿಯಾದ ಶಂಕರನ ಸದ್ಧರ್ಮವೇ ತಾನೊಂದುರೂಪಾಗಿಯೂ, ಸಕಲ ಜೀವಗಣಕ್ಕಧೀನನಾಗಿಯೂ, ನಂದಿಯೆಂಬ ಹೆಸರಿ

ನಿಂದ ಶಿಲಾದರ್ಷಿಗೆ ಪುತ್ರನಾಗಿಯೂ ಮೆರೆದ ಆದಿ ಮಹಾವೃಷಭೇಶ್ವರನ ಪಾದಕ್ಕೆ ತಲೆವಾಗುವೆನು.

ಪರಶಿವನು ಕೈಲಾಸದ ಮಹಾಸಭೆಯಲ್ಲಿ ದೇವಾಧಿದೇವತೆಗಳಿಂದ ಸೇವೆಗೊಳ್ಳುತ್ತ, ಸಕಲಪ್ರಮಥಗಣಪರಿವೃತನಾಗಿ ರಂಜಿಸುತ್ತ, ದಿವ್ಯ ಸಿಹ್ಮಾಸನದಲ್ಲಿ ಸರ್ವಮಂಗಳಾರ್ಧಾಂಗನಾಗಿ ಮಂಡಿಸಿರಲು, ಆ ಸಭೆಗೆ ಬಂದು ತನ್ನ ನಾಟ್ಯದಿಂದ ಮಹಾದೇವನನ್ನು ಆನಂದಗೊಳಿಸಿ ನಮಸ್ಕರಿಸುವಾಗ್ಗೆ, ದುಂಬಿಯ ಆಕಾರದಿಂ ಶಿವನ ದೇಹವಂ ಕೊರೆದು, ಪಾರ್ವತಿಯ ಶಕ್ತ್ಯಂಶವಾದ ಅರ್ಧ ದೇಹವನ್ನು ಬಿಟ್ಟು ಉಳಿದರ್ಧಭಾಗವನ್ನು ಪ್ರದಕ್ಷಿಣ ಮಾಡಿ ನಮಸ್ಕರಿಸಲು, ಇದನ್ನು ತಿಳಿದು, ಪಾರ್ವತಿಯು ಈ ತನ ದೇಹದ ರಕ್ತಮಾಂಸಾದಿಶಕ್ತ್ಯಂಶವನ್ನು ಆಕರ್ಷಿಸಿಕೊಳ್ಳಲು, ನಿಲ್ಲಲು ಸಾಧ್ಯವಿಲ್ಲದೆ ನಡುಗುತ್ತಿದ್ದ ತನಗೆ ಶಿವಪ್ರಸಾದದಿಂದ ಕೊಡಲ್ಪಟ್ಟ ಮತ್ತೊಂದು ಪಾದವನ್ನು ಹೊಂದಿ ಮೂರಡಿಯುಳ್ಳವನಾಗಿ ಮೆರೆದ ಭೃಂಗೀಶ್ವರನನ್ನು ಮರೆಹೊಗುವೆನು.

ಶಿವನ ಹಣೆಗಣ್ಣಿನಿಂದೊಗೆದು ಶಿವದ್ರೋಹಿಯಾದ ದಕ್ಷನ ಯಾಗಶಾಲೆಗೆ ಹೋಗಿ ಅಲ್ಲಿದ್ದ ದೇವತೆಗಳನ್ನೆಲ್ಲ ಭಂಗಿಸಿ, ರುದ್ರನಿಗೆ ಅಗ್ರಹವಿರ್ಭಾಗವನು ಕೊಡದಿದ್ದ ಆ ದಕ್ಷಬ್ರಹ್ಮನ ಶಿರಸ್ಸನ್ನು ಕತ್ತರಿಸಿದ ಭದ್ರಕಾಳೀಪ್ರಿಯನಾದ ವೀರಭದ್ರೇಶ್ವರನಿಗೆ ಸಾಷ್ಟಾಂಗವಾಗಿ ಮಣಿವೆನು.

ತನಗೆ ಪಂಚಮುಖಗಳಿರುವುವೆಂಬುದನ್ನು ಸರ್ವರೂ ಬಲ್ಲರು; ಆರನೇ ಪಾತಾಳಮುಖವಿರುವುದೆಂಬುದನ್ನು ತಾತ್ವಿಕರು ಹೊರತು ಇತರರು ತಿಳಿಯರು. ಅದುಕಾರಣ ಆ ಆರನೇಮುಖವನ್ನು ಸರ್ವರಿಗೂ ತೋರ್ಪಡಿಸಬೇಕೆಂಬುದಾಗಿ ಶಂಕರನೇ ಈ ಆರುಮೊಗನಾಗಿ ಜನಿಸಿದನೆಂಬಂತೆ ತೋರುತ್ತಿರುವ ಕುಮಾರಸ್ವಾಮಿಯ ಪಾದಾರವಿಂದದಲ್ಲಿ ನನ್ನ ಚೇತಃಕಮಲವನ್ನು ಸಮರ್ಪಿಸುವೆನು.

ಕನ್ನಡಿಯೊಳಗಿನ ಪ್ರತಿಬಿಂಬದಂತೆಯೂ, ಆಕಾಶದಲ್ಲಿ ತೋರುವ ಇಂದ್ರನ ಧನುಸ್ಸಿನಂತೆಯೂ, ಸುಟ್ಟ ಬಟ್ಟೆಯು ಕಾಣುವಂತೆಯೂ, ಬಿಸಿಲ್ಗುದುರೆಯು ಇರುವಿನಂತೆಯೂ, ಕರ್ಪೂರವು ಬೆಂಕಿಯೊಡನೆರೆದಂತೆಯೂ, ತುಪ್ಪವು ಧರಿಸಿರುವ ಆಕಾರದಂತೆಯೂ ರೂಪಾಂಶು ಮೆರೆವ

ಮಾಯಾರಹಿತನಾದ ಅಲ್ಲಮಪ್ರಭುವಿನ ಪಾದಾರವಿಂದವನ್ನು ಸದಾ ಸ್ಮರಿಸುವೆನು.

ಕಾಮಧೇನು ಕಲ್ಪವೃಕ್ಷಾದಿಗಳಂತೆ ಆಶ್ರಿತರ ಇಷ್ಟಾರ್ಥವನ್ನು ಕೊಡುತ್ತ, ಸಂಕಲ್ಪ ನಡೆ ನುಡಿ ನೋಟ ಕೈ ಸೋಂಕುಗಳಲ್ಲಿ ಪಂಚಸ್ಪರ್ಶವುಳ್ಳವನಾಗಿ ಮೆರೆದ ಭಕ್ತಿಭಾಗ್ಯನಿಧಿಯಾದ ಆ ನನ್ನ ಪ್ರಾಣನಾಥನಾದ ಬಸವೇಶನ ಚರಣಸರಸಿಜಕ್ಕೆ ನನ್ನ ಮನಸ್ಸನ್ನಾರಡಿಗೊಳಿಸುವೆನು.

ಶಿವಪ್ರಸಾದವೇ ಪಿಂಡವಾಗಿ ನಾಗಲಾಂಬಿಕೆಯ ಗರ್ಭದಲ್ಲಿ ಬೆಳೆದು ಅಯೋನಿಜನಾಗಿ ಜನಿಸಿ, ಭೂಮಿಯ ಸಕಲ ಶಿವಗಣಕ್ಕೂ ಷಟ್ಸ್ಥಲದ ತತ್ತ್ವವನ್ನುಪದೇಶಿಸಿ, ಸ್ಥಾವರ ಲಿಂಗಗಳ ಪೂಜೆಯಂ ಬಿಡಿಸಿ, ಪ್ರಾಣಲಿಂಗದ ಸ್ವರೂಪವನ್ನು ವಿಸ್ತರಿಸಿ ತ್ರಿಜಗಹಿತ ಮುಕ್ತರನ್ನು ಮಾಡಿದ ಆ ಜಗದ್ಗುರುವಾದ ಶ್ರೀ ಚೆನ್ನಬಸವೇಶನಿಗೆ ಶರಣಾಗತನಾಗುವೆನು.

ಶಿವಯೋಗಸಿದ್ಧಾಂತವನ್ನು ಜಗತ್ತಿನಲ್ಲಿ ಬಿತ್ತರಿಸುವುದಕ್ಕಾಗಿ ಪರಶಿವನೇ ಅವತರಿಸಿದಂತೆ ಮಾನವರೂಪವನ್ನು ಧರಿಸಿ, ಮಹಾಯೋಗಸಿದ್ಧರಲ್ಲೆಲ್ಲ ಅಗ್ರಗಣ್ಯನಾಗಿ ಮೆರೆದ ಶ್ರೀ ಸಿದ್ಧರಾಮೇಶ್ವರನ ಪಾದಕ್ಕೆ ನಮಸ್ಕರಿಸುವೆನು.

ಪಾರ್ವತಿಯಂಶವೇ ತಾನಾಗಿ ಭೂಮಿಯಲ್ಲವತರಿಸಿ, ಕದಳೀವನವನ್ನು ಹೊಕ್ಕು ಬಯಲಾದ ಮಹಾದೇವಿಯ ಪಾದವ ಪ್ರೀತಿಯಿಂ ಮರೆಯುವೆನು.

ದಕ್ಷಾಧ್ವರವಂ ನಾಶಮಾಡಿದ ವೀರಭದ್ರೇಶನೇ ಭೂಮಿಯಲ್ಲಿ ಭಕ್ತಜನದ ಮನೋಮಾಲಿನ್ಯವನ್ನು ಕಳೆಯುವುದಕ್ಕಾಗಿ ಮಡಿವಾಳತನದವ್ಯಾಜದಿಂದ ಅವತರಿಸಿ, ಬಸವರಾಜನ ಅರಿವೆ ಭಾವವನ್ನು ಮಡಿಸಿದ ಮಡಿವಳ ಮಾಚಿದೇವನ ಪಾದಾಶ್ರಯವನ್ನು ಬೇಡುವೆನು.

ಜಗದುದ್ಧರಣಾರ್ಥವಾಗಿ ಭೂಮಿಯಲ್ಲವತರಿಸಿ ಪರಿಪರಿಯ ಮಹಿಮೆಯಿಂದ ಭಕ್ತಿಜ್ಞಾನವೈರಾಗ್ಯದ ನೆಲೆಯನ್ನು ನಿದರ್ಶನಗೊಳಿಸಿದ ಶಂಕರದಾಸಿಮಯ್ಯ, ದಸರದೇವಯ್ಯ, ಕರಿಕಾಲಚೋಳ, ಮರುಳಶಂಕರದೇವ, ಸಕಳೇಶಮಾದರಸ, ಕಿನ್ನರಿಬ್ರಹ್ಮಯ್ಯ ಮೊದಲಾದ ಸಕಲ ಶಿವಶರಣರ ಪವಿತ್ರನಾಮಾಮೃತವನ್ನು ಸದಾ ಪಾನ ಮಾಡುತ್ತಿರುವೆನು.

ಪರಶಿವನ ಪಂಚಮುಖದಿಂದ ಉದ್ಭವಿಸಿ ಭೂಮಿಯಲ್ಲಿ ಶಿವಮತವನ್ನು ಪ್ರತಿಷ್ಠಾಪಿಸಿದ ಆಚಾರ್ಯಪಂಚಕಕ್ಕೂ, ಶಿವಸಿದ್ಧಾಂತನಿರ್ಧಾರಣ

ಸಾರ್ವಭೌಮರಾದ ಪಂಡಿತತ್ರಯಕ್ಕೂ, ಲೋಕೈಕಮಾನ್ಯನಾದ ಶಿವಕವಿಪರಂಪರೆಗೂ ನಯವಿನಯಭಕ್ತಿಯಿಂದ ಪ್ರಣಮಿಸಿ ವಾಕ್ಸಿದ್ಧಿಗೊಳ್ಳುವೆನು.

ಭಕ್ತೈಕಸುಲಭನಾದ ಆ ಜಗದಂತರ್ಯಾಮಿಯು ಆರಂಭಿಸಲ್ಪಟ್ಟ ಈ ಗ್ರಂಥವನ್ನು ನಿರ್ವಿಘ್ನವಾಗಿ ಪರಿಪೂರ್ಣಂಗೊಳಿಸಿ ನಮ್ಮಂಗಳವನ್ನುಂಟುಮಾಡಲೆಂದು ಪ್ರಾರ್ಥಿಸುವೆನು.

---

## ಪೀಠಿಕೆ.

ಪರಶಿವನು ಕೈಲಾಸದ ಸಕಲ ಶಿವಶರಣಗಣಕ್ಕೂ ವಿಷ್ಣುಬ್ರಹ್ಮೇಂದ್ರಾದಿದೇವತಾನಿಚಯಕ್ಕೂ ಶಿವತತ್ತ್ವೋಪದೇಶವನ್ನು ಮಾಡಿ, ಕೃಪೆಮಾಡಿ, ಬಳಿಕ ಭೂಮಿಯಲ್ಲಿರುವ ಶಿವಶರಣರನ್ನು ಉದ್ಧರಿಸುವುದಕ್ಕಾಗಿ ಮಲ್ಲೇಶನೆಂಬ ನಾಮದಿಂದ ಜಂಗಮರೂಪಾಂತು ಅವತರಿಸಿದನು. ಆ ಗುರೂತ್ತಮನು ದೇಶಾಂತರಗಳನ್ನು ಸಂಚರಿಸಿಕೊಂಡು ತುರುಪಪ್ಪುರ ಪುಣ್ಯಕ್ಷೇತ್ರವಾದಮಕ್ಕಕ್ಕೆ ಹೋಗಿ ಅಲ್ಲಿದ್ದ ಏಳುನೂರು ಮಂದಿ ಖಲಂದರರಿಗೆ ಗುರುವಾಗಿ, ಆ ತುರುಕರಾಜ್ಯದಲ್ಲಿ ಮಹಾನಾವೃಷ್ಟಿಯು ಪ್ರಾಪ್ತವಾಗಿರಲು, ತನ್ನ ಪ್ರಭಾವದಿಂದ ಮಳೆಯನ್ನು ಸುರಿಸಿ, ಅಲ್ಲಿನ ಪ್ರಭುವಾದ ಸುಲ್ತಾನನಿಂದ ಪೂಜೆಗೊಂಡು, ಅಪರಿಮಿತವಾದ ಕೀರ್ತಿಯನ್ನು ಪಡೆದಂದಿನಿಂದ ಮಳೆಯಮಲ್ಲೇಶನೆಂಬ ಹೆಸರಾಂತು ಮೆರೆಯುತ್ತಿದ್ದನು.

ಆ ಮಳೆಯಮಲ್ಲೇಶಗುರುವಿನ ಸಾಂಪ್ರದಾಯಸ್ಥನೂ ಷಟ್ಸ್ಥಲಜ್ಞಾನಸಂಪೂರ್ಣನೂ ಜಿತೇಂದ್ರಿಯವರೇಣ್ಯನೂ ಕರುಣಾನಿಧಿಯೂ ಆದ ಸಿದ್ಧವೀರೇಶ್ವರನೆಂಬ ಯತಿತಿಲಕನು ಘನವೈರಾಗ್ಯನಂಬನ್ನನಾಗಿ ವಿದ್ಯಾನಗರಿ (ವಿಜಯನಗರ) ಯ ಹಿರೀಮಠದಲ್ಲಿ ವಿರಾಜಿಸುತ್ತಿದ್ದನು.

ಆ ಯತೀಂದ್ರನಿಗೆ ಶಾಂತಿಯೇ ಮನೆ, ದಯೆಯೇ ಪರಿವಾರ, ಶಿವಲಿಂಗಧ್ಯಾನವೇ ಮನೆವಾರ್ತೆ, ಮೋಕ್ಷಲಕ್ಷ್ಮಿಯೇ ಪತ್ನಿ, ಶಿಷ್ಯರೇ ಮಕ್ಕಳು ಆಗಿರಲಾಗಿ, ಈ ವಿಧದ ಸಂಸಾರದಿಂದ ಮೆರೆಯುತ್ತಿದ್ದನು. ಆ ಮಹಾಸಿದ್ಧವೀರೇಶನ ದರ್ಶನವಂ ಮಾಡಿದವನೇ ಪುನೀತ, ಪಾದಕ್ಕೆ ನಮಸ್ಕರಿಸಿದವನೇ ಪುಣ್ಯಶಾಲಿ, ಇದಿರಿಗೆ ಮಾತಾಡಿದವನೇ ವೀರಶೈವಮಾರ್ಗ

ಸಂಪನ್ನ, ಪ್ರಸಾದವಚನವಂ ಪಡೆದವನೇ ಅಚ್ಯುತ, ಪ್ರಾರ್ಥಿಸಿದವನೇ ಇಷ್ಟಾರ್ಥಪೂರ್ಣ, ಸ್ತೋತ್ರ ಮಾಡಿದವನೇ ಜಗದ್ವಿನುತ, ಪಾದಸೇವೆಯಂ ಮಾಡಿದವನೇ ಲೋಕೈಕಸೇವ್ಯನೆನಿಸಿಕೊಳ್ಳುತ್ತಿದ್ದನು, ಎಂದ ಬಳಿಕ ಆ ಮಹಾಗುರುವಿನ ಪ್ರಭಾವವನ್ನೆಷ್ಟೆಂದು ಹೇಳಬಹುದು!

ಅಂತಪ್ಪ ಗುರುವಿನ ಕರಕಮಲದಲ್ಲುದ್ಭವಿಸಿದ ವಿರೂಪಾಕ್ಷಪಂಡಿತಾರಾಧ್ಯನು ಕರ್ಣಾಟಾಂಧ್ರಭಾಷೆಗಳಲ್ಲಿ ವಿಶಾರದನಾಗಿ, ವರಕವಿಗಳಿಂದ ಸ್ತುತಿಸಲ್ಪಡುತ್ತ, ಪರಮವೀರಶೈವಾಚಾರಸಂಪನ್ನನಾಗಿ, ಗಾಂಭೀರ್ಯೌದಾರ್ಯಾದಿಸದ್ಗುಣಮಣಿಕರಂಡನಾಗಿ ರಾಜಿಸುತ್ತಿದ್ದನು.

ಆ ಪಂಡಿತೋತ್ತಮನ ಬಳಿಗೆ ಅನೇಕ ಭಕ್ತಸಂಕುಲವು ಬಂದು ನಮಸ್ಕರಿಸಿ,– "ಎಲೌ ವಿಬುಧವರೇಣ್ಯನೇ! ಶಿವಲಿಂಗಪೂಜೆಯಲ್ಲೇ ಆಯತ್ತವಾದ ಚಿತ್ತವೂ, ಆತ್ಮಸುಖಾರ್ಥವಾಗಿ ಶಿವಸ್ತುತಿಗಳಂ ಹಾಡುವಿಕೆಯೂ, ಬೇಡುವವರ ಮನೋಭಾವವನ್ನು ತಿಳಿದು ದಾನ ಮಾಡುವಿಕೆಯೂ, ಕುಶಲರನ್ನು ಮೆಚ್ಚಿಸುವ ವಾಗ್ವೈಖರಿಯೂ, ಶಿವನನ್ನು ಒಲಿಸುವ ಷಟ್ಸ್ಥಲಾಚರಣೆಯೂ ನಿನ್ನಲ್ಲಲ್ಲದೆ ಇನ್ನಾರಿಗಿರುವುದು? ಶಿವನನ್ನಲ್ಲದೆ ಮತ್ತೊಂದು ದೈವವನ್ನು ನುತಿಸದ, ಪೂಜಿಸದ, ಭಕ್ತಿಯಿಂ ನೋಡದ, ಆ ಪರಶಿವನ ಕಥೆಯಲ್ಲದೆ ಅನ್ಯಕಥೆಯನ್ನು ಹೇಳದ, ಶಿವಪ್ರಸಾದವಲ್ಲದೆ ಇತರನೈವೇದ್ಯಪ್ರಸಾದವನ್ನು ಸ್ವೀಕರಿಸದ ಬಿರುದು ಭೂಮಿಯಲ್ಲಿ ನಿನಗಲ್ಲದೆ ಮತ್ತಾರಿಗೆ ಸಲ್ಲುವುದು? ಭೂಮಿಯಲ್ಲಿ ನಾವೂ ಕವಿಗಳೆಂದು ಹೇಳಿಕೊಳ್ಳುತ್ತ, ಈ ಪದ್ಯಕ್ಕರ್ಥವೇನೆಂದು ಕೇಳಿದರೆ ಕಿವಿಯ ಮೇಲೆ ಕೈಯಿಟ್ಟು, ಮೇಲೆ ಕೆಳಗೆ ನೋಡುತ್ತ, ಕೊನೆಗೆ ಏನನ್ನೂ ತಿಳಿಯದೆ ತಲೆ ಬಗ್ಗಿಸಿ ಕುಳಿತುಕೊಳ್ಳುವ ದುಷ್ಕವಿಗಳೆಲ್ಲ ವರಕವಿಗಳಾದಾರೆ? ನಿನ್ನಂಥ ವರಕವಿಗಳ ನಾಲಿಗೆ ಕಿವಿ ಮನಸ್ಸುಗಳನ್ನೆಲ್ಲ ಸೆಳೆದುಕೊಳ್ಳುವ ಶಕ್ತಿಯುಳ್ಳವನೇ ಸತ್ಕವಿ. ಈ ಭೂಮಿಯಲ್ಲಿ ಸಕಲ ಶಿವಶರಣರ ಚರಿತ್ರವನ್ನೂ ಕವಿಗಳು ರಚಿಸಿರುವರು. ಆದರೆ ಚೆನ್ನಬಸವೇಶನ ಚರಿತ್ರವನ್ನು ಮಾತ್ರ ಯಾರೂ ರಚಿಸಿರುವುದಿಲ್ಲ. ಅದನ್ನು ನೀನು ವಿರಚಿಸಬೇಕು" ಎಂದು ಬಿನ್ನವಿಸಿಕೊಂಡರು. ಅವರಿಷ್ಟಪ್ರಕಾರವಾಗಿ ಪಂಡಿತೋತ್ತಮನಾದ ಆ ವಿರೂಪಾಕ್ಷಸ್ವಾಮಿಯು ವಕ್ಷ್ಯಮಾಣವಾದ

ಕಥಾಭಾಗಗಳನ್ನೇ ಸಂಗ್ರಹಿಸಿ, ಕರ್ನಾಟಕವ್ಯಾಕರಣಛಂದೋಬದ್ಧವಾಗಿ ವಾರ್ಧಿಕಷಟ್ಪದಿಯರೂಪದಿಂದ "ಚೆನ್ನಬಸವಪುರಾಣ" ವೆಂಬ ರಸವತ್ಕಾವ್ಯವನ್ನು ವಿರಚಿಸಿದನು.

ಪದ್ಯಮಯವಾದ ಆ ಗ್ರಂಥವು ವ್ಯುತ್ಪನ್ನರಿಗಲ್ಲದೆ ಸಾಮಾನ್ಯವಾಗಿ ಓದುಬರಹವಂ ಬಲ್ಲ ಕನ್ನಡಿಗರಿಗೆ ಸುಲಭಸಾಧ್ಯವಲ್ಲದೆ ಇದ್ದುದರಿಂದ, ಪ್ರೌಢವಾಗಿದ್ದ ಬಸವಪುರಾಣವನ್ನು ಬಿಡುಗನ್ನಡನುಡಿಯರೂಪಿನಲ್ಲಿ "ಬಸವರಾಜವಿಜಯ" ನೆಂಬ ಹೆಸರಿನಿಂದ ಇದಕ್ಕೆ ಮುಂಚೆ ನಾನು ವಿರಚಿಸಿರುವಂತೆಯೇ ಚೆನ್ನಬಸವಪುರಾಣವನ್ನೂ ವಿರಚಿಸಬೇಕೆಂದು ಸಹಸವಾಯಿಗಳಾದ ಭಕ್ತೋತ್ತಮರು ನನ್ನನ್ನು ಪ್ರೇರಿಸಿದುದರಿಂದ ಕಲಿತವಿದ್ಯೆಗೆ ಶಿವನ ಮತ್ತು ಶಿವಶರಣರ ಚರಿತ್ರವನ್ನು ವಿಸ್ತರಿಸುವುದಕ್ಕಿಂತಲೂ ಬೇರೊಂದು ಚರಿತಾರ್ಥವಿಲ್ಲವೆಂಬುದನ್ನು ಮನಗಂಡು ನಾನೀ ಉದ್ಯಮದಲ್ಲಿ ತೊಡಗಿದೆನು.

"ಭಾಗ್ಯಹಿವಿದ್ಯತ್ರದೈವಃ; ಪ್ರಯತ್ನಸದೃಶಂಫಲಂ" ಎಂಬ ವಚನದಂತೆ ಶಿವಾಭಿನ್ನರಾದ ಶರಣರ ಮತ್ತು ಆ ಶಿವನ ಚರಿತ್ರವನ್ನು ಈ ಗ್ರಂಥದಲ್ಲಿ ವಿಸ್ತರಿಸಬೇಕೆಂಬ ಆಶಯವು ನನ್ನ ಭಾವದಲ್ಲಿ ಸ್ಫುರಿಸಿದಕೂಡಲೇ ಆ ಭಾವದಲ್ಲಿ ಸಂದಿರುವ ಶಿವಾತ್ಮಲಿಂಗವೆ ಆ ತನ್ನ ಚರಿತ್ರವನ್ನು "ಚೆನ್ನಬಸವೇಶವಿಜಯ" ವೆಂಬ ಹೆಸರಿನಿಂದ ಈ ರೂಪವಾಗಿ ಹೊರಹೊರಡಿಸಿರುವನು. ಅದುಕಾರಣ ಈ ಶಿವವಚನವು ಸುವಾಚ್ಯವಾಗಿ ಸುಶ್ರಾವ್ಯವಾಗಿ ಸುಬೋಧವಾಗಿ ಆಚಂದ್ರತಾರಕವಾಗಿ ರಂಜಿಸದೆಇರದು.

ಎಂಬಲ್ಲಿಗೆ ಒಂದನೇ ಅಧ್ಯಾಯವು ಸಂಪೂರ್ಣವು.

---

## ೨ ನೇ ಅಧ್ಯಾಯವು.

### ಕಥಾರಂಭವು.

ಶ್ರೀ ಜಗದೀಶ್ವರನ ಆಜ್ಞೆಯಿಂದ ವಿಸೃಷ್ಟಿಸಿರುವ ಹದಿನಾಲ್ಕು ಲೋಕಗಳಲ್ಲಿ ಈ ಭೂಲೋಕವೊಂದಾಗಿ ಐವತ್ತು ಕೋಟಿಯೋಜನದಳತೆಯುಳ್ಳದ್ದಾಗಿರುವುದು. ಇದರಲ್ಲಿರುವ ಏಳು ದ್ವೀಪಗಳನ್ನು ಏಳು ಸ

ಸಮುದ್ರಗಳು ಚಕ್ರಾಕಾರವಾಗಿ ಆವರಿಸಿಕೊಂಡಿರುವುವು. ಅವುಗಳಲ್ಲಿ
ಲವಣಸಮುದ್ರವು ಈ ಜಂಬೂದ್ವೀಪವನ್ನು ಸುತ್ತಿಕೊಂಡಿರುವುದು.
ಆ ಸಮುದ್ರವಾದರೊ ಮೀನು ಮೊಸಳೆ, ಹಾವು, ಆಮೆ, ಏಡಿ ಮೊದ
ಲಾದ ನಾನಾಜಲಚರಪ್ರಾಣಿಗಳಿಂದಲೂ, ಮುತ್ತು ಹವಳ ಮೊದಲಾದ
ನಾನಾರತ್ನಗಳಿಂದಲೂ, ಸುಳಿ, ತೆರೆ ನೊರೆಗಳಿಂದಲೂ, ದೋಣಿಗಳು ಹ
ಡಗುಗಳಿಂದಲೂ ಕೂಡಿ ಅಪಾರವಾಗಿ ಮೆರೆಯುತ್ತಿರುವುದು. ಆ ಸಮು
ದ್ರದ ನೀರು ಒಂದೊಂದುವೇಳೆ ಹೆಚ್ಚಿ ಉಬ್ಬುತ್ತಲೂ ಒಂದೊಂದುವೇ
ಳೆ ತಗ್ಗಿ ಸರಿಯುತ್ತಲೂ ಇರುವುದನ್ನು ನೋಡಿದರೆ, ತನಗೆ ಮಹಾವಿ
ಷ್ಣುವೇ ಅಳಿಯನು, ಬ್ರಹ್ಮನೇ ಮೊಮ್ಮಗನು, ಲಕ್ಷ್ಮಿಯೇ ಮಗಳು,
ದೇವಗಂಗೆಯೇ ಪತ್ನಿಯು, ದೇವತೆಗಳನ್ನು ತನ್ನ ಅಮೃತದಿಂದ ಸಲ
ಹುವ ಚಂದ್ರನೇ ತನ್ನ ಮಗನು. ದೇವೇಂದ್ರನಿಗೆ ಕಾಮಧೇನು ಕಲ್ಪ
ವೃಕ್ಷಾದಿಸಂಪತ್ತನ್ನು ಕೊಟ್ಟವನೇ ನಾನು, ಪಾರ್ವತಿಯ ತಮ್ಮನಾದ
ಮೈನಾಕನನ್ನು ಮರೆಹೊಗಲು ಸಲಹಿದವನೇ ನಾನು, ಅದುಕಾರಣ ನನಗೆ
ಸಮಾನರಾರೆಂಬ ಹೆಮ್ಮೆಯಿಂದ ಸಮುದ್ರವು ಉಬ್ಬುತ್ತಿರುವಂತೆಯೂ,
ನನ್ನನ್ನು ಅಗಸ್ತ್ಯಮಹರ್ಷಿಯು ಕುಡಿದುಬಿಟ್ಟನು, ಬಡಬಾಗ್ನಿಯು
ನನ್ನನ್ನು ಸದಾ ಹೀರುತ್ತಿರುವುದು, ನಾನು ಭಂಗವನ್ನು (ಹಾನಿ, ತೆರೆ)
ಹೊಂದಿರುವೆನು, ಎಂಬ ದುಃಖದಿಂದ ಕುಗ್ಗುತ್ತಿರುವಂತೆಯೂ ತೋರು
ತ್ತಿರುವುದು. ಇಂತಹ ಸಮುದ್ರವು ಸುತ್ತುವರಿದಿರುವ ಜಂಬೂದ್ವೀಪ
ವು ಕಾಶಿ ಕೇದಾರ ಹಂಪೆ ಗಯೆ ಶ್ರೀಶೈಲಮೊದಲಾದ ನಾನಾಪುಣ್ಯಕ್ಷೇತ್ರ
ಗಳನ್ನು ಪಡೆದು ಧರ್ಮಾರ್ಥಕಾಮಮೋಕ್ಷ ಸಂಪಾದನಾರ್ಥವಾಗಿ ದುರ್ಧ
ರತಪಸ್ಸನ್ನಾಚರಿಸುತ್ತಿರುವ ಮುನಿಗಳಿಂದಲೂ ದೇವತೆಗಳಿಂದಲೂಕೂಡಿ,
ಅನೇಕ ದೇಶಗಳಿಂದಲೂ, ನದೀವನಪರ್ವತಾವಳಿಗಳಿಂದಲೂ, ಮನೋ
ಹರವಾಗಿ ತೋರುತ್ತಿರುವುದು. ಆ ದ್ವೀಪದ ಮಧ್ಯದಲ್ಲಿ ಈಶ್ವರವಾ
ಹನಾರ್ಥವಾಗಿ ಬ್ರಹ್ಮನಿಂದ ನಿರ್ಮಿಸಿ ಸಿದ್ಧಮಾಡಲ್ಪಟ್ಟಿರುವ ಸಾಲಂ
ಕಾರಮಹಾಗಜದಂತೆ ಮೇರುಪರ್ವತವು ಶೋಭಿಸುತ್ತಿರುವುದು. ಆ ಪ
ರ್ವತದ ಮೇಲಣ ಒಂದೊಂದು ಶಿಖರಗಳಲ್ಲಿ ವಿಷ್ಣುಬ್ರಹ್ಮೇಂದ್ರಾದಿದೇ
ವತೆಗಳ ಪಟ್ಟಣಗಳು ರಂಜಿಸುತ್ತಿರುವುವು. ದಕ್ಷಿಣಭಾಗದ ಶಿಖರದಲ್ಲಿ

ಸಕಲ ದೇವತೆಗಳೂ ಪೂಜಿಸುವ ಸ್ಫಟಿಕಲಿಂಗವೋ ಎಂಬಂತೆ ಧವಳಮ ಯವಾದ ಕಾಂತಿಯಿಂದ ಝಗಝಗಿಸುತ್ತಿರುವ ಕೈಲಾಸಪರ್ವತವು ಮೆರೆಯುತ್ತಿರುವುದು. ಆ ಪರ್ವತದಲ್ಲಿರುವ ಶಿಲೆಗಳೆಲ್ಲವೂ ಸ್ಪರ್ಶಶಿಲೆಯ ಖನಿಗಳೇ. ಅಲ್ಲಿರುವ ರತ್ನವೆಲ್ಲವೂ ಚಿಂತಾರತ್ನವೇ. ಮರಗಳೆಲ್ಲವೂ ಕಲ್ಪವೃಕ್ಷವೇ. ಗಿರಿನದಿಯ ಜಲವೆಲ್ಲವೂ ಸಿದ್ಧರಸವೇ. ಮೃಗಗಳೆಲ್ಲವೂ ಪುಣ್ಯಮೃಗಗಳೇ. ಹೀಗಿರುವಲ್ಲಿ ಆ ಪರ್ವತದ ಮಹಿಮೆಯನ್ನು ಸಾಮಾನ್ಯವಾಗಿ ಹೊಗಳಲಾದೀತ? ಆ ಪರ್ವತದಮೇಲೆ ಶಿವಾಗಮಗಳೇ ಕೋಟೆಯಾಗಿಯೂ, ಅಮೃತವೇ ಅಗಳನೀರಾಗಿಯೂ, ವೈರಾಗ್ಯವೇ ಆಳ್ವೇರಿಯಾಗಿಯೂ, ಶಿವಜ್ಞಾನವೇ ಧ್ವಜಗಳಾಗಿಯೂ, ಶಿವಭಕ್ತಿಯೇ ಕೋಟೆದೆನೆಗಳಾಗಿಯೂ, ಮುಕ್ತಿಯೇ ಏರುದಿಣ್ಣೆಯಾಗಿಯೂ ವೇದಗಳೇ ಬಾಗಿಲಾಗಿಯೂ, ಸತ್ಯವೇ ಕದಗಳಾಗಿಯೂ, ಪುಣ್ಯಾವಾಸವಾಗಿಯೂ ಪಾಪನಾಶಕವಾಗಿಯೂ ಇರುವ ಶಿವನ ಪಟ್ಟಣವಿರುವುದು. ದೇವತಾಸಾರ್ವಭೌಮನಾದ ಪರಮಶಿವನೇ ಆ ಪಟ್ಟಣಕ್ಕಧಿಪತಿಯಾಗಿರುವನು. ಆ ಸ್ವಾಮಿಯು ಪ್ರತಿದಿನದಲ್ಲೂ ಒಡ್ಡೋಲಗಂಗೊಟ್ಟು ವಿಷ್ಣುಬ್ರಹ್ಮೇಂದ್ರಾದಿಗಳ ಸ್ತುತಿಯನ್ನು ಲಾಲಿಸಿ, ಅಷ್ಟಲೋಕಪಾಲಕರ ಬಿನ್ನಹವನಾಲಿಸಿ, ಭಕ್ತೋತ್ತಮರ ಭಕ್ತಿಗೆ ಒಲಿದು, ಸಭೆಯಲ್ಲಾಗುವ ಸರ್ವೋಪಚಾರವನ್ನು ಕೈಕೊಳ್ಳುತ್ತ, ಕುಳಿತಲ್ಲಿಯೇ ಜಗದ್ವ್ಯಾಪಾರವನ್ನೆಲ್ಲ ತಿಳಿದುಕೊಳ್ಳುತ್ತ, ಸರ್ವರನ್ನೂ ಮನ್ನಿಸಿ ಕಳಿಸಿ ಹೀಗೆಯೇ ಪರಮಾನಂದದಿಂದ ಜಗತ್ತನ್ನೆಲ್ಲ ಕಾಪಾಡುತ್ತಿದ್ದನು. ಒಂದಾನೊಂದುದಿವಸ ಎಂದಿನಂತೆ ಶಿವನ ಒಡ್ಡೋಲಗಕ್ಕೆ ಅನಂತವಿಷ್ಣುಗಳೂ, ಅನೇಕ ಬ್ರಹ್ಮರುಗಳೂ ಇಂದ್ರಾದ್ಯಷ್ಟದಿಕ್ಪಾಲಕರುಗಳೂ ತಮ್ಮ ತಮ್ಮ ವಾಹನಗಳನ್ನೇರಿ ದಯಮಾಡಿಸಿದರು. ದೇವದಾನವಯಕ್ಷಕಿನ್ನರಕಿಂಪುರುಷಗಂಧರ್ವಗರುಡಸಿದ್ಧವಿದ್ಯಾಧರಗುಹ್ಯಕೋರಗಮುಖ್ಯರಮಾನವಪಿಶಾಚಾದಿಸಂಕುಲವು ಸಭೆಗೆ ಬರುತ್ತಿದ್ದಿತು. ದ್ವಾದಶಾದಿತ್ಯರು, ಏಕಾದಶರುದ್ರರು, ನವಗ್ರಹಗಳು, ನವಬ್ರಹ್ಮರುಗಳು, ಅಷ್ಟವಸುಗಳು, ಸಪ್ತಋಷಿಗಳು, ಚತುರ್ದಶಮನುಗಳು ಸಹ ಗುಂಪುಗುಂಪಾಗಿ ಬರುತ್ತಿದ್ದರು. ಭರದ್ವಾಜ ಮಾಂಡವ್ಯ ಮಾರ್ಕಂಡೇಯ ರೋಮ

ಜ ವ್ಯಾಸ ಬಕ ದಾಲ್ಭ್ಯ ಶುಕ ಪರಾಶರ ಭೃಗು ಅಗಸ್ತ್ಯ ಮೈತ್ರೇ
ಯ ವಾಲಖಿಲ್ಯ ಗಾಲವ ಗಾರ್ಗ್ಯ ದೂರ್ವಾಸ ಶರಭ ಕೌಂಡಿನ್ಯ ಪುಷ್ಕಲ
ಪುಷ್ಪದತ್ತ ಸನಕ ಸನಂದನ ನಾರದಾದಿ ಋಷಿಸಮೂಹವೆಲ್ಲವೂ ಬರು
ತ್ತಿದ್ದಿತು. ಲಕ್ಷ್ಮಿ ಸರಸ್ವತಿ ಅಹಲ್ಯೆ ಲೋಪಾಮುದ್ರೆ ಅರುಂಧತಿ
ಮೊದಲಾದ ಸತೀಶಿರೋಮಣಿಗಳೂ, ರಂಭೆ ಊರ್ವಶಿ ಮೇನಕಿ ತಿಲೋ
ತ್ತಮೆ ಮೊದಲಾದ ದೇವವೇಶ್ಯಾಂಗನೆಯರೂ, ಗಂಗೆ ಸರಸ್ವತಿ ಕುಮು
ದ್ವತಿ ಕಾವೇರಿ ಗೋದಾವರಿ ಮೊದಲಾದ ನದೀನಾರಿಯರುಗಳೂ ಬರು
ತ್ತಿದ್ದರು. ಸಪ್ತಮಾತೃಕೆಯರು ೬೪ ಯೋಗಿನಿಯರು ದಿಕ್ಪಾಲಕರ
ಪತ್ನಿಯರು, ೨೭ ನಕ್ಷತ್ರಕನ್ಯೆಯರು, ರುದ್ರಕನ್ನಿಕೆಯರು, ನಾಗಕನ್ನಿ
ಕೆಯರು, ಅಷ್ಟಮಹಾಲಕ್ಷ್ಮಿಯರು, ಭೂಮ್ಯಂತರಿಕ್ಷಲೋಕದಲ್ಲಿರುವ
ಪುಣ್ಯಸ್ತ್ರೀಯರುಗಳು ಸಹ ಬಂದು ಭಯಭಕ್ತಿಯಿಂದ ಮಹಾಪಾರ್ವ
ತಿಯ ಹಿಂಗಡೆಯಲ್ಲಿ ನಿಂತಿದ್ದರು. ಎಡಗಡೆಯಲ್ಲಿ ಸಕಲನಾರೀಸಂಕುಲ
ವೂ ಬಲಗಡೆಯಲ್ಲಿ ವಿಷ್ಣುಬ್ರಹ್ಮೇಂದ್ರಾದಿದೇವಸಂಕುಲವೂ ನಿಬಿಡವಾ
ಗಿದ್ದವು. ಮಧ್ಯದಲ್ಲಿ ಥಳಥಳಿಸಿ ಹೊಳೆಯುತ್ತಿರುವ ದಿವ್ಯತೇಜೋಮ
ಯವಾದ ಸಿಂಹಾಸನದಮೇಲೆ ಅಖಿಲಾಂಡಕೋಟಿಬ್ರಹ್ಮಾಂಡನಾಯಕನಾ
ದ ಮಹಾದೇವನು ಶ್ರೀಪಾರ್ವತೀಸಮೇತನಾಗಿ ಶುದ್ಧಸ್ಫಟಿಕಸಂಕಾಶನಾಗಿ
ಭಸ್ಮಲಿಪ್ತಾಂಗನಾಗಿ ಸರ್ವಾಭರಣಭೂಷಿತನಾಗಿ ಚಂದ್ರಗಂಗಾಮಂಡಿತ
ಮೌಳಿಯನಾಗಿ, ಪ್ರಸನ್ನಮುಖಮಂಡಲನಾಗಿ ವರಾಭಯಶೂಲಡಮರುಗಹ
ಸ್ತನಾಗಿ ತ್ರಿಪುಂಡ್ರವಿಲಸಿತಫಾಲನಾಗಿ ಚರ್ಮಾಂಬರಧಾರಿಯಾಗಿ ಮಂಡಿಸಿ
ದ್ದನು. ಬಲಗಡೆ ಸಮೀಪದಲ್ಲಿ ವಿಷ್ಣುಬ್ರಹ್ಮರುಗಳು ಉಚಿತಪೀಠಗ
ಳಲ್ಲಿ ಸಪರಿವಾರವಾಗಿ ಕುಳಿತಿದ್ದರು. ಹಿಂಗಡೆಯಲ್ಲಿ ವೀರಭದ್ರ ಷಣ್ಮು
ಖ ಗಣಪತಿಗಳೂ, ರೇಣುಕ ದಾರುಕ ಗಜಕರ್ಣ ಘಂಟಾಕರ್ಣ ಭೈರವ
ಚಂಡೇಶ ಕೂಷ್ಮಾಂಡ ಗಗನಾಂಗ ಧೂಮಾಂಗ ಶೈಲಾಂಗ ಮೊದಲಾದ
ಮಹಾಗಣಗಳೂ ಸಾಲುಸಾಲಾಗಿ ಕುಳಿತಿದ್ದರು. ಏಳುಸಮುದ್ರವನ್ನೂ
ಸುರ್ರನೆ ಹೀರಿಬಿಡುವ, ಬಡಬಾಗ್ನಿಯನ್ನು ಮಿಂಚುಹುಳುವಿನಂತೆ ಹಿಡಿ
ದುಕೊಳ್ಳುವ, ಆದಿಶೇಷನ ಹೆಡೆಯನ್ನು ಕಿತ್ತು ಭೂಮಿಯನ್ನು ಜರಲತ್ತುವಿ
ಯಲ್ಲಿ ಸಿಲ್ಕಿಸಿಕೊಳ್ಳುವ, ಕೋಪಗೊಂಡರೆ ಸಕಲ ಜಗತ್ತನ್ನೂ ನಿಮಿಷಮಾ

ತ್ರದಲ್ಲಿ ಸುಟ್ಟುಬಿಡುವ, ಮೇರುಪರ್ವತವನ್ನು ಗೋಲಿಯಾಡುವ ನಕ್ಷತ್ರಗಳನ್ನು ಕೀಳುವ, ಸೂರ್ಯಮಂಡಲವನ್ನು ಭೇದಿಸುವ, ಸಿಡಿಲನ್ನು ಸೀಳುವ, ಮಹಾಶಕ್ತಿಯುಳ್ಳರುದ್ರಗಣವೆಲ್ಲವೂ ಆ ಮಹಾಸಭೆಯಲ್ಲಿ ಸೇರಿದ್ದಿತು. ಶಿವನ ಪಂಚಮುಖಾದಿರೂಪವನ್ನೇ ಧರಿಸಿರುವ ಮತ್ತು ಸಾಮೀಪ್ಯ ಸಾಲೋಕ್ಯ ಸಾರೂಪ್ಯವನ್ನೈದಿದವರೆಲ್ಲರೂ ಅಲ್ಲಿ ಕುಳಿತಿದ್ದರು. ಆಗ ನಂದಿ ಮಹಾಕಾಳರೆಂಬ ವೇತ್ರಧರರೀರ್ವರೂ ನಿಂತು "ಕೂಗಬೇಡಿ! ಸದ್ದು! ಎಚ್ಚರ! ಏಳದಿರಿ! ಗುಸುಗುಟ್ಟದಿರಿ" ಎಂದು ಮೊದಲಾಗಿ ಸಭಿಕರೆಲ್ಲರನ್ನೂ ಎಚ್ಚರಿಸುತ್ತಲಿದ್ದರು. ವೇದಪುರುಷನು ಉದ್ಘೋಷಿಸುತ್ತಿದ್ದನು. ಭೃಂಗೀಶನು ಮಧ್ಯಾಂಗಣದಲ್ಲಿ ನಿಂತು ಬಿರುಬಿರನೆ ಕಣ್ಣನ್ನು ಬಿಟ್ಟು ಹಲ್ಲನ್ನು ಕಿರಿದು ಮುಖವನ್ನುರುಗಿಸಿ, ಕತ್ತಂ ತಿರುಗಿಸಿ, ಹೆಬ್ಬೆರಲ ತುದಿಯನ್ನೂರಿ ನಿಂತು ಬಿರ್ರನೆ ಬಿಗಿತುಗೊಂಡು ತಿರುತಿರನೆ ತಿರುಗಿ ಬಗ್ಗಿ ಅನೆದು ಅಣಕಿಸಿ ನಾನಾವಿಧವಾಗಿ ಕುಣಿಯುತ್ತ ಸಭೆಯಲ್ಲಿ ಹಾಸ್ಯರಸವಂ ಸುರಿಸುತ್ತಿದ್ದನು. ತುಂಬುರನಾರದರು ವೀಣೆಯಂ ಶ್ರುತಿಮಾಡಿ ಸಪ್ತಸ್ವರಗಳನ್ನೂ ಅನುಸರಿಸಿ ಲಯಗತಿಗಳಂ ಪಿಡಿದು ಆರೋಹಣಾವರೋಹಕ್ರಮಗಳಂ ತಪ್ಪದೆ, ಶುದ್ಧಮಿಶ್ರಸಂಕೀರ್ಣಾದಿರಾಗಜಾತಿಗಳನರಿದು ಇಂಪಾಗಿ ಹಾಡಿ ವೀಣೆಯಂ ಬಾಜಿಸಿ ಸಭಿಕರನ್ನು ಗಾನಾನಂದದಲ್ಲಿ ಮುಳುಗಿಸುತ್ತಿದ್ದರು. ಊರ್ವಶೀರಂಭಾದಿವಾರಾಂಗನೆಯರು ತಾಳ ಮದ್ದಳೆ ಕೊಳಲು ವೀಣೆಗಳ ಶ್ರುತಿಲಯಗಳನ್ನನುಸರಿಸಿ, ಸಲಕ್ಷಣವಾಗಿ ಅಭಿನಯಪೂರ್ವಕವಾಗಿ ಶುದ್ಧದೇಶೀಯಾದಿಭೇದಗಳ ನರ್ತನವನ್ನು ಮಾಡುತ್ತಿದ್ದರು. ಪಾರ್ವತೀದೇವಿಯಿಂದ ಶೃಂಗಾರರಸವೂ, ವೀರಭದ್ರೇಶನಿಂದ ವೀರರಸವೂ, ಶಿವನ ಅಂತರಂಗದ ಕರುಣಾರಸವೂ ಪಿಶಾಚಗಳಿಂದ ಅದ್ಭುತರಸವೂ, ಭೃಂಗೀಶನಿಂದ ಹಾಸ್ಯರಸವೂ, ಭಕ್ತರ ಮನಸ್ಸಿನ ಭಯರಸವೂ, ವ್ಯಾಘ್ರಚರ್ಮಅಸ್ಥಿಮಾಲಿಗಳ ಭೂಷಣವುಳ್ಳ ಶಿವಗಣದಿಂದ ಬೀಭತ್ಸರಸವೂ, ರುದ್ರಗಣದಿಂದ ರೌದ್ರರಸವೂ, ಋಷಿಗಳಿಂದ ಶಾಂತಿರಸವೂ ಹೊರಸೂಸುತ್ತ ಆ ಶಿವಸಭೆಯಲ್ಲಿ ಹೀಗೆ ನವರಸವೂ ತುಳುಕಾಡುತ್ತಿದ್ದಿತು. ಕುಬೇರನು ಕೈಚೀಲವನ್ನು ಹಿಡಿದುಕೊಂಡಿದ್ದನು. ವರುಣನು ನೀರ್ಗಿಂಡಿಯನ್ನು ಹಿಡಿದಿದ್ದನು. ವಾಯುವು

ಹೂವಿನ ಬೀಸಣಿಗೆಯನ್ನು ಬೀಸುತ್ತಿದ್ದನು. ನಿರ್ಋತಿಯು ಕಾಳಂಜಿಯನ್ನು ಹಿಡಿದಿದ್ದನು. ಇಂದ್ರನು ರತ್ನದ ಕನ್ನಡಿಯನ್ನು ಹಿಡಿದಿದ್ದನು. ಸೂರ್ಯಚಂದ್ರರು ಚಾಮರಗಳನ್ನು ಬೀಸುತ್ತಿದ್ದರು. ವಿಷ್ಣುಬ್ರಹ್ಮಾದಿದೇವತಾಸ್ತೋಮವೆಲ್ಲವೂ ಆಗಾಗ್ಗೆ ನಮಸ್ಕರಿಸಿ, ಎದ್ದು ಕೈಕಟ್ಟಿ ನಿಂತು ಭಕ್ತಿಯಿಂದ ಸ್ತುತಿಸುತ್ತಿದ್ದಿತು. ಜಯಜಯಮಹಾದೇವ ಎಂಬ ಶಬ್ದವು ಸಭೆಯಲ್ಲೆಲ್ಲ ಪ್ರತಿಧ್ವನಿಗೊಡುತ್ತಿದ್ದಿತು. ಆಗ ಪರಶಿವನು ಪ್ರಸನ್ನನಾಗಿ ವಿಷ್ಣುಬ್ರಹ್ಮೇಂದ್ರಾದಿದೇವಶ್ರೇಷ್ಠರುಗಳನ್ನು ಕೃಪಾಕಟಾಕ್ಷದಿಂ ನೋಡಿ, ಕಣ್ಸನ್ನೆಯಿಂದ ಸಮೀಪಕ್ಕೆ ಕರೆದು ಅವರ ಮನೋಭಾವಗಳನ್ನು ಕೇಳಿ, ಮನ್ನಿಸಿ, ಮುನಿಗಳ ಭಕ್ತಿಗೆ ಮೆಚ್ಚಿ, ಇತರರನ್ನು ಯೋಗ್ಯತಾನುಸಾರವಾಗಿ ಅನುಗ್ರಹಿಸುತ್ತಿದ್ದನು. ಎಂಬಲ್ಲಿಗೆ ಎರಡನೇ ಅಧ್ಯಾಯವು ಸಂಪೂರ್ಣವು.

---

## ೩ ನೇ ಅಧ್ಯಾಯವು.

### ಚಿತ್ಕಳಾವತರಣ.

ಪರಮೇಶ್ವರನು ಈರೀತಿಯಾದ ವಿಭವದಿಂದ ಕೈಲಾಸದ ಮಹಾಸಭೆಯಲ್ಲಿ ಒಪ್ಪಿರುತ್ತಿರಲು, ಪಾರ್ವತಿಯು ಪತಿಯನ್ನು ಕುರಿತು— ಸ್ವಾಮಿಯೆ! ನಾರದಮಹರ್ಷಿಯು ಪ್ರಾರ್ಥನೆಯಮೇರೆ ಭೂಮಿಯಲ್ಲಿ ಶಿವಭಕ್ತಿಸಮುದ್ಧರಣಾರ್ಥವಾಗಿ ನಂದ್ಯಾದಿಪ್ರಮಥರನ್ನು ಅವತರಿಸಬೇಕೆಂದು ಬೆಸಸಿದಾಗ್ಗೆ, ಅವರುಗಳಿಗೆ ತತ್ತ್ವೋಪದೇಶವನ್ನು ಮಾಡುವುದಕ್ಕಾಗಿ ನಿಮ್ಮ ಚಿತ್ಕಳೆಯನ್ನೇ ಅವರ ಸಂಗಡ ಹೋಗಿ ಭೂಮಿಯಲ್ಲಿ ಅವತರಿಸುವಂತೆ ಮಾಡುವೆನೆಂದು ಅಪ್ಪಣೆಕೊಡಿಸಿದ್ದಿರಷ್ಟೆ. ಅದನ್ನು ನೆರವೇರಿಸಬೇಡವೆ? ಎಂದು ಸೂಚಿಸಲು, ಪರಶಿವನು ಅಹುದೆಂದು ಹೇಳಿ ತನ್ನ ಹೃತ್ಕಮಲಮಧ್ಯದಲ್ಲಿರುವ ಚಿತ್ಪ್ರಣವಸ್ವರೂಪವನ್ನು ಸ್ಮರಿಸಿಕೊಂಡನು. ಆ ಪ್ರಣವವೇ ದಿವ್ಯತೇಜೋಭರಿತವಾದ ಆಕಾರವನ್ನು ಧರಿಸಿ, ಆರುಮುಖಗಳನ್ನು ಹೊಂದಿ, ಈಶ್ವರನ ಮುಂಗಡೆಯಲ್ಲಿ ಬಂದು ನಿಂತು, ಭಕ್ತಿಯಿಂದ ನಮಸ್ಕರಿಸಿತು. ಆ ಕುಮಾರನನ್ನು ಪರಶಿವನು

ತೆಗೆದಪ್ಪಿ ಮುದ್ದಾಡಿ, ತೊಡೆಯಮೇಲೆ ಕುಳ್ಳಿರಿಸಿಕೊಂಡು, ಎಲೆ ನಂದನನೇ! ನಂದ್ಯಾದಿಪ್ರಮಥಗಣಂಗಳೆಲ್ಲರೂ ಭೂಲೋಕಕ್ಕೆ ಹೋಗಿ ಮಾನವರೂಪದಿಂದ ಅವತರಿಸಿರುವರು. ನೀನೂ ಅಲ್ಲಿಗೆ ಹೋಗಿ ಮಾನವಾಕಾರದಿಂದ ಜನಿಸಿ, ಅವರೆಲ್ಲರಿಗೂ ಷಟ್ಸ್ಥಲತತ್ತ್ವವನ್ನುಪದೇಶಿಸಿ, ಮುಕ್ತರನ್ನು ಮಾಡಬೇಕೆಂದು ಬೆಸಸಿದನು. ಆಗಳಾಕುವರನು ಕೈಜೋಡಿಸಿ ನಿಂತು, ದೇವನೇ! ನಾನು ಮಾನವರಲ್ಲಿ ಜನಿಸಿ, ನಂದ್ಯಾದಿಗಣಸಂಕುಲಕ್ಕೆ ಷಟ್ಸ್ಥಲರಹಸ್ಯವನ್ನು ಬೋಧಿಸಬೇಕಾದ ಕಾರಣವೇನು? ಎಂದು ಕೇಳಿಕೊಳ್ಳಲು, ಶಿವನು ನಕ್ಕು, ಅಯ್ಯಾ! ನಮ್ಮ ಚಿತ್ಕಳೆಯೇ ಆಕಾರವಾಗಿರುವ ನೀನು ಆರು ಮುಖಂಗಳಲ್ಲೂ ಆರು ಪ್ರಣವಗಳ ಸ್ವರೂಪನಾಗಿ ಷಣ್ಮುಖಿಯೂ ಷಟ್ಸ್ಥಲಬ್ರಹ್ಮಿಯೂ ಎನಿಸಿಕೊಂಡಿರುವೆ. ಇಂಥ ನಿನಗೆ ತಿಳಿಯದಿರುವ ವಿಷಯವಾವುದಿರುವುದು? ಆದರೆ ನನ್ನ ಮುಖವಚನದಿಂದ ತಿಳಿಯಬೇಕೆಂಬುದು ನಿನ್ನಪೇಕ್ಷೆಯಾಗಿದ್ದರೆ ಹೇಳುತ್ತೇನೆ ಕೇಳು.— ಹಿಂದೆ ಒಂದು ದಿವಸ ನಾನು ಇದೇರೀತಿಯಲ್ಲಿ ಒಡ್ಡೋಲಗದಲ್ಲಿರುವಾಗ್ಗೆ ನಾರದಮಹರ್ಷಿಯು ಬಂದು ಸಾಷ್ಟಾಂಗವಾಗಿ ನಮಸ್ಕರಿಸಿ ನಿಂದಿರುವಲ್ಲಿ, ಸಭೆಯಲ್ಲಿದ್ದ ನಾನೀತನು ಎಲೈ ಮುನಿವನೇ! ನೀನು ಬಂದ ಕಾರ್ಯವಾವುದು? ಸ್ವಾಮಿಗೆ ಬಿನ್ನೈಸು, ಎಂದು ಬೆಸಸಲು, ಆ ಋಷಿಯು— "ಭೂಲೋಕದ ಭರತಖಂಡದಲ್ಲಿ ಕಲಿ ಪ್ರಬಲನಾಗಿ ಸತ್ಯ ಸದಾಚಾರ ಶಿವಭಕ್ತಿ ಸದ್ಧರ್ಮ ಕಾರ್ಯಗಳೆಲ್ಲ ಅಡಗಿ, ದುರ್ನೀತಿ, ಕಾಪಟ್ಯ, ಅನೃತ, ವಂಚನೆ, ಅನಾಚಾರ ಮೊದಲಾದುವುಗಳು ಪ್ರಬಲವಾಗಿರುವುವು. ಜೈನಬೌದ್ಧಚಾರ್ವಾಕಾದಿಮತಗಳು ಹೆಚ್ಚಿ, ಶಿವನನ್ನು ಜರಿಯುತ್ತಿರುವುವು. ಅಷ್ಟಾವರಣಗಳನ್ನೂ ಶಿವಭಕ್ತರನ್ನೂ ದೂಷಿಸುತ್ತಿರುವ ಪ್ರಭುಗಳು ಹೆಚ್ಚಿದರು. ಶಿವಾಲಯಗಳೂ ಜಂಗಮರ ಮಠಗಳೂ ಹಾಳಾದುವು. ಅವಕ್ಕೆ ಕೊಟ್ಟಿದ್ದ ಮಾನ್ಯಗಳೆಲ್ಲವೂ ಅಪಹೃತವಾಗಿರುವುವು. ಎತ್ತಲ್ಲೂ ಜೈನರ ಬಸ್ತಿಗಳೇ ತುಂಬಿಕೊಂಡಿರುವುವು. ದುಷ್ಟರ ಹಾವಳಿಯನ್ನು ತಡೆಯಲಾರದೆ ಕೋಟಿಗೊಬ್ಬೊಬ್ಬ ಶಿವಶರಣರು ಅಲ್ಲಲ್ಲಿ ಸೀಗೆಯೊಳಗಣ ಬಾಳೆಯಂತೆಯೂ, ಬಿದಿರಿನೊಳಗಣ ಗಂಧದ ಮರಗಳಂತೆಯೂ ಅಡಗಿಕೊಂಡು ಕಷ್ಟದಿಂದ ವಾ

ಸವಣಾತುತ್ತಿರುವವು. ಬೇಸಗೆಯಿಂದ ಒಣಗುತ್ತಿರುವ ಬಳ್ಳಿಗಳು ಮಳೆಯನ್ನು ಇದಿರುನೋಡುತ್ತಿರುವಂತೆ, ಶಿವಶರಣರುಗಳು-ಪರಮಾತೆಗಳೆಲ್ಲವೂ ಅಡಗಿ, ಶಿವಮತವು ಎಂದಿಗೆ ಪ್ರಬಲಿಸುವುದೋ ಎಂದು ಹೇಳಿಕೊಂಡು ನಿಟ್ಟುಸಿರುಬಿಡುತ್ತಿದ್ದುದನ್ನು ನಾನು ಕಿವಿಯಾರ ಕೇಳಿದೆನು. ಇದನ್ನು ಮಹಾದೇವನಲ್ಲಿ ಬಿನ್ನೈಸುವುದಕ್ಕಾಗಿಯೇ ನಾನಿಲ್ಲಿಗೆ ಬೇಗನಿಂದ ಬಂದೆನು. ಸ್ವಾಮಿ ತಿಳಿಯದ ವಿಷಯವೊಂದೂ ಇಲ್ಲ. ಸಕಲ ಜಗದ್ವ್ಯಾಪಾರಕ್ಕೂ ನೀನೇ ಸೂತ್ರಧಾರ, ಜಗತ್ತನ್ನುದ್ಧರಿಸುವುದಕ್ಕೆ ಇದು ಒಳ್ಳೆಯ ಸಮಯ " ಎಂದು ಬಿನ್ನೈಸಿದನು. ಆಗ ನಾನು ಭೂಮಿಯಲ್ಲಿ ಸದ್ಧರ್ಮಸ್ಥಾಪನೆಯನ್ನು ಮಾಡಿಬರುವುದಕ್ಕೆ ಯಾರನ್ನು ಕಳುಹಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ, ಪಾರ್ವತಿಯು— ಎಲೈ ಸ್ವಾಮಿಯೆ! ಭೂಲೋಕದ ಮನುಜರು ಹುಟ್ಟುಸಾವುಗಳಿಗೆ ಸಿಕ್ಕಿರುವರೆಂಬುದನ್ನು ನಾನು ಬಲ್ಲೆ; ನಿನ್ನ ಮಹಾಸಭೆಯಲ್ಲಿರತಕ್ಕವರು ಕೂಡ ಆ ಭವದಲ್ಲಿ ಬರುವುದುಂಟೆ? ಎಂದು ಕೇಳಿದಳು. ಆಗ ನಾನು—ಚೆನ್ನಾಯಿತು! ಈ ವಿಷ್ಣುಬ್ರಹ್ಮಾದಿಗಳಿಗು ಕೂಡ ಭವಬಂಧವು ತಪ್ಪಿದ್ದಲ್ಲವೆಂದು ನುಡಿದೆನು. ದೇವಿಯು— ಹಾಗಾದರೆ ಅಂತಹ ಭವಬಂಧನವನ್ನು ತಪ್ಪಿಸಿಕೊಳ್ಳುವುದಕ್ಕೆ ಯಾರಿಂದಲೂ ಆಗುವುದಿಲ್ಲವೆ? ಎನ್ನಲು, ನಾನು— ಆಗುವುದು, ಷಟ್ಸ್ಥಲರಹಸ್ಯಾರ್ಥವನ್ನು ತಿಳಿದು ತತ್ಸಾಧನಾಬಲದಿಂದ ನಿತ್ಯಸುಖವನ್ನು ಪಡೆದವರಿಗೆ ಭವಬಂಧವು ತೊಲಗಿಹೋಗುವುದು ಎಂದು ಹೇಳಿದೆನು. ಹಾಗಾದರೆ ನಿತ್ಯಸುಖವನ್ನು ಕೊಡುವ ಆ ಷಟ್ಸ್ಥಲರಹಸ್ಯಾರ್ಥವನ್ನು ನನಗೆ ನಿರೂಪಿಸಿ ಕೃತಾರ್ಥಳಂ ಮಾಡಬೇಕೆಂದು ಬೇಡಿಕೊಂಡಳು. ಹೀಗೆ ಪಾರ್ವತಿಯು ಪ್ರಾರ್ಥಿಸಿಕೊಂಡುದು ಸಕಲ ಗಣಕುಲಕ್ಕೂ ಸಂತೋಷವನ್ನುಂಟುಮಾಡಿತು. ಏಕೆಂದರೆ— ಷಟ್ಸ್ಥಲತತ್ತ್ವವನ್ನು ತಿಳಿಯಬೇಕೆಂಬ ಆಸೆಯು ಅವರಿಗೂ ಇದ್ದಿತು. ಇವರ ಈವಿಧವಾದ ಮನೋಭಾವವನ್ನು ತಿಳಿದುಕೊಂಡೇ ಇವರಮೇಲಣ ಕಾರುಣ್ಯದಿಂದ ಪಾರ್ವತಿಯು ಆರೀತಿಯಲ್ಲಿ ಪ್ರಾರ್ಥಿಸಿರುವಳೆಂಬುದನ್ನು ನಂದೀಶ್ವರನು ಅರಿದು, ಕೈಮುಗಿದು, ನನ್ನ ಮುಂದೆ ನಿಂತು, ಸ್ವಾಮಿಾ! ಈ ಜಗನ್ಮಾತೆಯು ನಮ್ಮೆಲ್ಲರನ್ನೂ ಉದ್ಧರ ಮಾಡಬೇಕೆಂಬ ದಯಾವಿಶೇಷದಿಂದಲೇ

ತನ್ನಲ್ಲಿ ಆ ಪ್ರಾರ್ಥನೆಯನ್ನು ಮಾಡಿಕೊಂಡಿರುವಳು. ಅದುಕಾರಣ ಈ ಮಾತಿಯಿಬು ಬಿನ್ನಪವನ್ನು ಅವಧಾನಕ್ಕೆ ತಂದುಕೊಂಡು, ಷಟ್ಸ್ಥಲರಹಸ್ಯಾರ್ಥವನ್ನು ಬೋಧಿಸಿ, ನಮ್ಮೆಲ್ಲರನ್ನು ಕಾಪಾಡಬೇಕೆಂದು ಭಕ್ತಿಯಿಂದ ಪ್ರಾರ್ಥಿಸಿಕೊಂಡನು. ಆಗ ನಾನು ಸಂತೋಷಗೊಂಡು ಎಲೆ ನಂದೀಶನೇ! ನೀನು ನಮಗೆ ಭಿನ್ನನೆ? ನಮ್ಮ ಸದ್ಧರ್ಮಸ್ವರೂಪವೇ ನೀನಾಗಿ ದ್ವಿತೀಯಶಂಭುವೆನಿಸಿಕೊಂಡಿರುವೆ. ನೀನು ತಿಳಿಯದಿರುವ ರಹಸ್ಯಾರ್ಥವಾವುದಿರುವುದು? ಆದರೆ ಈ ಶಿವಶರಣರೆಲ್ಲರೂ ಕೇಳಿ ಧನ್ಯರಾಗಲಿ ಎಂಬುದಕ್ಕೋಸ್ಕರಲೇ ನೀನು ಪ್ರಾರ್ಥಿಸಿಕೊಂಡಿರುತ್ತೀಯೆ, ಎಂದು ನುಡಿದೆನು. ನಂದೀಶನಾದರೋ—ಸ್ವಾಮಿಾ! ನಿಮ್ಮ ಪಾದಸೇವಕರ ಸೇವಕನಾಗಿ ನಾನಿರುವಾಗ ನನ್ನನ್ನು ಕುರಿತು ಇಷ್ಟು ದೊಡ್ಡಮಾತೇಕೆ? ಷಟ್ಸ್ಥಲರಹಸ್ಯವನ್ನು ಬೋಧಿಸಿ, ಈ ಶಿವಗಣಸಮೂಹವೆಲ್ಲವನ್ನೂ ಉದ್ಧರಿಸಬೇಕು ಎಂದು ಬೇಡಿಕೊಂಡನು. ಆಗ ನಾನು ಅಂತರಂಗದಲ್ಲಿ ಭೂಲೋಕದೊಳಗೆ ವೀರಶೈವಧರ್ಮವನ್ನುದ್ಧರಿಸುವುದಕ್ಕಾಗಿ ನಂದೀಶ್ವರನನ್ನೇ ಕಳಿಸಿಕೊಡಬೇಕೆಂದು ಯೋಚಿಸಿಕೊಂಡು, ಅಯ್ಯಾ ನಂದೀಶನೇ! ಷಟ್ಸ್ಥಲತತ್ತ್ವವನ್ನು ಈ ಶರೀರದಲ್ಲೇ ಈ ಲೋಕದಲ್ಲೇ ತಿಳಿಯಲಿಕ್ಕಾಗದು, ಭರತಖಂಡಕ್ಕೆ ನೀವುಗಳೆಲ್ಲರೂ ಹೋಗಿ ನರಜನ್ಮದಲ್ಲಿ ಜನಿಸಿ, ವೀರಶೈವಮಾರ್ಗಾಚರಣೆಯನ್ನು ಅನುಸರಿಸದಿದ್ದರೆ ನಿಮಗೆ ಷಟ್ಸ್ಥಲಸಾಧನವು ದೊರೆಕೊಳ್ಳಲಾರದು, ಎಂದೆನು. ನಂದೀಶನಾದರೋ— ಹಾಗೆ ನಾವು ನರಜನ್ಮವನ್ನೆತ್ತಿದರೆ ಎಷ್ಟು ದಿನಕ್ಕೆ ಷಟ್ಸ್ಥಲತತ್ತ್ವವು ಸಾಧ್ಯವಾಗುವುದು? ಅಲ್ಲಿ ನಮಗೆ ಬೋಧಿಸುವವರಾರು? ದಯೆಯಿಟ್ಟು ಅಪ್ಪಣೆ ಕೊಡಿಸಬೇಕೆಂದು ಬೇಡಿದನು. ಆಗ ನಾನು— ನಂದೀಶನೇ! ನೀವುಗಳೆಲ್ಲರೂ ಭೂಮಿಯಲ್ಲಿ ಅವತರಿಸಿ, ಗುರುಲಿಂಗಜಂಗಮ ಭಕ್ತರಾಗಿ ಪ್ರಸಾದಪಾದೋದಕಗಳನ್ನು ಪರಿಗ್ರಹಿಸುತ್ತ ವೀರಶೈವಾಚಾರತತ್ಪರರಾಗಿದ್ದರೆ ನಿಮ್ಮ ಭಕ್ತಿಯಲ್ಲೇ ಲಿಂಗರೂಪಾಗಿಯೂ ನಿಮ್ಮ ಭಾವದಲ್ಲೇ ಜಂಗಮರೂಪಾಗಿಯೂ, ನಾವಿರುವೆವು. ಷಟ್ಸ್ಥಲರಹಸ್ಯವನ್ನು ತಿಳಿಸುವುದಕ್ಕೆ ನಮ್ಮ ಚಿತ್ಕಳಾಕುಮಾರನೇ ಬರುವನು ಎಂದು ಹೇಳಿದೆನು. ಆಗ ಪಾರ್ವತಿಯು— ಎಲೌ ದೇವನೇ! ನನ್ನ

ಹೊಟ್ಟೆಯಲ್ಲಿ ಮಕ್ಕಳಾಗುವುದಿಲ್ಲವೆಂಬ ಸಂಗತಿಯನ್ನು ನೀವೇ ಬಲ್ಲಿರಿ. ಮಕ್ಕಳನ್ನು ಹಡೆಯಬೇಕೆಂಬ ನೆವವೊಂದು ನನಗಿದೆ. ಅದುಕಾರಣ ನನ್ನ ಚಿತ್ಕಳೆಯನ್ನು ಭೂಮಿಗೆ ನಂದೀಶನೊಡನೆ ಕಳಿಸಿ ಜನಿಸುವಂತೆ ಮಾಡಿ, ಆಕೆಯ ಗರ್ಭದಲ್ಲಿ ತಮ್ಮ ಜ್ಞಾನಪುತ್ರನು ಹುಟ್ಟಿ, ಗಣಸಮೂಹಕ್ಕೆ ಷಟ್ಸ್ಥಲಾರ್ಥವನ್ನು ಬೋಧಿಸುವಂತೆ ದಯಪಾಲಿಸಬೇಕೆಂದು ಕೇಳಿಕೊಂಡಳು. ಆಗ ನಾನು—ಹಾಗೇಆಗಲಿ; ನಾರದಮಹರ್ಷಿಯು ಈ ದಿನ ಬಂದ ಕಾರ್ಯವು ಸಿದ್ಧಿಸಿತು; ನಿನ್ನಿಂದಲೂ ಈನಂದೀಶನಿಂದಲೂ ಭೂತಲದ ಗಣಶ್ರೇಣಿಯ ಭವವೆಲ್ಲವೂ ತೊಲಗುವಂತಾಯಿತು; ಮುಂದೆ ಭಾರತಭೂಮಿಯಲ್ಲಿ ವೀರಶೈವಧರ್ಮವು ಒಳ್ಳೆಯ ನೆಲೆಗೆ ನಿಂತು ಕೊಳ್ಳುವುದು; ಅದುಕಾರಣ ಮುಂದಾಗಿ ನೀವೆಲ್ಲರೂ ಭೂಮಿಗೆ ಹೋಗಿ ಜನಿಸಿರಿ; ಹಿಂದೆಯೇ ನಾನು ನನ್ನ ಜ್ಞಾನಪುತ್ರನನ್ನು ಕಳಿಸಿಕೊಡುತ್ತೇನೆ; ಎಂದು ಹೇಳಿದೆನು. ಆಗ ನಂದೀಶನು—ನಿಜವಾಗಿ ಕಳಿಸುವಿರೆ? ಎನಲು, ನಾನು—ಕಳಿಸುತ್ತೇನೆ, ಎಂದೆನು. ನಂದಿ— ನಂಬಿಕೊಳ್ಳಲೊ? ಎನಲು, ನಾನು— ನಂಬು: ನಿನ್ನನ್ನು ಬಿಟ್ಟಿರುವುದಿಲ್ಲ; ಹೋಗು; ಕತ್ತಲೆಯನ್ನು ಬೆಳಕೂ, ವಿಷವನ್ನು ಅಮೃತವೂ, ಪಾಪವನ್ನು ಪುಣ್ಯವೂ ಓಡಿಸಿಬಿಡುವಂತೆ ನೀನು ಭೂಮಿಯಲ್ಲಿ ಅನೇಕ ಪವಾಡಗಳಿಂದ ಪರವಾದವನ್ನು ಗೆದ್ದು, ನಿರ್ಮಲವಾದ ವೀರಶೈವಮಾರ್ಗವನ್ನು ಉದ್ಧರಿಸು; ಎಂದು ಹೇಳಿಕಳಿಸಿಕೊಟ್ಟೆನು. ಆ ಕೂಡಲೇ ಏಳ್ನೂರೆಪ್ಪತ್ತು ಮರಗಣಂಗಳೂ ರುದ್ರಕನ್ನಿಕೆಯರೂ, ಇತರ ಅಸಂಖ್ಯಾತಗಣಂಗಳೂ ಸಹ ಸಂತೋಷದಿಂದೆದ್ದು, ಭಕ್ತಿಯಿಂದ ನಮಸ್ಕರಿಸಿ ನನ್ನಪ್ಪಣೆಯನ್ನು ಪಡೆದು, ಭೂಮಿಗಿಳಿದು ನಾನಾಮಾನವ ಗರ್ಭದಲ್ಲಿ ಜನಿಸಿ, ಅನೇಕ ವಿಧವಾದ ಕಾಯಕಗಳನ್ನು ಹಿಡಿದು ವೀರಶೈವಾಚಾರಸಂಪನ್ನರಾಗಿ ಇರುತ್ತಿರುವರು. ಅವರಲ್ಲಿ ಆದಿನಿರಂಜನಮೂರ್ತಿಯೇ ಅಲ್ಲಮಪ್ರಭುವಾಗಿಯೂ, ನನ್ನ ಪ್ರತಿಬಿಂಬವೇ ಸಿದ್ಧರಾಮನಾಗಿಯೂ, ವೀರಭದ್ರೇಶನೇ ಮಡಿವಳಮಾಚಿದೇವನಾಗಿಯೂ, ಮಹಾದೇವಿಯೆಂಬ ರುದ್ರಕನ್ನಿಕೆಯೇ ಮಾದೇವಿಯಕ್ಕನಾಗಿಯೂ, ಹೀಗೆಯೇ ಉಳಿದ ನಾನಾಗಣಂಗಳೂ ನಾನಾವಿಧದ ರೂಪನಾಮಾದಿಭೇದಗಳಿಂದ ಅವತರಿಸಿರುವರು. ಮಂಡಿಗೆಮಾದಿರಾಜನೆಂಬ ಬ್ರಾಹ್ಮಣನ ಪತ್ನಿಯಾದ

ಮಾದಾಂಬಿಕೆಯ ಗರ್ಭದಲ್ಲಿ ಪಾರ್ವತಿಯ ಚಿತ್ಕಳೆಯು ನಾಗಲಾಂಬಿಕೆಯೆಂಬ ಹೆಸರಿನಿಂದಲೂ, ನಂದೀಶನು ಬಸವರಾಜನೆಂಬ ಹೆಸರಿನಿಂದಲೂ ಅವತಾರವನ್ನೆತ್ತಿದವರಾಗಿ ಉದಿಸಿರುವರು. ಬಸವೇಶನಾದರೋ ತನ್ನ ತೇಜಸ್ಸಿನಿಂದ ಕಲ್ಯಾಣಪುರದರಸಾದ ಬಿಜ್ಜಳನಿಗೆ ಮುಖ್ಯ ಮಂತ್ರಿಯಾಗಿರುವನು. ಮತ್ತು ಸಕಲ ಶಿವಶರಣಗಣಕ್ಕೂ ಪ್ರಮುಖನಾಗಿದ್ದುಕೊಂಡು, ಅನೇಕ ವಾದಗಳನ್ನು ಮಾಡಿ, ಪರಮತಗಳ ಗರ್ವವನ್ನಡಗಿಸಿ, ಲಕ್ಷದ ಮೇಲೆ ತೊಂಭತ್ತಾರುಸಾವಿರ ಮಹಾಜಂಗಮರಿಗೆ ದಾಸೋಹಂಭಾವದಿಂದ ಮೃಷ್ಟಾನ್ನಭೋಜನ ಮಾಡಿಸಿಕೊಂಡು ಸದಾ ನಿನ್ನ ಆಗಮನವನ್ನೇ ನಿರೀಕ್ಷಿಸಿಕೊಂಡಿರುವನು. ಆ ನಂದೀಶ್ವರನೇ ನಮ್ಮ ಭಕ್ತಿಸ್ವರೂಪನು; ಆ ಪ್ರಭುದೇವನೇ ನಮ್ಮ ವೈರಾಗ್ಯಸ್ವರೂಪನು; ನೀನು ನಮ್ಮ ಜ್ಞಾನಸ್ವರೂಪನು; ನಾಗಲಾಂಬಿಕೆಯೇ ಪಾರ್ವತಿಯಸ್ವರೂಪಳು. ಆಕೆಯ ಗರ್ಭದಿಂದ ನೀನು ಸ್ವೇಚ್ಛೆಯಾಗಿ ಜನಿಸಿ, ಅವರನ್ನು ಅನುಮಾನವಿಲ್ಲದೆ ಗುರುಭಾವದಿಂದ ಕಂಡು, ಕೊನೆಗೆ ಷಟ್ಸ್ಥಲತತ್ವಾರ್ಥವನ್ನು ಅವರಿಗೆ ಗುರುಸ್ವರೂಪನಾಗಿ, ನೀನೇ ಬೋಧಿಸು, ಹೋಗು, ಎಂದು ಅಪ್ಪಣೆಕೊಟ್ಟನು. ಆಗ ಪರಶಿವನ ಆ ಚಿತ್ಕಳಾಕುಮಾರನು—ಮಹಾದೇವನೇ! ನನಗೇನು ಸ್ವಾತಂತ್ರ್ಯ? ನೀನಿರಿಸಿದಂತೆ ಇರತಕ್ಕವನು ನಾನು, ಎಂದು ಹೇಳಿದನು. ಆಗ ಶಿವನು ನಕ್ಕು ತನ್ನ ಆ ಜ್ಞಾನರೂಪನನ್ನು ತನ್ನಲ್ಲೇ ಅಡಗಿಸಿಕೊಂಡು, ಕಟಾಕ್ಷದ ಸನ್ನೆಯಿಂದ ಸಭೆಯನ್ನು ವಿಸರ್ಜಿಸಿದನು. ಶಿವನ ಆಚಿತ್ಕಳಾರೂಪವು ಭೂಮಿಗವತರಿಸಿ ನಾಗಲಾಂಬಿಕೆಯ ಗರ್ಭವನ್ನು ಪ್ರವೇಶಿಸಿತು. ಎಂಬಲ್ಲಿಗೆ ೩ ನೇ ಅಧ್ಯಾಯವು ಸಂಪೂರ್ಣವು.

---

## ೪ ನೇ ಅಧ್ಯಾಯವು.

### ಚೆನ್ನಬಸವೇಶಾವತರಣವು.

ಇತ್ತ ಮಾದಿರಾಜನಿಗೆ ಪುತ್ರಿಯಾಗಿ ಜನಿಸಿದ್ದ ನಾಗಲಾಂಬಿಕೆಯು ಪ್ರವೃದ್ಧಮಾನಳಾಗಿ ಗುರುಲಿಂಗಜಂಗಮಸೇವೆಯನ್ನು ಅತ್ಯಂತ ಭಕ್ತಿಯಿಂದ ಮಾಡುತ್ತ ಅವರಪ್ರಸಾದವಂ ಸವಿದು ಸುಖದಿಂದ ಒಂದು ದಿವಸ

ಹಾಸುಗೆಯಲ್ಲಿ ಒರಗಿ ಶಿವಯೋಗನಿದ್ರೆಯಲ್ಲಿರುತಿರಲು, ಪರಶಿವನು ಜಂಗಮರೂಪವನ್ನು ಧರಿಸಿ ಬಂದು, ಆಕೆಯನ್ನು ತಟ್ಟಿ ಏಳಿಸಿ, "ಎಲೌ ತರುಣಿಯೆ! ಈ ಮಹಾಪ್ರಸಾದವನ್ನು ಪರಿಗ್ರಹಿಸು" ಎಂದು ಹೇಳಿ ಕೊಡಲು, ಅದನ್ನು ಅತಿಸಂತೋಷದಿಂದ ಪಡೆದುಕೊಂಡು, ಲಿಂಗಕ್ಕೆ ನಿವೇದಿಸಿ, ಸವಿದು ತೃಪ್ತಳಾದಳು. ಕೂಡಲೇ ಶಿವನು ಆ ಜಂಗಮರೂಪವನ್ನು ಬಿಟ್ಟು ಪಂಚಮುಖದಶಭುಜಾದಿಗಳನ್ನು ಧರಿಸಿ, ಪಾರ್ವತೀಸಮೇತನಾಗಿ ನಿಜರೂಪದಿಂ ಪ್ರತ್ಯಕ್ಷನಾಗಿ, ನಾಗಲಾಂಬಿಕೆಯನ್ನು ಕುರಿತು- ಎಲೈ ಲಲಿತಾಂಗಿಯೇ! ಯೋಚನೆ ಮಾಡಬೇಡ; ನಾನೊಂದು ಚೋದ್ಯವನ್ನು ಹೇಳುತ್ತೇನೆ ಕೇಳು- ಈಗ ನಾವು ನಿನಗೆ ಕೊಟ್ಟಿರುವುದು ನಮ್ಮ ಚಿತ್ಕಳಾಮೃತಪ್ರಸಾದವು. ಇದರ ಸೇವನೆಯಿಂದ ನಿನ್ನ ಗರ್ಭದಲ್ಲಿ ನಮ್ಮ ಷಣ್ಮುಖಸ್ಥಿತಪ್ರಣವಸ್ವರೂಪಿಯಾದ ಷಟ್ಸ್ಥಲಬ್ರಹ್ಮಿಯು ಜನಿಸುವನು. ಅವನು ಅನೇಕ ಪವಾಡಗಳನ್ನು ನಡಿಸಿ, ಸಕಲ ಭೂತಲಮಾನ್ಯನಾಗುವನು. ಮತ್ತು ಜೈನಬೌದ್ಧಾದಿಮತಗಳನ್ನು ಕೆಡಿಸಿ, ಭೂಮಿಯಲ್ಲಿ ಪರಮವೀರಶೈವಾಚಾರವನ್ನು ಸ್ಥಾಪಿಸಿ, ಬಸವಾದಿಪ್ರಮಥರುಗಳಿಗೆ ಷಟ್ಸ್ಥಲಬ್ರಹ್ಮೋಪದೇಶವನ್ನು ಮಾಡಿ, ನಿಜಪದವಿಯನ್ನುಂಟುಮಾಡಿಕೊಡುವನು. ಅದುಕಾರಣ ಈ ಮಹಾಪುರುಷನ ಉದಯಮಹೋತ್ಸವವನ್ನು ಸಕಲಶಿವಗಣಸಮೂಹಕ್ಕೆ ತಿಳಿಸು, ಎಂದು ಹೇಳಿ ಅದೃಶ್ಯನಾದನು. ಅಷ್ಟರಲ್ಲಿ ನಾಗಲಾಂಬಿಕೆಯು ಕಣ್ಣನ್ನು ತೆರೆದು ನೋಡುವಲ್ಲಿ ಪರಶಿವನು ಕಾಣಿಸಲಿಲ್ಲ. ಆಗ, ಇದೇನು ಆಶ್ಚರ್ಯ! ಕನಸು ಎಂದು ಹೇಳುವುದಕ್ಕೂ ಆಗುವುದಿಲ್ಲ, ಪ್ರತ್ಯಕ್ಷವಾಗಿ ಕಂಡಂತೆಯೇ ಆಗಿ ನನ್ನ ಮನಸ್ಸಿನಲ್ಲಿ ಇನ್ನೂ ಆ ಈಶ್ವರರೂಪವೇ ತೋರುತ್ತಿದೆಯಲ್ಲ! ಎಂದು ಆಶ್ಚರ್ಯಪಡುತ್ತಿರುವಷ್ಟರಲ್ಲಿ ಬೆಳಗಿನಜಾವದ ಕೋಳಿಗಳು ಕೂಗಿದುವು. ಕತ್ತಲೆ ಹರಿದು ಮೂಡಣದಿಕ್ಕಿನಲ್ಲಿ ಕೆಂಪುಮೂಡಿ, ತಂಗಾಳಿಯು ಬೀಸಿತು. ಅಷ್ಟರಲ್ಲಿ-ಮುಂದೆ ಒಬ್ಬ ವೀರಶೈವಪರಮಾಚಾರ್ಯನು ಉದಿಸುವನು, ಅವನು ನನಗಿಂತಲೂ ನೂರು ಭಾಗ ಅಧಿಕವಾಗಿ ಬೆಳಕನ್ನು ಜಗತ್ತಿಗೆ ಬೀರುವನು, ಎಂಬುದನ್ನು ಸೂಚಿಸುವುದಕ್ಕಾಗಿ ಬಂದಂತೆ ಸೂರ್ಯನು ಉದಿಸಿದನು. ಆಗ ನಾಗಲಾಂಬಿಕೆಯು ಎ

ದ್ದು, ಸ್ನಾನಶಿವಾರ್ಚನೆಗಳನ್ನು ತೀರಿಸಿಕೊಂಡು, ಅನುಭವಮಂಟಪಕ್ಕೆ ಬಂದು, ರಾತ್ರಿ ನಡೆದ ಸಂಗತಿಯನ್ನೆಲ್ಲ ದಂಡಾಧೀಶನಾದ ಬಸವೇಶ್ವರ ಮೊದಲಾದ ಪ್ರಮಥರೊಡನೆ ಸಾಂಗವಾಗಿ ತಿಳಿಸಿದಳು. ಅದನ್ನು ಕೇಳಿ ಬಸವೇಶ ಮೊದಲಾಗಿ ಸಕಲ ಶಿವಗಣಂಗಳೂ ಆನಂದಪಟ್ಟರು. ನಾಗಲಾಂಬಿಕೆಯೂ ಉಲ್ಲಾಸದಿಂದಿದ್ದಳು. ಕ್ಷೀರ ಸಮುದ್ರದ ಮಧ್ಯದಲ್ಲಿರುವ ರತ್ನದಂತೆಯೂ, ಶರತ್ಕಾಲದ ಮೋಡದ ಮರೆಯಲ್ಲಡಗಿರುವ ಶುಕ್ಲಪಕ್ಷದ ಚಂದ್ರರೇಖೆಯಂತೆಯೂ, ಪುಣ್ಯಭೂಮಿಗತನಾಗಿರುವ ನಿಧಿಯಂತೆಯೂ ಗುರುಬೋಧೆಯಲ್ಲಿ ಲೀನವಾಗಿರುವ ಮುಕ್ತಿಯಂತೆಯೂ, ಸೂರ್ಯಕಾಂತಶಿಲೆಯಲ್ಲಿ ಗುಪ್ತವಾಗಿರುವ ತೇಜಸ್ಸಿನಂತೆಯೂ, ಕಲ್ಪವೃಕ್ಷದ ಹೂವಿನ ಮೊಗ್ಗೆಯಲ್ಲಿ ಗುಪ್ತವಾಗಿರುವ ಪರಿಮಳದಂತೆಯೂ ಆ ನಾಗಲಾಂಬಿಕೆಯ ಗರ್ಭದಲ್ಲಿ ಪರತತ್ತ್ವನಿಧಿಯಾದ ಪಿಂಡವು ವೃದ್ಧಿಯನ್ನೈದುತ್ತಿದ್ದಿತು. ಇದರಿಂದ ಆಕೆಯ ದೇಹದಲ್ಲಿ ಗರ್ಭಚಿಹ್ನೆಗಳು ತೋರಲಾರಂಭಿಸಿದುವು. ಮುಖವು ಬೆಳ್ಳಗಾಯಿತು. ಹೊಟ್ಟೆಯ ಮೇಲಣ ವಳಿಗಳು ಕಾಣದಂತಾದುವು. ರೋಮರಾಜಿಯು ಕಪ್ಪಾಯಿತು. ಸ್ತನಗಳು ದಪ್ಪನಾಗಿ ತೊಟ್ಟು ಕಪ್ಪಾಯಿತು. ನಡುವು ಸ್ಥೂಲವಾಯಿತು. ಅಲಸಿಕೆ ಹೆಚ್ಚಿತು. ನಡೆಯು ಮಂದವಾಯಿತು. ಆ ಎಳೆಬಸುರಿನಲ್ಲಿ ಶಿವಪೂಜೆ, ಶಿವಕಥಾಶ್ರವಣ, ಶಿವೋತ್ಸವದರ್ಶನಾದಿಗಳು, ಗುರುಲಿಂಗಜಂಗಮಸೇನೆ, ತೀರ್ಥಪ್ರಸಾದಸ್ವೀಕಾರಗಳ ಬಯಕೆಯಲ್ಲದೆ ಇನ್ನಾವ ಬಯಕೆಯೂ ಆ ತಾಯಿಗೆ ಉಂಟಾಗಿರಲಿಲ್ಲ. ಹೀಗಿರುವಲ್ಲಿ ಆ ಗರ್ಭದ ವಿಷಯವಾಗಿ ಊರಿನಲ್ಲೆಲ್ಲ ಸಾಮಾನ್ಯಜನಗಳಲ್ಲಿ ಗುಜುಗುಂಪುಟ್ಟು, "ನಾಗಲಾಂಬಿಕೆಯು ಘನವಿರಕ್ತಳು! ಮತ್ತು ರಾಜನ ಮುಖ್ಯಮಂತ್ರಿಯಾಗಿರುವ ಬಸವರಾಜನ ಅಕ್ಕ! ಇಂಥವಳು ಬಸುರಾಗಿರುವುದೀಗ ಪರಮಾಶ್ಚರ್ಯ!" ಎಂಬದಾಗಿ ಮನೆಮನೆಯಲ್ಲೂ ಹಾದಿಬೀದಿಯಲ್ಲೂ ಮಾತನಾಡಿಕೊಳ್ಳುತ್ತಿದ್ದರು. ಇನ್ನು ಕೆಲರು ಉತ್ತಮರಾದವರು "ಆಕೆಯು ತ್ರಿಕಾಲಜ್ಞಾನಸಂಪನ್ನೆ, ಸಾಮಾನ್ಯಳಲ್ಲ," ಎಂದು ಆಡಿಕೊಳ್ಳುತಿದ್ದರು. ಮಧ್ಯಸ್ಥರಾಗಿರುವವರು "ಏನೋ ಹೇಗಿರುವುದೋ, ಹೀಗೆಯೇ ಸರಿ ಯೆಂದು ಹೇಳಲಾಗುವುದಿಲ್ಲ" ವೆಂಬ

ದಾಗಿ ಆಶ್ಚರ್ಯಪಡುತ್ತಿದ್ದರು. ಅವಿವೇಕಿಗಳಾದ ನೀಚಜನರು ನಾನಾ ವಿಧವಾಗಿ ಹಾಸ್ಯಮಾಡುತ್ತಿದ್ದರು. ಅವರಲ್ಲೊಬ್ಬ ಚಾಡಿಕೋರನು ದೊರೆಗೆ ಈ ವರ್ತಮಾನವನ್ನು ತಿಳಿಸಬೇಕೆಂದು ಹೋಗಿ, ಇದ್ದ ಸುದ್ದಿಯನ್ನು ತಿಳಿಸಿದನು. ಇವನೆಲ್ಲೋ ಪೋಕರಿ, ಇವನ ಮಾತು ನಂಬತಕ್ಕದ್ದಲ್ಲವೆಂದು ದೊರೆಯು ತಿರಸ್ಕರಿಸಿದನು. ಚಾಡಿಕೋರನು- ಹಾಗಲ್ಲ, ತಾವು ಖಂಡಿತವಾಗಿ ಪರೀಕ್ಷಿಸಿ ನೋಡಿ, ಇದು ಸುಳ್ಳಲ್ಲ, ಆ ಗರ್ಭಿಣಿಯೂ ಬಸವರಸನೂ ಇತರ ಗಣಂಗಳೂ ಮನೆಯಲ್ಲಿ ಕುಳಿತಿರುವರು. ತಾವೇ ದಯಮಾಡಿಸಿದರೆ ತೋರಿಸಿಕೊಡುತ್ತೇನೆಂದು ಶಪಥದಿಂದ ನುಡಿದನು. ಆಗ ದೊರೆಯು ಆಶ್ಚರ್ಯಪಟ್ಟು, ತಾನೇ ನೋಡಬೇಕೆಂದು ಮಂತ್ರಿಗಳ ಸಮೇತನಾಗಿ ಸೇವಕಜನದೊಡನೆ ಹೊರಟನು. ಈ ಸುದ್ದಿಯನ್ನು ಕೇಳಿ ಬಸವೇಶನು ಶಿವಗಣಸಮೇತನಾಗಿ ಹೋಗಿ ದೊರೆಯನ್ನು ಇದಿರ್ಗೊಂಡು ಕರೆತಂದು ತನ್ನರಮನೆಯ ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಮತ್ತು ಎಲೈ ರಾಜನೇ! ಈಗ ನಿನ್ನಾಯುಧಕ್ಕೆ ಇದಿರಾಗಿ ಪ್ರತಿಭಟಿಸತಕ್ಕ ಶತ್ರುರಾಜರು ಯಾರೂ ಇಲ್ಲ; ನಿನ್ನ ಆಜ್ಞೆಗೆ ಭಂಗವಿಲ್ಲ; ಭೂಸಂಪತ್ತಿಗೆ ಚ್ಯುತಿಯಿಲ್ಲ; ಅಣ್ಣತಮ್ಮಂದಿರುಮಕ್ಕಳು ಮೊದಲಾದವರಲ್ಲಿ ಭಿನ್ನಭಾವಗಳೇನೂ ಇಲ್ಲ; ಯಾವ ಬೊಕ್ಕಸದಲ್ಲೂ ಏನೊಂದರ ಕೊರತೆಯೂ ಇಲ್ಲ; ಚತುರಂಗಸೈನ್ಯದಲ್ಲೂ ಒಡಕೇನೂ ಹುಟ್ಟಿಲ್ಲ; ಹೀಗಿರುವಲ್ಲಿ ಅಕಸ್ಮಾತ್ತಾಗಿ ನೀನೇ ನನ್ನ ಬಳಿಗೆ ಬರುವುದಕ್ಕೆ ಕಾರಣವೇನು? ಎಂದು ಕೇಳಿದನು. ದೊರೆಯು ನಸುನಕ್ಕು- ಎಲೈ ಬಸವದಂಡಾಧೀಶನೇ! ನೀನು ನನ್ನ ಮುಖ್ಯಪ್ರಧಾನಿಯಾಗಿದ್ದುಕೊಂಡಿರುವವರೆಗೂ ನನ್ನ ಸೌಭಾಗ್ಯಕ್ಕೆ ಹಾನಿಯೆಂದರೇನು? ಎಂದು ಹೇಳಿ, ಅತ್ತಿತ್ತ ನೋಡುತ್ತ, ಅಲ್ಲಿ ಕುಳಿತಿದ್ದ ನಾಗಲಾಂಬಿಕೆಯ ಸೌಂದರ್ಯವನ್ನು ತಿಳಿದುಕೊಂಡು, ಅಮ್ಮಾ! ನೀನಾರು? ನಿನಗೆ ಈ ಗರ್ಭಧಾರಣೆಯು ಸುಮ್ಮನೆ ಹೇಗಾಯಿತು? ಎಂದು ಕೇಳಲಾಗಿ, ಆ ಮಾತೆಯು- ಪ್ರಭುವೇ! ಇದು ಶಿವನ ಚಿತ್ಕಳಾಪ್ರಸಾದದಿಂದುತ್ಪನ್ನವಾಗಿರುವುದು, ಎಂದಳು. ಆತನು- ಶಿವಭಕ್ತರೆಲ್ಲರೂ ಪ್ರಸಾದಿಗಳೇ! ಆದರೆ ಅವರಾರಲ್ಲೂ ಈ ವಿಧವಾದ ಗರ್ಭಧಾರಣೆಯಾಗಿಲ್ಲವಲ್ಲ? ಎಂದ

ನು. ನಾಗಲಾಂಬಿಯು-- ನಾನು ಸುಳ್ಳನ್ನು ಹೇಳತಕ್ಕವಳಲ್ಲ; ಪರಶಿವನು ದಯೆಯಿಂದ ತನ್ನ ಷಣ್ಮುಖಸ್ಥಿತವಾದ ಚಿತ್ಕಳಾಪ್ರಣವವನ್ನೇ ಜನಿಸಬೇಕೆಂದು ಹೇಳಿ ನನ್ನ ಗರ್ಭಕ್ಕೆ ಕಳಿಸಿರುವನು, ಎಂದಳು. ದೊರೆಯು ಶಿವನ ವರದಿಂದ ನಿನ್ನ ಗರ್ಭದಲ್ಲಿ ಜ್ಞಾನಪುತ್ರನು ಉದಿಸಿದ್ದರೆ ಒಳ್ಳೆಯದೇ ಸರಿ. ಆ ಮಾತು ನಿಜವಾಗಿದ್ದರೆ ಮಹಿಮಾಸಂಪನ್ನನಾದ ಆ ಪುತ್ರನು ತನ್ನ ಸಂಗತಿಯನ್ನು ನಮ್ಮೊಡನೆ ಹೇಳಲಿ; ಎಂದನು. ಆ ಕೂಡಲೇ ಗರ್ಭದಿಂದ “ಓಹೋ ಸದ್ದನ್ನು ನಿಲ್ಲಿಸಿ, ಎಲೆ ಬಿಜ್ಜಳರಾಜನೇ! ಆಕಾಶವು ಭೂಮಿಗಿಳಿದರೂ, ಭೂಮಿಯು ಪಾತಾಳಕ್ಕೆ ಹೋದರೂ, ಶಿವಶರಣರ ಮಾತು ಸುಳ್ಳಾಗುವುದೇ? ಶಿವನ ಷಣ್ಮುಖಸ್ಥಿತಚಿತ್ಕಳೆಯೇ ನಾನಾಗಿರುವೆನಲ್ಲದೆ ರಕ್ತರೇತಸ್ಸುಗಳಿಂದ ಹುಟ್ಟಿದ ಪಿಂಡವಲ್ಲ” ಎಂಬ ಮಾತು ಗಂಭೀರಸ್ವರದಿಂದ ಹೊರಟಿತು. ಇದನ್ನು ದೊರೆಯು ಕೇಳಿ ಬೆರಗಾದನು. ಬಸವೇಶ ಮೊದಲಾದ ಶಿವಗಣಂಗಳೆಲ್ಲ ಉಲ್ಲಾಸಗೊಂಡರು. ಆಗ ರಾಜನು-- ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂದು ನೀತಿವಚನವಿರುವುದು, ಆದುದರಿಂದ ಅನಿತ್ಯವಾದ ಈ ಶರೀರದಲ್ಲಿ ಮಲಮೂತ್ರರಕ್ತಮಾಂಸಗಳೊಡನೆ ನಿತ್ಯವಾದ ಶಿವಚಿತ್ಕಳೆಯಿರುವುದು ಹೇಗೆ? ಇದು ಸತ್ಯವೆ? ಎಂದನು. ನಾಗಲಾಂಬಿಕೆಯು ಮೂಢರನ್ನೊಡಂಬಡಿಸುವಂತಾಯಿತೆಂದು ಯೋಚಿಸಿಕೊಂಡು, ಅಹುದು, ನನ್ನ ಶರೀರದಲ್ಲಿ ಆ ಜ್ಞಾನಪುತ್ರನು ಮಲಮೂತ್ರಾದಿಗಳ ಸಂಗವಿಲ್ಲದೆಯೇ ಇದಾನೆ ಎಂದಳು. ದೊರೆಯಾದರೋ-- ಬರಿಯ ಮಾತನ್ನು ನಂಬುವುದು ಹೇಗೆ? ಪ್ರತ್ಯಕ್ಷವಾದರೆ ನಿಜವೆಂದು ಹೇಳಬಹುದು, ಎಂದನು. ಆಗ ನಾಗಲಾಂಬಿಕೆಯು ಶಿವಶರಣರಿಗೆ ಇಂತಹ ದೃಷ್ಟಾಂತವನ್ನು ತೋರಿಸುವುದೊಂದು ದೊಡ್ಡದೆ? ಎಂದು ಹೇಳಿ ನಗುತ್ತ, ತನ್ನ ಉಗುರ ಕೊನೆಯಿಂದ ಹೊಟ್ಟೆಯನ್ನು ಸೀಳಿದಳು. ಆ ಕೂಡಲೇ ಹೊಟ್ಟೆಯು ಇಬ್ಭಾಗವಾಯಿತು. ಒಳಗೆ ಕೋಟಿಬಾಲಸೂರ್ಯರ ತೇಜಸ್ಸಿನಿಂದ ಹೊಳೆಯುತ್ತಲೂ, ಭಸ್ಮಲೇಪನದಿಂದ ಶುಭ್ರಾಂಗನಾಗಿಯೂ, ಕರ್ಣಕುಂಡಲಯುಗ್ಮದಿಂದ ಅಲಂಕೃತನಾಗಿಯೂ, ಸಣ್ಣ ಕಿರುಜಡೆಗಳು ಮಸ್ತಕದ ಮೇಲಿಂದ ಇಳಿದು ಜೋಲುತ್ತಲೂ, ಎದೆಯಮೇಲೆ ಕಲ್ಪವೃಕ್ಷದ ಹೂ

ವಿನ ಸರಗಳ ಮಧ್ಯದಲ್ಲಿ ಶಿವಲಿಂಗದ ಸಜ್ಜಿಕೆಯನ್ನು ಧರಿಸಿಯೂ ಇರುವ ದಿವ್ಯಮೂರ್ತಿಯು ತೋರಿತು. ನೋಡಿದ ಸಭೆಯವರೆಲ್ಲರೂ ಆಶ್ಚರ್ಯಸಮುದ್ರದಲ್ಲಿ ಮುಳುಗಿಹೋದರು. ಕೂಡಲೇ ದೇವದುಂದುಭಿಯು ಮೊಳಗಿತು. ದೇವತೆಗಳು ಸಂತೋಷದಿಂದ ಪುಷ್ಪವೃಷ್ಟಿಯನ್ನು ಸುರಿಸಿದರು. ಸಭಿಕರೆಲ್ಲರನ್ನೂ ಅಪಾರವಾದ ಭಕ್ತಿರಸವು ಆವರಿಸಿಕೊಂಡಿತು. ಬಸವೇಶನು ಸಂತೋಷದಿಂದ ಮೈಮರೆತುಹೋದನು. ಬಿಜ್ಜಳರಾಜನೂ ಭಯಭಕ್ತಿಯಿಂದ ಕೂಡಿ ದೀರ್ಘದಂಡವಾಗಿ ನಮಸ್ಕರಿಸಿ, ಹಿಂದೆ ಶುಕಮುನಿಯು ರಂಭೆಗೂ, ಸಿದ್ಧರಾಮೇಶನು ಶಿವಶರಣರಿಗೂ ಹೊಟ್ಟೆಯನ್ನು ಸೀಳಿ ತೋರಿಸಿದರೆಂದು ಹೇಳುತ್ತಿದ್ದುದನ್ನು ಕೇಳಿದ್ದೆನು, ಈದಿನ ನಾನೇ ಪ್ರತ್ಯಕ್ಷವಾಗಿ ನೋಡಿದೆನು. ಎಂದು ಹೇಳುತ್ತ, ಎದ್ದು ನಿಂತು, ಕೈಮುಗಿದು– ಎಲೈ ಚಿದ್ರೂಪನೇ! ನಿನ್ನ ಸ್ಥಿತಿಯನ್ನು ತಿಳಿಯದೆ ನಾನು ಅಜ್ಞಾನದಿಂದ ಆಡಿದ ದ್ರೋಹವೊಂದು, ಶಿವಶರಣೆಯನ್ನು ಜರೆದ ಭಕ್ತದ್ರೋಹವು ಎರಡು, ಮೊದಲೇ ಕೇಳಿದ ಮಾತನ್ನು ಶಿವವಾಕ್ಯವೆಂದು ನಂಬದೆ ತಿರಸ್ಕರಿಸಿದ ದೈವದ್ರೋಹವು ಮೂರು, ಮದಾಂಧತೆಯಿಂದ ಈಕೆಯ ಹೊಟ್ಟೆಯನ್ನು ಸೀಳಿಸಿದ ಸತೀದ್ರೋಹವು ನಾಲ್ಕು, ಇದಿಷ್ಟನ್ನೂ ನಾನು ಮೊದಲೇ ಯೋಚಿಸಿಕೊಳ್ಳದೆ ಹೋದ ಆತ್ಮದ್ರೋಹವು ಐದು. ಹೀಗೆ ಈ ಪಂಚದ್ರೋಹಗಳಿಂದಲೂ ಕೂಡಿದ ನನ್ನನ್ನು ದಯೆಯಿಂದ ಕಾಪಾಡು ಎಂದು ಪ್ರಾರ್ಥಿಸುತ್ತಿದ್ದನು. ಮತ್ತೊಂದು ಕಡೆ ಬಸವೇಶನು ಸ್ತುತಿಸುತ್ತಿದ್ದನು. ಇನ್ನೊಂದು ಕಡೆ ಶಿವಶರಣರೆಲ್ಲರೂ ಜಯಜಯವೆನ್ನುತ್ತಿದ್ದರು. ಹಿಂದೆ ಮುಂದೆ ಭಕ್ತಮಾಹೇಶ್ವರಾದಿಗಳು ತುಂಬಿ ಕೊಂಡಾಡುತ್ತಿದ್ದರು. ಹೀಗೆ ಚೆನ್ನಬಸವೇಶನು ತನ್ನ ಆವಿರ್ಭಾವಕಾಲದಲ್ಲೇ ಒಂದು ಪವಾಡವನ್ನು ತೋರಿಸಿದನು. ಆಗ ನಾಗಲಾಂಬಿಕೆಯು ತನ್ನ ಗರ್ಭಾಸನದಲ್ಲಿದ್ದ ಶಿಶುವನ್ನು ಅಂಗೈಗೆ ತೆಗೆದುಕೊಂಡಳು. ಕೂಡಲೇ ಎಂದಿನಂತೆ ಹೊಟ್ಟೆಯು ಸೇರಿಕೊಂಡು ಸಣ್ಣಗಾಯಿತು. (ಶಿವಮಹಾತ್ಮೆಯನ್ನು ತಿಳಿಯುವರಾರು!) ಈ ಮಹಾಪುರುಷನ ಅವತರಣಮಾತ್ರದಿಂದಲೇ ಭೂದೇವತೆಯು ಮತ್ತು ಆದಿಶೇಷ ಆದಿಕೂರ್ಮ ದಿಗ್ಗಜಗಳ ಮೇಲಿದ್ದ ಭಾರ

ವೆಲ್ಲ ಕಡವೆಯಾಯಿತು. ಕಡಿದು ಒಣಗಿಹೋಗಿದ್ದ ಮರಗಳೆಲ್ಲ ಚಿಗುರೇರಿದುವು. ಬರಡುಹಸುಗಳೆಲ್ಲವೂ ಕೊಡ ತುಂಬ ಹಾಲನ್ನು ಕರೆದುವು. ದೇವಾಲಯದಲ್ಲಿದ್ದ ಕಲ್ಲಿನ ಬೊಂಬೆಗಳೆಲ್ಲ ಕುಣಿದಾಡಿದುವು. ದುಸ್ಸಮಯಿಗಳ ಎದೆಯೆಲ್ಲ ಕಂಪಿಸಿತು. ಕಾಮಕ್ರೋಧಾದಿಅರಿಷಡ್ವರ್ಗವೂ, ಅನೀತಿ ಅನಾಚಾರ ಮೊದಲಾದುವುಗಳೂ ಕುಗ್ಗಿಹೋದುವು. ಮಾರಿಕಾರೋಗಾದ್ಯುಪದ್ರವಗಳು ಅಡಗಿಹೋದುವು. ಘನವೈರಾಗ್ಯಸಂಪನ್ನನೂ ಶಾಂತಮೂರ್ತಿಯೂ ಆದ ಆ ಷಟ್ಸ್ಥಲಬ್ರಹ್ಮಿಯ ಜನನಮಾತ್ರನಿಂದಲೇ ಭೂತಲದಲ್ಲಿ ಗುಣಾತಿಶಯಗಳು ಮಾರ್ಪಟ್ಟುವು ಎಂಬಲ್ಲಿಗೆ ನಾಲ್ಕನೇ ಅಧ್ಯಾಯವು ಸಂಪೂರ್ಣವು.

---

## ೫ ನೇ ಅಧ್ಯಾಯವು.

### ಚೆ ನ್ನ ಬ ಸ ವೇ ಶ ಪು ಷ್ಪ ಕೋ ತ್ಸ ವ ವು

ಆಗ ಬಿಜ್ಜಳರಾಜನಿಗೆ ಆ ಜ್ಞಾನಪುತ್ರನನ್ನು ಉತ್ಸವಪೂರ್ವಕವಾಗಿ ಕರೆಸಿಕೊಂಡುಹೋಗಬೇಕೆಂಬ ವಿಶ್ವಾಸವು ಹುಟ್ಟಿತು. ಅದಕ್ಕಾಗಿ ಅವನು ಮಾಡಿದ ಅಪ್ಪಣೆಯಮೇರೆ ಪಟ್ಟಣವೆಲ್ಲವೂ ಗುಡಿತೋರಣಗಳಿಂದ ಮನೋಹರವಾಗಿ ಅಲಂಕರಿಸಲ್ಪಟ್ಟಿತು. ಆಗ ಬಿಜ್ಜಳರಾಜನು ನವರತ್ನಖಚಿತವಾದ ಪಲ್ಲಕ್ಕಿಯನ್ನು ತರಿಸಿ, ಅದರಲ್ಲಿ ಆ ನಾಗಲಾಂಬಿಕೆಯ ಕುಮಾರನನ್ನು ಕುಳ್ಳಿರಿಸಿ, ತಾನು ನಮಸ್ಕಾರ ಮಾಡಿ, ಚತುರಂಗಸೈನ್ಯವನ್ನೂ ಪುರಜನಪರಿಜನಗಳನ್ನೂ ನರ್ತಕಿಯರು ವಾದ್ಯಗಾರರು ಮೊದಲಾದವರನ್ನೂ ಕಳುಹಿಸಿಕೊಟ್ಟು, ಉತ್ಸವಪೂರ್ವಕವಾಗಿಬರುವಂತೆ ಮಾಡಿದನು. ಮುಂಗಡೆಯಲ್ಲಿ ತಮಟೆ ನಗಾರಿ ಕಹಳೆ ಜಾಗಟೆ ಕೊಂಬು ಮೋರಿ ತಾಳ ಮೊದಲಾದ ನಾನಾವಾದ್ಯಗಳು ಭೋರ್ಗರೆಯುತ್ತಿದ್ದುವು. ಮುಂದೆ ಅಲ್ಲಲ್ಲಿಗೆ ನಿಂತು ನರ್ತಕಿಯರು ಕುಣಿಯುತ್ತಿದ್ದರು. ಬಸವೇಶ ಮೊದಲಾದ ಶರಣರೆಲ್ಲರೂ ಜಯಜಯವೆಂದು ಉದ್ಘೋಷಿಸುತ್ತಿದ್ದರು. "ಅಕ್ಕ! ಬಸವೇಶನಕ್ಕನಾದ ನಾಗಲಾಂಬಿಕೆಯ ಗರ್ಭದಲ್ಲಿದ್ದಾಗಳೇ ದೊರೆಯು ಕೇಳಿದ ಮಾತಿಗೆ ಉತ್ತರವನ್ನು ಕೊಟ್ಟ ಮಹಿ

ಮಾಶಾಲಿಯಾದ ಮಗನು ಬರುತ್ತಿರುವನು " ಎಂದು ಒಬ್ಬರಿಗೊಬ್ಬರು ಮಾತನಾಡಿಕೊಂಡು ಕೇರಿಕೇರಿಯ ಹೆಂಗುಸರೆಲ್ಲ ನೋಡುವುದಕ್ಕಾಗಿ ಬರುತ್ತಿದ್ದರು. ರತಿ ಶಚಿ ಮೊದಲಾದ ದೇವತಾಸ್ತ್ರೀಯರ ಸೌಂದರ್ಯಾತಿಯವನ್ನು ತಿರಸ್ಕರಿಸುತ್ತಿರುವ ಪೌರನಾರಿಯರು ನಾನಾವಿಧವಾದ ಅಲಂಕಾರಗೊಂಡು ಮನೆಬಾಗಿಲುಗಳಲ್ಲೂ ಮಾಡಗಳಲ್ಲೂ ಜಗುಲಿಗಳಲ್ಲೂ ನಿಂತು ನೋಡುತ್ತಿದ್ದರು. ಲಕ್ಷ್ಮೀಸರಸ್ವತಿಯರನ್ನೂ ಕೂಡ ತಮ್ಮ ಲಾವಣ್ಯಸೌಂದರ್ಯಮಾಂಗಲ್ಯಾತಿಶಯದಿಂದ ಧಿಕ್ಕರಿಸುತ್ತಿರುವ ಸುವಾಸಿನಿಯರು ಅಲ್ಲಲ್ಲಿಗೆ ಆರತಿಗಳನ್ನೆತ್ತಿ ಸೇಸೆಯನ್ನು ತಳಿಯುತ್ತಿದ್ದರು. ರಾಜನು ಅವರೆಲ್ಲರಿಗೂ ರತ್ನಹಾರ ತಾಂಬೂಲ ಹೊನ್ನು ಮೊದಲಾದುವುಗಳನ್ನು ಬಸವರಾಜನ ಹಸ್ತದಿಂದ ಕೊಡಿಸುತ್ತಿದ್ದನು. ದಾರಿಯುದ್ದಕ್ಕೂ ಭೂರಿದಕ್ಷಿಣೆಗಳನ್ನು ಹಂಚಿಸುತ್ತಿದ್ದನು. ಈರೀತಿಯಾದ ವೈಭವದಿಂದ ರಾಜನರಮನೆಯಿಂದ ಉತ್ಸವವನ್ನು ಹೊರಡಿಸಿಕೊಂಡು ಬಸವೇಶ್ವರನರಮನೆಗೆ ಕರೆದುಕೊಂಡುಬಂದು, ಅಲ್ಲಿಳಿಸಿ, ಆ ಮಹಿಮಾಶಾಲಿಗೆ ನಾನಾವಸ್ತ್ರಾಭರಣಗಳನ್ನು ಉಡುಗೊರೆಯಾಗಿ ಕೊಟ್ಟು ವಂದಿಸಿ ರಾಜನು ತನ್ನರಮನೆಗೆ ಹಿಂತಿರುಗಿದನು. ಇತ್ತ ಬಸವೇಶನು ಸಕಲಗಣಸಮೂಹದೊಡನೆ ಕೂಡಿ ಸಂತೋಷದಿಂದ ಇರುತ್ತಿದ್ದನು. ಬಸವೇಶನ ಪತ್ನಿಯಾದ ನೀಲಲೋಚನೆಯು ಅಂತಃಪುರದ ಸ್ತ್ರೀಯರನ್ನೆಲ್ಲ ಕರೆಸಿ, ಕುವರನಿಗೆ ಚಿನ್ನದ ಹರಿವಾಣಗಳಲ್ಲಿ ನಾನಾಬಣ್ಣದಾರತಿಗಳನ್ನೆತ್ತಿ ನಿವಾಳಿಸಿ, ಹರಸಿ, ಸೇಸೆಯನ್ನಿಕ್ಕಿಸಿದಳು. ಅಷ್ಟು ಹೊತ್ತಿಗೆ ಸಂಧ್ಯಾಕಾಲವಾಯಿತು. ಬಸವೇಶನೂ ಅತ್ತಿಗೆ ನಾದಿನಿಯರೂ ಕೂಡ ಸ್ನಾನಶಿವಾರ್ಚನೆಗಳಂ ಮಾಡಿ ಜಂಗಮಪಾದವಂ ಸೇವಿಸಿ, ಭಕ್ತರ ಪಙ್ಕ್ತಿಯಲ್ಲಿ ಕುಳಿತು ಪ್ರಸಾದಸ್ವೀಕಾರವಂ ಮಾಡಿದರು. ಬಳಿಕ ಸಕಲ ಭಕ್ತರಿಗೂ ವಸ್ತ್ರಾಭರಣದುಡುಗೊರೆಗಳನ್ನೂ ದಕ್ಷಿಣೆಗಳನ್ನೂ ಕೊಟ್ಟು ಸಂತೋಷದಿಂದ ಕಳಿಸಿಕೊಟ್ಟರು. ಬಸವೇಶನು ಸತಿಯಾದ ನೀಲಲೋಚನೆಯೊಡನೆ ಶಯ್ಯಾಗೃಹವನ್ನು ಸೇರಿದನು. ನಾಗಲಾಂಬಿಕೆಯು ಮೃದುತಲ್ಪದಲ್ಲಿ ಸುಕುಮಾರನನ್ನು ಮಲಗಿಸಿಕೊಂಡು ಸುಖನಿದ್ರೆಗೈದಳು. ಅತ್ತ ಕೈಲಾಸದಲ್ಲಿ ಪಾರ್ವತೀಪರಮೇಶ್ವರರು ಭೂಲೋಕದ

ಲ್ಲಿ ತಮ್ಮ ಚಿತ್ಕಳಾಕುಮಾರನು ಪವಾಡವನ್ನು ಮೆರೆದು ಜನಿಸಿರುವುದನ್ನು ನೋಡಬೇಕೆಂಬಪೇಕ್ಷೆಯಿಂದ ವೃಷಭನನ್ನು ಹತ್ತಿ ರುದ್ರಕನ್ನಿಕೆಯರೊಡನೆ ಭೂಲೋಕಕ್ಕೆ ಬಂದು, ನಾಗಲಾಂಬಿಕೆಯ ಶಯ್ಯಾಗೃಹವನ್ನು ಹೊಕ್ಕರು. ಗಂಗಾನದಿಯ ದಡದಲ್ಲಿ ಶುದ್ಧಸ್ಫಟಿಕಲಿಂಗವಿರುವಂತೆಯೂ, ಕ್ಷೀರಸಮುದ್ರದ ಪಕ್ಕದಲ್ಲಿ ಪೂರ್ಣಚಂದ್ರನಿರುವಂತೆಯೂ, ಸರೋವರದ ಮಗ್ಗುಲಲ್ಲಿ ರಾಜಹಂಸಪಕ್ಷಿಯು ಮೆರೆಯುವಂತೆಯೂ, ಮಂಗಳಾಂಗಿಯಾದ ನಾಗಲಾಂಬಿಕೆಯ ಮಗ್ಗುಲಲ್ಲಿ ರಂಜಿಸುತ್ತಿರುವ ಶಿಶುವನ್ನು ಕಂಡು ಪಾರ್ವತಿಯ ಕಣ್ಣಿನಲ್ಲಿ ಆನಂದಬಾಷ್ಪಗಳು ತುಂಬಿಕೊಳ್ಳಲು, ಆ ಪ್ರೇಮಪುತ್ರನನ್ನು ಪ್ರೀತಿಯಿಂದೆತ್ತಿ ತಬ್ಬಿಕೊಂಡಳು. ಆಗ ಪರಶಿವನು ಪಾರ್ವತೀಸಮೇತನಾಗಿ ಕುಳಿತು ಪಂಚಕಲಶಸ್ಥಾಪನವನ್ನು ಮಾಡಿ, ಆಕುಮಾರನಿಗೆ ವೇಧಾ ಮನು ಕ್ರಿಯೆ ಯೆಂಬ ತ್ರಿವಿಧದೀಕ್ಷೆಗಳನ್ನು ಮಾಡಿ, ಆತನ ಸ್ಥೂಲಸೂಕ್ಷ್ಮಕಾರಣಶರೀರಗಳಲ್ಲಿ ಇಷ್ಟಪ್ರಾಣಭಾವವೆಂಬ ತ್ರಿವಿಧಲಿಂಗಗಳನ್ನು ಸ್ಥಾಪಿಸಿ, ಶಿವಶರಣರಿಗೆಲ್ಲ ಇದೇರೀತಿಯಾಗಿ ನೀನು ದೀಕ್ಷೆಯನ್ನು ಮಾಡೆಂದು ಬೋಧಿಸುವನೋ ಎಂಬಂತೆ ಶಿವದೀಕ್ಷಾಸಂಸ್ಕಾರವನ್ನು ಮಾಡಿದನು. ಮತ್ತು ಈ ಪುತ್ರನು ತೇಜಸ್ಸಿನಲ್ಲೂ, ರೂಪಿನಲ್ಲೂ, ಶೈವವಿದ್ಯೆಯಲ್ಲೂ, ಶಿವಜ್ಞಾನದಲ್ಲೂ, ನೈರ್ಮಲ್ಯದಲ್ಲೂ, ಪವಾಡಗಳಲ್ಲೂ ಬಸವೇಶನಿಗಿಂತಲೂ ಚೆನ್ನಾಗಿ ತೋರುವನಾದ್ದರಿಂದ ಇವನಿಗೆ "ಚೆನ್ನಬಸವೇಶ" ನೆಂಬ ಹೆಸರು ಒಪ್ಪತಕ್ಕದ್ದು ಎಂದು ಪಾರ್ವತಿಯೊಡನೆ ಹೇಳಿ, ನಾಮಕರಣವನ್ನು ಮಾಡಿದನು. ಬಳಿಕ ಪಾರ್ವತೀಪರಮೇಶ್ವರರಿಬ್ಬರೂ ಆ ಮುದ್ದುಮಗನನ್ನು ನೋಡುವರು, ಸಂತೋಷದಿಂದ ತಲೆಯನ್ನು ತೂಗುವರು, ಎತ್ತಿ ಮುದ್ದಾಡುವರು, ಅಪ್ಪಿ ಹಾಡುವರು, ತೊಡೆಯಲ್ಲಿ ಮಲಗಿಸಿ ತಟ್ಟುವರು, ಕೈಯಲ್ಲಿ ಮಲಗಿಸಿ ನಂಬಿಸುವರು, ನಗಿಸುವರು, ಅಂಗಾಂಗಗಳಲ್ಲೂ ಮುತ್ತನ್ನು ಕೊಡುವರು. ಕೈ ಚಾಚಿ ಕರೆಯುವರು, ಹೀಗೆ ನಾನಾವಿಧವಾಗಿ ಪುತ್ರಮೋಹದಿಂದ ಪ್ರೀತಿಸುತ್ತಿರುವಲ್ಲಿ ಪಾರ್ವತಿಗೆ ಸ್ತನಗಳಲ್ಲಿ ಹಾಲು ತುಂಬಿ ಬಿಗಿಯಲು, ಕೂಡಲೇ ಕುಮಾರನನ್ನೆತ್ತಿ ತೊಡೆಯಲ್ಲಿ ಮಲಗಿಸಿ ಮೊಲೆಯನ್ನುಣ್ಣಿಸಿ, ಹಾಲನ್ನು ಕುಡಿಸಿ, ಮುದ್ದಾಡಿ, ಹರಸಿ,

ಚಿನ್ನದ ತೊಟ್ಟಲಿನಲ್ಲಿ ಮಲಗಿಸಿ, ಅಮ್ಮವ್ವೆ, ಚೋಳೆಯಕ್ಕ, ಚೆಂಗಳೆ, ನಿಂಬಿಯಕ್ಕ ಮೊದಲಾದ ರುದ್ರಕನ್ನೆಯರೊಡನೆ ಕೂಡಿ; ಹಣೆಗೆ ಪಾದ ಧೂಳಿಯ ರಕ್ಷೆಯ ಬಟ್ಟನ್ನಿಟ್ಟು, ಜೋ ಜೋ ಎಂದು ಜೋಗಳ ಹಾಡನ್ನು ಹಾಡಿ ತೂಗಿದಳು. ಬಳಿಕ ನಾಗಲಾಂಬಿಕೆಯನ್ನು ಕುರಿತು ಅಮ್ಮಾ ತಂಗಿ! ನೀನೆನ್ನ ಸ್ವರೂಪಳು, ಈ ಮಗನೇ ಶಿವಕುಮಾರನು, ಲೋಕೋದ್ಧರಣಕಾರ್ಯಕ್ಕಾಗಿ ನರವೇಷದಿಂದಿಲ್ಲಿ ಅವತರಿಸಿರುವನು. ಮುಂದೆ ಸ್ನಾನಭೋಜನಾದಿಯಾವಕ್ರಿಯೆಯಲ್ಲೂ ಕೊರತೆ ಮಾಡದೆ, ಈ ಸುಕುಮಾರಶರೀರವನ್ನು ಕಂದದಂತೆ ಕಾಪಾಡಿಕೊಂಡಿರು ಎಂದು ಹೇಳಿ, ಆ ಮಾತಿಗೆ ಕೈತಟ್ಟಿಸಿಕೊಂಡಳು. ಅಷ್ಟರಲ್ಲಿ ನಡೆದ ಸಂಗತಿಯನ್ನೆಲ್ಲ ಭೂಲೋಕದ ಜನರಿಗೆ ತಿಳಿಸಲು ಎಚ್ಚರಿಸುವಂತೆ ಕೋಳಿಗಳು ಕೂಗಿದುವು. ಶಿವಶಿವೆಯರು ಆ ಚೆನ್ನಬಸವೇಶನನ್ನು ಮುದ್ದಾಡಿ ಆಶೀರ್ವದಿಸಿ, ಸಂತಸದಿಂದ ಕೈಲಾಸಕ್ಕೆ ತೆರಳಿದರು. ಇತ್ತ ನಾಗಲಾಂಬಿಕೆಯು ಎಚ್ಚತ್ತು, ಇದೇನು ಇದುವರೆಗೂ ನಡೆದ ಸಂಗತಿಯನ್ನು ಸ್ವಪ್ನವೆಂದು ತಿಳಿಯೋಣವೆಂದರೆ– ಮಗ್ಗುಲಲ್ಲೇ ಪಂಚಕಲಶಗಳೂ, ಚಿನ್ನದ ತೊಟ್ಟಲೂ ಪ್ರತ್ಯಕ್ಷವಾಗಿ ಕಾಣುತ್ತಿವೆ! ಇದೇನಾಶ್ಚರ್ಯವೆಂದು ತಲೆದೂಗಿದಳು. ಅಷ್ಟರಲ್ಲಿ ಬೆಳಗಾಗಿ ಸೂರ್ಯನುದಿಸಿದನು. ನಾಗಾಂಬೆಯು ಬಸವೇಶನನ್ನು ಬರಮಾಡಿ, ರಾತ್ರಿ ನಡೆದ ಸಂಗತಿಯನ್ನೆಲ್ಲ ತಿಳಿಸಿ, ಇದ್ದ ಗುರುತುಗಳನ್ನೆಲ್ಲ ತೋರಿಸಿದಳು. ಬಸವರಾಜನು ಅದನ್ನೆಲ್ಲ ಕೇಳಿ ನೋಡಿ, ಈತನು ನಮ್ಮ ಕಣ್ಣಿನ ಪುಣ್ಯದ ನಿಧಿಯೆಂದು ಹೇಳಿ ಅಳಿಯನನ್ನು ಸಂತೋಷದಿಂದ ಕೊಂಡಾಡಿದನು; ಮುಂಡಾಡಿದನು. ಆ ಚೆನ್ನಬಸವೇಶನು ಶುಕ್ಲಪಕ್ಷದ ಚಂದ್ರನಂತೆ ದಿನೆ ದಿನೆ ವೃದ್ಧಿಯೊಂದುತ್ತಿದ್ದನು. ತಾಯಿಯು ಮಗನಿಗೆ ರಕ್ಷಾಮಣಿಯಸರ, ಹುಲಿಯುಗುರು, ಗೆಜ್ಜೆ, ಗಗ್ಗರ, ಪಾಡಗ, ಮಾಗಾಯಿ, ಅರಳೆಲೆ, ಮುತ್ತಿನ ಹಾರ, ಉಡಿದಾರ ಮೊದಲಾದ ಮಕ್ಕಳ ತೊಡವುಗಳನ್ನಿಕ್ಕಿ, ಮೊಲೆಹಾಲನ್ನು ಕುಡಿಸಿ, ಪ್ರೀತಿಯಿಂದ ಸಾಕುತ್ತಿದ್ದಳು. ಜಗನ್ನಾಟಕ ಸೂತ್ರಧಾರಕನಾದ ಆ ಪುತ್ರನು ನರದೇಹಧರ್ಮಾನುಸಾರವಾಗಿ ಅಳುವುದು, ನಗುವುದು, ಮುದ್ದುಮಾತನಾಡುವುದು, ಜೊಲ್ಲನ್ನು ಸುರಿಸುವುದು,

ಕುಣಿಯುವುದು ತಪ್ಪುಹೆಜ್ಜೆಯನ್ನಿಕ್ಕುವುದು ಮೊದಲಾದ ನಾನಾ ಬಾಲಲೀಲೆಗಳನ್ನು ತೋರಿಸುತ್ತಿದ್ದನು. ಓರಿಗೆಯ ಮಕ್ಕಳಮಧ್ಯದಲ್ಲಿ ಈ ಸುಕುಮಾರನು ನಕ್ಷತ್ರಗಳ ಮಧ್ಯದ ಚಂದ್ರನಂತೆ ಕಾಂತಿಪೂರ್ಣನಾಗಿ ಪ್ರವೃದ್ಧಮಾನನಾಗುತ್ತಿದ್ದನು. ಸಕಾಲದಲ್ಲಿ ವಿದ್ಯಾಭ್ಯಾಸದಲ್ಲಿ ನಿಯೋಗಿಸಲು, ಮಂತ್ರಮಯನಾದ ಈ ಕುಮಾರನು ಕೋಶ ಕಾವ್ಯ ನಾಟಕ ಶಾಸ್ತ್ರ ವೇದಾಗಮಪುರಾಣಾದಿಗಳಲ್ಲೆಲ್ಲ ಪರಿಣತಪಾಂಡಿತ್ಯವನ್ನು ಸಂಪಾದಿಸಿದನು. ಅದರಿಂದ ಸಕಲ ವಿದ್ಯೆಗಳೂ ಈ ಮಹಾಮಹಿಮನ ಪಾದಸೇವೆಯನ್ನು ಮಾಡುವುದಕ್ಕಾಗಿ ಬಂದು ಸೇರಿಕೊಂಡಿರುವಂತೆ ರಂಜಿಸುತ್ತಿದ್ದನು. ಯೌವನಕಾಲದಲ್ಲಿ ಆ ಚೆನ್ನಬಸವೇಶನ ಅಂಗವು ಅತ್ಯಂತಸೌಂದರ್ಯಪರಿಪೂರ್ಣವಾಯಿತು. ಆತನ ಕಣ್ಣುಗಳು ಕಮಲದ ದಳಗಳನ್ನೂ, ಹುಬ್ಬುಗಳು ಮನ್ಮಥನ ಬಿಲ್ಲಿನಾಕೃತಿಯನ್ನೂ, ಮುಖವು ಕನ್ನಡಿಯಂದವನ್ನೂ, ತೋಳುಗಳು ಆನೆಯ ಸೊಂಡಿಲರೀತಿಯನ್ನೂ ತೊಡೆಗಳು ಬಾಳೆಗಂಬದ ಚೆಂದವನ್ನೂ ಹಿಂದುಮಾಡಿದುವು. ಆತನ ಸೇವೆಗಾಗಿ ಹಡಪದವರು, ಬೀಸಣಿಗೆಯವರು, ಹಾವುಗೆ ಹಿಡಿಯುವವರು, ಕಾಳಂಜಿಯವರು ಮೊದಲಾದ ಸೇವಕರನ್ನೆಲ್ಲ ಬಸವೇಶನು ನಿಯಮಿಸಿ ಕೊಟ್ಟನು. ಮತ್ತು ಬಸವೇಂದ್ರನು ಆತನ ವಿದ್ಯಾಪ್ರೌಢಿಮೆಯನ್ನೂ, ತತ್ತ್ವಜ್ಞಾನಾತಿಶಯವನ್ನೂ, ಅನುಪಮವಾದ ಶೈವತೇಜಸ್ಸನ್ನೂ, ಘನತರವಾದ ಶೀಲವನ್ನೂ ನೋಡಿ, ಹಿಗ್ಗಿ, ಈತನೇ ತನಗೆ ಗುರುವೆಂದು ಮನಸ್ಸಿನಲ್ಲಿ ಪರಿಭಾವಿಸಿ, ಆ ಮಹಿಮನ ವಾಸಕ್ಕೆ ಯೋಗ್ಯವಾದ ಭವ್ಯವಾದ ಮಂದಿರವೊಂದನ್ನು ತನ್ನ ಮನೆಯ ಮಗ್ಗುಲಲ್ಲೇ ಕಟ್ಟಿಸಬೇಕೆಂದು ಶಿಲ್ಪಿಗಳಿಗೆ ಅಪ್ಪಣೆ ಮಾಡಿದನು. ಅವರು ದೇವೇಂದ್ರಭವನದಂತೆ ಮುತ್ತು ಹವಳ ವಜ್ರ ಗೋಮೇಧಿಕ ಮೊದಲಾದುವುಗಳನ್ನು ಕೆತ್ತಿ ಚಿನ್ನ ಬೆಳ್ಳಿಗಳ ಕೆಲಸವನ್ನು ಮಾಡಿ ಶೋಭಾಮಯವಾದ ಭವನವನ್ನು ವಿರಚಿಸಿದರು. ಅದರಲ್ಲಿ ಶಿಲ್ಪಶಾಸ್ತ್ರೋಕ್ತಕ್ರಮಾನುಸಾರವಾಗಿ ಸ್ನಾನ, ಪಾಕ, ಭೋಜನ, ಮಂತ್ರ, ನರ್ತನ, ವಸ್ತ್ರ, ಹಯ, ಗಜ, ಸಭಾ, ಗೀತ, ಶಯನ ಮೊದಲಾದ ಸಕಲ ವಿಧದ ಶಾಲೆಗಳೂ ಮೇಲುಪ್ಪರಿಗೆಗಳೂ ಇರುವಂತೆ ಮಾಡಿದ್ದರು. ಧಾನ್ಯ, ತೈಲ ಶರ್ಕರಾದಿಸಕಲವ

ಸ್ತುಗಳನ್ನೂ ತುಂಬತಕ್ಕ ಉಗ್ರಾಣಗಳಿದ್ದುವು. ಅಲ್ಲಲ್ಲಿ ಕಾವಲುಗಾರರು ಕುಳಿತುಕೊಳ್ಳುವ ಚಾವಡಿಗಳೂ, ಲತಾಗೃಹ ಸರೋವರ ತರು ಗುಲ್ಮಲತಾದಿಗಳಿಂದ ಅಂದವಾದ ಉಪವನವೂ, ಚಂದ್ರಕಾಂತಸ್ಫಟಿಕಾದಿಗಳ ಜಗತಿಗಳೂ ಮೆರೆಯುತ್ತಿದ್ದುವು. ಸಾರಣೆಕಾರಣೆಗಳಿಂದ ಮಂದಿರವು ಮಂಗಳಮಯವಾಗಿ ಶೋಭಿಸುತ್ತಿದ್ದಿತು. ವೈಶಾಲ್ಯದಲ್ಲೂ ಎತ್ತರದಲ್ಲೂ ಒಟ್ಟಂದದಲ್ಲೂ ಅಭೂತಪೂರ್ವವಾಗಿ ತೋರುತ್ತಿದ್ದಿತು. ನೋಡಿದವರೆಲ್ಲರೂ ಸಂತೋಷವನ್ನೂ ಆಶ್ಚರ್ಯವನ್ನೂ ಹೊಂದುತ್ತಿದ್ದರು. ಆಗ ಶಿಲ್ಪಿಯು ಬಂದು ಮಂದಿರವೆಲ್ಲವೂ ಸಿದ್ಧವಾಗಿರುವುದು ಚಿತ್ತೈಸಬೇಕೆಂದು ಬಸವೇಶನೊಡನೆ ಬಿನ್ನೈಸಿದನು. ಆಗ ಬಸವಣ್ಣನು ಚೆನ್ನಬಸವಣ್ಣನೊಡನೆ ಕೂಡಿ ಬಂದು ಮನೆಯೆಲ್ಲವನ್ನೂ ಆದ್ಯಂತವಾಗಿ ನೋಡಲಾಗಿ, ಅದು ನಿರ್ಮಲವಾಗಿಯೂ, ಮಂಗಳಮಯವಾಗಿಯೂ, ಕಾಂತಿಮತ್ತಾಗಿಯೂ ಎಸೆಯುತ್ತಿದ್ದಿತು. ಬಸವೇಶನು ಮೆಚ್ಚಿ ತಕ್ಕದಾಗಿ, ಶಿಲ್ಪಿಗೆ ಉಡಿಗೆತೊಡಿಗೆಗಳನ್ನಿತ್ತು ಸಂತೋಷಪಡಿಸಿ, ಮುಂದೆ ನಿಂತಿರುವ ಚೆನ್ನಬಸವೇಶನ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸಿ, ಸದಾ ಈ ಮನೆಯಲ್ಲಿ ನೀವು ವಾಸಮಾಡಿಕೊಂಡು ನನ್ನ ಸೇವೆಯನ್ನು ಕೈಕೊಳ್ಳುತ್ತ ನಮಗೆ ಶಿವತತ್ತ್ವಬೋಧೆಯನ್ನು ಮಾಡಿಕೊಂಡಿರಬೇಕೆಂದು ಪ್ರಾರ್ಥಿಸಿದನು. ಅದನ್ನು ಚೆನ್ನಬಸವೇಶನು ಕೇಳಿ, ಗುರುವಿನ ವಾಕ್ಯವೇ ಅದೆಂದು ತಿಳಿದು, "ಎಲೈ ಜ್ಞಾನನಿಧಿಯೇ ನೀನು ಹೇಗಿರಿಸಿದರೆ ಹಾಗೆ ನಾನಿರತಕ್ಕವನು" ಎಂದು ಉತ್ತರವನ್ನು ಕೊಟ್ಟನು. ಆಗ ಬಸವೇಶನು ಸಂತೋಷದಿಂದ ಧನಧಾನ್ಯಮೊದಲಾದ ಸಕಲ ಸಾಮಗ್ರಿಗಳನ್ನೂ ಆ ಮನೆಗೆ ತಂದು ತುಂಬಿಸಿದನು. ಬೇಕಾದ ಪರಿಜನಗಳನ್ನೆಲ್ಲ ನೇಮಿಸಿದನು. ಭಕ್ತಿಯಿಂದ ನಾಗಲಾಂಬಿಕೆಗೂ ಬಿನ್ನೈಸಿಕೊಂಡನು. ಆಕೆಯು ಚಿನ್ನದ ಅಂದಳದಲ್ಲಿ ಕುಳಿತು ಸುವಾಸಿನಿಯರೊಡಗೂಡಿ, ಆ ಮಂಗಳಮಂದಿರವನ್ನು ಪ್ರವೇಶಿಸಿದಳು. ಬಳಿಕ ಬಸವೇಶನು ಈತನೇ ಸಾಕ್ಷಾತ್ಪರಶಿವನ ಅಪರಾವತಾರವೆಂದು ತಿಳಿದು ಸಲಹಬೇಕೆಂದು ತನ್ನಕ್ಕನೊಡನೆ ಹೇಳಿ, ಚೆನ್ನಬಸವೇಶನಿಗೆ ವಂದಿಸಿ, ತನ್ನರಮನೆಗೆ ತೆರಳಿದನು. ಚೆನ್ನಬಸವೇಶನಾದರೋ ಆ ತನ್ನರಮನೆಗೆ ತಕ್ಕ ಕಾವಲಿನವರನ್ನು ನಿಯ

ವಿಸಬೇಕೆಂದು ಮನಸ್ಸಿನಲ್ಲಿ ಯೋಚಿಸಿಕೊಂಡು, ಷಟ್ಸ್ಥಲಮರ್ಮವನ್ನು ತಿಳಿಯದಿರತಕ್ಕ ಯಾರೊಬ್ಬರನ್ನೂ (ಮೂರು ಕಣ್ಣುಳ್ಳವರಾಗಿದ್ದರೂ) ಈ ಮನೆಯೊಳಕ್ಕೆ ಪುಗಿಸಬಾರದು, ಎಂದು ಹೇಳಿ, ಆರು ಮಂದಿ ಷಟ್ಸ್ಥಲಬ್ರಹ್ಮಿಗಳನ್ನು ಆರು ಬಾಗಿಲುಗಳಲ್ಲೂ ಕಾವಲಿಟ್ಟು, ೧೨ ಸಾವಿರ ಷಟ್ಸ್ಥಲಬ್ರಹ್ಮಿಗಳನ್ನು ಸೇರಿಸಿಕೊಂಡು ಜಂಗಮಪಾದಾರ್ಚನಲೋಲನಾಗಿ ಒಪ್ಪುತ್ತಿದ್ದನು. ಪ್ರತಿ ದಿನದಲ್ಲೂ ಷಟ್ಸ್ಥಲಬ್ರಹ್ಮಿಗಳಿಗೆಲ್ಲ ಭಕ್ತಿಯಿಂದ ಸ್ನಾನಾಭ್ಯಂಗಗಳನ್ನು ಮಾಡಿಸಿ, ಭೋಜನಶಾಲೆಯಲ್ಲಿ ಎಲ್ಲರನ್ನೂ ಸಾಲುಸಾಲಾಗಿ ಗದ್ದುಗೆಯಮೇಲೆ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳನ್ನಿತ್ತು ಶಿವಾರ್ಚನೆಯನ್ನು ಮಾಡಿಸಿ, ಚಿನ್ನದ ಹರಿವಾಣಗಳಲ್ಲಿ ಶಾಕಪಾಕಭಕ್ಷ್ಯಭೋಜ್ಯಪರಮಾನ್ನ ದಧಿ ಕ್ಷೀರ ಘೃತಾದಿಗಳನ್ನು ನೀಡಿಸಿ, ಸಮರ್ಪಿಸುತ್ತಿದ್ದನು. ಸರ್ವರೂ ಭುಂಜಿಸಿ, ಆನಂದದಿಂದ ಹರಸುತ್ತಿದ್ದರು. ಬಳಿಕ ಅವರೆಲ್ಲರಿಗೂ ಕರ್ಪೂರತಾಂಬೂಲಗಳನ್ನು ಕೊಟ್ಟು ನಮಸ್ಕರಿಸುತ್ತಿದ್ದನು. ತದನಂತರ ತಾನು ಅವರ ಪಾದೋದಕಪ್ರಸಾದಗಳನ್ನು ಸ್ವೀಕರಿಸಿ, ವಿಲಾಸದಿಂದ ಅವರ ಸಭಾಮಧ್ಯದಲ್ಲಿ ಶಿವತತ್ತ್ವಾನುಭವವಿಚಾರದಲ್ಲಿ ಸುಖದಿಂದ ಕಾಲವನ್ನು ಕಳೆಯುತ್ತ ಪರಮಜಿತೇಂದ್ರಿಯನಾಗಿಯೂ ಶಾಂತಮೂರ್ತಿಯಾಗಿಯೂ, ಮೆರೆಯುತ್ತಿದ್ದನೆಂಬಲ್ಲಿಗೆ ಐದನೇ ಅಧ್ಯಾಯವು ಸಂಪೂರ್ಣವು.

---

## ೬ ನೇ ಅಧ್ಯಾಯವು.

### ಬಸವೇಶಪ್ರಾಣಲಿಂಗೋಪದೇಶವು.

ಹೀಗಿರುವಲ್ಲಿ ಒಂದಾನೊಂದು ದಿವಸ ಬಸವೇಶ್ವರನು ಪ್ರಾತಃಕಾಲದ ಸ್ನಾನಶಿವಾರ್ಚನೆಗಳನ್ನು ತೀರಿಸಿಕೊಂಡು, ಚೆನ್ನಬಸವೇಶನಿಂದ ಷಟ್ಸ್ಥಲವಿದ್ಯಾರಹಸ್ಯವನ್ನು ತಿಳಿಯಬೇಕೆಂದುಯೋಚಿಸಿ ಹೊರಟನು. ಒಡನೆಯೇ ಕೆಲಶಿವಗಣಂಗಳೂ ಹಿತಪರಿಜನರೂ ಹೊರಟರು. ಚೆನ್ನಬಸವೇಶ್ವರನ ಮನೆಯ ಬಾಗಿಲಿಗೆ ಬರುವುದರೊಳಗಾಗಿ ದ್ವಾರಪಾಲಕನು ಕಂಡು ತನ್ನೊಡೆಯನೊಡನೆ ಬಸವೇಶನಾಗಮನವನ್ನು ಸೂಚಿಸಲು, ಆತ

ನು ಥಟ್ಟನೆದ್ದು ತನ್ನ ಬಳಿಯಲ್ಲಿದ್ದ ಪರಿಜನರೊಡನೆ ಕೂಡಿ ಇದಿರಾಗಿ ಬಂದು, ಬಸವೇಶನು ನಮಸ್ಕರಿಸಲು, ಬೇಗನೆ ಓರೆಯಾಗಿ ತಾನು ನಮಸ್ಕರಿಸಿ, ಬರುತ್ತಿರುವಲ್ಲಿ, ಆ ಅಳಿಯನನ್ನು ಬಸವೇಶನು ಅತ್ಯಾನಂದದಿಂದಲೂ, ಪ್ರೀತಿಯಿಂದಲೂ ಭಕ್ತಿಯಿಂದಲೂ, ತಬ್ಬಿಕೊಂಡು ನಾನಾವಿಧವಾಗಿ ಕೊಂಡಾಡಿ, ರತ್ನಖಚಿತವಾದ ಮಂಟಪದಲ್ಲಿ ಗದ್ದುಗೆಯಮೇಲೆ ಆತನನ್ನು ಕುಳ್ಳಿರಿಸಿ, ತಾನೂ ಕುಳಿತುಕೊಂಡು, ಎಡಬಲಪಕ್ಕಗಳಲ್ಲಿ ಉಳಿದ ಶರಣಸಮೂಹವನ್ನೆಲ್ಲ ಕುಳ್ಳಿರಿಸಿ, ಷಟ್ಸ್ಥಲತತ್ತ್ವವನ್ನು ತಿಳಿಯಬೇಕೆಂಬ ತಮ್ಮ ಆಶಯವನ್ನು ತಿಳಿಯಪಡಿಸಿದನು. ಮತ್ತು ಬಸವೇಶನು ಚೆನ್ನಬಸವೇಶನ ಮುಖವನ್ನು ನೋಡಿ ನಗುತ್ತ, ಶಿವಾರ್ಚನೆಯಾಯಿತೆ ? ಎಂದು ಕೇಳಿದನು. ಆಗ ಚೆನ್ನಬಸವೇಶನು ನಕ್ಕು, ವಿನಯದಿಂದ– ದೀಪವಿಲ್ಲದಮೇಲೆ ಕಣ್ಣು ಕಾಣುವುದುಂಟೆ ? ಗುರುಮುಖದಿಂದ ದೀಕ್ಷೆಯನ್ನು ಹೊಂದದ ಬಳಿಕ ಶಿವಾರ್ಚನೆಯೆಂಬ ಹೆಸರುಂಟೆ ? ಅದ ಕಾರಣ ಸಜ್ಜೆಯನ್ನು ಬಿಚ್ಚಿ, ಈಶ್ವರನ ಪೂಜೆಯನ್ನು ಮಾಡಲು ನನಗಪ್ಪಣೆಯನ್ನು ಮಾಡು ಎಂದನು. ಅದಕ್ಕೆ ಬಸವೇಶನು– ಹರಹರಾ! ಲೋಕದಲ್ಲಿ ಗುರುವು ಶಿಷ್ಯನಿಗೆ ಉಪದೇಶಮಾಡುವುದುಂಟು. ಆ ಗುರುವಿಗೇ ಶಿಷ್ಯನು ಉಪದೇಶಿಸುವುದು ಎಲ್ಲಾದರೂ ಉಂಟೆ? ನೀನು ಸಾಮಾನ್ಯಮನುಷ್ಯನೆ ? ತತ್ತ್ವರಹಸ್ಯವನ್ನು ಬೋಧಿಸಿ ನಮ್ಮನ್ನು ರಕ್ಷಿಸುವುದಕ್ಕಾಗಿ ಬಂದಿರುವ ಸಾಕ್ಷಾತ್ ಸಂಗಮೇಶ್ವರನೇ ನೀನು. ನಿನಗೆ ದೀಕ್ಷೆಯನ್ನು ಮಾಡುವುದಕ್ಕೆ ನಾವು ಹೆದರುವೆವು. ಎಂದನು. ಚೆನ್ನಬಸವೇಶನಾದರೊ– ಬಸವಣ್ಣನೆ ಇದಕ್ಕೆ ಹೆದರಲೇಕೆ ? ಹಿಂದೆ ನೀನು ಲಿಂಗವನ್ನು ಕೊಡಲು ತೆಗೆದುಕೊಂಡು ಅದೃಶ್ಯನಾದ ಅನಿಮಿಷಯ್ಯನಂತೆ ಮಾಡತಕ್ಕ ಸಾಮರ್ಥ್ಯವು ನನಗಿಲ್ಲ. ಈ ಲಿಂಗಲಕ್ಷಣವನ್ನಾದರೂ ನನಗೆ ತಿಳಿಸಿಕೊಡು ಎಂದು ಹೇಳಿ ಸಜ್ಜೆಯನ್ನು ಬಿಚ್ಚಿ, ಲಿಂಗವನ್ನು ಬಸವೇಶನ ಕೈಯಲ್ಲಿಡಲಾಗಿ, "ನನಗೆ ಲಿಂಗಲಕ್ಷಣವನ್ನು ಎಳ್ಳಷ್ಟಾದರೂ ವಿಚಾರಿಸುವುದಸಾಧ್ಯ" ಎಂದು ಹೇಳಿ ಬಸವೇಶನು ಮರಳಿ ಆ ಲಿಂಗವನ್ನು ಚೆನ್ನಬಸವೇಶನ ಹಸ್ತಕ್ಕೇ ಕೊಟ್ಟನು. ಅದನ್ನೇ ಗುರುದೀಕ್ಷೆಯೆಂದು ಚೆನ್ನಬಸವೇಶನು ನುಡಿದನು.

ಬಳಿಕ ಬಸವೇಶನು– ಪೂರ್ವವೃತ್ತಾಂತವನ್ನು ನನಗೆ ಹೇಳಿ ಎಚ್ಚರಿಸಿ ಮುಂದೆ ಭವವು ತೊಡಗದಂತೆ ನನ್ನನ್ನು ಕರುಣದಿಂದ ಕಾಪಾಡುವ ತಂದೆಯು ನೀನಿರಲಾಗಿ ನನಗೆ ಕಷ್ಟವೇನುಂಟು ? ಅನಿಮಿಷಯ್ಯನಿಗೆ ನಾನು ಕೊಡಲು ಅದೃಶ್ಯವಾದ ಆ ಮಹಾಲಿಂಗವು ನನಗೆ ಸಾಧ್ಯವಾಗುವುದು ಹೇಗೆ? ಸಂಗಮೇಶ್ವರನು ನನ್ನನ್ನು ಕರೆದುಕೊಳ್ಳುವುದಾವಾಗ? ಇವನ್ನು ತಿಳುಹಿ ನನ್ನನ್ನು ಉದ್ಧರಿಸಬೇಕೆಂದು ಹೇಳಿ ನಮಸ್ಕರಿಸಿದನು. ಚೆನ್ನಬಸವೇಶನು ಅದಕ್ಕೆ ಪ್ರತಿನಮಸ್ಕಾರವನ್ನು ಮಾಡಿ, ಅಯ್ಯಾ! ಎಳೆಯ ಹೂಗಾಯನ್ನು ಕೊಯ್ದು ಹಣ್ಣನ್ನು ಮಾಡಲಾದೀತೆ? ನೀನು ಬಂದ ಉದ್ದೇಶವಲ್ಲಿ ತಿಲಮಾತ್ರದಷ್ಟು ಕೆಲಸವೂ ಭೂಲೋಕದಲ್ಲಿ ಸಾಗಿಲ್ಲ. ನೀನು ಈಗ ಇಷ್ಟಲಿಂಗವನ್ನು ಪೂಜಿಸುವಹಾಗೆಯೇ ಹೃದಯದಲ್ಲಿ ಪ್ರಾಣಲಿಂಗವನ್ನು ಆರಾಧಿಸಿ, ಷಟ್ಸ್ಥಲತತ್ತ್ವಾರ್ಥವನ್ನು ವಿಚಾರ ಮಾಡಿ ಲಿಂಗಾರ್ಪಣಸದ್ಭಾವಗಳನ್ನು ಅರಿದರೆ ನಿನ್ನ ಮನೋರಥವು ಸಫಲವಾದೀತೇ ಹೊರತು ಬರಿಯ ಮಾತಿನಿಂದ ಸಾಧ್ಯವಿಲ್ಲವೆಂದನು. ಅದಕ್ಕೆ ಬಸವೇಶನು– ಒಳ್ಳೆಯ ಮಾತನ್ನಪ್ಪಣೆ ಕೊಡಿಸಿದೆ. ನಾನು ಇಷ್ಟುದಿನವೂ ಹೊರಗಣ ಆಡಂಬರದ ಪೂಜೆಯನ್ನೇ ಮಾಡಿ ಮಾಡಿ ವ್ಯರ್ಥವಾಗಿ ಕಾಲಕಳೆದನು. ಮುಂದಾದರೂ ನನಗೆ ಪ್ರಾಣಲಿಂಗದ ನೆಲೆಯು ಅರಿಯುವಂತೆಯೂ, ಷಟ್ಸ್ಥಲಭೇದವು ತಿಳಿಯುವಂತೆಯೂ ಬೋಧಿಸಬೇಕೆಂದು ಪ್ರಾರ್ಥಿಸಿದನು. ಆಗ ಸಕಲ ಶಿವಗಣವೂ ತಿಳಿಯುವಂತೆ ಚೆನ್ನಬಸವೇಶನು ಬೋಧಿಸಿದ ಷಟ್ಸ್ಥಲರಹಸ್ಯವನ್ನು ಬಸವೇಶನು ಲಾಲಿಸಿ, ಎಲೈ ಸದ್ಗುರುವೇ ನೀನು ಪ್ರಾಣಲಿಂಗವ ನೆಲೆಯನ್ನು ಬೋಧಿಸಿ ನನಗೆ ಭವಬಾಧೆಯನ್ನು ತಪ್ಪಿಸಿದೆ, ನಿನ್ನಿಂದ ನನಗೆ ಸಂಗನಬಸವೇಶನೆಂಬ ಹೆಸರು ಈಗ ಉಂಟಾಯಿತು. ಅನಿಮಿಷಯ್ಯನ ವೃತ್ತಾಂತವೇನೆಂಬುದನ್ನು ನನಗೆ ಬೋಧಿಸಬೇಕೆಂದು ಪ್ರಾರ್ಥಿಸಿದನು. ಆಗಳಾ ಚೆನ್ನಬಸವೇಶನು– ಎಲೈ ಬಸವಣ್ಣನೇ, ನೀನು ಶಿವನಪ್ಪಣೆಯಮೇರೆ ಭೂಲೋಕದಲ್ಲಿ ವೀರಶೈವಾಚಾರವನ್ನು ಪ್ರತಿಷ್ಠಿಸುವುದಕ್ಕಾಗಿ ಏಳುನೂರೆಪ್ಪತ್ತುಮರಗಣಗಳೊಡನೆ ಈ ಲೋಕದಲ್ಲವತರಿಸಿರುವೆ. ನಿನ್ನ ಮಹಿಮೆಯನ್ನು ಹೇಳುವುದಕ್ಕೆ ನನಗಸಾಧ್ಯ. ಪೂರ್ವ

ದಲ್ಲಿ ನೀನು ಅನಿಮಿಷಯ್ಯನಿಗೆ ಲಿಂಗವನ್ನು ಕೊಟ್ಟ ಬಳಿಕ ಅವನು ಅದೇ ಲಿಂಗದಲ್ಲೇ ಬೆರೆದು ಸಮಾಧಿಸ್ಥಿತನಾಗಿದ್ದನು. ಅವನ ಬಳಿಗೆ ಅಲ್ಲಮ ಪ್ರಭುವೆಂಬ ಜಂಗಮನು ಹೋಗಿ ಅವನ ಕೈಯಲ್ಲಿದ್ದ ಲಿಂಗವನ್ನು ತೆಗೆದುಕೊಂಡು ನಿಜಾನಂದದಿಂದ ಓಲಾಡುತ್ತ, ಈಗ ನಿನ್ನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಬರುವನು. ನೀನು ಜಂಗಮಪ್ರಿಯನಾಗಿದ್ದರೇನೆಯೋ ಇಂತಹ ಜಂಗಮರು ನಿನ್ನ ಮನೆಗೆ ಬರುವರು. ನೀನು ಮಾಡುವ ಜಂಗಮಾರ್ಚನೆಯು ಅಂತಹದಲ್ಲ. ನಿನ್ನ ಮನೆಯಲ್ಲಿ ಜಂಗಮರನ್ನು ಲಿಂಗಶೋಭರು ಅಂಗಶೋಭರು ಎಂಬದಾಗಿ ಔದಾಸೀನ್ಯದಿಂದ ಇಟ್ಟುಕೊಂಡಿರಬಾರದು. ಅಲ್ಲಮನು ನಿನ್ನ ಮನೆಗೆ ಜಂಗಮಾಕಾರದಿಂದ ಬಂದಾಗ ನಿನಗೆ ಅವನ ಅಘಟಿತಘಟನಾಸಾಮರ್ಥ್ಯವಿಶೇಷವು ಕಾಣ್ಬರುವುದು. ಅದುಕಾರಣ ಆ ಜಂಗಮರ ಮಹತ್ತ್ವಕ್ಕನುಸಾರವಾಗಿ ಮಠಗಳನ್ನು ಕಟ್ಟಿಸಿಕೊಟ್ಟು ಅವುಗಳಲ್ಲಿ ಲಕ್ಷದಮೇಲೆ ತೊಂಭತ್ತಾರು ಸಾವಿರ ಜಂಗಮರನ್ನು ತಂದಿರಿಸಿ, ಅವರಿದ್ದ ಬಳಿಗೆ ನೀನೇ ಹೋಗಿ ಭಯಭಕ್ತಿಯಿಂದ ಬಿನ್ನಹವಂ ಮಾಡಿ ನಿನ್ನರಮನೆಗೆ ಕರೆದುಕೊಂಡು ಬಂದು, ಅವರೇನನ್ನು ಕೇಳಿದರೂ ಕೊಟ್ಟು ಕಳುಹಿಸು, ಎಂದು ಬೋಧಿಸಿದನು. ಅದಕ್ಕೆ ಬಸವೇಶನು ಹರ್ಷಗೊಂಡು, ನಾನು ಅಸ್ವತಂತ್ರ, ನೀವು ಹೇಗೆ ಇರಿಸಿದರೆ ಹಾಗೆ ನಾನಿರತಕ್ಕವನು ಅಪ್ಪಣೆಯಾದಂತಾಗಲಿ, ಎಂದು ಹೇಳಿ, ಗಣಸಮೇತನಾಗಿ ಆ ಚೆನ್ನಬಸವೇಶನಿಗೆ ನಮಸ್ಕರಿಸಿ ತನ್ನರಮನೆಗೆ ಹಿಂತಿರುಗಿದನು. ಬಳಿಕ ಚೆನ್ನಬಸವೇಶನು ಬಸವಣ್ಣನರಮನೆಯ ಮುಂದಣ ಬೈಲಿನಲ್ಲಿ ಲಕ್ಷದ ತೊಂಭತ್ತಾರು ಸಾವಿರಜಂಗಮರಿಗೂ ಅನುಕೂಲಿಸುವಂತೆ ಮನೋಹರವಾದ ಮಠಗಳನ್ನು ಕಟ್ಟಿಸಿ, ಎಲ್ಲ ಜಂಗಮರನ್ನೂ ಅಲ್ಲಿರಿಸಿದನು. ಬಳಿಕ ಬಸವೇಶನರಮನೆಯಲ್ಲಿದ್ದ ಲಿಂಗಶೋಭರು ಅಂಗಭೋಗರುಗಳೆಲ್ಲರನ್ನೂ ಕರಿತು ಮುಂಗಡೆಯಲ್ಲಿರುವ ಮಠಗಳಿಗೆ ನಡೆಯಿರೆಂದು ಹೇಳಿದನು. ಅವರು ಏಳುವುದಿಲ್ಲವೆಂದರು. ಆಗ ಆ ಮನೆಗೇ ಬೆಂಕಿಯಿಕ್ಕಿಸಿದನು. ಅದು ಹೊತ್ತಿ ಧಗಧಗನೆ ಉರಿಯುತ್ತಿರಲು, ಎಲ್ಲರೂ ಗಡಬಡನೆ ಎದ್ದು ಕೈಕಾಲೊಡೆದುಕೊಂಡು ದಿಕ್ಕುತೋಚದೆ ಓಡುತ್ತಿದ್ದರು. ಅವರಲ್ಲಿ ಮೂವ

ರು ಮಾತ್ರ ಲಿಂಗಾನುಸಂಧಾನದಲ್ಲಿದ್ದರು. ಅವರಲ್ಲೂ ಒಬ್ಬನು ತನ್ನ ಮಗ್ಗುಲಲ್ಲಿದ್ದವನನ್ನು ಕುರಿತು– ಇಗೋ ಇಗೋ ಬೆಂಕಿಯು ಉರಿಯುತ್ತಿದೆ! ಎಂದನು. ಮತ್ತೊಬ್ಬನು "ಎಲ್ಲಿ?" ಎಂದನು. ಇನ್ನೊಬ್ಬನು "ನಿಮ್ಮ ಸೊಲ್ಲಡಗ! ಸುಮ್ಮನಿರಿ" ಎಂದು ಹೇಳಲು, ಮೂವರೂ ಸುಮ್ಮನೆ ಮಲಗಿಕೊಂಡರು. ಚೆನ್ನಬಸವೇಶನು ಆ ಮೂವರನ್ನೂ, ಭಯದಿಂದ ಓಡಿ ಹೋದ ಇತರರನ್ನೂ ಕರೆತಂದು, ಬೇರೆ ಕಟ್ಟಿಸಿರುವ ಮಠಗಳಲ್ಲಿರಿಸಿ, ಮನೆಯ ಬೆಂಕಿಯನ್ನಾರಿಸಿ, ಮನೆಯು ಮೊದಲಿದ್ದಂತೆ ಆಗಲೆಂದು ಅಪ್ಪಣೆ ಮಾಡಿದನು. ಥಟ್ಟನೆ ಹೊಸಕಟ್ಟಡದಂತೆ ಮನೋಹರವಾಗಿ ಶೋಭಿಸಿತು. ಬಿಜ್ಜಳರಾಜನು ಈ ಮಹತ್ತ್ವವನ್ನು ಕೇಳಿ ಬಂದು, ಆ ಮನೆಯನ್ನು ನೋಡಿ ಆಶ್ಚರ್ಯಪಟ್ಟು ಬಸವೇಶನೊಡನೆ "ನಿನ್ನ ಅಳಿಯನ ಮಹತ್ತ್ವವು ಘನತರವಾದದ್ದು" ಎಂದು ಹೊಗಳಿ, ಚೆನ್ನಬಸವೇಶನ ಪಾದಕ್ಕೆ ನಮಸ್ಕರಿಸಿ ಅಪ್ಪಣೆಯನ್ನು ಪಡೆದು ಅರಮನೆಗೆ ಹೋದನು. ಇತ್ತ ಬಸವೇಶಚೆನ್ನಬಸವೇಶ್ವರರಿರ್ರ್ವರೂ ಸುಖದಿಂದಿದ್ದರು.

ಬಸವೇಶನ ಭಕ್ತಿಯನ್ನೂ ಮಹಿಮಾತಿಶಯವನ್ನೂ ಕಿವಿಯಿಂದ ಕೇಳಿದ್ದ ಒಬ್ಬ ಜಂಗಮಶ್ರೇಷ್ಠನು ಆತನನ್ನು ಪ್ರತ್ಯಕ್ಷವಾಗಿ ದರ್ಶನ ಮಾಡಬೇಕೆಂದು ಒಂದು ದಿವಸ ಅವನರಮನೆಗೆ ಬಂದನು. ಕಾವಲುಗಾರನು ಕಾಣುವುದಕ್ಕೆ ಈಗ ಸಮಯವಿಲ್ಲವೆಂದು ತಡೆದನು. ಜಂಗಮನು ಮನಸ್ಸಿನಲ್ಲಿ ನೊಂದುಕೊಂಡು ಹಿಂತಿರುಗಿ ತ್ರಿಪುರಾಂತಕೇಶ್ವರದೇವಾಲಯಕ್ಕೆ ಹೋಗಿ ಕುಳಿತುಕೊಂಡನು. ಅಷ್ಟರಲ್ಲಿ ಬಿಜ್ಜಳರಾಜನು ಏನೋ ಒಂದು ಕಾರ್ಯಾರ್ಥವಾಗಿ ಬಸವೇಶನನ್ನು ಕರೆಯಕಳುಹಿಸಿದನು. ಅದನ್ನು ಬಸವೇಶನಿಗೆ ಅರುಹುವುದಕ್ಕಾಗಿ ಒಳಹೊಕ್ಕ ದ್ವಾರಪಾಲಕನು ಬಸವೇಶನು ಮಲಗಿರುವುದನ್ನು ನೋಡಿ, ಇಷ್ಟುಹೊತ್ತೇಕೆ ಮಲಗಿದರೆಂದು ಆಶ್ಚರ್ಯಪಟ್ಟು ಎಬ್ಬಿಸಲು, ಉಸುರಾಡದೆ ಡಿಂಬಮಾತ್ರವಾಗಿರುವುದನ್ನು ಕಂಡು ಗೋಳಿಟ್ಟನು. ಅರಮನೆಯವರೆಲ್ಲರೂ ಓಹೋ! ಏನೋ ಮೋಸ ನಡೆದಿತೆಂದು ಕೋಲಾಹಲವನ್ನು ಮಾಡಿದರು. ಹೋಗಿದ್ದ ದೂತನು ರಾಜನೊಡನೆ ಕಂಡ ಸಂಗತಿಯನ್ನು ಬಿನ್ನೈಸಿದನು.

ಬಿಜ್ಜಳರಾಜನು ಬೆರಗಾಗಿ ಥಟ್ಟನೆದ್ದು ಕಾಲ್ನಡಗೆಯಲ್ಲೇ ಬಸವ ರಾಜನ ಮನೆಗೆ ಬಂದನು. ಅಷ್ಟರಲ್ಲಿ ಚೆನ್ನಬಸವೇಶನು ಜ್ಞಾನದೃಷ್ಟಿಯಿಂದ ನಡೆದಿರುವ ಸಂಗತಿಯೇನೆಂಬುದನ್ನು ಪರಿಭಾವಿಸಿಕೊಂಡು, ಬಸವಣ್ಣನರಮನೆಗೆ ಬಂದನು. ಸಕಲ ಗಣಸಮೂಹವೂ ಬಂದು ಸೇರಿತು. ಆಗ ಬಿಜ್ಜಳನು ಜನದ ಕೋಲಾಹಲವನ್ನು ನಿಲ್ಲಿಸಿದನು. ಬಸವೇಶನಿಗೆ ಹೀಗೆ ನಿಷ್ಕಾರಣವಾಗಿ ಅಕಸ್ಮಾತ್ ಮರಣವೆಂತಾಯ್ತೆಂದು ಚೆನ್ನಬಸವೇಶನನ್ನು ಕೇಳಿದನು. ಅದಕ್ಕಾತನು—ಬಾಗಿಲಿಗೆ ಬಂದ ಜಂಗಮನನ್ನು ಕಾವಲುಗಾರನು ತಡೆದಟ್ಟಿದುದರಿಂದ ಆ ಜಂಗಮನು ನೊಂದು ಹಿಂತಿರುಗಿ ಹೋದಕೂಡಲೇ ಈ ಬಸವೇಶನ ಪ್ರಾಣವೂ ಅವನ ಸಂಗಡ ಹೋಗಿರುವುದೆಂದು ನುಡಿದನು. ಆಗ ದೊರೆಯು ಕಾವಲುಗಾರರನ್ನು ಕರಿಸಿ ಯಾರಾದರೂ ಬಾಗಿಲಿಗೆ ಬಂದಿದ್ದು ಹಿಂತಿರುಗಿ ಹೋದರೆ? ನಿಜವಾಗಿ ಹೇಳು, ಹೆದರಬೇಡ, ಎನಲು, ಪ್ರಭುವೇ! ಯಾರೋ ದೂರದೇಶದಿಂದ ಜಂಗಮರೊಬ್ಬರು ಬಂದಿದ್ದರು; ನಾನು ತಡೆಯಲಾಗಿ ಹೊರಟುಹೋದರು, ಎಂದನು. ಆಗ ಚೆನ್ನಬಸವೇಶನಪ್ಪಣೆಯ ಮೇರೆ ಚಾರರನ್ನು ತ್ರಿಪುರಾಂತಕೇಶ್ವರದೇವಾಲಯಕ್ಕೆ ಕಳಿಸಿ, ಅಲ್ಲಿ ಕುಳಿತಿದ್ದ ಜಂಗಮರನ್ನು ಬರಮಾಡಿದನು. (ಆಗ ನಡೆದಾಶ್ಚರ್ಯವನ್ನೇನು ಹೇಳುವ!) ಜಂಗಮನು ಬಾಗಿಲನ್ನು ಮೆಟ್ಟಿದಕೂಡಲೇ ಬಸವೇಶನ ಪ್ರಾಣವಾರುಶವು ಮೂಗಿನಲ್ಲಾಡಲಾರಂಭಿಸಿತು. ಸಮೀಪಕ್ಕೆ ಬರುವುದರೊಳಗಾಗಿ ಸರ್ವಾಂಗದಲ್ಲೂ ನಾಡಿಯು ಆಯಾಯಸ್ಥಳದಲ್ಲಿ ಆಡುವುದು ಕಾಣಿಸಿತು. ಆಗ ಬಸವೇಶನು ಥಟ್ಟನೆದ್ದು ಜಂಗಮಮೂರ್ತಿಗೆ ನಮಸ್ಕಾರ ಮಾಡಿದನು. ಬಿಜ್ಜಳನು ಆಶ್ಚರ್ಯಪಟ್ಟು ಚೆನ್ನಬಸವೇಶನನ್ನು ಕೊಂಡಾಡಿ ತನ್ನರಮನೆಗೆ ತೆರಳಿದನು. ಇತ್ತ ಸಕಲಗಣಂಗಳೂ ಬಸವೇಶ ಚೆನ್ನಬಸವೇಶರಿಬ್ಬರನ್ನೂ ಹೊಗಳಿದರು. ಬಳಿಕ ಚೆನ್ನಬಸವೇಶನು ಬಸವರಾಜನನ್ನು ಕುರಿತು— ವ್ಯರ್ಥವಾಗಿ ಹೀಗೆ ಪ್ರಾಣವನ್ನು ಬಿಡುವುದು ಯೋಗ್ಯವಾದದ್ದೆ ? ಯಾವಾಗಲೂ ಲಿಂಗದಲ್ಲಿ ಅಥವಾ ಜಂಗಮದಲ್ಲಿ ಪ್ರಾಣವನ್ನು ಸಮರ್ಪಿಸಿರುವವನು ಆ ಲಿಂಗಜಂಗಮಗಳ ಅಳಿವಿನಲ್ಲಿ ತನ್ನ ಪ್ರಾಣವನ್ನೂ ಸಮರ್ಪಿಸುವುದು ಲಿಂಗಜಂಗಮಪ್ರಾಣಿಗಳ ನೀತಿ.

ಹೇಗೆಂದರೆ– ಆ ಪ್ರಾಣಲಿಂಗಿ ಲಿಂಗಪ್ರಾಣಿ ಜಂಗಮಪ್ರಾಣಿಗಳ ಚರಿತ್ರವನ್ನು ಹೇಳುತ್ತೇನೆ ಕೇಳು– ಲಿಂಗಣ್ಣನೆಂಬ ಒಬ್ಬ ಶಿವಶರಣರ ಮಗನು ಆಡುತ್ತಿರುವಾಗ ಅವನ ಕೊರಲಿನಲ್ಲಿದ್ದ ಲಿಂಗವು ಎಲ್ಲೋ ಕಳಚಿಬಿದ್ದುಹೋಯಿತು. ತಾಯಿಯು ಮಗನ ಬರಿಯಕಂಠವನ್ನು ನೋಡಿ, ಲಿಂಗವೆಲ್ಲೆಂದು ಕೇಳಿದಳು. ಥಟ್ಟನೆ ಆ ಹುಡುಗನ ಪ್ರಾಣವು ಹೋಯಿತು. ತಾಯ್ತಂದೆಗಳೂ ಬಂಧುಗಳೂ ಸೇರಿ ಹುಡುಗನನ್ನು ಮಲಗಿಸಿಕೊಂಡು ಅಳುತ್ತಿದ್ದರು. ಚಿಕ್ಕಲಿಂಗಣ್ಣನೆಂಬೊಬ್ಬಾತನು ಆ ಹುಡುಗನ ಲಿಂಗವನ್ನು ತಡಕಿ ತಂದು ಕೊರಲಿಗೆ ಕಟ್ಟಿದನು. ಕೂಡಲೇ ಅವನ ಪ್ರಾಣವು ಬಂದಿತು. ಅದನ್ನು ಕಂಡು ಇದಲ್ಲವೆ ಪ್ರಾಣಲಿಂಗಾಂಗಿಲಕ್ಷಣ ? ಎಂದು ಚಿಕ್ಕಲಿಂಗಣ್ಣನು ನುಡಿದನು. ಅದನ್ನು ಅವನ ಗುರುವು ಕೇಳಿಕೊಂಡು ಸುಮ್ಮನಿದ್ದು, ಆ ರಾತ್ರಿ ಚಿಕ್ಕಲಿಂಗಣ್ಣನು ಮಲಗಿಕೊಂಡಿದ್ದಾಗ ಅವನ ಕೊರಲಲಿಂಗವನ್ನು ಕಳಚಿಕೊಂಡು ಬೆಳಗಾದಕೂಡಲೆ ಹೂವನ್ನೆತ್ತಿ ತರುವುದಕ್ಕಾಗಿ ಹೋದನು. ಇತ್ತ ಚಿಕ್ಕಲಿಂಗಣ್ಣನು ಪ್ರಾಣವಿಲ್ಲದೆ ಮಲಗಿಕೊಂಡಿದ್ದನು. ಎಲ್ಲರೂ ಅವನ ಸುತ್ತ ಅಳುತ್ತಿದ್ದರು. ಅಷ್ಟರಲ್ಲಿ ಗುರುವು ಬಂದು ಅವನ ಲಿಂಗವನ್ನು ಅವನ ಕೊರಲಿಗೆ ಕಟ್ಟಿಬಿಟ್ಟನು. ಒಡನೆಯೇ ಅವನ ಪ್ರಾಣವು ಬಂದಿತು. ಸತ್ಯಣ್ಣನೆಂಬ ಮತ್ತೊಬ್ಬ ಜಂಗಮನು ತನ್ನ ಸೂಳೆಯೊಡನೆ ರತಿಕೇಳಿಯಲ್ಲಿರುವಾಗ್ಗೆ ಕರಡಿಗೆಯು ಮಗ್ಗುಲಿಗೆ ಒತ್ತುವುದೆಂಬುದಾಗಿ ಅದನ್ನು ತೆಗೆದು ಮಂಚದಮೇಲಿರಿಸಿಬಿಟ್ಟಿದ್ದನು. ಅದನ್ನು ನಾವು ಕೇಳಿ ಕಳುವಿನಿಂದ ಮೆಲ್ಲಗೆ ತರಿಸಿಬಿಟ್ಟೆವು. ಆಗ ಆ ಜಂಗಮನ ಪ್ರಾಣವೇ ಹೋಯಿತು. ಅದನ್ನು ನೋಡಿದಕೂಡಲೇ ಸೂಳೆಯ ಪ್ರಾಣವೂ ಹೋಯಿತು. ಬಳಿಕ ನಾವು ಸತ್ಯಣ್ಣನ ಕೊರಲಿಗೆ ಅವನಲಿಂಗವನ್ನು ಕಟ್ಟಿಸಲು ಅವನ ಪ್ರಾಣವು ಬಂದಿತು. ಸೂಳೆಯೂ ಪ್ರಾಣಗೂಡಿಕೊಂಡಳು. ಇವನಂತೆಯೇ ಮಾರಣ್ಣನೆಂಬುವನೊಬ್ಬನು ತನ್ನ ಪತ್ನಿಯೊಡನೆ ಮಲಗಿಕೊಂಡಿರುವಾಗ ಲಿಂಗ ಒತ್ತುವುದೆಂದು ಸಜ್ಜೆಕೆಯನ್ನು ಈರ್ವರೂ ಕಳೆದು ಮಂಚದಮೇಲೆ ಮಡಗಿದ್ದು, ಬೆಳಗಾದಕೂಡಲೇ ಎದ್ದು ಒಬ್ಬರಲಿಂಗವನ್ನೊಬ್ಬರು ತೆಗೆದುಕೊಂಡು ಪಲ್ಲಟವಾಗಿ ಧರಿಸಿಕೊಂ

ಹರು. ಕೂಡಲೇ ಇಬ್ಬರ ಪ್ರಾಣವೂ ಹೋಯಿತು. ಅವರ ಮನೆಗೆ ನೀರನ್ನು ಹೊತ್ತು ತರುತ್ತಿದ್ದ ದಾಸಿಯು ಬಂದು ಇವರೀರ್ವರೂ ಮಲಗಿರುವುದನ್ನು ಕಂಡಕೂಡಲೆ ಅವಳ ಪ್ರಾಣವೂ ಹೋಯಿತು. ಈ ಸುದ್ದಿಯು ನಮಗೆ ಬರಲು, ಸತ್ಯಣ್ಣನನ್ನು ಕರಿಸಿ ಇದೇನು ವಿಶೇಷವೆಂದು ಕೇಳಲಾಗಿ, ಅವರುಗಳು ಪಲ್ಲಟದಿಂದ ಲಿಂಗಧಾರಣವನ್ನು ಮಾಡಿಕೊಂಡಿರುವ ಕಾರಣದಿಂದ ಹೀಗಾಯ್ತೆಂದು ತಿಳಿಸಿದನು. ಕೂಡಲೇ ಅವರ ಲಿಂಗವನ್ನವರವರ ಕೊರಲಿಗೆ ಕಟ್ಟಿಸಲು, ಪ್ರಾಣವು ಬಂದಿತು. ಒಡನೆಯೇ ಗೌಡಿಯೂ ಪ್ರಾಣಸಮೇತಳಾದಳು. ಎಲೈ ಬಸವಣ್ಣನೆ! ಮೇಲೆ ಹೇಳಿರುವ ಲಿಂಗಣ್ಣ ಚಿಕ್ಕಲಿಂಗಣ್ಣ ಸತ್ಯಣ್ಣ ಮಾರಣ್ಣರುಗಳೂ ಮಾರಣ್ಣನ ಹೆಂಡತಿಯೂ ಕೂಡ ಪ್ರಾಣಲಿಂಗಾಂಗಿಗಳೆನಿಸಿಕೊಳ್ಳುವರು. ಘಟ್ಟಿವಾಳಯ್ಯನೆಂಬ ಶರಣನು ತನ್ನ ಇಷ್ಟಲಿಂಗವನ್ನು ತನ್ನ ಕಾಲ್ಗೆ ಕಟ್ಟಿಕೊಂಡು ನಡೆಯುತ್ತಿರಲು, ಜಂಗಮರು ಅದನ್ನು ಕಂಡು ಕಿತ್ತುಕೊಂಡರು. ಆತನು ಕೊರಲಿಗೆ ಒಂದು ದೊಡ್ಡ ಗುಂಡನ್ನು ಕಟ್ಟಿಕೊಂಡು ಊರಬಾಗಿಲಲ್ಲಿ ಅಡ್ಡಲಾಗಿ ನಿಂತುಕೊಂಡನು. ಇದರಿಂದ ಹೋಗಿಬರುವವರಿಗೆ ದಾರಿಯಿಲ್ಲದೆ ಹೋಯಿತು. ಆಗ ಜಂಗಮರು ಅವನ ಲಿಂಗವನ್ನವನಿಗೆ ಕೊಟ್ಟುಬಿಟ್ಟರು. ಘಟ್ಟಿವಾಳಯ್ಯನಾದರೊ ಲಿಂಗದಲ್ಲೇ ಆ ಗುಂಡನ್ನು ಅಡಗಿಸಿದನು. ಈತನೇ ಲಿಂಗಪ್ರಾಣಿಯೆನಿಸಿಕೊಳ್ಳುವನು. ಆ ಸೂಳೆಯೂ ನೀರಿನ ದಾಸಿಯೂಕೂಡ ಜಂಗಮಪ್ರಾಣಿಗಳೆನಿಸಿಕೊಳ್ಳುವರು. ಅವರುಗಳು ನಿನ್ನಂತೆ ಜಂಗಮನು ಮುಳಿಸಿಕೊಂಡು ಹೋದಮಾತ್ರದಿಂದಲೇ ಪ್ರಾಣವನ್ನು ಬಿಟ್ಟರೆ? ಹಿಂದೆ ಕಿನ್ನರಯ್ಯನು ಪ್ರಾಣವನ್ನು ಬಿಟ್ಟಾಗ ನೀನೂ ಅವನೊಡನೆ ಪ್ರಾಣವನ್ನು ನೀಗಿದುದನ್ನೂ, ಮೇದರಕೇತಯ್ಯನೊಡನೆ ನೀನು ಪ್ರಾಣಬಿಟ್ಟುದನ್ನೂ ನಾವು ಅನುಚಿತವೆಂದು ಹೇಳುತ್ತೇವೆಯೆ? ಇನ್ನು ಈ ಚರಿತ್ರದ ಸುದ್ದಿಯನ್ನು ಕೇಳಿ ಭೂಲೋಕದ ಭಕ್ತಮಾಹೇಶ್ವರರೂ, ನಿನ್ನೊಡನೆ ಭೂಮಿಗವತರಿಸಿರುವ ಅಮರಗಣಂಗಳೂ ಸಹ ನಿನ್ನನ್ನುನೋಡುವುದಕ್ಕಾಗಿಬರುತ್ತಾರೆ. ಈನಿನ್ನಮಕ್ಕಳಾಟಕೆ ಸಾಕಪ್ಪ! ಎಂದುಹೇಳಿ, ಚೆನ್ನಬಸವೇಶನು ಎಚ್ಚರಿಸಿ, ತನ್ನಮನೆಗೆತೆರಳಿ, ಶಿವಾನುಭವಗೋಷ್ಠಿಯಲ್ಲಿ ಸುಖದಿಂದಿದ್ದನು.

ಇಂಥ ಶಿವಜ್ಞಾನಸಂಪನ್ನರೂ ಮಹಾಮಹಿಮರೂ ಆದ ಬಸವೇಶಚೆನ್ನಬಸವೇಶರನ್ನೂ, ಕೈಲಾಸದಿಂದವತರಿಸಿರುವ ನಾನಾಶಿವಗಣಂಗಳನ್ನೂ, ಅಂಥಪ್ಪ ಬಸವೇಶನನ್ನೇ ಮಂತ್ರಿಯನ್ನಾಗಿ ಪಡೆದಿರುವ, ಕಾರಣಾಂತರದಿಂದ ದರೆಗೆ ಬಂದಿರುವ, ಶಿವಪುರದ್ವಾರಪಾಲಕನಾದ ಬಿಜ್ಜಳರಾಜನನ್ನೂ, ಹೊಂದಿರುವ ಆ ಕಲ್ಯಾಣಪಟ್ಟಣದ ಭಾಗ್ಯವೆನ್ನಿಷ್ಟೆಂದುಹೇಳಬಹುದೆ? ಇಂಥವರ ಅಧಿಕಾರಕ್ಕೊಳಪಟ್ಟ ಪ್ರಜೆಗಳ ಸದ್ಧರ್ಮಸದಾಚಾರ ಸುನೀತಿ ಮೊದಲಾದುವುಗಳ ಪ್ರಾಶಸ್ತ್ಯವನ್ನು ಹೊಗಳುವುದಕ್ಕಾದೀತೆ? ಆ ಪಟ್ಟಣದ ಜನಗಳಲ್ಲಿ ಸುಳ್ಳು ಕಳ್ಳತನ ಮೋಸ ಹಾದರ ಮಾತ್ಸರ, ದ್ವೇಷ, ಠಕ್ಕು, ನಿಂದೆ, ದುರ್ವ್ಯಸನ, ದುರಾಚಾರ, ಅನ್ಯಾಯ, ಕೃತಘ್ನತೆ, ಮೊದಲಾದ ದುರ್ಗುಣಗಳೊಂದೂ ಇರಲಿಲ್ಲ. ವಿದ್ಯಾವಿನಯ ದಯಾ ದಾಕ್ಷಿಣ್ಯ ಶಮ ದಮ ಗಾಂಭೀರ್ಯೌದಾರ್ಯ ಧೈರ್ಯ ಸಾಹಸ ಚಮತ್ಕಾರ ಪರಹಿತ ಶಿವಭಕ್ತಿ ಸದಾಚಾರ ಸುನೀತಿ ಮೊದಲಾದುವುಗಳಿಂದ ಪೂರ್ಣರಾಗಿದ್ದರು. ಆ ಪಟ್ಟಣದ ಸಕಲವಿಧವಾದ ಸಂಪತ್ತಿಗೂ ಬಸವೇಶಚೆನ್ನಬಸವೇಶ್ವರರೇ ಮೂಲಪುರುಷರಾಗಿದ್ದರು. ಈ ಮಹಾಮಹಿಮರ ಚರಿತ್ರವಾರ್ತೆಯನ್ನುಕೇಳಿ ಇವರದರ್ಶನವನ್ನು ಮಾಡುವುದಕ್ಕಾಗಿ ಅಂಗ ವಂಗ ಕಳಿಂಗ ಕಾಶ್ಮೀರ ಕಾಂಭೋಜ ನೇಪಾಳ ಗೌಳ ಮಲಯಾಳ ಸಿಂಧು ಮಾಳವ ಹೊಯ್ಸಳ ಮಗಧ ಬರ್ಬರ ತುಳುವ ಚೋಳ ಪಾಂಡ್ಯ ಯವನ ಮತ್ಸ್ಯ ಗುರ್ಜರ ದ್ರವಿಡ ಕರ್ನಾಟಕ ಮೊದಲಾದ ಐವತ್ತಾರು ದೇಶಗಳಿಂದಲೂ ಭಕ್ತರುಗಳು ಬರುತ್ತಿದ್ದರು. ಇವರೆಲ್ಲರೂ ಬರುವ ವಾರ್ತೆಯನ್ನು ಚೆನ್ನಬಸವೇಶನು ಮುಂದಾಗಿ ಬಸವೇಶನಿಗೆ ಅರುಹಲು, ಆತನು ಪಟ್ಟಣವನ್ನೆಲ್ಲ ತಳಿರುತೋರಣಗಳಿಂದಲೂ ಚಪ್ಪರ ಮೇಲ್ಕಟ್ಟುಗಳಿಂದಲೂ ವಾದ್ಯವೈಭವದಿಂದಲೂ ಮೆರೆಯುವಂತೆ ಮಾಡಿದನು. ಆಗ ಬಸವೇಶಚೆನ್ನಬಸವೇಶ್ವರರಿರ್ವರೂ ತಮ್ಮಲ್ಲಿನ ಶಿವಶರಣರನ್ನೆಲ್ಲ ಕರೆದುಕೊಂಡು ಅನೇಕ ವಾದ್ಯಗಳು ನರ್ತಕಿಯರು ವಂದಿಮಾಗಧರು ನಾನಾಬಿರುದುಗಳು ನಂದೀಧ್ವಜ ಮೊದಲಾದುವುಗಳಿಂದ ಕೂಡಿ ಇದಿರಾಗಿ ಹೋಗಿ, ಬಂದ ಶಿವಶರಣಸಮೂಹಕ್ಕೆಲ್ಲ ದೀರ್ಘದಂಡನಮಸ್ಕಾರವನ್ನು ಮಾಡಿದರು. ಅವರೆಲ್ಲರೂ ಇವರೀರ್ವರಿಗೆ ಪ್ರತಿ ನಮಸ್ಕಾರವ

ನ್ನು ಮಾಡಿದರು. ಆಗ ಚೆನ್ನಬಸವೇಶನು ಆ ಗುಂಪಿನಲ್ಲಿದ್ದ ಪ್ರತಿಯೊಬ್ಬರನ್ನೂ ನಿರ್ದೇಶಿಸಿ, ಈತನೇ ಕಾಶ್ಮೀರಭೂಪಾಲನಾದ ಮಹಾದೇವನು, ಈತನೇ ಶ್ರೀಶೈಲದಿಂದ ಶಿವಯೋಗಿಮಲ್ಲರಸರಪ್ಪಣೆಯ ಮೇರೆ ಇಲ್ಲಿಗೆ ಬಂದಿರುವ ಸಕಳೇಶಮಾದರಸನು, ಈತನೇ ಕಾಳಂಗವೇಶವಿಂದ ಬಂದ ಮರುಳಶಂಕರದೇವನು, ಈತನೇ ಹಿಪ್ಪಲಿಗೆಯಿಂದ ಬಂದ ಮಡಿವಳಮಾಚಯ್ಯನು, ಈತನೇ ಕಟಕದಿಂದ ಬಂದ ಸುಜ್ಞಾನಿದೇವನು, ಈತನೇ ಸುಜ್ಞಾನಿದೇವನೆಂಬ ತನ್ನ ಗುರುವಿನ ರುಂಡಕ್ಕೆ ಮುಂಡವನ್ನೂ ಮುಂಡಕ್ಕೆ ರುಂಡವನ್ನೂ ಪಡೆದ ಮಾತಂಗತಮನೆಂಬ ಶರಣನು, ಎಂದು ಹೇಳಿ ಹೀಗೆ ಪ್ರತಿಯೊಬ್ಬರನ್ನೂ ಬಸವೇಶನಿಗೆ ಪರಿಚಯ ಮಾಡಿಸಿದನು. ಬಸವೇಶನು ಎಲ್ಲರ ಸಂಗತಿಯನ್ನೂ ಕೇಳಿ ಅವರ ದರ್ಶನವನ್ನು ಮಾಡಿ ಸರ್ವರಿಗೂ ಮರಳಿ ನಮಸ್ಕಾರ ಮಾಡಿ ಉತ್ಸವ ವೈಭವಾತಿಶಯದಿಂದ ತನ್ನ ಮನೆಗೆ ಕರೆದುಕೊಂಡುಹೋಗಿ, ಸ್ನಾನಶಿವಾರ್ಚನಭೋಜನಾದಿಗಳಿಂದ ಅವರೆಲ್ಲರನ್ನೂ ಸತ್ಕರಿಸಿದನು. ಬಳಿಕ ಎಲ್ಲರಿಗೂ ಅವರವರ ಯೋಗ್ಯತಾನುಸಾರವಾಗಿ ಬೇರೆ ಬೇರೆ ಮಠಗಳನ್ನೂ ಆಸ್ತಿಗಳನ್ನೂ ಕೊಡಿಸಿ, ಕೆಲಕೆಲರಿಗೆ ನಾನಾವಿಧವಾದ ಕಾಯಕಗಳನ್ನು ಕಲ್ಪಿಸಿಕೊಟ್ಟು ಸರ್ವರೂ ಸುಖದಿಂದಿರುವಂತೆ ಮಾಡಿದನು. ಬಸವೇಶ ಚೆನ್ನಬಸವೇಶರೀರ್ವರೂ ಶಿವತತ್ತ್ವಗೋಷ್ಠಿಯಲ್ಲಿ ಸುಖವಾಗಿದ್ದರು ಎಂಬಲ್ಲಿಗೆ ೬ ನೇ ಅಧ್ಯಾಯವು ಸಂಪೂರ್ಣವು.

---

## ೭ ನೇ ಅಧ್ಯಾಯವು.

### ಮುಂಚಣ್ಣನ ಚಾಡಿ.

ಇತ್ತ ಬಿಜ್ಜಳರಾಜನು ಒಂದು ದಿವಸ ಎಂದಿನಂತೆ ಒಡ್ಡೋಲಗವನ್ನು ಮಾಡಿಕೊಂಡಿದ್ದನು. ದೇವೇಂದ್ರನ ಮಹಾಸಭೆಯಂತೆ ರಾಜಿಸುವ ಸಾಲಂಕೃತವಾದ ಆ ರಾಜಸಭೆಯ ಮಧ್ಯದಲ್ಲಿ ರತ್ನಖಚಿತನಾದ ಸಿಹ್ಮಾಸನದ ಮೇಲೆ ಅರಿನೃಪಭಯಂಕರನೂ ಜಗದ್ವಿಖ್ಯಾತಯಶೋಭೂಯಿಷ್ಠನೂ ಸಕಲಸಾಮ್ರಾಜ್ಯಪೂರ್ಣನೂ ಅನುಪಮತೇಜೋವಿರಾಜಿ

ತನೂ ಸರ್ವಸಲ್ಲಕ್ಷಣಲಕ್ಷಿತನೂ ಆದ ಬಿಜ್ಜಳರಾಜನು ಸರ್ವಾಲಂಕಾರ ಪರಿಪೂರ್ಣನಾಗಿ ಮೂರ್ತಿಗೊಂಡಿದ್ದನು. ಉಭಯಪಾರ್ಶ್ವಗಳಲ್ಲೂ ಹಾಕಿದ್ದ ಉಚಿತಾಸನಗಳ ಮೇಲೆ ಮನ್ಮಥರೂಪನ್ನುಳ್ಳವ ಅಂಗಸೌಂದರ್ಯದಿಂದ ಕೂಡಿ ರತ್ನಾಭರಣಗಳಿಂದಲೂ ಪೀತಾಂಬರಗಳಿಂದಲೂ ಅಲಂಕೃತರಾಗಿ ಮೆರೆಯುತ್ತಿರುವ ಧೀರಾಗ್ರಣಿಗಳಾದ ಸಾಮಂತರಾಜಗುಗಳು ಕುಳಿತಿದ್ದರು. ಹತ್ತಿರದಲ್ಲೇ ನಿಂತು ರಾಜನು ಮಾಡಿದ ಅಪ್ಪಣೆಯನ್ನು ಚಾರರ ಮುಖದಿಂದ ಮಾಡಿಸುತ್ತ ದೊರೆಯ ಇಷ್ಟವನ್ನರಿತು ನಡೆದು ಕಾರ್ಯಸಾಧನೆಯನ್ನು ಮಾಡಿ ರಾಜನ ಬಂಡಾರಕ್ಕೆ ಹೇರಳವಾದ ದ್ರವ್ಯವನ್ನು ಕೂಡಿಸುವುದರಲ್ಲಿ ಸಮರ್ಥರಾದ ಮಂತ್ರಿಗಳು (ಬಸವೇಶ ಹೊರ್ತಾಗಿ) ಎಡಬಲಗಳಲ್ಲಿ ಒಪ್ಪುತ್ತಿದ್ದರು. ದಿನ ವರ್ಗ ಮಾಸ ವರ್ಷಗಳ ಲೆಕ್ಕವನ್ನು ಕನ್ನಡಿಯಂತೆ ಚೊಕ್ಕಟವಾಗಿಟ್ಟುಕೊಂಡಿರುವ ಗಟ್ಟಿಗರಾದ ಕರಣಿಕರೂ, ವೇದವೇದಾಂತ ಪುರಾಣಾಗಮ ದರ್ಶನಾದಿಗಳಲ್ಲೆಲ್ಲ ಘನತರಪಾಂಡಿತ್ಯವನ್ನು ಸಂಪಾದಿಸಿರುವ ವಿಬುಧಸಮೂಹವೂ, ಚರಕ ಸುಶ್ರುತ ಮೊದಲಾದ ವೈದ್ಯವಿದ್ಯೆಯಲ್ಲಿ ಪರಿಣತಪಂಡಿತರೆನಿಸಿದ ವೈದ್ಯಶಿಖಾಮಣಿಗಳೂ, ನಾನಾ ಚಿತ್ರ ಧ್ವನಿ ಕಾವ್ಯಗಳನ್ನು ಸರಸವಾಗಿಯೂ ತ್ವರಿತವಾಗಿಯೂ ವಿರಚಿಸುವ ಅದುಭುತವಾಗಿ ಸಮಸ್ಯಾಪೂರಣಗಳನ್ನು ಮಾಡುವ ಕವಿಶ್ರೇಷ್ಠರೂ, ಪರಸೈನ್ಯಕ್ಕೆ ಕಾಲನಂತೆ ಭಯಂಕರರಾದ ಶೂರದಳಪತಿಗಳೂ, ಜಾಣ್ಣುಡಿಗಳಿಂದ ರಾಜನ ವಿಚಿತ್ರಚರಿತವನ್ನೂ ಸದ್ಗುಣಾತಿಶಯವನ್ನೂ ಪ್ರಾಸ ಛಂದೋಬದ್ಧವಾಗಿ ಕವಿತೆಯೆಸಗಿ ಕೈಯೆತ್ತಿ ಉದ್ಘೋಷಿಸುತ್ತಿರುವ ಸ್ತುತಿಪಾಠಕರುಗಳೂ, ಸೌಂದರ್ಯಲಾವಣ್ಯವಿಭ್ರಮಾತಿಶಯದಿಂದ ಸಭಿಕರ ಮನಸ್ಸನ್ನೆಲ್ಲ ಸೂರೆಗೊಳ್ಳುತ್ತ ಇಂಪಾದ ಗಾನದಿಂದಲೂ, ಚಪಲತರವಾದ ನರ್ತನದಿಂದಲೂ, ಚತುರತರವಾದ ಅಭಿನಯದಿಂದಲೂ, ರಸಜ್ಞರ ತಲೆದೂಗಿಸುತ್ತ ವಿದ್ಯುಲ್ಲತೆಗಳಂತೆ ಕಾಂತಿಮಯರಾಗಿ ಹೊಳೆಯುತ್ತಿರುವ ವಾರಾಂಗನೆಯರೂ, ನಾನಾ ಬಿರುದಾಂಕಗಳ ಪಾದಕಟಕವನ್ನು ಧರಿಸಿರುವ ಮಾವುತರಾಹುತರುಗಳೂ, ಇವರೇ ಮೊದಲಾದ ಅಂಗವೆಲ್ಲವೂ ಸಭೆಯಲ್ಲಿ ಪರಿಪೂರ್ಣವಾಗಿದ್ದಿತು. ಜೀಯಾ! ಈತನು ಚೋಳರಾಜನು, ಈತನು ಪಾಂಡ್ಯ, ಈ

ತನು ಮಾಗಧನು, ಈತನು ಬರ್ಬರನು, ಇದು ಮಂತ್ರಿಸಮೂಹ, ಇದು ದಳಪತಿಸಮೂಹ, ಚಿತ್ತೈಸು, ಪರಾಕು! ಬಹುಪರಾಕು!! ಎಂದು ಮೊದಲಾಗಿ ಕಂಚುಕಿಗಳು ಮಾಡುತ್ತಿರುವ ಉದ್ಘೋಷವು ತುಂಬಿಕೊಂಡಿದ್ದಿತು. ಆಸಮಯದಲ್ಲಿ ನೆರೆದಿದ್ದ ಜನಸಂದಣಿಯಲ್ಲಿ ಚಾಡಿಕೋರರಲ್ಲಿ ಅಗ್ರಗಣ್ಯನಾದ ಮಂಚಣ್ಣನು ದಾರಿಬಿಡಿಸಿಕೊಂಡು ಒಳನುಗ್ಗಿ ರಾಜಾಧಿರಾಜನಿಗೆ ಕೈಯೆತ್ತಿ ಮುಗಿದು ಸಿಹ್ಮಾಸನದ ಪಕ್ಕಕ್ಕೆ ಬಂದು ತಲೆವಾಗಿ, ಬಾಯ್ಮುಚ್ಚಿ ಅತಿವಿನಯದಿಂದ ನಿಂತು, ದೊರೆಯ ಕಿವಿಯಲ್ಲಿ ಅವನಿಗೆ ನಂಬಿಕೆ ಹುಟ್ಟುವಂತೆ ಚಾಡಿ ಹೇಳಿದನು– ಪ್ರಭುವೇ! ಈ ಕಲ್ಯಾಣಪಟ್ಟಣದೊಳಗೆಲ್ಲ ಯಾವ ಯಾವ ದೇಶದಿಂದಲೋ ಬಂದ ಶಿವಭಕ್ತರೇ ತುಂಬಿಕೊಂಡರು. ನಿನ್ನರಮನೆ ಹೊರ್ತಾಗಿ ಉಳಿದ ಕಡೆಯಲ್ಲೆಲ್ಲ ಅವರ ಹಾವಳಿಯೇ. ಅವರ ಆನಂದ! ಅವರ ಸೊಗಸು! ಅವರ ವೈಭವ! ಅವರ ಸೂಳೆಗಾರಿಕೆ! ಅವರ ಪ್ರತಿಷ್ಠೆಗಳು ಅಪ್ರತಿಹತವಾಗಿರುವುವು. ಹೀಗೆ ಅವರು ಪ್ರಬಲಿಸಿಕೊಂಡಿರುವುದನ್ನು ನೋಡಿದರೆ ಕಾಲಕ್ರಮದಲ್ಲಿ ಚೆನ್ನಬಸವಣ್ಣನಿಗೇ ಪಟ್ಟವನ್ನು ಕಟ್ಟಿ, ಈ ದೇಶವನ್ನೆಲ್ಲ ಅವರಧೀನಮಾಡಿಕೊಂಡು ಕಡೆಗೆ ತಮ್ಮ ಪಾದಕ್ಕೇನುಮಾಡುವರೊ ಎಂಬ ಸಂಶಯವು ನನಗೆ ಬಲವಾಗಿದೆ. ಅವರ ಉಪಬಲಗಳನ್ನು ಹೋನಿಲ್ಲಿಸಿ ಎಂದು ತಡೆಯುವರೊಬ್ಬರನ್ನೂ ನಾನು ಕಾಣೆ! ನಿನ್ನ ಹಸ್ತ್ಯಶ್ವಗಳೆಲ್ಲ ಅವರಧೀನವೇ ಆಗಿವೆ. ಇನ್ನು ನೀವು ಮೈಮರೆದಿರುವುದು ಸರಿಯಲ್ಲ; ನಾನು ಹೇಳುವ ಮಾತಿನಲ್ಲಿ ತಿಲಾಂಶವೂ ಸುಳ್ಳಿಲ್ಲ. ತಮ್ಮ ಪಾದದಾಣೆ ಇದು ನಿಜ. ಹಿಂದೆ ವೃತ್ರಾಸುರನೂ ಹೀಗೆಯೇ ಅತಿಪ್ರಬಲನಾಗಿ ಮೂರು ಲೋಕವನ್ನೂ ವ್ಯಾಪಿಸಿಕೊಳ್ಳುತ್ತಿದ್ದರೂ, ಇಂದ್ರನು ಅಹಂಕಾರದಿಂದ ಮೈಮರೆತು ಕುಳಿತುಕೊಂಡದ್ದರಿಂದ, ಕಡೆಗೆ ಯುದ್ಧದಲ್ಲಿ ಆ ರಾಕ್ಷಸನ ಇದಿರಿಗೆ ನಿಂತುಕೊಳ್ಳಲಾರದೆ ಎಷ್ಟೋ ಪ್ರಯಾಸಪಟ್ಟು ಪಡಲಾರದ ಕಷ್ಟಗಳಿಗೆಲ್ಲ ಒಳಗಾದನು. ದೇವತೆಗಳ ಅವಸ್ಥೆಯೇ ಹಾಗಾಗಿರುವಲ್ಲಿ ಮನುಷ್ಯರಾದವರು ಮೈಮರೆತರೆ ಹೇಳತಕ್ಕದ್ದೇನು? ನಾನು ಹೇಳುವುದೆಲ್ಲವೂ ನಿಜವೋ ಸುಳ್ಳೋ ಎಂಬುದನ್ನು ತಿಳಿವುದಕ್ಕಾಗಿ ಅವರೆಲ್ಲರನೂ ಬರಮಾಡಿ ವಿಚಾರಿಸುವುದೇ ತಮಗೆ ನ್ಯಾಯ.

ನಾವೆಲ್ಲರೂ ತಮ್ಮ ಪಾದಕ್ಕೆ ಸೇರಿದವರಾದ್ದರಿಂದ ತಮ್ಮ ಕಷ್ಟಸುಖಗಳೇ ನಮ್ಮದೆಂದು ತಿಳಿದು, ಇದ್ದ ಸಂಗತಿಯನ್ನು ತಮಗೆ ಬಿನ್ನೈಸಬೇಕಾಯಿತು. ಅಷ್ಟೇ ಹೊರ್ತು ಚೆನ್ನಾಗಿ ಸಂಪತ್ತಿನಿಂದ ಬಾಳತಕ್ಕವರನ್ನು ನೋಡಿ ಸೈರಿಸಲಾರದೆ ಹೀಗೆಲ್ಲಾ ಆಡುತ್ತಾನೆಂದು ತಿಳಿಯಬೇಡಿ. ಇದರಮೇಲೆ ತಮ್ಮ ಚಿತ್ತ! ಎಂದು ಹೇಳಿ, ದೊರೆಯ ಮನಸ್ಸಿನಲ್ಲಿ ಬಲವಾಗಿ ಸಂಶಯವನ್ನುಂಟುಮಾಡಿದನು. ಈ ಮಾತನ್ನೆಲ್ಲ ಕೇಳಿ ಕೇಳಿದಂತೆ ದೊರೆಯ ಮುಖದಲ್ಲಿ ಬೆವರಿಕ್ಕಿತು. ಮೂಗಿನಲ್ಲಿ ಬಿಸುಸುಯ್ಯಾಡಿತು. ಹರ್ಷರಸವು ತಗ್ಗಿತು. ತಲೆ ತೂಗಿತು. ಕತ್ತು ಉರುಗಿತು, ಕೆನ್ನೆಯು ಕಯ್ಯಲ್ಲಿ ಒರಗಿತು, ಆಕಳಿಕೆ ಅಂಕುರಿಸಿತು. ನಾಲಗೆಯು ಒಣಗಿತು. ಈ ಚಿಹ್ನೆಗಳಿಂದ ಅವನಲ್ಲಿ ಉಂಟಾದ ಚಿಂತಾತಿಶಯವು ಹೊರಪಟ್ಟಿತು. ಆಗ ದೊರೆಯು ಇನ್ನು ಸುಮ್ಮನಿರುವುದು ಸರಿಯಲ್ಲವೆಂದು ಯೋಚಿಸಿ, ಥಟ್ಟನೆ ಹೋಗಿ ಬಸವಣ್ಣ ಚೆನ್ನಬಸವಣ್ಣರುಗಳನ್ನು ಕರೆತನ್ನಿರೆಂದು ಹೇಳಿಕಳಿಸಿ ಕರಿಸಿ, ದುಮ್ಮಾನದಿಂದ ಕುಳಿತುಕೊಳ್ಳಿರೆಂದು ನುಡಿದನು. ಇವನ ಮನೋಭಾವವನ್ನರಿತುಕೊಂಡ ಅವರುಗಳು ಉಚಿತಾಸನದಲ್ಲಿ ಕುಳಿತುಕೊಂಡರು. ಬಳಿಕ ದೊರೆಯು ತನ್ನ ಮನಸ್ಸಿನೊಳಗಿದ್ದುದನ್ನು ಥಟ್ಟನೆ ಹೊರಪಡಿಸಲಾರದೆಯೂ, ಒಳಗೇ ಸೈರಿಸಿಕೊಳ್ಳದೆಯೂ ಪೇಚಾಡುತ್ತ ಮೆಲ್ಲಮೆಲ್ಲನೆ ಒಂದೊಂದು ಮಾತನ್ನು ತೆಗೆಯುತ್ತಿದ್ದನು. ಅದನ್ನು ಕಂಡು ಪ್ರೌಢನಾದ ಚೆನ್ನಬಸವೇಶನು ನಿನಯಪ್ರೀತಿಗಳಿಂದ– ರಾಜನೇ! ಈ ದಿವಸ ನಿನ್ನ ಮನೋಭಾವವು ಎಂದಿನಂತೆ ಇಲ್ಲ. ಮನಸ್ಸಿನಲ್ಲಿರುವುದನ್ನು ನನ್ನೊಡನೆ ವಂಚಿಸದೆ ಹೇಳು. ಇದಕ್ಕೆ ಅಂಜಿಸುವುದೇಕೆ? ನಿನ್ನ ಮನಸ್ಸಿಗುಂಟಾಗಿರುವ ಕೊರತೆಯೇನು? ಎಂದು ಕೇಳಿದನು. ಆಗ ದೊರೆಯು–ಎಲೈ ಚೆನ್ನಬಸನೇಶನೆ! ನಿಮ್ಮ ಮಾವನಾಟವನ್ನು ನಾನೇನು ಹೇಳಲಿ! ನಮ್ಮ ಪಟ್ಟಣದಲ್ಲಿ ಅತ್ಯಂತವಾಗಿ ಹಾವಳಿ ಮಾಡುತ್ತಿರುವನು. ಯಾವಯಾವ ದೇಶದ ದುಷ್ಟರನ್ನೋ ಭಕ್ತರೆಂದು ಹೇಳಿ ಇಲ್ಲಿ ಕೂಡಿಹಾಕಿ, ನಾನು ಮುಂದಾಗುವುದನ್ನರಿಯದೆ ಅವನಧೀನಮಾಡಿದ್ದ ನನ್ನ ಬೊಕ್ಕಸಬಂಡಾರದ ಹಸ್ತ್ಯಶ್ವರಥಾದಿಸಂಪತ್ತನ್ನೆಲ್ಲ ಆ ಜಂಗಮರಿಗೆ ಕೊಟ್ಟುಬಿಟ್ಟನು.

ನಮ್ಮ ಪಟ್ಟಣದೊಳಗೆ ಎಲ್ಲಿ ನೋಡಿದರೂ ಜಂಗಮರ ಮಠಗಳು, ಎಲ್ಲಿ ನೋಡಿದರೂ ಜಂಗಮರ ಲೂಟಿ, ಎಲ್ಲಿ ನೋಡಿದರೂ ಜಂಗಮರ ಸೂಳೆಗೇರಿ, ಎಲ್ಲಿ ನೋಡಿದರೂ ಅವರ ಹಾದರ, ಎಲ್ಲಿ ನೋಡಿದರೂ ಅವರ ಕೋಲಾಹಲವೇ: ಹೊರ್ತು ಮತ್ತೊಂದಿಲ್ಲ. ಹೀಗಿರುವಲ್ಲಿ ನಾವೇನನ್ನು ತಾನೇ ಮಾಡುವುದಕ್ಕಾದೀತು ? ಎನ್ನಲು, ಚೆನ್ನಬಸವೇಶನು-- ರಾಜನೇ ! ಕಳ್ಳತನ ಹಾದರ ಎಂಬಿವುಗಳು ನಮ್ಮ ಶಿವಭಕ್ತಸಮಾಜವನ್ನು ಸೇರಲಾರವು. ಈ ಭೂಮಿಯಲ್ಲಿ ಬಸವೇಶನಿರುವವರೆಗೂ ನಿಮ್ಮ ದೇಶದಲ್ಲಿ ಕಲಿದೋಷವು ಸಂಘಟಿಸಲಾರದು. ಹೆಚ್ಚು ಮಾತೇಕೆ ? ಚಾಡಿಕೋರರ ಮಾತನ್ನು ಕೇಳಿದುದಕ್ಕೆ ಹಿಂದೆಯೇ ನಿನಗೆ ತಕ್ಕ ಫಲವಾಗಿರುವುದು. ಅದನ್ನು ಕಂಡಿದ್ದರೂ ನಿನಗೆ ಇನ್ನೂ ತಿಳಿವುಂಟಾಗಲಿಲ್ಲ. ಮಾಡುವುದೇನು? ಈ ತಾಮಸ ಗುಣವು ಕ್ಷತ್ರಿಯರಿಗೆ ಸಹಜವಾದದ್ದು

### ರಾಜನೀತಿ ಬೋಧೆ.

ಸೂರ್ಯಮಂಡಲವನ್ನು ಮೇಘವೂ, ಕನ್ನಡಿಯನ್ನು ಕೊಳೆಯೂ, ನಿರ್ಮಲ ಜಲವನ್ನು ಧೂಳಿಯೂ, ಪರಮಾತ್ಮನನ್ನು ಜೀವಭಾವವೂ ಆವರಿಸಿಕೊಂಡಿರುವಂತೆ ಅರಸುಗಳನ್ನು ಕ್ಷಾತ್ರತಾಮಸವು ಸದಾ ಆವರಿಸಿಕೊಂಡಿರುವುದು. ಅದನ್ನು ಪರಿಹರಿಸುವ ಸಾಮರ್ಥ್ಯವುಳ್ಳದ್ದು ರಾಜನೀತಿ; ಅದನ್ನು ನಿನಗೆ ಬೋಧಿಸುತ್ತೇನೆ, ಕೇಳು.... ಅರಸುಗಳು ಹಾವಿಗೆ ಸರಿಹೋಲತಕ್ಕವರು. ಹೇಗೆಂದರೆ— ಇವರೀರ್ವರೂ ವಕ್ರಗಾಮಿಗಳು. ಎರಡು ನಾಲಿಗೆಯವರು; ಹಣವನ್ನೇ ಕಾದುಕೊಂಡಿರುವ ದುರಾಸೆಯವರು; ಪರರ ಪ್ರಾಣವನ್ನು ನೀಗಿಸುವ ಕೋಪವುಳ್ಳವರು. ಇಬ್ಬರಿಗೂ ಕಿವಿಯೇ ಕಣ್ಣು, ಕಣ್ಣೇ ಕಿವಿಯೂ ಆಗಿರುವುದು. ರಾಜನು ಲೋಕಮಾನ್ಯನಾಗಬೇಕಾದರೆ ಮೇಲ್ಕಂಡ ದುರ್ಗುಣಗಳಿಗೆ ದೂರನಾಗಿರಬೇಕು. ಚಾಡಿಕೋರರ ಮಾತೇ ನಮಗೆ ಕರ್ಣಾಭರಣ, ಅವರು ತೋರಿಸಿದ ಮಾರ್ಗವೇ ನಮಗೆ ಮನೋಹರ, ಅವರೇ ನಮಗೆ ಪರಮಾಪ್ತರು, ಎಂಬುದಾಗಿ ಯಾವ ಅರಸುಗಳು ನಂಬಿಕೊಂಡಿರುವರೋ ಅವರ ರಾಜ್ಯಕ್ಕೆ ಕೇಡು ತಟ್ಟುವುದೇ ನಿಶ್ಚಯ. ಅವರ ಸಂಪತ್ತೆಲ್ಲ ಬಯಲಾಗುವುದೇ ಸಿದ್ಧ. ಅದುಕಾರಣ ರಾಜರು ಚಾಡಿಕೋರರ ಮಾತನ್ನು ಕೇಳಬಾರ

ದು. ಹಿಮದಿಂದ ತಾವರೆಯೂ, ನೀರಿನಿಂದ ಜೇನೂ, ದುರಾಸೆಯಿಂದ ಸದ್ಗುಣವೂ. ಹರಟೆಯಿಂದ ಗೌರವವೂ, ಅನಾಚಾರದಿಂದ ಕುಲದ ಪಾವಿತ್ರ್ಯವೂ, ಹುಳಿಯಿಂದ ಹಾಲೂ, ಕೋಪದಿಂದ ತಪಸ್ಸಿನ ಫಲವೂ, ಬಿರುಗಾಳಿಯಿಂದ ಮೋಡದ ಒಡ್ಡೂ ಕೆಟ್ಟುಹೋಗುವಹಾಗೆ ರಾಜನ ರಾಜ್ಯವು ಚಾಡಿಕೋರರಿಂದ ಹಾಳಾಗುವುದು. ರಾಜರು ನೀಚರನ್ನೂ ಮಾಯಾವಿಗಳನ್ನೂ, ದುರ್ನೀತರನ್ನೂ, ಚಪಲರನ್ನೂ, ದುರ್ಜನರನ್ನೂ, ಡಾಂಭಿಕರನ್ನೂ, ನಿಷ್ಠುರವಾಕ್ಯರನ್ನೂ, ದುರ್ಬೋಧಕರನ್ನೂ ದುರಾಚಾರಿಗಳನ್ನೂ, ಕುಲಭ್ರಷ್ಟರನ್ನೂ, ದುರಾಲೋಚಕರನ್ನೂ ವೇದಮಾರ್ಗಪರಿಭ್ರಷ್ಟರನ್ನೂ ಕೂಡ ಹತ್ತಿರಕ್ಕೆ ಕರೆಯದೆ ದೂರದಲ್ಲಿರಿಸಬೇಕು. ಪರರಿಗೆ ತಾನು ಮಾಡಿದ ಉಪಕಾರವನ್ನೂ, ಪರರಿಂದ ತನಗಾದ ಅಪಕಾರವನ್ನೂ ಇತರರೊಡನೆ ಆಡಿಕೊಳ್ಳುವುದು ಉತ್ತಮರ ಕೆಲಸವಲ್ಲ. ಪರರಿಗೆ ತಾನು ಮಾಡಿದ ಅಪಕಾರವನ್ನೂ ಪರರಿಂದ ತನಗಾದ ಉಪಕಾರವನ್ನೂ ಇತರರೊಡನೆ ಆಡಿ ತೋರಿಸುವುದು ಉತ್ತಮರ ಕೆಲಸ. ರಾಜನು ತಾನು ಸದ್ಧರ್ಮವನ್ನು ಬಿಡದೆ ಆಚರಿಸುತ್ತ, ತನ್ನ ರಾಜ್ಯದಲ್ಲಿ ಧರ್ಮಿಷ್ಠರಾರಾದರೂ ಇದ್ದರೆ ಅವರನ್ನು ಕಾಪಾಡುತ್ತ, ಧರ್ಮಕ್ಕೆ ಹಾನಿಬಂದರೆ ಥಟ್ಟನೆ ಅದನ್ನು ಪರಿಹರಿಸುತ್ತ, ಧರ್ಮಹೀನರನ್ನು ಔದಾಸೀನ್ಯದಿಂದ ಕಾಣುತ್ತ, ವರ್ಣಾಶ್ರಮಧರ್ಮಗಳನ್ನು ತಪ್ಪದಂತೆ ನಡಿಸುತ್ತ ಬರುವುದು ಅತ್ಯುತ್ತಮವಾದ ರಾಜಧರ್ಮದ ರಹಸ್ಯವು. ಹಣವನ್ನು ಹೆಚ್ಚಾಗಿ ಗಳಿಸಬೇಕೆಂಬ ಆಸೆಯಿಂದ ದುರ್ಜನರ ಚಾಡಿಮಾತನ್ನು ಕೇಳಿ, ಸಜ್ಜನರನ್ನು ದೂರೀಕರಿಸಿ, ಪಾಪವನ್ನು ಗಳಿಸುವಂತೆ ಕೂಡಿಸಿಟ್ಟ ಹಣವು ಸದ್ಯಃ ಹೆಚ್ಚಿದಂತೆ ತೋರುತ್ತಿದ್ದರೂ ರಾಸಿಯಾಗಿ ಸೇರಿದ ಸೌದೆಯು ಕಾಲಾನುಕಾಲದಲ್ಲಿ ಬೆಂಕಿಯ ಪಾಲಾಗುವಂತೆ ಶತ್ರುಗಳಿಂದ ಅಪಹೃತವಾಗುವುದು ನಿಜ. ರಾಜನು ದ್ರವ್ಯಾಶೆಯಿಂದ ಪ್ರಜೆಗಳನ್ನು ನೋಯಿಸಬಾರದು. ಐಶ್ವರ್ಯವಂತರನ್ನು ಕಂಡು ಕರುಬಬಾರದು. ಪ್ರಜೆಗಳಿಗೆ ಆದ ಲಾಭದಲ್ಲಿ ೫ ಭಾಗವನ್ನು ಅವರಿಗೆ ಬಿಟ್ಟು, ೧-ಭಾಗವನ್ನು ಮಾತ್ರ ತಾನು ತೆಗೆದುಕೊಳ್ಳಬೇಕು. ಹೀಗೆ ಧನವನ್ನಾರ್ಜಿಸಿದರೆ ಅದು ನ್ಯಾಯಾರ್ಜಿತವಾಗಿ ಅಭಿವೃದ್ಧವಾ

ಗುವುದು. ಅದನ್ನು ಸತ್ಕಾರ್ಯದಲ್ಲಿ ವೆಚ್ಚ ಮಾಡಿದರೆ ಆ ರಾಜನು ಪು ಣ್ಯನಿಧಿಯಾಗಿ ಪರಲೋಕದಲ್ಲಿ ಸುಖಪಡುವನು. ದೊರೆತನನೆಂಬ ಶರೀ ರಕ್ಕೆ ರಾಜಾಜ್ಞೆಯೆಂಬುದೇ ಪ್ರಾಣ. ಅದಕ್ಕೆ ಅಪಜಯವುಂಟಾದರೆ ಆ ರಾಜನು ಬದುಕಿದ್ದರೂ ಸತ್ತಂತೆಯೇ. ಇದಲ್ಲದೆ ನಿಜವಾದ ಶೌ ರ್ಯಧೈರ್ಯಗಳಲ್ಲದೆ ಯುದ್ಧಕ್ಕೆ ಹೋಗಿ ಅರಿಗಳನ್ನಿರಿಯಲಾರದೆ ಅಂಜಿ ಹಿಂದಿರುಗಿ ಬರುವ ರಾಜನಂತೂ ರಾಣಿವಾಸದವರ ಕೈತಾಳಕ್ಕೆ ನರ್ತಕ ನಾಗುವನು. ಮರೆಹೊಕ್ಕವರನ್ನು ರಕ್ಷಿಸುವ ಪ್ರತಿಭಟಿಸಿದವರನ್ನು ಸಂಹರಿಸುವ, ಬೇಡುವವರಿಗೆ ಇಷ್ಟಾರ್ಥವನ್ನು ಕೊಡುವ ನಡೆಯೇ ಕ್ಷ ತ್ರಿಯನಿಗೆ ಸದ್ಧರ್ಮವಾದದ್ದು. ಅದನ್ನು ಬಿಟ್ಟು ತನ್ನ ಮನೆಯೊಳ ಗೆ ತನ್ನವರ ಮುಂದೆ ಆಟೋಪವನ್ನು ಮಾಡಿಕೊಳ್ಳುತ್ತಿದ್ದು, ಹುಯ್ಲಿ ದಮ್ಮಟೆಯ ಶಬ್ದವನ್ನು ಕೇಳಿದ ಮಾತ್ರದಿಂದಲೇ ಬೆದರಿ ಬಿದ್ದೆದ್ದು ಓ ಡಿ ಗಟ್ಟಬೆಟ್ಟಗಳನ್ನು ಸೇರಿ ಬಾಯ್ಬಿಡುವವನು ರಾಜನಾದಾ ನೆ? ತಾನು ಎಂತಹ ಸನ್ಮಾರ್ಗಗಾಮಿಯಾಗಿದ್ದರೂ, ಸತ್ಕೀರ್ತಿಸಂಪ ನ್ನನಾಗಿದ್ದರೂ, ಸದ್ಧರ್ಮದಿಂದಾರ್ಜಿಸಿದ ಸಂಪತ್ತನ್ನೇ ಪರಿಗ್ರಹಿಸುವ ವನಾಗಿದ್ದರೂ, ಎಷ್ಟೇ ಪ್ರಾಜ್ಞನಾಗಿದ್ದರೂ ಅತ್ಯಂತ ದೌರ್ಬಲವುಳ್ಳ ವನಾಗಿದ್ದರೂ ಶತ್ರುಜನಗಳ ವಿಷಯದಲ್ಲಿ ರಾಜನು ಉದಾಸೀನನಾಗಿ ಕ ರುಣೆಯನ್ನೆಂದಿಗೂ ತೋರಿಸಬಾರದು. ವೇದಗಳೆಲ್ಲೆಲ್ಲ ಸಾಮವೇದವೇ ಉತ್ತಮವೆನಿಸಿಕೊಂಡಿರುವಂತೆ ಉಪಾಯಗಳೊಳಗೆಲ್ಲ ಸಾಮೋಪಾಯ ವೇ ಪ್ರಶಸ್ತವಾದದ್ದು. ರಾಜರಿಗೆ ಅನುಸರಣೀಯವಾದದ್ದು. ಮಿಕ್ಕ ದಾನಭೇದೋಪಾಯಗಳು ಸಾಮಾನ್ಯವಾದುವುಗಳು. ದಂಡೋಪಾಯ ವೆಂಬುದಂತೂ ಅನಿಷ್ಟತಮವಾದದ್ದು. ಈ ತತ್ತ್ವವನ್ನು ತಿಳಿಯದ ರಾಜರು ಉತ್ತಮರೆನಿಸಿಕೊಳ್ಳಲಾರರು. ಶತ್ರುಸಂಧಾನಮಾಡುವಾಗಳೂ ಆನೆ ಕುದುರೆಗಳನ್ನೇರಿ ಸವಾರಿಮಾಡುವಾಗಳೂ, ಯುದ್ಧಕಾಲದಲ್ಲೂ, ಸ್ತ್ರೀಯರೊಡನೆ ಕೂಡುವಾಗಳೂ, ಸ್ನಾನ ಶಯನಗಳಲ್ಲೂ, ಭೋ ಜನ ಕಾಲದಲ್ಲೂ, ವಿವಾಹಾದಿ ಉತ್ಸವಸಮಯಗಳಲ್ಲೂ ರಾಜರಿಗೆ ಎ ಚ್ಚರಿಕೆಯು ಹೆಚ್ಚಾಗಿರಬೇಕು. ತನುಧನಮನೋರಾಜ್ಯಾದಿಸಪ್ತವ್ಯ ಸನವನ್ನು ತೊರೆದು, ಸುಳ್ಳು, ಹಾದರ, ಜಾತಿಸಾಂಕರ್ಯ, ಕಳವು,

ಮೋಸ, ಪರಹಿಂಸೆಗಳನ್ನು ತನ್ನ ರಾಜ್ಯದಲ್ಲಿ ಕಾಲೂರದಂತೆ ಮಾಡಿ, ಪರಿಪಾಲನೆ ಮಾಡುವ ರಾಜನಿಗೆ ಇಹಪರಗಳೆರಡರಲ್ಲೂ ಕೊರತೆಯಿರುವುದಿಲ್ಲ. ಹಿರಿಯರಲ್ಲಿ ಗೌರವವನ್ನೂ, ಗುರುದೈವತೆಗಳಲ್ಲಿ ಭಯವನ್ನೂ, ಪುಣ್ಯಕ್ಷೇತ್ರತೀರ್ಥಗಳಲ್ಲಿ ಭಕ್ತಿಯನ್ನೂ, ಶರಣಾಗತರಲ್ಲಿ ದೋಷವನ್ನೆಣಿಸದೆ ರಕ್ಷಿಸುವುದನ್ನೂ, ಸೇವಕರಲ್ಲಿ ದಯೆಯನ್ನೂ, ಸಜ್ಜನರಲ್ಲಿ ಆದರಣೆಯನ್ನೂ, ಸ್ನೇಹಿತರಲ್ಲಿ ವಿಶ್ವಾಸವನ್ನೂ ವಹಿಸಿರುವ ರಾಜನು ನೀತಿವಿಶಾರದನೆನಿಸಿಕೊಳ್ಳುವನು. ಐಶ್ವರ್ಯಮದದಿಂದ ಮತ್ತನಾಗಿ ಪೂಜ್ಯರನ್ನು ಧಿಕ್ಕರಿಸಿ, ಸೇವಕರಿಗೆ ಕಾಲಕಾಲಕ್ಕೆ ಸಂಬಳ ಕೊಡದೆ, ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ರಾಷ್ಟ್ರ, ದುರ್ಗ, ಬಲವೆಂಬ ಸಪ್ತಾಂಗದ ಸನ್ನಾಹದಲ್ಲಿ ಎಚ್ಚರಿಕೆಯಿಲ್ಲದೆ, ಆಪ್ತಬಂಧುಗಳನ್ನು ಲೆಕ್ಕಕ್ಕೆ ತರದೆ, ಧರ್ಮಪತ್ನಿಯನ್ನು ಹಾಳುಕೆಡಹಿ, ಸೂಳೆಯರೊಡನೆ ಉಪಭೋಗಿಸುತ್ತ ಇರುವ ರಾಜನನ್ನು ಜಯಲಕ್ಷ್ಮಿಯು ತೊಲಗಿಹೋಗದೆ ಇರುವಳೆ? ಸಂಪದಾಪತ್ತುಗಳಲ್ಲೂ ಒಳ್ಳೇ ನಡತೆ, ಆಡಿ ತಪ್ಪದ ಮಾತು, ಸಮಯಸಂಧಿಗಳನ್ನರಿತು ತೋರಿಸಬೇಕಾದ ಶೌರ್ಯ, ಸೇವಕರ ಪರಿಪಾಲನ, ಕಾಲೋಚಿತವಾದ ಭೋಗ, ಅಪರಾಧಕ್ಕೆ ತಕ್ಕಷ್ಟು ಕೋಪ, ಪಿಸುಣರ ಮಾತನ್ನು ಕೇಳದಿರುವುದು, ಒಂದುವೇಳೆ ಕೇಳಿದರೂ ಬಲ್ಲವರ ಮುಖದಿಂದ ನಿಜಸ್ಥಿತಿಯನ್ನು ಕೇಳಿ ನಿರ್ಧರಿಸಿಕೊಳ್ಳುವುದು, ಇವಿಷ್ಟನ್ನೂ ದೊರೆಯು ತಪ್ಪದೆ ಅನುಸರಿಸಬೇಕು. ಮಳೆಯಿಂದ ಪೈರುಗಳೂ, ಹೂವಿನ ಮಕರಂದದಿಂದ ತುಂಬಿಗಳೂ, ಜ್ಞಾನದಿಂದ ತಪಸ್ಸೂ, ಚಂದ್ರಕಿರಣದಿಂದ ಚಕೋರಪಕ್ಷಿಗಳೂ, ಸದ್ಧರ್ಮದಿಂದ ರಾಜ್ಯವೂ, ಸ್ನೇಹಿತರಿಂದ ಪ್ರೀತಿಯೂ, ಸತ್ಪುತ್ರರಿಂದ ಇಹಪರಸೌಖ್ಯವೂ, ವೃದ್ಧಿಯಾಗುವಂತೆ ಮಂತ್ರಿಶ್ರೇಷ್ಠನಿಂದ ರಾಜನ ಐಶ್ವರ್ಯವು ಶುಕ್ಲಪಕ್ಷದ ಚಂದ್ರನಂತೆ ಹೆಚ್ಚುವುದು. ನಿನ್ನಲ್ಲಿರುವ ಬಸವಾಮಾತ್ಯನು ಸಾಮಾನ್ಯನಲ್ಲ. ನಿನ್ನ ಸಕಲ ಸಂಪತ್ತಿಗೂ ಅವನೇ ಕಾರಣನು. ಹೆರರ ಸಂಪತ್ತನ್ನು ನೋಡಿ ಸೈರಿಸಲಾರದವರು ಚಾಡಿಯನ್ನು ಹೇಳಿದರೆ ಅದನ್ನು ನಿಜವೆಂದು ನಂಬತಕ್ಕದ್ದು ನಿನಗೆ ನೀತಿಯಲ್ಲ, ಎಂದು ಚೆನ್ನಬಸವೇಶನು ಬೋಧಿಸಲು, ದೊರೆಯಲ್ಲಿ ಸುಜ್ಞಾನವೆಂಬ

ಸೂರ್ಯನು ತಲೆದೋರಿದನು. ಕೂಡಲೇ ಅವನ ಮನಸ್ಸಿನಲ್ಲಿದ್ದ ಸಂಶಯವೆಂಬ ಅಂಧಕಾರವು ತೊಲಗಿ, ವಿವೇಕವೆಂಬ ಬಿಸಿಲು ಹರಡಿಕೊಂಡಿತು. ಮುಖಕಮಲವು ವಿಕಸಿತವಾಯಿತು. ಬಸವರಾಜನ ಮನಸ್ಸು ದೊರೆಯ ಮನಸ್ಸು ಎಂಬ ಚಕ್ರವಾಕಂಗಳೆರಡೂ ಕೂಡಿದುವು. ಆಗ ದೊರೆಯು ಸಂತೋಷದಿಂದ—ಸ್ವಾಮಿ! ನೀವಲ್ಲದೆ ನಮಗಿನ್ನಾರು ಹಿತರು? ನಾನಾಳುವ ಭೂಮಿಯೆಲ್ಲವೂ ಬಸವೇಶನಿಗೆ ಆಧೀನವಾದದ್ದು. ನೀವುಗಳೇ ಪವಿತ್ರಚರಿತ್ರರು; ಎಂದು ಇಬ್ಬರನ್ನೂ ಕೊಂಡಾಡಿ, ಉಡುಗೊರೆಗಳನ್ನು ತರಿಸಿಕೊಟ್ಟು, ಅವರ ಮನೆಗೆ ಮರ್ಯಾದೆಯಿಂದ ಕಳುಹಿಸಿ ತನ್ನ ಅಂತಃಪುರಕ್ಕೆ ದೊರೆಯು ತೆರಳಿದನು ಎಂಬಲ್ಲಿಗೆ ೭ ನೇ ಅಧ್ಯಾಯವು ಸಂಪೂರ್ಣವು.

---

## ೮ ನೇ ಅಧ್ಯಾಯವು.

### ಚಂದ್ರಿಕಾವಿಹಾರವು.

ಅಷ್ಟರಲ್ಲಿ ಸಂಧ್ಯಾಕಾಲವಾಯಿತು. ಪಶ್ಚಿಮಗಿರಿಯ ಶಿಖರವನ್ನೇರಿ ಕೆಂಪಾಗಿ ರಂಜಿಸುತ್ತಿರುವ ಸೂರ್ಯನು ಪಶ್ಚಿಮದಿಗಂಗನೆಯು ಹಿಡಿದುಕೊಂಡಿರುವ ರನ್ನಗನ್ನಡಿಯೋ, ವರುಣದಿಗಂಗನೆಯ ಮಸ್ತಕದ ಮೇಲಿರುವ ಮಾಣಿಕ್ಯವೋ, ಬಡಬಾಗ್ನಿಯಿಂದ ಸಿಡಿದ ದೊಡ್ಡಕಿಡಿಯೋ, ಸಮುದ್ರರಾಜನಿಗೆ ಅವನ ಪತ್ನಿಯು ಆರತಿಯನ್ನೆತ್ತಿ ಚೆಲ್ಲಿ ಕೈಯಲ್ಲಿ ಹಿಡಿದುಕೊಂಡಿರುವ ಚಿನ್ನದ ಹರಿವಾಣವೋ ಎಂಬಂತೆ ತೋರುತ್ತಿದ್ದನು. ಈ ಸೂರ್ಯನು ತನ್ನ ಕಿರಣವೆಂಬ ಆಯುಧದಿಂದ ಬ್ರಾಹ್ಮಣನಿಗೆ (ಚಕೋರಪಕ್ಷಿಗಳಿಗೆ) ಹಾನಿಯನ್ನುಂಟುಮಾಡಿ, ಕುಲಗೋತ್ರಗಳಿಗೆ (ಕುಲಾಚಲಗಳಿಗೆ) ಬಾಧೆಯನ್ನುಂಟುಮಾಡಿ, ಕುದುರೆಗಳ ಹುಟ್ಟನ್ನು (ಸಮುದ್ರದ ಉಕ್ಕುವಿಕೆಯನ್ನು) ಹಾಳ್ಮಾಡಿ, ಭೂಮಂಡಲವನ್ನು (ನೈದಿಲೆಯನ್ನು) ಒಣಗಿಸಿ, ಜಗತ್ತೆಲ್ಲ ಕಾಣುವಂತೆ ಹೆಂಡಕ್ಕೆ ಆಸೆಪಡುವನು. (ವರುಣದಿಗಂಗನೆಯನ್ನು ಪ್ರೀತಿಸುವನು.) ಇಂತಹ ಪುಣ್ಯಪುರುಷನ ತೇಜಸ್ಸುಳಿಯುವುದುಂಟೆ? ಅದುಕಾರಣ ನಿಸ್ತೇಜನಾಗಿ, ದಿಗಂಬರನಾಗಿ

ಅಸ್ತಪರ್ವತವನ್ನು ಹೊಕ್ಕಿಕೊಂಡನು ಎಂಬಂತೆ ತೋರುತ್ತಿದ್ದನು. ಪದ್ಮಿನಿಯು ಹೆಂಡಗುಡುಕರೊಡನೆ ಮಾತನಾಡತಕ್ಕವಳು (ತುಂಬಿಗಳ ಸುಗವುಳ್ಳವಳು) ರಜಸ್ವಲೆ (ಹೂವನ್ನುಬಿಟ್ಟರುವಳು) ನಾಚಿಕೆಗೆಟ್ಟವಳು (ಮಕರಂದದಿಂದ ಕೂಡಿರುವಳು) ಮುಖವನ್ನು ಮೇಲಕ್ಕೇ ಎತ್ತಿಕೊಂಡಿರುವವಳು, ಹಗಲೇ ಬಯಲಲ್ಲಿ ಪುರುಷನ ಸಂಗವನ್ನು ಮಾಡತಕ್ಕವಳು (ವಿಕಸಿಸತಕ್ಕವಳು) ದೋಷವನ್ನು (ರಾತ್ರಿಯನ್ನು) ನೋಡದೆ ಇರುವ ಇಂಥವಳ ಸಂಗವು ತನಗೆಸಾಕೆಂದು ತ್ಯಜಿಸಿಬಿಟ್ಟು ಸೂರ್ಯನು ಸಂಧ್ಯಾದೇವಿಯನ್ನು ಮದುವೆಯಾಗಿ ಆಡಿದ ಓಕುಳಿಯಂತೆ ಸಂಜೆಗೆಂಪು ತೋರಿತು. ಆ ಹೊಸ ಹೆಂಡಿತಿಯೊಡನೆ ಕೂಡುವುದಕ್ಕಾಗಿ ರಹಸ್ಯಸ್ಥಲಕ್ಕೆ ಹೋಗುವಂತೆ ಸೂರ್ಯನು ಸಮುದ್ರವೆಂಬಗೃಹವನ್ನುನುಗ್ಗಿದಂತೆ ತೋರಿದನು. ಭೂಮಂಡಲವೂ ಚಕ್ರವಾಕಪಕ್ಷಿಗಳೂ ವ್ಯಥೆಗೊಂಡುವು. ತಾವರೆಗಳು ಬಾಡಿದುವು. ನೈದಿಲುಗಳು ಅರಲಿದುವು. ಕತ್ತಲೆಯುಭೂಲೋಕವನ್ನೆಲ್ಲ ಮುಸುಕಿಕೊಂಡಿತು. ಹಾದರಗಿತ್ತಿಯರು ನಲಿದಾಡಿದರು. ಆಕಾಶದಲ್ಲಿ ಅಲ್ಲಲ್ಲಿ ಒಂದೊಂದು ನಕ್ಷತ್ರಗಳು ಕಾಣಿಸಿಕೊಂಡುವು. ಕಾಮುಕರು ಹರ್ಷಗೊಂಡರು. ಮನ್ಮಥನು ಜಯಯಾತ್ರೆಯನ್ನು ಹೊರಟನು. ಗಳಿಗೆಗಳಿಗೆಗೆ ಹೆಚ್ಚುತ್ತಿರುವ ಕತ್ತಲೆಯನ್ನು ನೋಡಿ ಸ್ವೈರಿಣಿಯರು ಸಂತೋಷಗೊಂಡರು. ಅವರಲ್ಲೊಬ್ಬಳು “ ಪಶ್ಚಿಮಸಮುದ್ರದಲ್ಲಿ ಮುಳುಗಿದ ಸೂರ್ಯನನ್ನು ಅಲ್ಲೇ ಮೊಸಳೆಯು ನುಂಗಿಬಿಡಲಿ, ಮುಂದೆ ಹುಟ್ಟುವ ಚಂದ್ರನನ್ನು ರಾಹುವೇ ನುಂಗಿಬಿಡಲಿ, ತನ್ನ ಗಂಡನಿಗೆ ವಿಪತ್ತು ಒದಗಲಿ, ಮಿಂಡನಿಗೆ ಜಯವಾಗಲಿ, ಸಂಗಡಿತಿಯರಿಗೆ ಉಲ್ಲಾಸವಾಗಲಿ” ಎಂದು ಮಾರಿಗೆ ಹರಕೆಯನ್ನು ಕಟ್ಟುತ್ತಿದ್ದಳು. ಜಾರೆಯರು ಬಿಳಿಯ ಸೀರೆ ಬಿಳಿಯಬಣ್ಣದ ಆಭರಣಗಳನ್ನೆಲ್ಲ ಬಿಟ್ಟು, ಕರಿಯಸೀರೆ ಕುಪ್ಪಸ ಇಂದ್ರನೀಲರತ್ನದಾಭರಣ, ಕನ್ನೈದಿಲು, ಕಾಡಿಗೆ, ಕಸ್ತೂರಿ ಮೊದಲಾದುವುಗಳನ್ನು ಧರಿಸಿ, ಕಗ್ಗತ್ತಲೆಯಲ್ಲಿ ಪಾಪವೇ ಸ್ತ್ರೀಯಾಕೃತಿಯಾಗಿರುವಂತೆ ಸಂಕೇತಗೃಹಗಳಿಗೆ ತಿರುಗಾಡುತ್ತಿದ್ದರು. ಅಷ್ಟರಲ್ಲಿ ಚಂದ್ರೋದಯವಾಯಿತು. ಬ್ರಹ್ಮನು ಪೂರ್ವ ಮತ್ತು ಪಶ್ಚಿಮ ಗಿರಿಗಳನ್ನು ತೂಗಿನೋಡಬೇಕೆಂದು ಪ್ರಯತ್ನಿಸಿ ಪಶ್ಚಿಮಗಿರಿಯ ತೂಕವು ಸ್ವ

ಲ್ಪ ಕತಿವೆಯಾಗಲು, ಅವರ ಮೇಲೆ ಸಮುತೂಕಕ್ಕಾಗಿ ಮಡಗಿದ ಗುಲ ಗಂಜಿಯೋ ಎಂಬಂತೆಯೂ, ಮೋಹಪಾಶಿ ತರುಗಳನ್ನು ಸುಡುವುದಕ್ಕಾಗಿ ಮನ್ಮಥನೆಂಬ ರುದ್ರನು ತೆರೆದ ಅಗ್ನಿನೇತ್ರವೋ ಎಂಬಂತೆಯೂ ಪೂರ್ವ ದಿಗ್ವಧುವಿನ ಕೆಂಪಾದ ಚಂದ್ರಮಂಡಲವು ಉದಿಸಿತು. ಕಾಲನೆಂಬ ಯಕ್ಷಿಣಿಗಾರನು ಇಂದ್ರನ ಓಲಗಸಾಲೆಯಲ್ಲಿ ರತ್ನದ ಚೆಂಡನ್ನಿಟ್ಟ ಕ್ರಮವಾಗಿ ಅದನ್ನು ಚಿನ್ನದ ಚೆಂಡನ್ನಾಗಿಯೂ ಮುತ್ತಿನಚೆಂಡನ್ನಾಗಿಯೂ ಮಾಡಿದಂತೆ ಚಂದ್ರಮಂಡಲವು ಮೊದಲು ಕೆಂಪಾಗಿದ್ದು ಬಳಿಕ ಹೊಂಬಣ್ಣಕ್ಕೂ ಬಿಳೀಬಣ್ಣಕ್ಕೂ ತಿರುಗಿತು. ಮಗನಾದ ಚಂದ್ರನು ತನ್ನ ಅಮೃತವನ್ನು ದೇವತೆಗಳಗಲ್ಲದೆ ಮತ್ತಾರಿಗೂ ಕೊಡದೆ ಹೋದಕಾರಣ ಅವನಿಗೆ ಇತರರ ದೃಷ್ಟಿಕಾಗಿ ಕ್ಷೀಣತೆಯೂ, ಕಳಂಕವೂ ಉಂಟಾದುವೆಂಬದಾಗಿ ಯೋಚಿಸಿ, ಅದನ್ನು ಪರಿಹರಿಸುವುದಕ್ಕಾಗಿ ಸಮುದ್ರನು ಚಂದ್ರನಮೇಲೆ ಅಮೃತದಮಳೆಯನ್ನು ಕರೆದನೋ ಎಂಬಂತೆಯೂ, ಕ್ಷೀರಸಮುದ್ರನೇ ಉಕ್ಕಿಬಂದಂತೆಯೂ ಬೆಳ್ದಿಂಗಳು ಲೋಕವನ್ನೆಲ್ಲ ಆವರಿಸಿತು. ಚಂದ್ರಪ್ರಭೆಯಿಂದ ಗಿರಿ ತರು ಗುಲ್ಮ ನದೀನದಾದಿಗಳೆಲ್ಲವೂ ಬಿಳಿಯ ಬಣ್ಣವನ್ನು ಹಚ್ಚಿ ರಂಜಿಸಿದುವು. ಈ ಬ್ರಹ್ಮಾಂಡವೆಲ್ಲವೂ ಸ್ಫಟಿಕದಿಂದಮಾಡಿದ ಭರಣಿಯಂತೆಯೂ, ಚಂದ್ರಮಂಡಲವು ಅದರ ಬಾಯ್ಗೆ ಮುಚ್ಚಿದ ಕರ್ಪೂರದ ಹಲ್ಲೆಯಂತೆಯೂ ತೋರಿದುವು. ಚಂದ್ರನೆಂಬ ಗುಂಡಾದ ಬಿಳೀಕಾಗದದ ಮೇಲೆ ಮನ್ಮಥನು ಕಸ್ತೂರಿಯಿಂದ ಬರೆದ ಮೋಹಶಾಸ್ತ್ರಾಂತರ್ಗತವಾದ ಓಂಕಾರವೋ? ಕತ್ತಲೆಯು ಹೆದರಿ ಚಂದ್ರನ ಗರ್ಭದಲ್ಲಿ ಹುಟ್ಟಿ ಬರಬೇಕೆಂದು ಯೋಚಿಸಿ ಓಡಿಬಂದು ಚಂದ್ರನ ದೇಹವನ್ನು ಹೊಕ್ಕಿತೋ? ಇಂದ್ರನು ಚಂದ್ರನೆಂಬ ಅಮೃತಕುಂಭವನ್ನು ಆಸೆಯಿಂದ ಇಟ್ಟುಕೊಂಡು ಅದಕ್ಕೆ ಅರಗಿನ ಮುದ್ರೆಯನ್ನೊತ್ತಿರುವನೋ? ಎಂಬಂತೆ ಚಂದ್ರಮಂಡಲದ ಮಧ್ಯದಲ್ಲಿರುವ ಕಳಂಕವು ತೋರುತ್ತಿದ್ದಿತು.

ಹೀಗೆ ಚಂದ್ರೋದಯವು ಲೋಕಾಹ್ಲಾದಕವಾಗಿ ತೋರುತ್ತಿರಲು, ಭೂಕಾಂತನಾದ ಬಿಜ್ಜಳನು ಆ ಬೆಳ್ದಿಂಗಳನಲ್ಲಿ ಪಟ್ಟಣದೊಳಗೆ ವಿಹರಿಸಿ ಬರಬೇಕೆಂದು ಯೋಚಿಸಿ ಭೋಜನಾನಂತರ ಅರಮನೆಯಿಂದ

ಹೊರಟನು. ಒಡನೆ ವಿಟ ವಿದೂಷಕ ನಾಗರಿಕ ಪೀಠಮರ್ದನರೆಂಬ ಚತುರ್ವಿಧದ ನರ್ಮ ಸಚಿವರುಗಳು ಹೊರಟರು. ಸೂಳೆಗೇರಿಗೆ ನುಗ್ಗುವಾಗ ಮುಂಗಡೆಯಲ್ಲೇ ಹೂವಿನ ಸಂತೆಯು ಕಾಣಿಸಿತು. ಅಲ್ಲಿ ಹೂವಾಡಗಿತ್ತಿಯರು ಮೊಲ್ಲೆಮಲ್ಲಿಗೆ ಜಾಜಿ ಸಂಪಗೆ ತಾಳೆ ಪಾವರಿ ಮೊದಲಾದ ಹೂವುಗಳ ಸರವನ್ನೆಲ್ಲ ಹಿಡಿದು ಮಾರುತ್ತಿದ್ದರು. ಅದರಮುಂದೆ ಪರಿಮಳ ದ್ರವ್ಯಗಳನ್ನು ಮಾರುವ ಅಂಗಡೀಸಾಲುಗಳು ಘುಮುಘುಮಿಸುತ್ತಿದ್ದುವು. ಅಲ್ಲಿ ನಾನಾ ಬಗೆಗಿನ ಸುಂದರಿಯರು ಕುಳಿತು, ಕಸ್ತೂರಿ ಕುಂಕುಮಕೇಸರಿ ಪಚ್ಚಕರ್ಪೂರ ಪುನುಗು ಜವ್ವಾಜಿ ಪನ್ನೀರು ಶ್ರೀಗಂಧ ಲಾವಂಚ ಮೊದಲಾದುವುಗಳನ್ನು ಮಾರುತ್ತಿದ್ದರು. ಆ ಬೀದಿಯನ್ನು ನುಗ್ಗಿದವರೆಲ್ಲ ಪರಿಮಳ ಸಮುದ್ರದಲ್ಲಿ ಮುಳುಗಾಡಿದವರಂತೆ ಗಂಧಮಯರಾಗುತ್ತಿದ್ದರು. ಪರಿಮಳ ಸಮೇತವಾದ ತಂಗಾಳಿಯು ಹಿತಕರವಾಗಿ ಬೀಸುತ್ತಿದ್ದಿತು. ಅದರ ಮುಂದಿರುವ ಸೂಳೆಗೇರಿಯು ಮನ್ಮಥನ ಆಯುಧಶಾಲೆಯೊ, ಕಾಮನ ಪಟ್ಟದ ಆನೆಗಳ ಶಾಲೆಯೊ, ಮದನನ ನವನಿಧಿಗಳನ್ನು ತುಂಬಿದ ಬೊಕ್ಕಸವೊ, ಸ್ಮರನ ಪುಣ್ಯಫಲದ ಉಪವನವೊ, ಮೋಹದ ಜನ್ಮಸ್ಥಲವೊ, ಚಾತುರ್ಯದ ಮನೆಯೊ, ಸೌಖ್ಯದ ಆವಾಸವೊ, ಸೊಬಗಿನ ವಿಹಾರಾಂಗಣವೊ, ಮಾರನೃಪನ ರಾಜಧಾನಿಯೊ, ಎಂಬಂತೆ ಒಪ್ಪುತ್ತಿದ್ದಿತು. ಅಲ್ಲಿ ಸುಳ್ಳಿನಂಗಡಿ, ಸ್ಪರ್ಧೆಯ ನೆಲೆಮನೆ, ಮಾಯೆಗಳ ವಾಸ, ಆಸೆಯ ಆಶ್ರಯ, ದೋಷದ ಮಾರಕಟ್ಟೆ, ಪಂಥದ ಗೃಹ, ಜೂಜಿನ ಹೊಕ್ಕೆ, ಕಪಟದ ಸ್ಥಾನ, ನೆವದ ಹಕ್ಕೆ, ಚದುರಿನ ತಾಣ, ಮೋಸದ ಇಕ್ಕೆ, ಬಲಾತ್ಕಾರದ ಅರಮನೆ, ತಪ್ಪುಗಳ ತವರ್ಮನೆಗಳೆನಿಸಿ ಮೆರೆಯುತ್ತಿರುವ ಸೂಳೆಯರ ಮನೆಗಳು ತೋರುತ್ತಿದ್ದುವು. ಸಂಪತ್ತಿನಿಂದ ಭರಿತವಾಗಿರುವ ಆ ಕೇರಿಯ ಮನೆಗಳು ಚಿನ್ನಬೆಳ್ಳಿಯ ಕೆಲಸದಿಂದಲೂ ರತ್ನಗಳ ಕೆತ್ತುವಿಕೆಯಿಂದಲೂ ಶೋಭಾಯಮಾನವಾಗಿದ್ದುವು. ಅದರಲ್ಲಿ ಸಾಕಿದ ಗಿಳಿ ನವಿಲು ಪಾರಿವಾಳದ ಹಕ್ಕಿಗಳ ಶಬ್ದವೂ ವೇಶ್ಯೆಯರ ಪಾದಕಟಕಧ್ವನಿಯೂ ಉಪ್ಪರಿಗೆಗಳ ಮೇಲೆ ಕಟ್ಟಿರುವ ಚಿನ್ನಬೆಳ್ಳಿಯ ಗಂಟೆಗಳ ನಾದವೂ ಸಹ ಕಿವಿಗಿಂಪಾಗಿ ಕೇಳಿಸುತ್ತಿದ್ದುವು. ಅಲ್ಲಿ ಮನ್ಮಥನ ಬಾಣಗಳಂತೆ ಮೋಹವನ್ನುಂ

ಟುವಮಾಡುತ್ತ, ಕಟಾಕ್ಷಪಾತದಿಂದ ಘನಜಿತೇಂದ್ರಿಯರ ಮನಸ್ಸನ್ನೂ ಕೂಡ ಸೆಳೆಯುವ ಚಮರಿನ ತರುಣಿಯರಾದ ವಾರಾಂಗನೆಯರು ಪರಿಪರಿಯ ಶೃಂಗಾರಗಳಿಂದೊಪ್ಪಿ ಜಗತಿಯ ಮೇಲೂ, ಬಾಗಿಲುಗಳಲ್ಲೂ ಉಪ್ಪರಿಗೆಗಳಲ್ಲೂ ಕಿಟಕಿಗಳಲ್ಲೂ ನಿಂತು ಶೃಂಗಾರರಸದ ಅಧಿದೇವತೆಗಳಂತೆ ತೋರುತ್ತಿದ್ದರು. ಕೆಲವರು ಉಯ್ಯಾಲೆಯಲ್ಲಿ ಕುಳಿತು ತೂಗಿಸಿಕೊಳ್ಳುತ್ತಲೂ, ಕೆಲವರು ಚಂಡನ್ನಾಡುತ್ತಲೂ, ಕೆಲವರು ಹಾಡುತ್ತಲೂ ಕೆಲವರು ನರ್ತನವನ್ನಭ್ಯಸಿಸುತ್ತಲೂ, ಕೆಲವರು ಕ್ರೀಡಾಶುಕಗಳನ್ನು ಮಾತನಾಡಿಸುತ್ತಲೂ, ಕೆಲವರು ಕಾಮಶಾಸ್ತ್ರವನ್ನಭ್ಯಸಿಸುತ್ತಲೂ ಕೆಲವರು ಮುದುಕಿಯರಿಂದ ವೇಶ್ಯಾವಿದ್ಯೆಯ ರಹಸ್ಯವನ್ನರಿಯುತ್ತಲೂ ಇದ್ದರು. ಅದರೊಬ್ಬಳು ಕಮಲಮುಖ, ಪದ್ಮಗಂಧ, ಜಿಂಕೆಯ ನೋಟ, ಕೋಕಿಲೆಯ ಸ್ವರ, ಕಪ್ಪುಕೂದಲು, ಹಂಸಗಮನ, ಎಳ್ಳಗಸೆಹೂವಿನಂತಹ ಮೂಗು, ತೊಡೆದುಟ, ಗುಂಡುಮೊಲೆ, ನಾಚಿಕೆ, ಗಾಂಭೀರ್ಯ, ಕೋಮಲಶರೀರಗಳುಳ್ಳವಳಾಗಿ ಬಿಳೀಸೀರೆಯನ್ನುಟ್ಟು ಒಳಬಾಗಿಲಿನಲ್ಲಿ ನಿಂತಿರುವುದನ್ನು ನೋಡಿ ಇವಳೇ ಪದ್ಮಿನಿ ಜಾತಿಯ ಸ್ತ್ರೀ ಯೆಂದು ನಾಗರಿಕನು ತೋರಿಸಲು ಎಲ್ಲರೂ ಅವಳನ್ನು ನೋಡಿ ಮುಂದಕ್ಕೆ ನಡೆದರು. ಮತ್ತೊಬ್ಬಳು ಕಮಲದಳನೇತ್ರೆ, ಚಂದ್ರಮುಖ, ಗುಂಗುರುಗೂದಲು, ಮದ್ಯಗಂಧ, ಕಠಿಣವಾಗಿಯೂ ದಪ್ಪನಾಗಿಯೂ ಇರುವ ಮೊಲೆ, ಸ್ಥೂಲನಿತಂಬ, ಅಧಿಕಕಾಮರಸ, ಚಕೋರಧ್ವನಿ, ಗಜಗಮನ, ಶಂಖಕಂಠ, ಅತ್ಯಂತಕಾಮ, ಸಂಗೀತಪ್ರೀತಿ, ಸಣ್ಣನಡುಗಳುಳ್ಳವಳಾಗಿ ಚಿತ್ರಾಂಬರವನ್ನುಟ್ಟು ನಿಂತಿರುವುದನ್ನು ನೋಡಿ ಪೀಠಮರ್ದನನು ಇವಳು ಚಿತ್ತಿನಿಜಾತಿಯ ಸ್ತ್ರೀ ಯೆಂದು ತೋರಿಸಲು ಎಲ್ಲರೂ ನೋಡಿ ಮುಂದಕ್ಕೆ ತೆರಳಿದರು. ಇನ್ನೊಬ್ಬಳು ತಾವರೆಮೊಗ್ಗಿನಂತಹ ಸ್ತನ, ದೀರ್ಘದೇಹ, ಉದ್ದವಾದ ಕಣ್ಣು, ಚಾಂಚಲ್ಯ, ಉದ್ದವಾದ ಕರಿಯ ಕೂದಲು, ಕೂಡಿದ ಹುಬ್ಬುಗಳು, ಸಣ್ಣಹೊಟ್ಟೆ, ಶಂಖಧ್ವನಿ, ಚಿಗುರುಮಟ, ಸುಣ್ಣದ ಗಂಧ, ಕೆಂಪಾದ ಮತ್ತು ಮೃದುವಾದ ಕಾಲು, ಸ್ವಲ್ಪ ಕಾಮ, ಕೋಪ, ಮೋಹ, ಶೀಘ್ರಗಮನಗಳುಳ್ಳವಳಾಗಿ ಕೆಂಪುಸೀರೆಯನ್ನುಟ್ಟು ನಿಂತಿರುವಳೇ ಶಂಖಿನಿ ಯೆಂಬುದಾಗಿ ವಿಟನು ತೋರಿಸಲು

ಎಲ್ಲರೂ ನೋಡಿ ಮುಂದಕ್ಕೆ ಸರಿದರು. ಗಟ್ಟಿಮುಟ್ಟಾದ ದೇಹ, ಸಣ್ಣ ಕಣ್ಣು ಕೆಂಪುಕೂದಲು, ಉಬ್ಬಿದ ಮೊಲೆ, ಗದ್ಗದಸ್ವರ, ಗಾಢಾಪ್ರೀತಿ, ಬುದ್ಧಿಹೀನತೆ, ಬಾಯ್ಬಡಿಕತನ, ದುಶ್ಚೇಷ್ಟೆ, ಕಠಿಣತರದ ಸುರತ, ಮದಗಂಧ, ವಿಶಾಲವಾದ ನಿತಂಬ, ದಪ್ಪನಡು, ಇಂಪಾದ ಮಾತುಗಳುಳ್ಳವಳಾಗಿ, ಎಲ್ಲರನ್ನೂ ನಗಿಸುತ್ತ ನಿಂತಿರುವವಳೇ ಹಸ್ತಿನಿ ಯೆಂಬದಾಗಿ ವಿದೂಷಕನು ತೋರಿಸಲು ಎಲ್ಲರೂ ನೋಡಿ ಮುಂದಕ್ಕೆ ಹೊರಟರು. ಮುಂದೆ ಅಲ್ಲಲ್ಲಿ ಸ್ವಾಧೀನಪತಿಕೆ, ವಾಸವಸಜ್ಜಿಕೆ, ವಿರಹೋತ್ಕಂಠಿತೆ, ವಿಪ್ರಲಬ್ಧೆ, ಖಂಡಿತೆ, ಕಲಹಾಂತರಿತೆ, ಪ್ರೋಷಿತಭರ್ತೃಕೆ, ಅಭಿಸಾರಿಕೆ ಯೆಂಬ ಶೃಂಗಾರನಾಯಿಕಿಯರನ್ನೆಲ್ಲ ನೋಡಿಕೊಂಡು ಹೋದರು. ಮುಂದೆ ಕಾಮಶಾಸ್ತ್ರಾನುಸಾರವಾಗಿ ನಾನಾವಿಧಚುಂಬನಾಲಿಂಗನಬಂಧನಾದಿಗಳಿಂದ ವಿಧವಿಧವಾಗಿ ಸುರತಸೌಖ್ಯವನ್ನನುಭವಿಸಿರುವ ನಾಯಿಕೆಯರನ್ನೂ ಪ್ರಗಲ್ಭರಾದ ವಿಟರುಗಳನ್ನೂ ಅವರುಗಳ ನಾನಾಚೇಷ್ಟೆಗಳನ್ನೂ ನೋಡಿಕೊಂಡು ಬರುತ್ತಿದ್ದರು. ವಾರ್ಧಿಕ್ಯದಿಂದ ತಲೆ ನರೆತು ಮೈ ಸುಕ್ಕು ಹಿಡಿದು ಬೋಡುವಾಯ್ಬಿದ್ದಿರುವ ಮುದುಕೆಮುದುಕಿಯರು ಕೂಡ ಚಾಪಲ್ಯದಿಂದ ಅಲೆದಾಡುತ್ತಿರುವುದನ್ನು ನೋಡಿ ಎಲ್ಲರೂ ನಕ್ಕರು. ಅವರ ಮುಂದೆ ಶಿವಭಕ್ತಸೂಳೆಯರು ತಮ್ಮ ತಮ್ಮ ಮಿಂಡಜಂಗಮರೊಡನೆ ಸುರತಸುಖವನ್ನನುಭವಿಸುತ್ತಿರುವ ಮನೆಗಳು ಕಂಗೊಳಿಸಿದುವು. ಇವುಗಳನ್ನೆಲ್ಲ ನೋಡಿಕೊಂಡುಬರುವಷ್ಟರಲ್ಲಿ ಬೆಳಗಿನಜಾವವಾಯಿತು. ದೇವಾಲಯಗಳಲ್ಲಿ ಶಂಖ ಜಾಗಟೆ ಭೇರಿ ಮೊದಲಾದ ವಾದ್ಯಧ್ವನಿಯಾಯಿತು. ಕೋಳಿಗಳು ಕೂಗುತ್ತಿದ್ದುವು. ತಂಗಾಳಿ ಬೀಸಿತು. ಚಂದ್ರನು ಅಸ್ತಗಿರಿಯಂ ಸೇರಿದನು. ರಾಜನು ತನ್ನ ಸಖರುಗಳೊಡನೆ ಅರಮನೆಯನ್ನು ಸೇರಿ, ಅವರುಗಳನ್ನು ಕಳುಹಿಸಿಕೊಟ್ಟು ಸುಖದಿಂದಿದ್ದನು. ಎಂಬಲ್ಲಿಗೆ ಎಂಟನೇಅಧ್ಯಾಯವು ಸಂಪೂರ್ಣವು.



# ೯ ನೇ ಅಧ್ಯಾಯವು.



## ಅ ಲ್ಲ ಮ ಪ್ರ ಭು ವ ರಾ ಗ ಮ ನ ವು .

ಕಲ್ಯಾಣಪಟ್ಟಣದಲ್ಲಿ ಬಸವೇಶಚೆನ್ನಬಸವೇಶ್ವರರೀರ್ವರೂ ಘನತರವಾದ ಗೌರವದಿಂದ ಮೆರೆಯುತ್ತಿರಲು, ಇತ್ತ ಅಲ್ಲಮಪ್ರಭುದೇವರು ಸೊನ್ನಲಾಪುರದ ಸಿದ್ಧರಾಮೇಶನಿಗೆ ಲಿಂಗಮಹತ್ತ್ವವನ್ನು ತಿಳಿಸಿಕೊಡುತ್ತೇನೆಂದು ಹೇಳಿ ಒಡನೆ ಕರೆದುಕೊಂಡು ಕಲ್ಯಾಣಪಟ್ಟಣಕ್ಕೆ ಬಂದನು. ಆ ಪಟ್ಟಣದ ಬಳಿಯಲ್ಲಿ ಎತ್ತ ನೋಡಿದರೂ ಮಾವು ನೇರಿಲು ಹಲಸು, ನೇರಿಲೆ, ಬೇಲ, ಕಿತ್ತಳೆ, ನಿಂಬೆ, ದಾಳಿಂಬೆ, ಹತ್ತಿ, ಸೀಬೆ, ಅಂಜೂರ, ಸೇಬು, ಬಾಳೆ, ತೆಂಗು, ಅಡಕೆ ಮೊದಲಾದ ನಾನಾಫಲಪ್ರಧಾನವಾದ ವೃಕ್ಷಗಳಿಂದಲೂ, ಮೊಲ್ಲೆ ಮಲ್ಲಿಗೆ ಜಾಜಿ ಸಂಪಗೆ ತಾಳೆ ಸೇವಂತಿಗೆ ಸುರಗಿ ಸುರಹೊನ್ನೆ ಪಾದರಿ ಮೊದಲಾದ ಪುಷ್ಪಪ್ರಧಾನಗಳಾದ ಗಿಡ ಬಳ್ಳಿ ಮರಗಳಿಂದಲೂ, ಮರುವಕ, ಪಚ್ಚೆನಾಗವಲ್ಲಿ ಗೋರಂಟೆ, ಶ್ರೀಚಂದನ, ಬಿಲ್ವ ಅಶೋಕ ಮೊದಲಾದ ಪತ್ರಪ್ರಧಾನಗಳಾದ ಗಿಡ ಬಳ್ಳಿ ಮರಗಳಿಂದಲೂ, ಬಸರಿ ಬೂರಗ ಹೊಂಗೆ ಹಿಪ್ಪೆ ಆಲ ಅರಳಿ ಮೊದಲಾದ ಛಾಯಾಪ್ರಧಾನವಾದ ವೃಕ್ಷಗಳಿಂದಲೂ ನಿಬಿಡವಾದ ತೋಟಗಳೂ, ಬತ್ತದ ಕಬ್ಬಿನ ಗದ್ದೆಗಳೂ, ಅಲ್ಲಲ್ಲಿ ಹರಿಯುವ ಕಾಲುವೆ ಕೊಳ ಹೊಳೆ ಕೆರೆ ಮೊದಲಾದುವುಗಳೂ ಎಸೆಯುತ್ತಿದ್ದುವು. ವನಲಕ್ಷ್ಮಿಯ ಕ್ರೀಡಾಸದನದಂತೆ ಎಸೆಯುತ್ತಿರುವ ಮಂಗಳಮಯವಾದ ಉಪವನಗಳಲ್ಲಿ ಗಿಳಿ ನವಿಲು ಕೋಗಿಲೆ ಗೀಜಗ ಮರಕುಟಿಗ ಸೋರೆ ಗೌಜಲ ಮೊದಲಾದ ನಾನಾಪಕ್ಷಿಗಳು ಇಂಪಾಗಿ ದನಿಮಾಡುತ್ತಿದ್ದುವು. ಅಲ್ಲಲ್ಲಿಗೆ ದಾರಿಗಳ ಪಕ್ಕದಲ್ಲಿ ಪಥಿಕರಿಗೆ ಇಷ್ಟವಾದ ಶಾಕಪಾಕಭಕ್ಷ್ಯಭೋಜ್ಯಾದಿಗಳನ್ನೆಲ್ಲ ಉಣಬಡಿಸುವ ಧರ್ಮಸತ್ರಗಳೂ, ನೀರುಮಜ್ಜಿಗೆ ಪಾನಕ ಮೊದಲಾದುವುಗಳನ್ನು ಸುಂದರಿಯರಾದ ನಾರಿಯರು ಪಥಶ್ರಾಂತರಾಗಿ ಬಂದವರಿಗೆ ಎರೆಯುತ್ತ, [illegible] ಅರವಟ್ಟಿಗೆಗಳೂ ಕಣ್ಣಿಗೆ ಕಾಣಿಸುತ್ತಿದ್ದುವು. ಅದರ ಮುಂದಕ್ಕೆ ಸಕಲಸಂಪತ್ತಿಗೂ ಆಕರ

ವಾದ ಕಲ್ಯಾಣಪಟ್ಟಣವು ಮೆರೆಯುತ್ತಿದ್ದಿತು. ಆ ಪಟ್ಟಣದ ಸುತ್ತು ಕೋಟೆಗಳು ಮುಗಿಲನ್ನು ಸೋಂಕುತ್ತಿದ್ದುವು. ಅಗಳುಗಳು ಪಾತಾಳ ವನ್ನು ಕಂಡಿದ್ದುವು. ಅಲ್ಲಲ್ಲಿ ನಟ್ಟಿರುವ ಧ್ವಜಪಟಗಳು ಪಟಪಟಶಬ್ದ ವನ್ನು ಮಾಡುತ್ತ, ಗಗನಚುಂಬಿಗಳಾಗಿದ್ದುವು. ರನ್ನ ಚಿನ್ನದ ಕೆಲಸದ ಉಪ್ಪರಿಗೆಗಳು ಪಟ್ಟಣದ ತುಂಬ ನಿಬಿಡೀಕೃತಗಳಾಗಿದ್ದುವು. ಎತ್ತ ನೋಡಿದರೂ ದೇವಾಲಯದ ಶಿಖರಗಳೂ ಅವುಗಳ ಮೇಲಣ ಕಲಶಗ ಳೂ ಮೆರೆಯುತ್ತಿದ್ದುವು. ಆ ಕಲ್ಯಾಣಪಟ್ಟಣದ ಸುತ್ತಲೂ ಉನ್ನತ ವಾಗಿರುವ ಕೋಟೆಯು ನಾಲ್ವತ್ತೆಂಟುಯೋಜನದಳತೆಯುಳ್ಳದ್ದಾಗಿದ್ದಿ ತು. ಅದಕ್ಕೆ ಮುನ್ನೂರರವತ್ತು ಬಾಗಿಲುಗಳಿದ್ದುವು. ಸೂರ್ಯಚಂದ್ರ ವೀಥಿಗಳು ನೂರಿಪ್ಪತ್ತಿದ್ದುವು. ಬೀದಿಬೀದಿಗಳಲ್ಲೂ ನಾನಾವಿಧದ ಅಂಗಡಿಗಳ ಸಾಲುಗಳು ಕಿಕ್ಕಿರಿದಿದ್ದುವು. ವ್ಯಾಪಾರಿಗಳ ಸಂಪಣಿಯು ಬಲು ದಟ್ಟವಾಗಿದ್ದಿತು. ಎತ್ತನೋಡಿದರೂ ವಾದ್ಯಗಳಾಗುತ್ತ ತಳಿರು ತೋರಣಗಳಿಂದಲಂಕರಿಸಿರುವ ಮನೆಗಳು ಮಂಗಳಮಯವಾಗಿ ತೋ ರುತ್ತಿದ್ದುವು. ಇದನ್ನೆಲ್ಲ ಪ್ರಭುಸಿದ್ಧರಾಮೇಶ್ವರರುಗಳು ನೋಡಿ ಕೊಂಡು ಮುಂದಕ್ಕೆ ಬರಲು, ಸಕಲ ಸಂಪತ್ತಿಗೂ ನೆಲೆಯಾದ ರಾಜ ಭವನವು ನಗರೀಕಾಂತೆಯ ನಿರ್ಮಲಮುಖಮಂಡಲದಂತೆ ಶೋಭಿಸುತ್ತಿ ದ್ದಿತು. ರೂಪದಲ್ಲಿ ಮನ್ಮಥನೂ, ಸಂಪತ್ತಿನಲ್ಲಿ ಕುಬೇರನೂ ವೈ ಭವದಲ್ಲಿ ದೇವೇಂದ್ರನೂ ಗಾಂಭೀರ್ಯದಲ್ಲಿ ಸಮುದ್ರನೂ, ಪರಾಕ್ರಮ ದಲ್ಲಿ ಅರ್ಜುನನೂ ಎನಿಸಿಕೊಂಡಿರುವ ಬಿಜ್ಜಳರಾಜನು ಇರುತ್ತಿದ್ದನು. ಆ ಅರಮನೆಯನ್ನು ನೋಡಿಕೊಂಡು ಮುಂದೆ ಬರುವಲ್ಲಿ ಭಕ್ತಿಯ ತವ ರ್ಮನೆಯಂತೆಯೂ, ಮುಕ್ತಿಶ್ರೀಯ ವಾಸಸ್ಥಲದಂತೆಯೂ ಶುಭ್ರವರ್ಣದ ಉಪ್ಪರಿಗೆಯಿಂದ ಕೈಲಾಸಪರ್ವತದಂತೆಯೂ ಶೋಭಿಸುತ್ತಿರುವ ಬಸವರ ಸನರಮನೆಯನ್ನು ಕಂಡು ಹೊರಬಾಗಿಲಬಳಿಗೆ ಹೋದರು. ಅಷ್ಟ ರಲ್ಲಿ ಹಡಪದಪ್ಪಣ್ಣನು ನೋಡಿ ಥಟ್ಟನೆ ಒಳಗೆ ಹೋಗಿ ಗಣಸಮೂಹ ದೊಡನೆ ಶಿವಪೂಜೆಯನ್ನು ಮಾಡುತ್ತ ಕುಳಿತಿರುವ ಬಸವರಸನ ಬಳಿಯ ಲ್ಲಿ ನಿಂತು ಅಪೂರ್ವರಾದ ಜಂಗಮರಿಬ್ಬರು ಬಂದು ತಲೆಬಾಗಿಲಲ್ಲಿ ನಿಂತಿರು ವರೆಂದು ಬಿನ್ನೈಸಿದನು. ಒಳಗೆ ಬರಮಾಡೆಂದು ಬೆಸಸಲು, ಹಿಂದಿ

ರಾಗಿ ಬಂದು, ಸ್ವಾಮೀ ಒಳಗೆ ಚಿತ್ತೈಸಬೇಕು: ನಿಮ್ಮ ಮಗನಾದ ಬಸವೇಶನು ಅತಿ ವಿಶ್ವಾಸದಿಂದ ತಮ್ಮ ಪಾದವನ್ನೇ ನಂಬಿಕೊಂಡಿರುವನು: ಆತನನ್ನು ಪರಿಪಾಲಿಸಬೇಕು; ಎಂದು ಶ್ರುತಪಡಿಸಿದನು. ಆಗ ಪ್ರಭುವು ಅರಮನೆಯನ್ನು ನಾವು ಪ್ರವೇಶಿಸುವುದಿಲ್ಲವೆಂದು ನುಡಿದನು. ಅಪ್ಪಣ್ಣನು ಈ ಸಂಗತಿಯನ್ನು ಬಸವೇಶನಲ್ಲಿ ಅರಿಕೆ ಮಾಡಿದನು. ಅಷ್ಟರಲ್ಲಿ ಚೆನ್ನಬಸವೇಶನಿಗೆ ಅರಿವುಂಟಾಗಲು, ಥಟ್ಟನೆ ಎದ್ದು ಬಸವೇಶ್ವರನ ಬಳಿಗೆ ಬಂದು– ಎಲೆ ಹುಚ್ಚಾ! ಅಲ್ಲಮಪ್ರಭುವೂ ಸಿದ್ಧರಾಮೇಶ್ವರನೂ ನಿನ್ನ ಮನೆಯ ಬಾಗಿಲಲ್ಲಿ ಬಂದು ನಿಂತಿರುವಾಗ ನೀನು ಹೀಗೆ ಮತ್ತನಾಗಿ ಒಳಗೆ ಕುಳಿತಿರಬಹುದೆ ? ಎಂದನು. ಆಗ ಬಸವಣ್ಣನು ಧೈರ್ಯಗೆಟ್ಟು ಕಗ್ಗನೆ ಕಸಿದುಹೋಗಿ ಕಂಗೆಟ್ಟು ತೊಳಲಿ ಬಳಲಿ ಇನ್ನೇನು ಗತಿ ಯೆಂದು ಚೆನ್ನಬಸವೇಶನ ಅಡಿದಾವರೆಗೆ ಬಿದ್ದು ಮರುಗಿದನು. ಆಗ ಚೆನ್ನಬಸವೇಶನು– ಅಯ್ಯಾ! ಹೆದರಬೇಡ; ನಿನ್ನ ಭಕ್ತಿಗಾಗಿಯೇ ಪ್ರೀತಿಸಿ ಪ್ರಭುವು ದಯೆಮಾಡಿರುವನು; ಅದುಕಾರಣ ಅವನು ಒಳಗೆ ಬರದೆ ಹೋಗುವುದಿಲ್ಲ; ಅವನನ್ನು ನಾನು ಕರೆದುಕೊಂಡುಬರುತ್ತೇನೆ ಎಂದು ಹೇಳಿ ಭರವಸೆಗೊಟ್ಟು ಸಮಾಧಾನಪಡಿಸಿ, ನಾನಾಗಣಂಗಳನ್ನೆಲ್ಲ ಕರೆದುಕೊಂಡು ಪ್ರಭುವಿನ ಬಳಿಗೆ ಹೋಗಿ ಭಕ್ತಿಸಂಧಾನದಿಂದಾತನನ್ನು ಒಲಿಸಿ, ಬಸವರಸನರಮನೆಗೆ ಕರೆದುಕೊಂಡು ಬಂದನು. ಬಳಿಕ ಬಸವರಸನು ಸಿದ್ಧಮಾಡಿದ್ದ ಉನ್ನತಪೀಠದಲ್ಲಿ ಪ್ರಭುವನ್ನು ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳಿಂದರ್ಚಿಸಿ ಸಂತೋಷಪಡಿಸಿ ಕೊಂಡಾಡಿದನು. ಆಗ ಪ್ರಭುವು ಮುಂದೆ ನಿಂತಿರುವ ಸಕಲ ಗಣಗಳನ್ನೂ ನೋಡಿ ಶಿವಾನುಭವಪ್ರಸಂಗದಿಂದ ಅವರ ಮನಸ್ಸಿನ ಸಂಶಯವನ್ನೆಲ್ಲ ತೊಲಗಿಸಿ ಸಂತೋಷಗೊಳಿಸಿದನು ಎಂಬಲ್ಲಿಗೆ ಒಂಭತ್ತನೇ ಅಧ್ಯಾಯವು ಸಂಪೂರ್ಣವು.

ಒಂದನೆಯ ಕಾಂಡವು ಮುಗಿದುದು.

# ೨ನೇ ಕಾಂಡ.

## ೧ ನೇ ಅಧ್ಯಾಯವು.

### ಶೈವಸೃಷ್ಟಿಕ್ರಮಬೋಧೆ.

ಬಳಿಕ ಅಲ್ಲಮಪ್ರಭುವು ನಸುನಗುತ್ತ ಬಸವೇಶನನ್ನು ಕುರಿತು ಚೆನ್ನಬಸವೇಶನ ಮನೆಗೆ ಹೋಗುವ ನಡೆಯಿರೆಂದು ಹೇಳಿ, ಅಲ್ಲಿದ್ದ ಶಿವ ಗಣಂಗಳೆಲ್ಲರನ್ನೂ ಕೂಡಿಕೊಂಡು ಬಂದು, ಚೆನ್ನಬಸವೇಶನರಮನೆಯ ಹೊರಬಾಗಿಲ ಚೆಲ್ವಿಕೆಯನ್ನು ನೋಡಿ ಸಂತೋಷಪಟ್ಟು, ಪಕ್ಕದಲ್ಲಿ ಶೋಭಿಸುತ್ತಿದ್ದ ಸಭಾಮಂಟಪವನ್ನು ತೋರಿಸಲು, ಎಲ್ಲರ ಸಮೇತನಾಗಿ ಅಲ್ಲಿ ಕುಳಿತುಕೊಂಡು ಚೆನ್ನಬಸವೇಶನನ್ನು ಕುರಿತು—ಇದೇನಯ್ಯಾ! ನಮ್ಮನ್ನು ಕರೆತಂದು ಅಂತಃಪುರಕ್ಕೆ ಕರೆದುಕೊಂಡು ಹೋಗದೆ ಇಲ್ಲೇ ಕುಳ್ಳಿರಿಸಿದೆ? ಎಂದು ಪ್ರಭುಗಳಾಯನು ಕೇಳಿದನು. ಚನ್ನಬಸವೇಶನಾದ ರೊ ನಸುನಗುತ್ತ, ಎಲೌ ಜಗತ್ಪವಿತ್ರನೇ! ಷಟ್ಸ್ಥಲತತ್ವಾರ್ಥವನ್ನು ಹೇಳಿದವರ ಹೊರತಾಗಿ ಇತರರನ್ನು ಒಳಗೆ ಬಿಡುವುದಿಲ್ಲವೆಂಬ ಕಟ್ಟಾ ಗಿರುವುದು. ತಮ್ಮೊಡನೆ ಬಂದಿರುವ ಸಿದ್ಧರಾಮಯ್ಯನಿಗೆ ಶರೀರದಲ್ಲಿ ಇಷ್ಟಲಿಂಗಧಾರಣೆಯೇ ಇಲ್ಲ. ಇಂಥ ಲಿಂಗವಿಹೀನರನ್ನು ಲಿಂಗಾಂಗಿ ಗಳು ತಮ್ಮ ಮನೆಯೊಳಗೆ ಬರಗೊಡಿಸರು. ಅದುಕಾರಣವೇ ಇಲ್ಲಿ ಕುಳಿತುಕೊಳ್ಳಬೇಕಾಯಿತೆಂದು ನುಡಿದನು. ಈ ಮಾತನ್ನು ಸಿದ್ಧರಾಮೇಶ ನು ಕೇಳಿ, ಎಲೈ ಚೆನ್ನಬಸವಣ್ಣನೇ! ನಾನು ಪ್ರಾಣಲಿಂಗಿಯಾಗಿರು ವಾಗ ಇನ್ನು ಇಷ್ಟಲಿಂಗವೇತಕ್ಕೆ? ಎಂದನು. ಆಗ ಚೆನ್ನಬಸವೇಶ ನು ನಕ್ಕು, ಅಯ್ಯ! ನೀನು ಅದು ಹೇಗೆ ಪ್ರಾಣಲಿಂಗಿಯಾದೆ? ಇದು ಬರೀಭ್ರಾಂತಿಯೇಸರಿ. ಯಾವನು ಸ್ಥೂಲಸೂಕ್ಷ್ಮಕಾರಣವೆಂಬ ಶರೀರ ತ್ರಯಗಳನ್ನು ಧರಿಸಿರುವನೋ ಅವನ ತ್ರಿವಿಧದೇಹದಲ್ಲಿ ಇಷ್ಟಪ್ರಾ ಣ ಭಾವಲಿಂಗಗಳು ನೆಲಸಿರಲೇಬೇಕು. ನಿನ್ನ ಸ್ಥೂಲಶರೀರದಲ್ಲೇ ಇಷ್ಟಲಿಂಗವಿಲ್ಲದ ಬಳಿಕ ಇನ್ನು ಉಳಿದೆರಡು ದೇಹಗಳಲ್ಲಿ ಎರಡುವಿಧ ದ ಲಿಂಗಗಳು ನೆಲಸಿರುವುದು ಹೇಗೆ? ಎಂದನು. ಆಗ ಸಿದ್ಧರಾಮೇ

ಶನು– ಮೂರುವಿಧದ ಶರೀರವುಳ್ಳವರಿಗೆ ಹಾಗೆ ತ್ರಿವಿಧಲಿಂಗಸಂಗವಿರ ಬೇಕಾದದ್ದು ಸಹಜವೇ ಸರಿ. ನನಗಾದರೋ ಎಲ್ಲರಂತೆ ಮೂರು ದೇಹ ಗಳಿಲ್ಲ. ನನ್ನ ದೇಹನೇ ಪೀಠ, ಪ್ರಾಣವೇ ಲಿಂಗವೆಂದು ನುಡಿದನು. ಅದಕ್ಕೆ ಚೆನ್ನಬಸವೇಶನು– ಹಾಗಾದಬಳಿಕ ಇಷ್ಟಲಿಂಗಧಾರಣವಿಲ್ಲದ ವನು ಭವಿಯೇ ಸರಿ. ಅವನು ಶೈವನೆನಿಸಿಕೊಳ್ಳುವನೇ ಹೊರ್ತು ವೀರ ಶೈವನಲ್ಲನೆಂದನು. ಸಿದ್ಧರಾಮೇಶನು– ಶೈವನೇ ಇತರ ಸಕಲ ವಿ-ದ ಶೈವಕ್ಕೂ ಆದಿಯಾದದ್ದು. ಆ ಮಹಾಶೈವದಿಂದಲೇ ಈ ವೀರಶೈವವೂ ದಲಾದಶೈವಪ್ರಭೇದಗಳೆಲ್ಲವೂ ಹುಟ್ಟಿರುವುವು, ಎನಲು, ಅದಕ್ಕೆ ಚೆನ್ನ ಬಸವೇಶನು–ಶೈವದ ಆದಿಸೃಷ್ಟಿಯೇ ಬೇರೆ; ವೀರಶೈವಸೃಷ್ಟಿಯೇ ಬೇರೆ. ಎಂದನು. ಹಾಗಾದರೆ ಆ ಶೈವದ ಆದಿಯನ್ನು ನನಗೆ ವಿಸ್ತರಿಸಿ ಹೇಳೆಂದು ಸಿದ್ಧರಾಮೇಶನು ಕೇಳಲು, ಚೆನ್ನಬಸವೇಶನು ಶೈವಸೃಷ್ಟಿ ಕ್ರಮವನ್ನು ಬೋಧಿಸಿದನದೆಂತೆಂದರೆ– ಅತ್ಯತಿಷ್ಠದ್ದಶಾಂಗುಲನಾದ ಆ ಪರಶಿವನು ನಾದಬಿಂದುಕಳಾದಿಗಳಿಗೆ ದೂರನಾಗಿ ಸರ್ವಶೂನ್ಯನಾಗಿ ಪರ ಮಾತ್ಮ, ಪರಂಜ್ಯೋತಿ, ಪರಮಕಾರಣ, ನಿರವಯುವ, ನಿತ್ಯ, ನಿರುಪಮ, ನಿಶ್ಶೂನ್ಯ, ನಿರಾಕಾರನೆಂಬ ಹೆಸರಿನಿಂದ ನಿಜಸುಖಸಮಾಧಿಯಲ್ಲಿರುತ್ತ ಎಚ್ಚರಗೊಂಡಾಗ ಚಿತ್ತದಲ್ಲಿ ಒಂದುವಿಧದ ಪ್ರವೃತ್ತಿಯುಂಟಾಗಲು, ಚಿ ತ್ತೇ ಚಿಚ್ಛಕ್ತಿಯಾಗಿ ಆ ನಿರಂಜನಲಿಂಗಚಿಚ್ಛಕ್ತಿಗಳ ಯೋಗದಿಂದ ಮ ಹಾಲಿಂಗವುದಿಸಿತು. ಆ ಮಹಾಲಿಂಗಪರಾಶಕ್ತಿಗಳ ಯೋಗದಿಂದ ಸದಾ ಶಿವನುದಿಸಿದನು. ಆ ಸದಾಶಿವಆದಿಶಕ್ತಿಗಳ ಯೋಗದಿಂದ ಈಶ್ವರನುದಿ ಸಿದನು. ಆ ಈಶ್ವರ ಇಚ್ಛಾಶಕ್ತಿಗಳ ಮೇಳನದಿಂದ ಮಹೇಶ್ವರನಾವಿ ರ್ಭವಿಸಿದನು. ಆ ಮಹೇಶ್ವರ ಜ್ಞಾನಶಕ್ತಿಗಳ ಕೂಟದಿಂದಲೇ ಸ ಕಲ ಸೃಷ್ಟಿಯೂ ಆಯಿತು. ಹೇಗೆಂದರೆ– ಆ ಮಹೇಶ್ವರನು ವಿರಾ ಡ್ರೂಪವನ್ನು ಧರಿಸಲಾಗಿ, ಆತನ ಪಾದ, ಹರಡು, ಮಂಡಿ, ಮೊಣ ಕಾಲು, ತೊಡೆ, ಕುಂಡಿ, ನಡು, ವೆಂಬ ಸಪ್ತಸ್ಥಾನಗಳಿಂದ ಕ್ರಮವಾಗಿ ಪಾತಾಳ ಮಹಾತಳ ರಸಾತಳ ತಲಾತಲ ಸುತಲ ವಿತಲ ಅತಲವೆಂಬ ಏ ಳು ಅಧೋಲೋಕಗಳೂ, ಹೊಕ್ಕುಳು ಹೊಟ್ಟೆ, ಭುಜ, ಎದೆ, ಕತ್ತು, ಮುಖ, ತಲೆ ಯೆಂಬ ಏಳು ಸ್ಥಾನಗಳಿಂದ ಕ್ರಮವಾಗಿ ಭೂಲೋಕ ಭು

ವರ್ಲೋಕ ಸುವರ್ಲೋಕ ಮಹೋಲೋಕ ಜನಲೋಕ ತಪೋಲೋಕ
ಸತ್ಯಲೋಕವೆಂಬ ಏಳು ಊರ್ಧ್ವಲೋಕಗಳೂ, ಆತನ ದೇಹಕಾಂತಿ
ಯಿಂದ ಸಪ್ತಸಮುದ್ರಗಳೂ ಕಿವಿಯಿಂದ ದಶದಿಕ್ಕುಗಳೂ ಪಾದದಗಿಣ್ಣು
ಗಳಿಂದ ಸಕಲ ಪರ್ವತಗಳೂ, ಮುಖದಿಂದ ರುದ್ರನೂ, ಎಡದೋಳಿನಿಂದ
ವಿಷ್ಣುವೂ, ಬಲತೊಡೆಯಿಂದ ಬ್ರಹ್ಮನೂ, ಪಾದದಿಂದ ದೇವೇಂದ್ರನೂ.
ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ, ಉಗುರಿನಿಂದ ದ್ವಾ
ದಶಾದಿತ್ಯರೂ, ಹೆಕ್ಕತ್ತಿನಲ್ಲಿ ಸಪ್ತರ್ಷಿಗಳೂ, ಎದೆಯಲ್ಲಿ ನಕ್ಷತ್ರಗ
ಳೂ, ಹಣೆಯಿಂದ ಏಕಾದಶರುದ್ರರೂ, ಬೆರಲುಗಳಿಂದ ನವಬ್ರಹ್ಮರುಗ
ಳೂ, ಎರಡುಪಕ್ಕೆಗಳಿಂದ ೧೪ ಮಂದಿ ಇಂದ್ರರುಗಳೂ, ಬೆರಲಸಂಧಿಗ
ಳಿಂದ ನಾನಾಶಕ್ತಿಯರುಗಳೂ, ಅಂಗೈಯಿಂದ ೧೪ ಮಂದಿಮನುಗಳೂ,
ವೇದಾಗಮಪುರಾಣಶಾಸ್ತ್ರಾದಿಗಳೆಲ್ಲವೂ ಆತನ ವಾಕ್ಕಿನಿಂದಲೂ, ಆತನ
ಸಂತೋಷಬಾಷ್ಪದಿಂದ ಸಕಲನದಿಗಳೂ, ಗರುಡ ಗಾಂಧರ್ವ ಕಿನ್ನರ
ಕಿಂಪುರುಷ ಸಿದ್ಧವಿದ್ಯಾಧರಾದಿ ೩೩ ಕೋಟಿ ದೇವತೆಗಳು ಆತನ ಶಿರ
ಸ್ಸಿನಿಂದಲೂ, ೬೬ ಕೋಟಿ ರಾಕ್ಷಸರುಗಳು ಆತನ ರೋಮಕೂಪಗಳಿಂ
ದಲೂ, ನಾಗಕನ್ನಿಕೆಯರು ಮೊದಲಾದ ಇತರ ನಾನಾಜನಗಳೆಲ್ಲರೂ
ಆತನ ಅವಯವದಿಂದಲೂ, ಅಷ್ಟದಿಕ್ಪಾಲಕರು ಅಷ್ಟವಸುಗಳು
ಸಹ ಆತನ ಕಪೋಲಗಳಿಂದಲೂ, ಮೃಗಪಕ್ಷಿಜಲಚರಾದಿಗಳೆಲ್ಲವೂ
ಪಾದದ ಬೆರಲುಗಳಿಂದಲೂ, ಆ ಬೆರಲುಗಳ ಕೆಳಭಾಗದಿಂದ ಮರ ಬಳ್ಳಿ
ಮೊದಲಾದುವುಗಳೂ, ಸಕಲ ವಿಧದ ಪಶುಗಳೂ ಆತನ ಕಂಕುಳಿನಿಂದ
ಲೂ ಹುಟ್ಟಿರುವುವು. ಅದುಕಾರಣ ಈ ಚರಾಚರಾತ್ಮಕವಾದ ಪ್ರ
ಪಂಚದ ಉತ್ಪತ್ತಿಗೆಲ್ಲ ಆ ಮಹೇಶ್ವರನೇ ಕಾರಣನಾಗಿರುವನು. ಬಳಿಕ
ಪ್ರಳಯಕಾಲದಲ್ಲಿ ಆ ಮಹೇಶ್ವರನೇ ಗಣಸಮೂಹಮಧ್ಯದಲ್ಲಿ ಲೀಲೆ
ಯಿಂದ ಪಟುತರವಾದ ತಾಂಡವವನ್ನು ಮಾಡಿ ಪ್ರಳಯವನ್ನುಂಟುಮಾ
ಡಿದನು. ಅವನಿಂದುತ್ಪನ್ನರಾಗಿದ್ದ ವಿಷ್ಣುಬ್ರಹ್ಮಾದಿಗಳೂ ಗಿರಿ ನದೀ
ತರು ಖಗಮೃಗಾದಿಪ್ರಪಂಚವೆಲ್ಲವೂ ಭೀಕರವಾದ ಅವನ ಮಹಾನಾಟ್ಯ
ದಿಂದ ನಷ್ಟವಾಗಿ ನಿರಾಕಾರವನ್ನೈದಿದುವು. ಸಮುದ್ರದಲ್ಲಿ ನೀರಿನ
ಮಸಕದಿಂದುಂಟಾಗಿದ್ದ ನೊರೆಗುಳ್ಳೆಗಳೆಲ್ಲವೂ ತೆರೆಯ ಹೊಡೆತದಿಂದ

ನಷ್ಟವಾಗುವಹಾಗೆ ಮಹೇಶನಿಂದುತ್ಪನ್ನವಾದ ಈ ಸ್ಥೂಲಪ್ರಪಂಚವೆಲ್ಲವೂ ಅವನ ಗಿರ್ರನೆ ತಿರುಗುವಿಕೆಯ ರಭಸದಿಂದುಂಟಾದ ವಾಯುವಿನ ಪ್ರಹತಿಯಿಂದ ಅಳಿದು ಎಲ್ಲವೂ ಅವನಲ್ಲೀ ಐಕ್ಯವಾಯಿತು. ಹೀಗೆ ಆ ಪರಶಿವನು ಕಲ್ಪಾಂತದಲ್ಲಿ ತಾಂಡವಾಡಂಬರವನ್ನು ತೋರಿಸಿದುದರಿಂದ ಲೋಕವೆಲ್ಲವೂ ವಿಲಯವಾಗಲು, ಬಳಿಕ ಆ ಮಹೇಶನು ಸ್ಮಶಾನರುದ್ರನಾಗಿ ಏಕವಾದಲೀಲೆಯನ್ನು ಧರಿಸಿ ಸಂತೋಷದಿಂದ ವಿಹರಿಸಿದನು. ಎಂಬು ಚೆನ್ನಬಸವೇಶನು ಸಿದ್ಧರಾಮೇಶ್ವರನಿಗೆ ಹೇಳಿದನೆಂಬಲ್ಲಿಗೆ ಒಂದನೇ ಅಧ್ಯಾಯವು ಮುಗಿದುದು.

---

## ೨ ನೇ ಅಧ್ಯಾಯವು.

### ಮಹಾಸೃಷ್ಟಿಕ್ರಮ.

---

ಬಳಿಕ ಸಿದ್ಧರಾಮೇಶನು ಜಗತ್ತು ಉದಿಸಿದ ರೀತಿಯು ಹೇಗೆಂದು ಪುನಃ ಬೆಸಗೊಳ್ಳಲು, ಚೆನ್ನಬಸವೇಶನು ಹೇಳತೊಡಗಿದನೆಂತೆಂದರೆ— ಆ ಮಹೇಶ್ವರನಪ್ಪಣೆಯಿಂದ ಮೂಲಪ್ರಕೃತಿಯು ವಿಕಾರವನ್ನು ಹೊಂದಲು ಅದರಿಂದ ಮಹತ್ತುದಿಸಿತು. ಆ ಮಹತ್ತಿನಿಂದ ಅಹಂಕಾರವೂ ಅದರಿಂದ ಸತ್ವರಜಸ್ತಮಸ್ಸೆಂಬ ತ್ರಿವಿಧಗುಣಗಳೂ ಉದಿಸಿದುವು. ಈ ಗುಣಗಳಲ್ಲಿ ತಮೋಗುಣವನ್ನನುಸರಿಸಿ, ಮಹೇಶ್ವರನ ಹಣೆಯಿಂದ ರುದ್ರನು ಹುಟ್ಟಿದನು. ಆ ಮಹೇಶ್ವರನ ಎಡಭುಜದಿಂದ ಸಾತ್ವಿಕಗುಣವನ್ನನುಸರಿಸಿ ವಿಷ್ಣುವು ಹುಟ್ಟಿದನು. ಬಲಭುಜದಿಂದ ರಜೋಗುಣವನ್ನನುಸರಿಸಿ ಬ್ರಹ್ಮನು ಹುಟ್ಟಿದನು. ಇವರಿಂದ ಶಬ್ದಸ್ಪರ್ಶರೂಪರಸಗಂಧವೆಂಬ ೫ ಗುಣಗಳೂ, ಆಕಾಶ ವಾಯು ಅಗ್ನಿ ಜಲ ಭೂಮಿ ಯೆಂಬ ೫ ಭೂತಗಳೂ ಸಹ ಹುಟ್ಟಿದುವು. ಶಿವಾಜ್ಞೆಯಿಂದ ಆ ವಾಯುವು ಚಲಿಸಿತು. ಆಕಾಶವು ತೆರಹುಗೊಂಡಿತು. ಅಗ್ನಿಯು ವಾಯುಸಂಗದಿಂದ ಜಲವನ್ನು ಕೂಡಲು, ಆ ಜಲವು ಕುದಿಕುದಿದು ಭೂಮಿಯೊಡನೆ ಸೇರಲು, ಆ ಭೂಮಿಯೂ ಜಲವೂ ಸಹ ತಪ್ತವಾಗಿ ಹಿರಣ್ಮಯವಾದ ತೇಜಸ್ಸಿನಿಂದ ಒಂದು ಅಂಡವಾಗಿ (ಗೋಳವು) ಪರಿಣಮಿಸಿತು. ಆ ಅಂ

ಡವು ೫೦ ಕೋಟಿ ಯೋಜನದ ವಿಸ್ತಾರವುಳ್ಳದ್ದಾಯಿತು. ಅದಕ್ಕೆ ಹತ್ತರಷ್ಟು ಭಾಗದ ಜಲವು ಆ ಅಂಡವನ್ನು ಆವರಿಸಿಕೊಂಡಿರುವುದು. ಆ ಜಲಕ್ಕೆ ಹತ್ತರಷ್ಟು ಭಾಗದ ಅಗ್ನಿಯು ಆ ಜಲವನ್ನಾವರಿಸಿಕೊಂಡಿರುವುದು. ಅಗ್ನಿಗೆ ಹತ್ತರಷ್ಟು ಭಾಗದ ವಾಯುವು ಅದನ್ನು ಮುಸುಕಿಕೊಂಡಿರುವುದು. ಅದಕ್ಕೆ ಹತ್ತರಷ್ಟು ಭಾಗದ ಆಕಾಶವು ಅದನ್ನು ಸುತ್ತಿಕೊಂಡಿರುವುದು. ಅದನ್ನು ಅಹಂಕಾರವು ಬಳಸಿಕೊಂಡಿರುವುದು. ಆಕಾಶವನ್ನು ಮಹತ್ತು ಸುತ್ತಿಕೊಂಡಿರುವುದು. ಹೀಗೆ ಅಂಡವು ಶಿವಾಜ್ಞೆಯಿಂದ ಸಪ್ತಾವರಣವುಳ್ಳದ್ದಾಗಿರುವುದು. ಇದನ್ನು ಬ್ರಹ್ಮನು ಅಧಿವಿ ಒಡೆಯಲಾಗಿ ಬ್ರಹ್ಮಾಂಡವೆಂಬ ಹೆಸರಿದಕುಂಟಾಯಿತು. ಬಳಿಕಾ ಮಹೇಶ್ವರನು ತನ್ನ ಹಣೆಯಿಂದ ಹುಟ್ಟಿದ ರುದ್ರನನ್ನೇ ತನ್ನ ಸ್ವರೂಪನೆಂದು ತಿಳಿದು, ಸೃಷ್ಟಿ ಸ್ಥಿತಿ ಪ್ರಳಯಗಳನ್ನೆಲ್ಲ ಮಾಡುವ ಸಾಮರ್ಥ್ಯವು ಈತನಿಗಿರುವುದೆಂದು ಸಂತುಷ್ಟನಾಗಿ, ಇವನೇ ನಿಮ್ಮಿಬ್ಬರಿಗೂ ಸ್ವಾಮಿ ಯೆಂದು ವಿಷ್ಣುಬ್ರಹ್ಮರೊಡನೆ ಹೇಳಿ, ರುದ್ರನಿಗೆ ಅಚ್ಯುತವಾದ ಪಟ್ಟವನ್ನು ಕಟ್ಟಿ, ತಾನು ಇಚ್ಛಾಕ್ರಿಯಾದಿಪಂಚಶಕ್ತಿಗಳೊಡನೆ ಕೂಡಿ ಪರಶಿವಸದಾಶಿವಾದಿ ಪಂಚನಾಮಗಳನ್ನು ಧರಿಸಿದನು. ಆ ಪರಶಿವ ಶಿವರೀರ್ವರೂ ನಿಷ್ಕಲತತ್ತ್ವರು, ಸದಾಶಿವ ಈಶ್ವರರೀರ್ವರೂ ಸಕಲನಿಷ್ಕಲರು. ಮಹೇಶ್ವರ ಮತ್ತು ಆದಿರುದ್ರರೀ ಸಕಲ ತತ್ತ್ವರು. ಸಕಲನಾದಮಹೇಶ್ವರನು ಅಷ್ಟಮೂರ್ತಿಗಳನ್ನುಧರಿಸಿ, ಸೋಮಶೇಖರಾದಿ ೨೫ ಲೀಲೆಗಳನ್ನುಹೊಂದಿದನು, ಎಂದು ಹೇಳಲು; ಆ ಲೀಲೆಗಳನ್ನೆಲ್ಲ ವಿಸ್ತರಿಸಿ ನನಗೆ ಬೋಧಿಸಬೇಕೆಂದು ಸಿದ್ಧರಾಮೇಶನು ಪ್ರಾರ್ಥಿಸಲು, ಹೇಳತೊಡಗಿದನೆಂತೆಂದರೆ— ಕ್ರಿಯಾಶಕ್ತಿಯಿಂದಕೂಡಿ ಪಂಚವಿಂಶತಿ ಲೀಲೆಗಳನ್ನಾಂತ ಆ ಮಹಾರುದ್ರನು ಆದಿಯಲ್ಲಿ ಬ್ರಹ್ಮನನ್ನು ಕರೆದು ಜಗತ್ಸೃಷ್ಟಿಯನ್ನು ಮಾಡೆಂದು ನಿರೂಪಿಸಿದನು. ಆತನಾದರೊ ಸೃಜಿಸುವ ವಿಧಾನವನ್ನರಿಯದೆ ಅದನ್ನುತಿಳಿದುಕೊಳ್ಳುವುದಕ್ಕಾಗಿ ಶಿವನನ್ನು ಕುರಿತು ತಪಸ್ಸನ್ನುಮಾಡಿದನು. ಆಗ ಪರಶಿವನು ಈ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಯಾವ ವರವು ಬೇಕು? ಬೇಡೆಂದು ಬ್ರಹ್ಮನನ್ನುಕೇಳಲು, ಸ್ವಾಮೀ! ನನ್ನಿಂದ ಲೋಕಸೃಷ್ಟಿಯ ಕಾರ್ಯವನ್ನು ಮಾಡುವುದಸಾ

ಧ್ಯ, ಅದಕ್ಕಾಗಿ ನನಗೆ ಪುತ್ರವರವನ್ನು ದಯೆಪಾಲಿಸಬೇಕೆಂದು ಬೇಡಿದನು. ಆಗ ಸನಕ ಸನಂದನ ಸನತ್ಕುಮಾರ ಸನತ್ಸುಜಾತಾದಿಮಾನಸಪುತ್ರರನ್ನು ದಯೆಪಾಲಿಸಿ ಅದೃಶ್ಯನಾದನು. ಬ್ರಹ್ಮನು ಆ ಮಾನಸಪುತ್ರರನ್ನು ಕರೆದು ಸೃಷ್ಟಿಕಾರ್ಯವನ್ನು ನಡಿಸಿರೆಂದು ಅವರಿಗೆ ಅಪ್ಪಣೆ ಮಾಡಿದನು. ಅವರಾದರೊ ನಮ್ಮಿಂದ ಇದು ಅಸಾಧ್ಯ, ಸೃಷ್ಟಿಕೌಶಲ್ಯವು ನಮಗೆ ತಿಳಿಯದು, ಶಿವನ ವರದಿಂದ ನಾವು ನಿನಗೆ ಮಕ್ಕಳಾಗಿ, ಸಕಲ ರಹಸ್ಯವನ್ನೂ ನಿನ್ನಿಂದಲೇ ತಿಳಿದು, ಸಂಸಾರಬಂಧದಲ್ಲಿ ಹೇಗೆ ಸಿಕ್ಕಿ ಬಾಳುವೆವು ? ಎಂದು ಹೇಳಿ ತಿರಸ್ಕರಿಸಿ, ತಪಸ್ಸನ್ನಾಚರಿಸುವುದಕ್ಕಾಗಿ ವನಾಂತರಕ್ಕೆ ತೆರಳಿದರು. ಇತ್ತ ಬ್ರಹ್ಮನು ಮತ್ತೆ ದಿವ್ಯ ಸಹಸ್ರ ವರ್ಷ ತಪಸ್ಸನ್ನಾಚರಿಸಿ, ಶಿವನನ್ನು ಮೆಚ್ಚಿಸಿದನು. ಶಿವನು ಪ್ರತ್ಯಕ್ಷನಾಗಿ ಮತ್ತೇನೆಂದು ಕೇಳಲು, ಸ್ವಾಮಿ ತಾವು ದಯೆಪಾಲಿಸಿದ ಮಕ್ಕಳು ತಪಸ್ಸಿಗೆ ಹೊರಟುಹೋದರು. ನನ್ನಿಂದ ಸೃಷ್ಟಿಕಾರ್ಯವು ನಡೆಯದು ಎಂದು ಬಿನ್ನೈಸಿದನು. ಅದಕ್ಕೆ ಶಿವನು—ನಿನ್ನ ಶರೀರದಿಂದಲೇ ಮಕ್ಕಳನ್ನು ಪಡೆಯೆಂದು ವರವನ್ನಿತ್ತು ಅಂತರ್ಹಿತನಾದನು. ಆ ಶಿವಪ್ರಸಾದದಿಂದ ಇತ್ತ ಬ್ರಹ್ಮನ ಮನಸ್ಸಿನಿಂದ ಮರೀಚಿಯೂ, ಕಣ್ಣಿನಿಂದ ಅತ್ರಿಯೂ, ಮುಖದಿಂದ ಅಂಗೀರಸನೂ, ಕಿವಿಯಿಂದ ಪುಲಸ್ತ್ಯನೂ, ಹೊಕ್ಕುಳಿಂದ ಪುಲಹನೂ, ಕೈಯಿಂದ ಕ್ರತುವೂ, ಚರ್ಮದಿಂದ ಭೃಗುವೂ, ಪ್ರಾಣದಿಂದ ವಸಿಷ್ಠನೂ, ಅಂಗುಷ್ಠದಿಂದ ದಕ್ಷನೂ, ಹೀಗೆ ಈ ಒಂಭತ್ತು ಮಂದಿ ಬ್ರಹ್ಮರುಗಳು ಜನಿಸಿದರು. ಇನ್ನೂ ಮಕ್ಕಳನ್ನು ಪಡೆಯಬೇಕೆಂಬಾಸೆಯು ಬ್ರಹ್ಮನಿಗುಂಟಾಗಲು, ಅವನ ತೊಡೆಯಿಂದ ನಾರದನೂ, ಬಲಗಡೆಯ ಮೊಲೆಯಿಂದ ಧರ್ಮನೂ, ನೆಳಲಿನಿಂದ ಪಾಪಪುರುಷನೂ, ಹೊಟ್ಟೆಯಿಂದ ಹಗಲುರಾತ್ರಿಗಳೂ ಗಾಯತ್ರಿ ಮೊದಲಾದ ಛಂದಸ್ಸುಗಳು ಸಕಲ ವೇದಶಾಸ್ತ್ರಗಳುಸಹ ಜನಿಸಿದುವು. ಬ್ರಹ್ಮನು ಈ ಮಕ್ಕಳೆಲ್ಲವನ್ನೂ ಕರೆದು ಜಗತ್ಸೃಷ್ಟಿಯನ್ನು ಮಾಡಿರೆಂದು ಹೇಳಲು, ಅವರೂ ಕೂಡ ನಮ್ಮಿಂದಾಗದೆಂದು ನುಡಿದರು. ಅದನ್ನು ಕೇಳಿ ಬ್ರಹ್ಮನು ಚಿಂತಾಮಗ್ನನಾಗಿ ಮನಸ್ಸಿನಲ್ಲಿ ಶಿವನ ಕ್ರಿಯಾಶಕ್ತಿಯನ್ನು ಕುರಿತು ಧ್ಯಾನಮಾಡಿ ಮೆಚ್ಚಿಸಿ,

ಪ್ರತ್ಯಕ್ಷಮಾಡಿಕೊಂಡು, ಭಯಭಕ್ತಿಭರಿತನಾಗಿ ಕೊಂಡಾಡಿ, ತಾಯೆ ! ನೀನು ಪರಶಿವನೊಡನೆ ಬೆರೆದಿರುವವರೆಗೂ ನನಗೆ ಸೃಷ್ಟಿಕಾರ್ಯವು ಅಘಟಿತವಾಗಿರುವುದು. ಅದುಕಾರಣ ನೀನು ನನ್ನ ಮಗನಾದ ದಕ್ಷಬ್ರಹ್ಮನ ಹೊಟ್ಟೆಯಲ್ಲಿ ಹುಟ್ಟಿ ಶಿವನಿಗೆ ಹೆಂಡತಿಯಾದರೆ ಆಗ ನಿನ್ನಲ್ಲಿರುವ ಶಕ್ತಿಯರು ಕೂಡ ಸ್ತ್ರೀಯರಾಗಿ ಜನಿಸುವರು. ಅವರ ಬೆಂಬಲದಿಂದ ನಾನೀಜಗತ್ಸೃಷ್ಟಿಕಾರ್ಯವನ್ನು ಸುಲಭವಾಗಿ ಮಾಡಿಕೊಳ್ಳುವೆನು. ಈ ವರವನ್ನು ತಾವು ದಯೆಪಾಲಿಸಬೇಕೆಂದು ಪ್ರಾರ್ಥಿಸಿದನು. ಹಾಗೇ ಆಗಲೆಂದು ಆ ಕ್ರಿಯಾಶಕ್ತಿಯು ವರವಿತ್ತುದಲ್ಲದೆ, ನಿನ್ನ ವರಶಕ್ತಿಯನ್ನು ಹೊರಗೆಡಹಿದರೆ ಅವಳು ಸರಸ್ವತಿಯೆಂಬ ಹೆಸರಿನಿಂದವತರಿಸುವಳು, ಅವಳೊಡನೆ ಕೂಡಿ ನೀನು ಜಗತ್ಸೃಷ್ಟಿಯನ್ನು ಮಾಡೆಂದು ಹೇಳಬಯಲಾದಳು. ಬ್ರಹ್ಮನು ತನ್ನ ಸತಿಯಾದ ಸರಸ್ವತಿಯೊಡನೆ ಕೂಡಿ ಸುಖದಿಂದಿರುತ್ತ ಶತರೂಪೆ ಸ್ವಾಯಂಭುವರಿಬ್ಬರನ್ನು ಸೃಜಿಸಿ, ಅವರಿಬ್ಬರನ್ನೂ ದಂಪತಿಗಳನ್ನು ಮಾಡಿದನು. ಅವರ ಹೊಟ್ಟೆಯಲ್ಲಿ ಪ್ರಿಯವ್ರತ, ಉತ್ತಾನಪಾದ,(ಗಂಡು)ಆಕೂತಿ, ದೇವಹೂತಿ, ಪ್ರಸೂತಿ,(ಹೆಣ್ಣು) ಎಂಬೈದುಮಂದಿ ಮಕ್ಕಳುದಿಸಿದರು. ಅವರಲ್ಲಿ ಆಕೂತಿ ಯೆಂಬುವಳನ್ನು ರುಚಿಯೆಂಬ ಬ್ರಹ್ಮನೂ, ಪ್ರಸೂತಿಯನ್ನು ದಕ್ಷಬ್ರಹ್ಮನೂ, ದೇವಹೂತಿಯನ್ನು ಕರ್ದಮನೂ, ಪತ್ನಿಯನ್ನಾಗಿ ಮಾಡಿಕೊಂಡರು. ದಕ್ಷಬ್ರಹ್ಮನಿಗೆ ಆ ಪ್ರಸೂತಿಯೆಂಬುವಳ ಹೊಟ್ಟೆಯಲ್ಲಿ ಶಿವನ ಕ್ರಿಯಾಶಕ್ತಿಯು ದಾಕ್ಷಾಯಣಿಯೆಂಬ ಹೆಸರಿನಿಂದ ಜನಿಸಿದಳು. ಈ ದಾಕ್ಷಾಯಣಿಯನ್ನು ಶಿವನಿಗೆ ಕೊಡಬೇಕೆಂಬ ಇಷ್ಟದಿಂದ ಬ್ರಹ್ಮನು ಶಿವನನ್ನು ಕುರಿತು ತಪಸ್ಸುಮಾಡಿ ಮೆಚ್ಚಿಸಿ, ಮಹಾದೇವನೇ! ನೀನು ನನ್ನ ಮಗಳನ್ನು ವರಿಸಬೇಕೆಂದು ಬೇಡಿಕೊಂಡನು. ಹಾಗೇ ಆಗಲೆಂದು ಒಪ್ಪಿ, ಶಿವನು ದಾಕ್ಷಾಯಣಿಯನ್ನು ಮದುವೆಮಾಡಿಕೊಂಡು ಮಹಾವೈಭವದಿಂದ ಕೈಲಾಸಪುರದ ಮಹಾಮಂದಿರದಲ್ಲಿ ಉಮಾಮಹೇಶ್ವರನಾಗಿ ಒಪ್ಪುತ್ತಿದ್ದನು. ಇಂತು ಪರಮಾನಂದನಿಧಿಯಾದ ಮಹೇಶ್ವರನು ಇರುತ್ತ, ಬ್ರಹ್ಮಾಂಡ ಭಾರವನ್ನೆಲ್ಲ ಕುಕ್ಷಿಯಲ್ಲಿ ಧರಿಸಿರುವ ನನ್ನನ್ನು ಹೊರುವವರು ಇನ್ನಾರೂ ಇಲ್ಲವಲ್ಲ! ಎಂದು ನೆನೆದು, ತನ್ನ ಹೃದ

ಯಾದಲ್ಲಿದ್ದ ಸದ್ಧರ್ಮವನ್ನೇ ಸ್ಮರಿಸಲು, ಅದು ಪರಮತೇಜೋಮೂರ್ತಿಯಾಗಿ ಬಂದು ನಮಸ್ಕರಿಸಿ, ಮುಂದೆ ನಿಂತಿತು. ಆಗ ಶಿವನು—ಎಲೈ ಸದ್ಧರ್ಮವೇ! ನಿನ್ನನ್ನು ನಾನು ಧರಿಸಿರುವೆನು. ನೀನು ನನ್ನನ್ನು ವೃಷಭಾಕಾರದಿಂದ ಹೊತ್ತುಕೊಳ್ಳುವನಾಗು; ನಿನಗೂ ನನಗೂ ಭೇದವಿಲ್ಲವೆಂದು ನುಡಿದನು. ಆಗ ಆ ಸದ್ಧರ್ಮವು ವೃಷಭಾಕಾರವನ್ನು ಧರಿಸಿತು. ನಾಲ್ಕು ವೇದಗಳೇ ನಾಲ್ಕು ಪಾದಗಳಾದುವು. ಆರು ಶಾಸ್ತ್ರಗಳೇ ಷಟ್ಕರಣಗಳಾದುವು. ನಾದಬಿಂದುಕಲೆಗಳೇ ತ್ರಿವಿಧಶರೀರಗಳಾದುವು. ಆದಿ ಅನಾದಿಗಳೇ ಎರಡು ಕೊಂಬುಗಳಾದುವು. ಓಂಕಾರವೇ ಶಿರಸ್ಸಾಯಿತು. ಪಂಚಾಕ್ಷರಮಂತ್ರವೇ ಮುಖವಾಯಿತು. ಉಪನಿಷತ್ತೇ ಹಿಳಲಾಯಿತು. ಧರ್ಮಶಾಸ್ತ್ರಮಂತ್ರತೀರ್ಥಗಳು ರೋಮಗಳಾದುವು. ಶಿವಾಗಮವೇ ಪ್ರಾಣವಾಯಿತು. ಈಯಾಕೃತಿಯ ವೃಷಭೇಶ್ವರನನ್ನು ಉಮಾಮಹೇಶ್ವರನು ಏರುವುದರಿಂದಲೇ ವೃಷಭವಾಹನಲೀಲೆಯುಂಟಾಯಿತು. ಈ ಲೀಲೆಯಿಂದ ಮೆರೆದ ಪರಶಿವನು ಆತ್ಮಸಮರಾದ ಪ್ರಮಥಸಂಕುಲವನ್ನು ತಾನೇ ಸೃಜಿಸಿ, ಅವರೊಡನೆ ಸಭೆಯಲ್ಲಿ ಕುಳಿತು ಸುಖಗೋಷ್ಠಿಯಿಂದಿದ್ದನು ಎಂದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ಬೋಧಿಸಿದನೆಂಬಲ್ಲಿಗೆ ಎರಡನೇ ಅಧ್ಯಾಯವು ಸಂಪೂರ್ಣವು.

---

## ೩ ನೇ ಅಧ್ಯಾಯವು.

### ದ ಕ್ಷ ಸಂ ತ ತಿ .

---

ಬಳಿಕ ಬ್ರಹ್ಮನು ತನ್ನ ಮಗನಾದ ದಕ್ಷಬ್ರಹ್ಮನನ್ನು ಕರೆದು ನೀನು ಜಗತ್ಸೃಷ್ಟಿಯನ್ನು ಮಾಡೆಂದು ಬೋಧಿಸಿದನು. ಆಗ ದಕ್ಷನು ಪಂಚಜನನ ಮಗಳಾದ ಅಸಿಕ್ನಿಯೆಂಬವಳಲ್ಲಿ ೧೦ ಸಾವಿರ ಮಂದಿ ಹರ್ಯಶ್ವರೆಂಬ ಮಕ್ಕಳನ್ನು ಪಡೆದು, ನೀವು ಜಗತ್ಸೃಷ್ಟಿಯನ್ನು ಮಾಡಿರೆಂದು ನಿಯಮಿಸಿದನು. ಅವರನ್ನು ನಾರದನು ಕಂಡು ನೀವು ಈ ಸಂಸಾರಬಂಧಕ್ಕೆ ಒಳಗಾಗಬೇಡಿರೆಂದು ಬೋಧಿಸಿ ತಕ್ಕನ್ನು ಮಾಡಿ ಆಮುಕ್ಕ

ಳನ್ನು ತಪಸ್ಸಿಗಾಗಿ ದೇಶಾಂತರಕ್ಕೆ ಕಳಿಸಿಬಿಟ್ಟನು. ಅದನ್ನು ತಿಳಿದು ದಕ್ಷನು ಪುತ್ರವಿಯೋಗದಿಂದ ಎದೆಗೆಡದೆ ಪುನಃ ಚಪಲಾಶ್ವರೆಂಬ ಅನೇಕ ಮಕ್ಕಳನ್ನು ಹುಟ್ಟಿಸಿ, ಅವರಿಗೆ ಸೃಷ್ಟಿಕಾರ್ಯವನ್ನು ನಿಯಮಿಸಿದನು. ಪುನಃ ನಾರದನು ಬಂದು ದಕ್ಷಬ್ರಹ್ಮನ ಮಾತಿನ ಬಲೆಗೆ ಸಿಕ್ಕಬೇಡಿರೆಂದು ಅವರಿಗೂ ಬೋಧಿಸಿ, ಆ ಮಕ್ಕಳನ್ನೂ ತಪಸ್ಸಿಗೆ ಕಳಿಸಿಬಿಟ್ಟನು. ಹೀಗೆ ತನ್ನ ಎರಡು ಗುಂಪಿನ ಮಕ್ಕಳುಗಳು ಕೂಡ ನಾರದನ ಕುಹಕಬೋಧೆಯಿಂದ ತನ್ನ ಮಾತನ್ನು ತಿರಸ್ಕರಿಸಿ ಹೊರಟುಹೋದುದನ್ನು ದಕ್ಷನು ತಿಳಿದು ಕೋಪಗೊಂಡು, "ಎಲೈ ನೀಚನಾರದನೇ! ನನ್ನ ಮಕ್ಕಳನ್ನು ನೀನು ಇರಗೊಡಿಸೆ. ಪುತ್ರವಿಯೋಗವನ್ನುಂಟುಮಾಡಿದ ಅಪರಾಧಕ್ಕಾಗಿ ನೀನು ಮೂರೂ ಮುಕ್ಕಾಲು ಗಳಿಗೆಯು ಹೊತ್ತು ಕೂಡ ಒಂದು ಠಾಣದಲ್ಲಿ ನಿಲ್ಲದೆ ಜಗತ್ತನ್ನೆಲ್ಲ ಸದಾ ಸುತ್ತುತ್ತಿದ್ದು, ಎಲ್ಲೆಲ್ಲೂ ಜಗಳವನ್ನು ಗಂಟಿಕ್ಕಿಸು" ಎಂದು ಶಾಪವನ್ನು ಕೊಟ್ಟು, ಬಳಿಕ ಹೆಣ್ಣುಮಕ್ಕಳನ್ನು ಪಡೆಯಬೇಕೆಂದು ನಿಶ್ಚಯಿಸಿ, ಆ ಅಸಕ್ನಿಯೆಂಬ ಪತ್ನಿಯಲ್ಲಿ ೬೦ ಮಂದಿ ಕುವರಿಯರನ್ನು ಪಡೆದು, ಅದರಲ್ಲಿ ೧೦ ಮಂದಿಯನ್ನು ಧರ್ಮನಿಗೂ, ಚಂದ್ರನಿಗೆ ೨೭ ಮಂದಿಯನ್ನೂ, ಕಶ್ಯಪನಿಗೆ ೧೩ ಮಂದಿಗಳನ್ನೂ, ಉಳಿದವರಲ್ಲಿ ಅನಸೂಯೆಯನ್ನು ಅತ್ರಿಗೂ, ಭೃಗುವಿಗೆ ಖ್ಯಾತಿಯನ್ನೂ, ಮರೀಚಿಗೆ ಸಂಭೂತಿಯನ್ನೂ, ಅಂಗೀರಸನಿಗೆ ಸ್ಮೃತಿಯನ್ನೂ, ಪುಲಸ್ತ್ಯನಿಗೆ ಪ್ರೀತಿಯನ್ನೂ, ಪುಲಹನಿಗೆ ಕ್ಷಮೆಯನ್ನೂ, ಕ್ರತುವಿಗೆ ಸನ್ನತಿಯನ್ನೂ, ವಸಿಷ್ಠನಿಗೆ ಊರ್ಜೆಯನ್ನೂ ಕೊಟ್ಟು, ಉಳಿದಿಬ್ಬರು ಮಕ್ಕಳುಗಳನ್ನು ಕೃಶಾಶ್ವನಿಗೆ ಕೊಟ್ಟು ಮದುವೆ ಮಾಡಿದನು. ಧರ್ಮನ ೧೦ ಮಂದಿ ಹೆಂಡತಿಯರಲ್ಲಿ ಕ್ರಮವಾಗಿ ಎಂದರೆ— ಅರುಂಧತಿಯಲ್ಲಿ ಕಿನ್ನರರೂ, ಯಾಮಿಯಲ್ಲಿ ನಾಗವೀಥಿಯೂ ಲಂಬೆಯಲ್ಲಿ ಸಿಡಿಲ್ಮಿಂಚುಗಳೂ, ಮರುತ್ವತಿಯಲ್ಲಿ ಮರುತ್ತುಗಳೂ, ಸುಭಾನುವಿನಲ್ಲಿ ಸಿದ್ಧರುಗಳೂ, ಸಂಕಲ್ಪೆಯಲ್ಲಿ ಸಂಕಲ್ಪರೂ, ಮುಹೂರ್ತೆಯಲ್ಲಿ ಮುಹೂರ್ತರೂ; ಸಾಧ್ಯೆಯಲ್ಲಿ ಸಾಧ್ಯರೂ, ವಿಶ್ವೆಯಲ್ಲಿ ವಿಶ್ವೇದೇವತೆಗಳೂ, ವಸುವಿನಲ್ಲಿ ಅಷ್ಟವಸುಗಳೂ ಮಕ್ಕಳಾಗಿ ಹುಟ್ಟಿದರು. ಆಪ, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ,

ಎಂಬಿವರುಗಳೇ ಅಷ್ಟವಸುಗಳು. ಇವರಲ್ಲಿ ಆಪನಿಗೆ ವೈತಂಡ್ಯ, ಶ್ರಮ ಶ್ರಾಂತ, ಧುನಿ ಯೆಂಬ ನಾಲ್ಕು ಮಕ್ಕಳು. ಧ್ರುವನಿಗೆ ಕಾಲ, ಸೋಮನಿಗೆ ಸುವರ್ಚ, ಧರನಿಗೆ ದ್ರವಿಣ, ಅನಿಲನಿಗೆ ಪುರೋಚನ, ಅನಲನಿಗೆ ಸೇನಾಪತಿ, ಪ್ರತ್ಯೂಷನಿಗೆ ದೇವಲ, ಪ್ರಭಾಸನಿಗೆ ವಿಶ್ವಕರ್ಮನೆಂಬ ಶಿಲ್ಪಕರ್ತನು ಮಕ್ಕಳುಗಳಾದರು. ಮರೀಚಿ ಬ್ರಹ್ಮನಪುತ್ರನಾದ ಕಶ್ಯಪನಿಗೆ ಅದಿತಿ, ದಿತಿ, ದನು, ತಾಮ್ರ, ವಿನತೆ, ಸುರಸೆ, ಕದ್ರು, ಸುರಭಿ, ಕ್ರೋಧೆ, ಮುನಿ, ಅರಿಷ್ಟೆ, ಇಳೆ, ಸಿಹ್ಮಿಕೆ ಯೆಂಬ ೧೩ ಮಂದಿ ಪತ್ನಿಯರು. ಇವರುಗಳ ಮಕ್ಕಳಿಗೆ ಇವರಿವರ ಹೆಸರುಗಳೇ. ಹೇಗೆಂದರೆ— ಅದಿತಿಗೆ ಧಾತ, ಅರ್ಯಮ, ಅಂಶುಮಾನ್, ವರುಣ, ಇಂದ್ರ, ಮಿತ್ರ, ರವಿ, ತ್ವಷ್ಟ, ಭಗ, ವಿವಸ್ವಾನ್ ಪೂಷ, ವಿಷ್ಣು, ಎಂಬ ದ್ವಾದಶಾದಿತ್ಯರು ಮಕ್ಕಳು. ಇವರಲ್ಲಿ ಇಂದ್ರನಿಗೆ ಪತ್ನಿಯಾದ ಶಚಿಯ ಗರ್ಭದಲ್ಲಿ ವಿದುಷ, ಜಯಂತ, ಋಷಭ, ಎಂಬ ಮಕ್ಕಳಾದರು. ವರುಣನಿಗೆ ವಾಲ್ಮೀಕಿಋಷಿಯು ಮಗನಾಗಿ ಹುಟ್ಟಿದನು. ವಿವಸ್ವತನಿಗೆ ೪ ಮಂದಿ ಪತ್ನಿಯರು. ಅವರೊಳಗೆ ಸಂಜ್ಞೆಯೆಂಬ ಪತ್ನಿಯಲ್ಲಿ ವೈವಸ್ವತಮನುವು ಹುಟ್ಟಿದನು. ರಾಜ್ಞಿ ಯೆಂಬುವಳಲ್ಲಿ ಯಮ, ಯಮುನೆ, ರೈವತರು, ಹುಟ್ಟಿದರು. ಛಾಯೆ ಯೆಂಬ ಪತ್ನಿಯಲ್ಲಿ ಸಾವರ್ಣಿ, ಶನಿ, ತಪತಿ ವಿಷ್ಟಿಗಳು ಜನಿಸಿದರು. ಪ್ರಭೆಯೆಂಬ ಪತ್ನಿಯಲ್ಲಿ ಪ್ರಭಾತನು ಹುಟ್ಟಿದನು. ನಿಮಿಯ ಶಾಪದಿಂದ ಮಿತ್ರವರುಣರಿಗೆ ದೇವಾಂಗನೆಯರ ಸಂಗದಿಂದ ಕಲಶದಲ್ಲಿ ವಸಿಷ್ಠ ಮತ್ತು ಅಗಸ್ತ್ಯರು ಹುಟ್ಟಿದರು.

ದಿತಿಯ ಹೊಟ್ಟೆಯಲ್ಲಿ ಕಶ್ಯಪನಿಗೆ ಹಿರಣ್ಯಕಶಿಪು, ಹಿರಣ್ಯಾಕ್ಷರೆಂಬ ಇಬ್ಬರು ಗಂಡುಮಕ್ಕಳೂ, ಸಿಹ್ಮಿಕೆಯೆಂಬ ಮಗಳೂ ಹುಟ್ಟಿದರು. ಹಿರಣ್ಯಕಶಿಪುವಿಗೆ ಪ್ರಹ್ಲಾದ, ಅನುಹ್ಲಾದ, ಸಂಹ್ಲಾದ, ಹ್ಲಾದ ಮೊದಲಾದ ಸಾವಿರಮಂದಿ ಮಕ್ಕಳು ಹುಟ್ಟಿದರು. ಅವರಲ್ಲಿ ಪ್ರಹ್ಲಾದನಿಗೆ ಶಿಷ್ಕಾಲಿಯೆಂಬ ಪತ್ನಿಯಲ್ಲಿ ವಿರೋಚನ, ನಿಕುಂಭ, ಕುಂಭ ಎಂಬ ಮಕ್ಕಳು ಹುಟ್ಟಿದರು. ವಿರೋಚನನ ಹೊಟ್ಟೆಯಲ್ಲಿ ಬಲಿಯು, ಹುಟ್ಟಿದನು. ಬಲಿಗೆ ನೂರುಮಂದಿ ಮಕ್ಕಳು. ಅವರಲ್ಲಿ ಪ್ರಮುಖನು ಬಾಣಾಸುರನು. ಬಾಣನಿಗೆ ಧನದೆಯೆಂಬ ಪತ್ನಿಯಲ್ಲಿ ನಮುಚಿ, ಸುವ

ರುಣ, ವಿಪ್ರಜಿತು, ಪುಲೋಮ ಮೊದಲಾದ ನಲವತ್ತು ಮಂದಿ ಮಕ್ಕಳು ಜನಿಸಿದರು. ಅವರಲ್ಲಿ ವಿಪ್ರಜಿತುವಿಗೆ ಸಿಂಹಿಕೆಯೆಂಬ ಪತ್ನಿಯಲ್ಲಿ ನರಕ, ಸ್ವರ್ಭಾನು, ವಾತಾಪಿ, ಇಲ್ವಲ ಮೊದಲಾದ ಮಕ್ಕಳು ಹುಟ್ಟಿದರು. ಹಿರಣ್ಯಾಕ್ಷನ ಹೊಟ್ಟೆಯಲ್ಲಿ ಅಂಧಕಾಸುರನು ಹುಟ್ಟಿದನು. ಅವನಿಗೆ ಉಪದಾನವಿಯೆಂಬುವಳಲ್ಲಿ ಸಂತಾಪನ, ಶಕುನಿ, ಜರ್ಝರ, ಮಹಾನಾಭ ಮುಂತಾದವರು ಮಕ್ಕಳಾಗಿ ಹುಟ್ಟಿದರು. ಬಳಿಕ ಕಶ್ಯಪನಿಗೆ ದನು ಎಂಬ ಪತ್ನಿಯಲ್ಲಿ ತಾರಕ, ವಿದಾತ, ಶಂಖಶಿರ, ಗಗನಮೂರ್ಧ, ಶಕುನಿ, ಸುರಾಂತಕ, ಮರೀಚಿ, ದುಂದುಭಿ, ವಜ್ರನಾಭ, ಶರಭ, ಶಂಬರ, ಶಬಲ, ವಿಪ್ರಜಿತು ಮೊದಲಾದ ನೂರು ಮಂದಿ ಮಕ್ಕಳು ಉದಿಸಿದರು. ಕಶ್ಯಪನಿಗೆ ತಾಮ್ರೆಯೆಂಬ ಪತ್ನಿಯಲ್ಲಿ ಒಂದು ಗೊರಸುಳ್ಳ ಕತ್ತೆ ಕುದುರೆ ಮೊದಲಾದುವುಗಳೂ ಪಕ್ಷಿಗಳೂ ಜನಿಸಿದುವು. ಕಶ್ಯಪನಿಗೆ ವಿನತೆಯಲ್ಲಿ ಅರುಣ ಗರುಡರೂ ಸೌದಾಮಿನಿಯೆಂಬ ಮಗಳೂ ಹುಟ್ಟಿದರು. ಅರುಣನಿಗೆ ಶೋಣಿತೆಯೆಂಬ ಪತ್ನಿಯಲ್ಲಿ ಸಂಪಾತಿ ಜಟಾಯುವೆಂಬುವರು ಹುಟ್ಟಿದರು. ಕಶ್ಯಪನಿಗೆ ಸುರಸೆಯಲ್ಲಿ ಅನೇಕ ಶಿರಸ್ಸುಗಳೂ ರೆಕ್ಕೆಗಳೂ ಉಳ್ಳ ಉರಗಗಳು ಒಂದು ಸಾವಿರ ಹುಟ್ಟಿದುವು. ಕಶ್ಯಪನಿಗೆ ಕದ್ರುವಿನಲ್ಲಿ ಆದಿಶೇಷ, ವಾಸುಕಿ, ಕರ್ಕೋಟಕ, ಶಂಖಪಾಲ, ಐರಾವತ, ಕಂಬಳ, ಅಶ್ವತರ, ಪುಷ್ಪದಂಷ್ಟ್ರ, ನಹುಷ, ವಾಹುನ ಮೊದಲಾದ ಸಾವಿರ ನಾಗೇಂದ್ರರು ಜನಿಸಿದರು. ಬಳಿಕ ಕಶ್ಯಪನಿಗೆ ಸುರಭಿಯೆಂಬುವಳಲ್ಲಿ ಅಮೃತವೂ, ಕಾಮಧೇನುವೂ, ಹಸು ಎಮ್ಮೆಗಳೂ, ಅಪ್ಸರಸ್ತ್ರೀಯರೂ, ಕ್ರೋಧೆಯಲ್ಲಿ ರಕ್ಷೋಗಣವೂ ಗಜ ಸಿಂಹ ವ್ಯಾಘ್ರಾದಿಗಳೂ, ಮುನಿಯೆಂಬುವಳಲ್ಲಿ ಮುನಿಗಣವೂ, ನವರತ್ನವೂ, ಅರಿಷ್ಟೆಯಲ್ಲಿ ಕಿನ್ನರಗಂಧರ್ವರೂ, ತುಂಬುರರೂ, ಇಳೆಯೆಂಬುವಳಲ್ಲಿ ಗಿರಿ ತರು ಲತೆ ಮೊದಲಾದುವುಗಳೂ, ಸಿಂಹಿಕೆಯೆಂಬುವಳಲ್ಲಿ ರಾಹು ಮೊದಲಾದ ನಲವತ್ತು ಮಂದಿಗಳೂ ಮಕ್ಕಳಾಗಿ ಜನಿಸಿದರು. ಹೀಗೆ ಮರೀಚಿ ಬ್ರಹ್ಮನಿಂದ ಕಶ್ಯಪನ ಸಂತತಿಯು ಜಗತ್ತಿನಲ್ಲಿ ವೃದ್ಧಿಗೊಂಡಿರುವುದು.

ಬಳಿಕ ಅತ್ರಿ ಸಂತತಿ ಹೇಗೆಂದರೆ—ಅತ್ರಿ ಬ್ರಹ್ಮನಿಗೆ ಹತ್ತು ಮಂ

ವಿ ಪತ್ನಿಯರು. ಅವರಲ್ಲಿ ಅನಸೂಯೆಯೆಂಬುವಳಿಗೆ ಚಂದ್ರನೂ, ದತ್ತಾತ್ರೇಯನೂ, ದೂರ್ವಾಸನೂ ಮಕ್ಕಳಾಗಿ ಹುಟ್ಟಿದರು.

ಅಂಗೀರಸಬ್ರಹ್ಮನಿಗೆ ಸ್ಮೃತಿಯೆಂಬುವಳಲ್ಲಿ ಗುರು, ಸಂವರ್ತ, ಯೋಗ, ಸಿದ್ಧಿಗಳೆಂಬ ಮಕ್ಕಳು ಹುಟ್ಟಿದರು.

ಪುಲಸ್ತ್ಯಬ್ರಹ್ಮನಿಗೆ ಪ್ರೀತಿ ಅಥವಾ ಇಲಬಿಲೆಯೆಂಬ ಪತ್ನಿಯಲ್ಲಿ ವಿಶ್ರವಸ್ಸುಯೆಂಬುವನು ಹುಟ್ಟಿದನು. ವಿಶ್ರವಸ್ಸುಗೆ ದೇವವರ್ಣೆಯೆಂಬುವಳಲ್ಲಿ ಕುಬೇರನೂ, ಕಿನ್ನರರೂ, ಕೈಕಸೆಯೆಂಬ ಪತ್ನಿ(ರಾಕ್ಷಸಕನ್ಯೆಯಲ್ಲಿ) ರಾವಣ, ಕುಂಭಕರ್ಣ, ವಿಭೀಷಣರೆಂಬ ಮೂವರು ಗಂಡುಮಕ್ಕಳೂ, ಪುಷ್ಪೋತ್ಕಟಯೆಂಬ ಪತ್ನಿ (ರಾಕ್ಷಸಕನ್ಯೆ) ಯಲ್ಲಿ ವಿಶ್ರವಸ್ಸುಗೆ ಖರ, ದೂಷಣ, ತ್ರಿಶಿರರೆಂಬ ಮೂವರು ಗಂಡುಮಕ್ಕಳೂ, ಶೂರ್ಪನಖಿಯೆಂಬ ಒಬ್ಬ ಹೆಣ್ಣುಮಗಳೂ ಜನಿಸಿದರು.

ಪುಲಹಬ್ರಹ್ಮನಿಗೆ ಕಿನ್ನರ ಕಿಂಪುರುಷರೂ ಹುಲಿ ಕರಡಿ ಕಪಿ ಆನೆ ಮೊದಲಾದ ಮೃಗಗಳೂ ಜನಿಸಿದುವು.

* ಕ್ರತು ಬ್ರಹ್ಮನಿಗೆ ಸನ್ನುತಿಯೆಂಬ ಪತ್ನಿಯಲ್ಲಿ ಸಹಚರಿಪತಂಗರು ಜನಿಸಿದರು.

ಭೃಗು ಬ್ರಹ್ಮನಿಗೆ ಪುಲೋಮಿಯೆಂಬುವಳಲ್ಲಿ ಉಶನ, ಕವಿ, ಚ್ಯವನರೆಂಬುವರು ಮಕ್ಕಳು. ಅವರಲ್ಲಿ ಕವಿಗೆ ಶುಕ್ರನೆಂಬ ಮಗನಾದನು. ಚ್ಯವನನೆಂಬುವನಿಗೆ ಕರ್ಣಿಕೆಯೆಂಬುವಳಲ್ಲಿ ಒಬ್ಬ ಮಗನು ಹುಟ್ಟಿದನು. ಅವನಿಗೆ ರುಚಿಕನು ಮಗನಾದನು. ಆ ರುಚಿಕನಿಗೆ ಜಮದಗ್ನಿಯೂ, ಅವನಿಂದ ಪರಶುರಾಮನೂ, ಜನಿಸಿದರು. ಈ ಪರಶುರಾಮನಿಗೆ ವಿಶ್ವಾಮಿತ್ರನು ಅಳಿಯನು.

ವಸಿಷ್ಠ ಬ್ರಹ್ಮನಿಗೆ ಅರುಂಧತಿಯೆಂಬ ಪತ್ನಿಯಲ್ಲಿ ನೂರುಮಂದಿ ಮಕ್ಕಳು. ಎಲ್ಲರೂ ವಿಶ್ವಾಮಿತ್ರನ ಶಾಪದಿಂದ ಹತರಾಗಿ ಶಕ್ತಿಯೆಂಬೊಬ್ಬನು ಮಾತ್ರ ಉಳಿದನು. ಆತನಿಂದ ಪರಾಶರನು ಜನಿಸಿದನು. ಅವನಿಂದ ಯೋಜನಗಂಧಿಯೆಂಬುವಳಲ್ಲಿ ವ್ಯಾಸನೂ, ಅವನಿಂದ ಶುಕಮುನಿಯೂ ಜನಿಸಿದರು.

---

* ಕ್ರತುವಿಗೆ ಸಂತಾನವಿಲ್ಲವೆಂದು ಕೂರ್ಮಲೈಂಗ್ಯಪುರಾಣಗಳಲ್ಲಿ ಹೇಳಲ್ಪಟ್ಟಿದೆ.

ಅತ್ರಿ ಕರ್ದಮನು ಪರಿಗ್ರಹಿಸಿದ ದೇವಹೂತಿಯಲ್ಲಿ ಕಪಿಲ, ಕರ್ಣಿಕೆಯೆಂಬ ಮಕ್ಕಳು ಹುಟ್ಟಿದರು. ಅವರಲ್ಲಿ ಕರ್ಣಿಕೆಯನ್ನು ದೇವಹೂತಿಯು ಒಡಹುಟ್ಟಿದ ಪ್ರಿಯವ್ರತನಿಗೆ ಕೊಟ್ಟು ಮದುವೆ ಮಾಡಿದರು. ಅವರ ಹೊಟ್ಟೆಯಲ್ಲಿ ಅಗ್ನಿಬಾಹು ಮೇದಸ್ಸು ಮೊದಲಾದ ೧೦ ಮಂದಿ ಮಕ್ಕಳು ಜನಿಸಿದರು. ಅವರಲ್ಲಿ ಮೊದಲನೇ ಮೂವರು ಯತಿಗಳಾದರು. ಸ್ವಾಯಂಭುವಿನ ಹಿರೀಮಗನಾದ ಉತ್ತಾನಪಾದನಿಗೆ ಧ್ರುವನೆಂಬ ಮಗನಾದನು.

ದಕ್ಷಬ್ರಹ್ಮನ ಕೊನೆಯ ಇಬ್ಬರು ಹೆಣ್ಣುಮಕ್ಕಳಲ್ಲಿ ಕೃಶಾಶ್ವನಿಗೆ ಧೂಮಕೇತು ಮೊದಲಾದುವುಗಳು ಜನಿಸಿದುವು.

ಬ್ರಹ್ಮನಿಂದುತ್ಪನ್ನವಾದ ತಮಸ್ಸಿನಿಂದ ಅಧರ್ಮನು ಹುಟ್ಟಿದನು. ಆ ಅಧರ್ಮನ ಪತ್ನಿಯಾದ ಮೃಷೆಯಲ್ಲಿ ಡಂಭನೂ, ಮಾಯೆಯೂ ಜನಿಸಿದರು. ಆ ಮಾಯೆಯ ಹೊಟ್ಟೆಯಲ್ಲಿ ನಿಬೃತಿಗೆ ಲೋಭ, ವಿಕೃತಿಗಳು ಹುಟ್ಟಿದುವು. ಆ ಲೋಭದಿಂದ ಕ್ರೋಧವೂ, ವಿಕೃತಿಯಿಂದ ಹಿಂಸೆಯೂ ಹುಟ್ಟಿದುವು. ಆ ಕ್ರೋಧದಿಂದ ದುರುಕ್ತಿಯೂ, ಹಿಂಸೆಯಿಂದ ದುಃಖವೂ, ಬಳಿಕ ದುರುಕ್ತಿಯಿಂದ ಭಯವೂ ದುಃಖದಿಂದ ಮೃತ್ಯುವೂ, ಆ ಭಯಮೃತ್ಯುಗಳಿಂದ ನರಕ ಯಾತನೆಗಳೂ, ಅವುಗಳಿಂದ ದುರ್ನೀತಿ, ದುರ್ಮಾರ್ಗ, ಕಪಟ, ದ್ರೋಹ ಮುನಿಸು, ರೋಗ ಜರೆ ಮೊದಲಾದುವುಗಳೂ ಹುಟ್ಟಿದುವು. ಇವಕ್ಕೆ ಹೆಂಡತಿ ಮಕ್ಕಳಿಲ್ಲ.

ವೀರಭದ್ರ, ಶಂಭು, ಗಿರೀಶ, ಅಜೈಕಪಾತ್, ಪಶುಪತಿ, ಅಹಿರ್ಬುಧ್ನ್ಯ, ಉಗ್ರ, ಪಿನಾಕಿ, ಸ್ಥಾಣು, ಭವ, ಭುವನಾಧೀಶ ಎಂಬಿವರು ಪರಶಿವನಿಂದಾದ ಏಕಾದಶರುದ್ರರು. ಮರೀಚಿ, ಕಶ್ಯಪ, ಗೌತಮ, ಅತ್ರಿ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ ಇವರೇ ಸಪ್ತರ್ಷಿಗಳು. ಸ್ವಾಯಂಭುವ, ಸ್ವಾರೋಚಿಷ, ವೈವಸ್ವತ, ಉತ್ತಮ, ರೈವತ, ತಾಮಸ, ಚಾಕ್ಷುಷ, ರೌಚ್ಯ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ ಧರ್ಮಸಾವರ್ಣಿ, ದಕ್ಷಸಾವರ್ಣಿ, ಸೂರ್ಯಸಾವರ್ಣಿ, ಅಗ್ನಿಸಾವರ್ಣಿ ಎಂಬಿವರೇ ೧೪ ಮನುಗಳು. ಪ್ರತಿಯೊಂದು ಮನ್ವಂತರಗಳಲ್ಲೂ ಋಷಿಗಳೂ, ಇಂದ್ರರುಗಳೂ, ದೇವತೆಗಳೂ ಬೇರೆಬೇರೆ ನಾಮದಿಂದಿರುವರು. ಎಂ

ದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ನಿರೂಪಿಸಿದನೆಂಬಲ್ಲಿಗೆ ಮೂರ
ನೇ ಅಧ್ಯಾಯವು ಸಂಪೂರ್ಣವು.

## ೪ ನೇ ಅಧ್ಯಾಯವು.

### ಲೋಕವರ್ಣನವು.

ಬ್ರಹ್ಮನು ಶಿವಾಜ್ಞೆಯಿಂದ ಬ್ರಹ್ಮಾಂಡದಲ್ಲಿ ಚರಾಚರಾತ್ಮಕವಾ
ದ ಸೃಷ್ಟಿಯನ್ನು ಮೇಲೆ ತಿಳಿಪಿದಂತೆ ಮಾಡಿದ ಬಳಿಕ ಇವುಗಳ ಆ
ಶ್ರಯಕ್ಕಾಗಿ ಒಂದೊಂದು ಸ್ಥಾನಗಳನ್ನು ಕಲ್ಪಿಸಿದ ರೀತಿಯನ್ನು ವಿವ
ರಿಸುವೆನೆಂದು ಚೆನ್ನಬಸವೇಶನು ಸಿದ್ಧರಾಮೇಶನನ್ನು ಕುರಿತು ಹೇಳ
ತೊಡಗಿದನು. ಬ್ರಹ್ಮಾಂಡಮಂಡಲದ ಕೆಳಭಾಗದಲ್ಲಿ ಇಪ್ಪತ್ತೈದುಕೋ
ಟಿ ಯೋಜನದಳತೆಯಲ್ಲಿ ಜಲವು ತುಂಬಿರುವುದು. ಆ ನೀರಿನಮೇಲೆ ಆ
ದಿಕೂರ್ಮನು (ಆಮೆ) ಇರುತ್ತಿರುವನು. ಅದರಮೇಲೆ ಆದಿಶೇಷನು ಕು
ಳಿತಿರುವನು. ಅವನ ಸುತ್ತಲೂ ೮ ದಿಗ್ಗಜಗಳು ನಿಂತಿರುವವು. ಅದರ
ಮೇಲೆ ಭೂಮಂಡಲವು ಒಂದು ಕೋಟಿ ಯೋಜನದೆತ್ತರವಾಗಿಯೂ, ಐ
ವತ್ತು ಕೋಟಿ ಯೋಜನದಗಲವುಳ್ಳದ್ದಾಗಿಯೂ ಇರುವುದು. ಆ ಭೂ
ಮಂಡಲದೊಳಗೆ ಒಂದರಲ್ಲೊಂದೊಂದರಂತೆ ಇಟ್ಟಿರುವ ಬರಣಿಗಳ ಹಾ
ಗೆ ಏಳು ಲೋಕಗಳಿರುತ್ತಿರುವುವು. ಅವು ೩೦ ಸಾವಿರ ಯೋಜನ
ದೆತ್ತರ, ಹತ್ತು ಕೋಟಿ ಯೋಜನದಗಲವುಳ್ಳವಾಗಿರುವುವು. ಆ
ಲೋಕಗಳಲ್ಲಿ ಒಂದರಿಂದೊಂದಕ್ಕೆ ಮಧ್ಯೆ ಇರುವ ಅವಕಾಶವು
೧೬೩೪೭೫೦ ಯೋಜನ. ಈ ಲೋಕಗಳನ್ನೆಲ್ಲ ಬಳಸಿಕೊಂಡಿರುವ
ಭೂಮಿಯು ೨೦ ಕೋಟಿ ಯೋಜನವುಳ್ಳದ್ದಾಗಿಬ್ರಹ್ಮಾಂಡದ ಓಟೆ
ಯನ್ನು ಕಟ್ಟಿಕೊಂಡಿರುವುದು. ಅದರ ಮೇಲ್ಭಾಗವೇ ಭೂಲೋ
ಕವೆನಿಸಿಕೊಳ್ಳುವುದು. ಈ ಭೂತಲದ ಕೆಳಗೆ ಅತಲ ವಿತಲ ಸು
ತಲ ತಲಾತಲ ಮಹಾತಳ ರಸಾತಳ ಪಾತಾಳಗಳೆಂಬ ಏಳು ಲೋಕ
ಗಳಿರುವುವು. ಇವು ಪ್ರತಿಯೊಂದೂ ಮೂರು ಮೂರು ಖಂಡಗಳಾಗಿ
ಒಂದೊಂದಕ್ಕೆ ಕ್ರಮವಾಗಿ ದೈತ್ಯ, ಭುಜಂಗ, ರಾಕ್ಷಸರೊಬ್ಬೊಬ್ಬರು ಅ
ಧಿಪತಿಗಳಾಗಿರುವರು. ಪ್ರತಿಯೊಂದು ಲೋಕವೂ ಒಂದೊಂದು ಬಣ್ಣವು

ಳ್ಳದ್ದಾಗಿರುವುದು. ಅಲ್ಲಿನ ಜನರು ಒಂದೊಂದು ಲಿಂಗವನ್ನು ಪೂಜಿಸುವರು. ಹೇಗೆಂದರೆ— ಪಾತಾಳಲೋಕವು ಸುವರ್ಣಛಾಯೆಯುಳ್ಳದ್ದು. ಅದಕ್ಕೆ ಶೇಷ, ಬಲಿ, ಮುಚಕುಂದರೆಂಬುವರು ಅಧಿಪತಿಗಳಾಗಿರುವರು. ಅಲ್ಲಿನವರು ಶಿವಲಿಂಗವನ್ನು ಪೂಜಿಸುವರು. ರಸಾತಲವು ಬೆಳ್ಳಿಯ ಬಣ್ಣವುಳ್ಳದ್ದು. ಅಲ್ಲಿಗೆ ವಾಸುಕಿ, ಸುಪರ್ಣರು ಅಧಿಪತಿಗಳು. ಅಲ್ಲಿನವರು ಶಂಭುಲಿಂಗವನ್ನಾರಾಧಿಸುವರು. ಮಹಾತಳವು ತಾಮ್ರವರ್ಣವುಳ್ಳದ್ದಾಗಿ, ಹಿರಣ್ಯಾಕ್ಷ ನರಕಾಸುರರು ಅದಕ್ಕೆ ಅಧಿಪತಿಗಳಾಗಿರುವರು. ಅಲ್ಲಿನವರು ಶಂಕರಲಿಂಗವನ್ನು ಪೂಜಿಸುವರು. ತಳಾತಳಲೋಕವು ಕೆಂಚಿನಬಣ್ಣದ್ದು. ಅಲ್ಲಿಗೆ ಮಯ ಕಾಲನೇಮಿ ಕರ್ಕೋಟಕಗಳು ಅಧಿಪತಿಗಳು. ನೀಲಕಂಠಲಿಂಗವನ್ನು ಅಲ್ಲಿನವರು ಪೂಜಿಸುವರು. ಸುತಳವು ಹವಳದ ಬಣ್ಣವುಳ್ಳದ್ದು. ಅಲ್ಲಿಗೆ ತಾರಕ ಪ್ರಹ್ಲಾದರು ಅಧಿಪತಿಗಳು. ಅಲ್ಲಿನವರು ಉಮಾಪತಿಲಿಂಗವನ್ನು ಅರ್ಚಿಸುವರು. ವಿತಳವು ನಿರ್ಮಲ ವರ್ಣವುಳ್ಳದ್ದು. ಅದಕ್ಕೆ ಶಂಖಪಾಲ ಮೊದಲಾದ ಸರ್ಪಾಧಿಪತಿಗಳು ಒಡೆಯರು. ಅಲ್ಲಿನವರು ಸರ್ವೇಶ್ವರಲಿಂಗವನ್ನಾರಾಧಿಸುವರು. ಅತಳವು ನೀಲವರ್ಣವುಳ್ಳದ್ದು. ಅಲ್ಲಿಗೆ ನಮುಚಿ ಅಧಿಪತಿ. ಅಲ್ಲಿನ ಜನರು ಮಹಾದೇವಲಿಂಗವನ್ನಾರಾಧಿಸುವರು. ಈ ಪಾತಾಳಲೋಕಗಳ ಮೇಲೆ ಭೂಲೋಕವು ಬರಣಿಗಳ ಮೇಲಿನ ಮುಚ್ಚಳದಂತೆ ಇರುವುದು. ಅದರ ಮಧ್ಯದಲ್ಲಿ ಸುವರ್ಣದ ಮಹಾಲಿಂಗದಂತೆ ಮೇರುಪರ್ವತವು ಶೋಭಿಸುತ್ತಿರುವುದು. ಈ ಭೂಮಂಡಲದ ಸಾಮ್ರಾಜ್ಯಪಟ್ಟವನ್ನು ಸ್ವಾಯಂಭುವಮನುವು ಪ್ರಿಯವ್ರತನೆಂಬ ಮಗನಿಗೆ ಕಟ್ಟಿದನು. ಆತನು ಸಕಲ ಭೂಭಾರವನ್ನೂ ತಾನೇ ವಹಿಸಿ ರಾಜ್ಯವನ್ನಾಳುತ್ತ, "ತನ್ನ ರಾಜ್ಯದಲ್ಲಿ ಸೂರ್ಯನು ಸಂಚರಿಸಲವಶ್ಯಕವಿಲ್ಲ, ನನ್ನ ಲೋಕಕ್ಕೆ ನನ್ನ ದೇಹಕಾಂತಿಯೇ ಸಾಕು'' ಎಂದು ನುಡಿಯಲು, ಸೂರ್ಯನು ರಥಾರೂಢನಾಗಿ ಮೇರುಪರ್ವತವನ್ನು ಏಳುಬಾರಿ ಸುತ್ತಿ ಬರಲು ಅವನ ರಥದ ಹಿಂದೇ ಗಾಲಿಯ ಏಳು ಸುತ್ತಿನಲ್ಲೂ ಏಳು ಸಮುದ್ರಗಳೂ ಅವರ ಪರಸ್ಪರ ಮಧ್ಯಭಾಗಗಳು ಸಪ್ತದ್ವೀಪಗಳೂ ಆದುವು. ಮೊದಲನೇ ಜಂಬೂದ್ವೀಪವು ೧ ಲಕ್ಷ ಯೋಜನದಗಲತೆಯುಳ್ಳದ್ದು. ಅದನ್ನು ಬಳಸಿರುವ

ಲವಣಸಮುದ್ರವು ೧ ಲಕ್ಷ ಯೋಜನದಳತೆಯುಳ್ಳದ್ದು. ಅದರ ಹೊರಗೆ ೨ ಲಕ್ಷ ಯೋಜನದಳತೆಯುಳ್ಳ ಪ್ಲಕ್ಷದ್ವೀಪವೂ ಅದರ ಹೊರಗೆ ಅಷ್ಟೇ ಅಳತೆಯ ಇಕ್ಷುಸಮುದ್ರವೂ, ಅದರ ಹೊರಗೆ ನಾಲ್ಕು ಲಕ್ಷ ಯೋಜನದಳತೆಯ ಶಾಲ್ಮಲಿದ್ವೀಪವೂ, ಅದನ್ನು ಬಳಸಿ ಅಷ್ಟೇ ಅಳತೆಯ ಸುರಾಸಮುದ್ರವೂ, ಅದರ ಸುತ್ತಿನಲ್ಲಿ ಎಂಟು ಲಕ್ಷ ಯೋಜನದಳತೆಯ ಕುಶದ್ವೀಪವೂ, ಅದರ ಹೊರಗೆ ಅಷ್ಟೇ ಅಳತೆಯ ಘೃತಸಮುದ್ರವೂ, ಅದರ ಹೊರಗೆ ೧೬ ಲಕ್ಷ ಯೋಜನದ ಕ್ರೌಂಚದ್ವೀಪವೂ, ಅದನ್ನು ಬಳಸಿ ಅಷ್ಟೇ ಅಳತೆಯ ದಧಿಸಮುದ್ರವೂ, ಅದರ ಹೊರಗೆ ೩೨ ಲಕ್ಷ ಯೋಜನದಳತೆಯ ಶಾಕದ್ವೀಪವೂ, ಅದನ್ನು ಬಳಸಿ ಅಷ್ಟೇ ಅಳತೆಯ ಕ್ಷೀರಸಮುದ್ರವೂ, ಅದರ ಹೊರಗೆ ೬೪ ಲಕ್ಷಯೋಜನದ ಪುಷ್ಕರದ್ವೀಪವೂ, ಅದನ್ನು ಬಳಸಿ ಅಷ್ಟೇ ಅಳತೆಯ ಸ್ವಾದೂದಕಸಮುದ್ರವೂ ಇರುತ್ತಿರುವುವು. ಅದರ ಹೊರಗೆ ೧೦ ಕೋಟಿ ಯೋಜನದಳತೆಯ ಲೋಕಾಲೋಕಪರ್ವತವೂ, ಅದರ ಹೊರಗೆ ಸೂರ್ಯಸಂಚಾರವಿಲ್ಲದ ಅಂಧಕಾರ ಭೂಮಿಯು ೨ ಕೋಟಿ ೪೦ ಲಕ್ಷ ಯೋಜನದಳತೆಯುಳ್ಳದ್ದಾಗಿರುವುದು. ಮೇಲ್ಕಂಡ ಸಪ್ತದ್ವೀಪ ಸಪ್ತ ಸಮುದ್ರಗಳಗಲವು ಒಂದುಕಡೆ ೨ ಕೋಟಿ ೫೪ ಲಕ್ಷ, ಮೇರುಪರ್ವತದಗಲ ೧೦ ಕೋಟಿ, ಲೋಕಾಲೋಕಪರ್ವತದಗಲ ೧೦ ಕೋಟಿ, ಅಂಧಕಾರಭೂಮಿ ೨ ಕೋಟಿ ೪೬ ಲಕ್ಷ ಅಂತೂ ಮೇರುವಿನಿಂದ ಇತ್ತ ೨೫ ಕೋಟಿ ಯೋಜನದಳತೆಯಿರುವುದು. ಇದರಂತೆ ಯೋಜನಸಂಖ್ಯೆಯನ್ನೆಣಿಸಿದರೆ ನಾಲ್ಕುದಿಕ್ಕಿಗೂ ೨೫-೨೫ ಕೋಟಿ ಯೋಜನದಂತೆ ಆಗುವುದರಿಂದ ಬ್ರಹ್ಮಾಂಡವಳತೆಯು ನೂರು ಕೋಟಿ ಯೋಜನವಾಗುವುದು.

ಹಿಂದೆ ಹೇಳಿದ ಸ್ವಾಯಂಭುವಮನುವಿನ ಇಬ್ಬರು ಮಕ್ಕಳಾದ ಉತ್ತಾನಪಾದ ಪ್ರಿಯವ್ರತರೆಂಬಿವರಲ್ಲಿ ಉತ್ತಾನಪಾದನ ಮಗನಾದ ಧ್ರುವನು ನಕ್ಷತ್ರಮಂಡಲಕ್ಕಾಶ್ರಯನಾಗಿ ಧ್ರುವಲೋಕದಲ್ಲಿರುವನು. ೨ ನೇ ಪ್ರಿಯವ್ರತನಿಗೆ ಅಗ್ನೀಧ್ರ, ಮೇಧಾತಿಥಿ, ವಪುಷ್ಮಾನ್, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಸವನ, ಎಂಬೇಳುಮಂದಿ ಮಕ್ಕಳು. ಪ್ರಿಯವ್ರತರಾಜನು ಏಳು ದ್ವೀಪಗಳನ್ನೂ ಈ ಏಳು ಮಂದಿ ಮಕ್ಕಳಿಗೆ ಒಬ್ಬೊಬ್ಬ

ಬ್ಬರಿಗೊಂದೊಂದರಂತೆ ಹಂಚಿಕೊಟ್ಟನು. ಹಿರಿಯ ಮಗನಾದ ಅಗ್ನೀಧ್ರ
ನು ಜಂಬೂದ್ವೀಪಕ್ಕೊಡೆಯನಾದನು. ಅವನಿಗೆ ನಾಭಿ, ಕಿಂಪುರುಷ,
ಹರಿ, ಇಳಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ, ಕೇತು
ಮಾಲರೆಂಬ ೯ ಮಂದಿ ಮಕ್ಕಳು. ಅಗ್ನೀಧ್ರನು ತನ್ನ ಜಂಬೂದ್ವೀ
ಪವನ್ನು ೯ ಭಾಗ ಮಾಡಿ ೯ ಮಂದಿ ಮಕ್ಕಳಿಗೂ ಹಂಚಿಕೊಟ್ಟನು.
ಇವೇ ೯ ವರ್ಷಗಳೆನಿಸಿಕೊಂಡು, ಅವರವರ ಹೆಸರಿನಿಂದಿರುವುವು.
ಅವರಲ್ಲಿ ಮೊದಲನೇ ನಾಭಿ ಯೆಂಬುವನಿಗೆ ವೃಷಭನೆಂಬ ಮಗನಾದನು.
ಇವನಿಗೆ ಭರತನೆಂಬ ಮಗನು ಹುಟ್ಟಿದನು. ಅವನಾಳಿದುದರಿಂದಲೇ
ಈಭೂಭಾಗಕ್ಕೆ ಭರತಖಂಡವೆಂಬ ಹೆಸರಾಯಿತು. ಇದು ಚಿತ್ರವರ್ಣದ ಭೂ
ಮಿಯನ್ನು ಹೊಂದಿರುವುದು. ಮೇರುಪರ್ವತದ ದಕ್ಷಿಣ ಭಾಗದಲ್ಲಿರು
ವ ಈ ಭಾರತವರ್ಷಭೂಮಿಯು ೧೨ ಸಾವಿರ ಯೋಜನದ ವಿಸ್ತೀರ್ಣ
ವುಳ್ಳದ್ದಾಗಿ ಬಿಲ್ಲಿನ ಆಕಾರದಿಂದಿರುವುದು. ಇದರ ೩ ದಿಕ್ಕಿಗೂ ಲವಣಸ
ಮುದ್ರವೂ, ಉತ್ತರದಿಕ್ಕಿನಲ್ಲಿ ಹಿಮವತ್ಪರ್ವತವೂ ಮೇರೆಯಾಗಿರುವುವು.
ಇದು ೧ ಸಾವಿರಯೋಜನದಗಲವೂ, ೨ ಸಾವಿರಯೋಜನದುದ್ದವೂವುಳ್ಳ
ದ್ದಾಗಿರುವುದು. ಆ ಹಿಮವತ್ಪರ್ವತದ ಉತ್ತರಕ್ಕೆ ಕಿಂಪುರುಷ ವರ್ಷ
ವಿರುವುದು. ಇದು ಪೂರ್ವ ಪಶ್ಚಿಮಸಮುದ್ರಗಳವರೆಗೂ ವ್ಯಾಪಿಸಿ, ೧೧
ಸಾವಿರಯೋಜನವಿಸ್ತಾರದಿಂದ ಕೂಡಿ ಸುವರ್ಣದಿಂದೊಪ್ಪುತ್ತಿರುವು
ದು. ಅದರಿಂದುತ್ತರಕ್ಕೆ ಮೇರುಪರ್ವತವಿರುವುದು. ಅದು ೧ ಸಾವಿರ
ಯೋಜನದುದ್ದವುಳ್ಳದ್ದು, ಐನೂರು ಯೋಜನದಗಲವುಳ್ಳದ್ದು. ಅದರಿಂ
ದುತ್ತರಕ್ಕೆ ಹರಿವರ್ಷವಿರುವುದು. ಅದು ೧೦ ಸಾವಿರಯೋಜನದಳತೆಯೂ
ಚಿನ್ನದಬಣ್ಣವೂ ಉಳ್ಳದ್ದು. ಮೇರುವಿನ ಸುತ್ತಲೂ ಇರುವ ನೀಲಾದಿ
೪ ಸೀಮಾಪರ್ವತಗಳ ಒಳಭಾಗವೇ ಇಳಾವೃತವರ್ಷವಾಗಿರುವುದು
ಅದು ಸುವರ್ಣಭೂಮಿಯುಳ್ಳದ್ದು. ಅದರ ಉತ್ತರಕ್ಕೆ ನೀಲಾಚಲವೂ,
ದಕ್ಷಿಣಕ್ಕೆ ನಿಷಧಪರ್ವತವೂ, ಪಶ್ಚಿಮಕ್ಕೆ ಗಂಧಮಾದನ ಪರ್ವತವೂ,
ಪೂರ್ವಕ್ಕೆ ಮಾಲ್ಯವತ್ಪರ್ವತವೂ ಇರುವುವು. ಇವುಗಳಪಕ್ಕಗಳಲ್ಲಿ ಮಂದ
ರಮೊದಲಾದ ಕುಲಾಚಲಗಳಿರುವುವು. ಮೇಲ್ಕಂಡ ನೀಲಪರ್ವತವು ೧
ಸಾವಿರಯೋಜನದುದ್ದವೂ ಅಷ್ಟೇ ಅಗಲವೂ ಉಳ್ಳದ್ದಾಗಿರುವುದು.

ಅದರ ಉತ್ತರಕ್ಕೆ ಹತ್ತುಸಾವಿರಯೋಜನದುದ್ದವುಳ್ಳದಾಗಿ ರಮ್ಯಕವರ್ಷವಿರುವುದು. ಅದು ಹೊಂಬಣ್ಣದ್ದು. ಅದರ ಬಡಗಲಲ್ಲಿ ಶ್ವೇತಶೈಲವು ಸಾವಿರಯೋಜನದುದ್ದವೂ, ಅಷ್ಟೇ ಅಗಲವೂ ಉಳ್ಳದಾಗಿರುವುದು. ಅದರ ಉತ್ತರಕ್ಕೆ ಹಿರಣ್ಮಯವರ್ಷವಿರುವುದು. ಅದು ೧೧ ಸಾವಿರಯೋಜನದುದ್ದವುಳ್ಳದಾಗಿ ಪೂರ್ವಪಶ್ಚಿಮ ಸಮುದ್ರಗಳವರೆಗೆ ವ್ಯಾಪಿಸಿರುವುದು. ಅದರಿಂದಾಚೆಗೆ ಶೃಂಗಪರ್ವತವು ಸಾವಿರಯೋಜನದುದ್ದವೂ ಅಷ್ಟೇ ಅಗಲವೂ ಉಳ್ಳದಾಗಿರುವುದು. ಅದರ ಉತ್ತರಕ್ಕೆ ಕುರುವರ್ಷವಿರುವುದು. ಅದು ಪೂರ್ವಪಶ್ಚಿಮೋತ್ತರ ಸಮುದ್ರಗಳನ್ನು ವ್ಯಾಪಿಸಿ, ಹನ್ನೆರಡುಸಾವಿರಯೋಜನದ ವಿಸ್ತೀರ್ಣವುಳ್ಳದಾಗಿರುವುದು. ಮೇರುಪರ್ವತದ ಪೂರ್ವದಿಕ್ಕಿನಲ್ಲಿ ಭದ್ರಾಶ್ವವರ್ಷವಿರುವುದು. ಅದರ ಪೂರ್ವಕ್ಕೆ ಪೂರ್ವಸಮುದ್ರವೂ, ಪಶ್ಚಿಮಕ್ಕೆ ಮಾಲ್ಯವಂತಗಿರಿಯೂ, ಎಲ್ಲೆಯಾಗಿ ಪೂರ್ವಪಶ್ಚಿಮ ೩೦ ಸಾವಿರಯೋಜನದಗಲವೂ, ದಕ್ಷಿಣೋತ್ತರವಾಗಿ ೩೪ ಸಾವಿರಯೋಜನದಳತೆಯೂ ಉಳ್ಳದಾಗಿರುವುದು. ಅದರ ಮಗ್ಗುಲಲ್ಲಿರುವ ಜಠರ ದೇವಕೂಟಪರ್ವತಗಳು, ದಕ್ಷಿಣೋತ್ತರಕ್ಕೆ ಇಪ್ಪತ್ತೈದುಸಾವಿರಯೋಜನದಳತೆಯೂ, ಒಂದುಸಾವಿರಯೋಜನದೆತ್ತರವೂ ಉಳ್ಳದಾಗಿರುವುವು. ಮೇರುಪರ್ವತದ ಪಶ್ಚಿಮಕ್ಕೆ ಕೇತುಮಾಲ್ಯವರ್ಷವಿರುವುದು. ಅದಕ್ಕೆ ಪಶ್ಚಿಮ ದಿಕ್ಕಿನಲ್ಲಿ ಪಶ್ಚಿಮಸಮುದ್ರವೂ, ಪೂರ್ವದಲ್ಲಿ ಗಂಧಮಾದನ ಪರ್ವತವೂ ಎಲ್ಲೆಯಾಗಿರುವುವು. ಇದರಳತೆ ಪೂರ್ವಪಶ್ಚಿಮಕ್ಕೆ ಮೂವತ್ತುಮೂರುಸಾವಿರಯೋಜನ, ದಕ್ಷಿಣೋತ್ತರಕ್ಕೆ ೩೪ ಸಾವಿರಯೋಜನವು. ಇದರ ಮಗ್ಗುಲಲ್ಲಿರುವ ಪವನಪಾರಿಯಾತ್ರಗಿರಿಗಳು ದಕ್ಷಿಣೋತ್ತರಕ್ಕೆ ಇಪ್ಪತ್ತೈದುಸಾವಿರಯೋಜನದುದ್ದವೂ, ೧ ಸಾವಿರ ಯೋಜನದೆತ್ತರವೂ ಉಳ್ಳವುಗಳಾಗಿರುವುವು. ಹರಿವರ್ಷದಲ್ಲಿರುವ ಕರವೀರ ಕೈಲಾಸಪರ್ವತಗಳು ಪೂರ್ವಸಮುದ್ರಮುಖವಾಗಿ ಇಪ್ಪತ್ತೈದುಸಾವಿರಯೋಜನದುದ್ದವೂ, ಮೂರುಸಾವಿರಯೋಜನದೆತ್ತರವೂ ಉಳ್ಳದಾಗಿ ರಜತವರ್ಣದಿಂದಿರುವುವು. ರಮ್ಯಕವರ್ಷದೊಳಗಿರುವ ಶೃಂಗ, ಮಕರವೆಂಬ ಪರ್ವತಗಳು ಪಶ್ಚಿಮಸಮುದ್ರಮುಖವಾಗಿ ಇಪ್ಪತ್ತೈದುಸಾವಿರಯೋಜನದುದ್ದವೂ, ಮೂರು

ಸಾವಿರಯೋಜನವೆತ್ತರವೂ, ಉಳ್ಳವುಗಳಾಗಿರುವುವು. ಮೇರುಪರ್ವತದ ಮೂಡಲಿನಲ್ಲಿರುವ ಮಂದರಪರ್ವತವು ಹನ್ನೆರಡುಸಾವಿರಯೋಜನದೆತ್ತರವೂ, ಮೂರುಸಾವಿರಯೋಜನದಗಲವೂ, ನಾಲ್ಕುವರೆಸಾವಿರಯೋಜನದುದ್ದವೂಉಳ್ಳದ್ದಾಗಿರುವುದು. ಅದರ ತುದಿಯಲ್ಲಿ ಸಾವಿರಯೋಜನದುದ್ದದ ಒಂದು ಕತಹದ ಮರವೂ, ಚೈತ್ರರಥವೆಂಬ ವನವೂ, ಅರುಣೋದವೆಂಬ ಸರಸ್ಸೂ ಇರುವುವು. ಮೇರುಪರ್ವತದ ದಕ್ಷಿಣದಲ್ಲಿರುವ ಗಂಧಮಾದನ ಪರ್ವತವು ನಾಲ್ಕುವರೆಸಾವಿರಯೋಜನದುದ್ದವೂ, ಮೂರುಸಾವಿರಯೋಜನದಗಲವೂ, ೧೦ ಸಾವಿರಯೋಜನದೆತ್ತರವೂ ಉಳ್ಳದ್ದಾಗಿರುವುದು. ಅದರಮೇಲೆ ಸಾವಿರಯೋಜನದುದ್ದನಾದ ಒಂದು ನೇರಿಲಮರವು ಆನೆಗಳಗಾತ್ರದ ಹಣ್ಣನ್ನು ಸದಾ ಬಿಡುತ್ತಿರುವುದು. ನೆಲದಮೇಲೆ ಬಿದ್ದು ಒಡೆದ ಆ ಹಣ್ಣುಗಳ ರಸವು ಜಾಂಬೂನದವೆಂಬ ಹೆಸರಿನ ಹೊಳೆಯಾಗಿ ಹರಿಯುತ್ತಿರುವುದು. ಮತ್ತು ಗಂಧಮಾದನವೆಂಬ ವನವೂ, ಮಾನಸವೆಂಬ ಸರೋವರವೂ, ಅಲ್ಲಿರುವುವು. ಮೇರುಪರ್ವತದ ಪಶ್ಚಿಮದಲ್ಲಿರುವ ವಿಪುಲವೆಂಬ ಕುಲಪರ್ವತವು ಮೂರುಸಾವಿರಯೋಜನದಗಲವೂ, ೪ ಸಾವಿರದೆತ್ತರವೂ, ೪|| ಸಾವಿರಯೋಜನದುದ್ದವೂ ಉಳ್ಳದ್ದಾಗಿರುವುದು. ಅದರಮೇಲೆ ಸಾವಿರಯೋಜನದುದ್ದದ ಒಂದು ಅರಳೀಮರವೂ ವೈಭ್ರಾಜವೆಂಬ ವನವೂ, ಸಿತೋದಕಸರೋವರವೂ ಇರುವುವು. ಮೇರುಗಿರಿಯ ಉತ್ತರದಲ್ಲಿರುವ ಸುಪಾರ್ಶ್ವವೆಂಬ ಕುಲಪರ್ವತವು ಮೂರುಸಾವಿರಯೋಜನದಗಲವೂ,ಹನ್ನೆರಡುಸಾವಿರಯೋಜನದೆತ್ತರವೂ,ನಾಲ್ಕುವರೆಸಾವಿರದುದ್ದವೂ ಉಳ್ಳದ್ದಾಗಿರುವುದು. ಅದರ ತುದಿಯಲ್ಲಿ ಸಾವಿರಯೋಜನದುದ್ದದ ಒಂದು ಆಲದಮರವೂ, ಸವಿತ್ರವೆಂಬ ವನವೂ, ಮಹಾಭದ್ರವೆಂಬ ಸರೋವರವೂ, ಇರುವುವು. ಇವುಗಳೆಲ್ಲರ ಮಧ್ಯಭಾಗದಲ್ಲಿ ಸುವರ್ಣಮಯವಾಗಿ ಥಳಥಳಿಸುತ್ತಿರುವ ಮೇರುಪರ್ವತವು ಭೂಮಿಯೊಳಗೆ ಹದಿನಾರುಸಾವಿರಯೋಜನದುದ್ದ ನೆಟ್ಟು ಮೇಲೆ ೮೪ ಸಾವಿರಯೋಜನದುದ್ದವುಳ್ಳದ್ದಾಗಿ ಅಂತೂ ಒಟ್ಟಿಗೆ ೧ ಲಕ್ಷಯೋಜನದೆತ್ತರವನ್ನು ಹೊಂದಿ, ಬುಡದಲ್ಲ ಹದಿನಾರುಸಾವಿರಯೋಜನದ ದಪ್ಪವೂ, ತುದಿಯಲ್ಲಿ ಮೂವತ್ತೆರಡುಸಾವಿರಯೋಜನದ ವೈಶಾಲ್ಯವೂ ಉಳ್ಳದ್ದಾಗಿ

ಉಮ್ಮತ್ತದ ಹೂವಿನ ಆಕಾರದಂತೆ ತೋರುತ್ತಲಿರುವುದು. ಅದರಮೇಲಿನ ೮ ಕೋಣಗಳಲ್ಲೂ ಅಷ್ಟದಿಕ್ಪಾಲಕರ ೮ ಪಟ್ಟಣಗಳಿರುವುವು. ಅವರ ಮಧ್ಯದಲ್ಲಿ ರತ್ನಖಚಿತವಾದ ಈಶ್ವರನ ಅರಮನೆಯಿರುವುದು.

ಇಂತಹ ಭೂಲೋಕದ ಮೇಲೆ ೧ ಲಕ್ಷಯೋಜನದಳತೆಯಲ್ಲಿ ಭುವರ್ಲೋಕವಿರುವುದು. ಅದಕ್ಕೆ ಸೂರ್ಯನು ಅಧಿಪತಿಯು. ಭೂಮಿಗೆ ೨ ಲಕ್ಷಯೋಜನದಳತೆಯಲ್ಲಿ ಚಂದ್ರನೂ, ೩ ಲಕ್ಷ ಯೋಜನದಲ್ಲಿ ನಕ್ಷತ್ರಗಳೂ, ೫ ಲಕ್ಷ ಯೋಜನದಲ್ಲಿ ಬುಧನೂ, ೭ ಲಕ್ಷ ಯೋಜನದಲ್ಲಿ ಶುಕ್ರನೂ, ೯ ಲಕ್ಷ ಯೋಜನದಲ್ಲಿ ಅಂಗಾರಕನೂ, ೧೧ ಲಕ್ಷ ಯೋಜನದಲ್ಲಿ ಬೃಹಸ್ಪತಿಯೂ, ೧೩ ಲಕ್ಷ ಯೋಜನದಲ್ಲಿ ಶನಿಯೂ, ೧೪ ಲಕ್ಷ ಯೋಜನದಲ್ಲಿ ಸಪ್ತರ್ಷಿಗಳೂ, ೧೫॥ ಲಕ್ಷ ಯೋಜನದಲ್ಲಿ ಧ್ರುವನೂ ಇರುತ್ತಿರುವರು. ಸೂರ್ಯನಿಂದ ಮೇಲೆ ೧೪ ಲಕ್ಷ ಯೋಜನದಲ್ಲಿ ಸ್ವರ್ಗಲೋಕವಿರುವುದು. ಅದಕ್ಕೆ ಇಂದ್ರನಧಿಪತಿಯು. ಧ್ರುವಮಂಡಲದ ಮೇಲೆ ೧ ಕೋಟಿಯೋಜನದಲ್ಲಿ ಮಹರ್ಲೋಕವಿರುವುದು. ಅದಕ್ಕೆ ಮಾರ್ಕಂಡೇಯನಧಿಪತಿಯು. ಅಲ್ಲಿಂದಮೇಲೆ ೨ ಕೋಟಿ ಯೋಜನದಲ್ಲಿ ಜನರ್ಲೋಕವಿರುವುದು. ಅದಕ್ಕೆ ಸನಕಸನಂದನಾದಿಗಳು ಅಧಿಪತಿಗಳು. ಅಲ್ಲಿಂದ ನಾಲ್ಕು ಕೋಟಿ ಯೋಜನದಲ್ಲಿ ತಪೋಲೋಕವಿರುವುದು. ಅದಕ್ಕೆ ವಿಷ್ಣುವು ಅಧೀಶ್ವರನು. ಅದರಿಂದಮೇಲೆ ೬ ಕೋಟಿ ಯೋಜನದಲ್ಲಿ ಸತ್ಯಲೋಕವಿರುವುದು. ಅಲ್ಲಿಗೆ ಚತುರ್ಮುಖಬ್ರಹ್ಮನು ಅಧಿಪತಿಯು. ಅದರಮೇಲೆ ೧೦ ಕೋಟಿ ೮೫ ಲಕ್ಷ ಯೋಜನದಲ್ಲಿ ಆಕಾಶವಿರುವುದು. ಹೀಗೆ ಬ್ರಹ್ಮಾಂಡವು ೧೪ ಲೋಕಗಳಿಂದ ಸೇರಿ ೫೦ ಕೋಟಿ ಯೋಜನದಳತೆಯುಳ್ಳದ್ದಾಗಿರುವುದು. ಚತುರ್ಮುಖಬ್ರಹ್ಮನು ಹೀಗೆ ಬ್ರಹ್ಮಾಂಡವೆಂಬ ಮನೆಯಲ್ಲಿ ದೇವರಾಕ್ಷಸಮಾನವನಾಗಸಿದ್ಧವಿದ್ಯಾಧರ ಮನು ಮುನಿ ಕಿನ್ನರ ಕಿಂಪುರುಷಾದಿಸಚರಾಚರರನ್ನೆಲ್ಲ ಅಲ್ಲಲ್ಲಿರಿಸಿ ಅವರಿಂದೆಲ್ಲ ಸೇವೆಗೊಳ್ಳುತ್ತಿದ್ದನು ಎಂಬಲ್ಲಿಗೆ ನಾಲ್ಕನೇ ಅಧ್ಯಾಯವು ಸಂಪೂರ್ಣವು.

## ೫ ನೇ ಅಧ್ಯಾಯವು.

## ಮಹಾಲಿಂಗೋದ್ಭವಲೀಲೆ.

---

ಬ್ರಹ್ಮನು ತನ್ನ ಸತ್ಯಲೋಕದಲ್ಲಿ ಎಂದಿನಂತೆ ಒಂದಾನೊಂದು ದಿವಸ ರತ್ನಸಿಂಹಾಸನದಮೇಲೆ ಮೂರ್ತಿಗೊಂಡು ತನ್ನ ಪುತ್ರಪೌತ್ರಾದಿಗಳಾಗಿರುವ ಮನುಮುನಿದೇವದಾನವಾದಿಗಳಿಂದೆಲ್ಲ ಸೇವೆಗೊಳ್ಳುತ್ತ ವೈಭವದಿಂದಿರಲು, ಸಭೆಯಲ್ಲಿದ್ದ ಜನಸ್ತೋಮವೆಲ್ಲವೂ—ನೀನೇ ಜಗದುತ್ಪತ್ತಿಸ್ಥಿತಿಲಯಗಳಿಗೆ ಕರ್ತ; ನೀನೇ ದುಷ್ಟನಿಗ್ರಹಶಿಷ್ಟಪರಿಪಾಲನ ದಕ್ಷ; ಲೋಕಪಾಲಕರೆಲ್ಲರೂ ನಿನ್ನಧೀನರು, ಸಕಲ ವಿದ್ಯಾಧಿದೇವತೆಯಾದ ಸರಸ್ವತಿಯೇ ನಿನ್ನ ಪತ್ನಿ; ಅದುಕಾರಣ ನೀನೇ ಜಗದೊಡೆಯ; ನಿನಗಿಂತಲೂ ಅಧಿಕನಾದ ಬೇರೊಬ್ಬ ದೇವನಿಲ್ಲವೆಂದು ಹೊಗಳುತ್ತಿದ್ದರು. ಸ್ತುತಿಪ್ರಿಯನಾದ ಬ್ರಹ್ಮನು ಕೇಳಿ ಹಿಗ್ಗಿ ಅಹಂಕಾರದಿಂದ ಬುದ್ಧಿಗೆಟ್ಟು, ತನ್ನ ಸಂಪತ್ತಿಗೆ ಸರಿಯಾವುದೆಂದು ತನ್ನನ್ನು ತಾನೇ ಹೊಗಳಿಕೊಂಡನು. ಈರೀತಿಯಾದ ಬ್ರಹ್ಮನ ದುರ್ಗುಣದಿಂದಲೂ ಅಸತ್ಯದಿಂದಲೂ ಜಗತ್ತು ಅಳಿಯುವ ಗತಿಯುಂಟಾಗಲು, ಅದನ್ನು ವಿಷ್ಣುವು ತಿಳಿದು ಬ್ರಹ್ಮನ ಸಭೆಗೆ ಬಂದನು. ಬ್ರಹ್ಮನು ನೀನಾರೆಂದು ಕೇಳಲು, ವಿಷ್ಣುವು— ಎಲೆ ಬ್ರಹ್ಮನೆ! ನೀನು ಕುರಿಯುಸಮಾನ; ನಿನಗೂ ಈ ಜಗತ್ತಿಗೂ ನಾನು ಒಡೆಯು; ನಿನ್ನ ಸಭಾಸದರು ನಿನ್ನನ್ನೇ ಸರ್ವಕರ್ತನೆಂದು ಹೊಗಳಿದ ಮಾತ್ರಕ್ಕೇ ನೀನು ಬೆರೆತು ಮರೆತುಬಿಟ್ಟೆಯಾ? ಎಂದನು. ಬ್ರಹ್ಮನು ಕೋಪವೇರಿ— ಎಲೊ! ರತ್ನಖಚಿತಸಿಂಹಾಸನದ ಮೇಲೆ ಕುಳಿತು ಸುತ್ತಲೂ ದೇವತೆಗಳಿಂದ ಸೇವೆಗೊಳ್ಳುತ್ತಲಿರುವ ನಾನು ಕುರಿಯೊ? ಹಾರಿ ಧಿಕ್ಕರಿಸುವಕುರಿಯಂತೆ ಒಂಟಿಗನಾಗಿ ನಿಂತಿರುವ ನೀನು ಕುರಿಯೊ? ಹೇಳು ಎಂದು ನುಡಿದು, ತನ್ನ ಸಭಿಕರ ಕಡೆಗೆ ತಿರುಗಿ, ಎಲೈ ಮನುಮುನಿಗಳಿರಾ! ಪರಿಹಾಸಾಸ್ಪದವಾದ ಇವನ ಮಾತನ್ನು ಕೇಳಿ, ತಾನು ಜಗತ್ತನ್ನೆಲ್ಲ ಪಾಲಿಸತಕ್ಕವನಂತೆ! ನನಗೂ ಇವನೇ ಒಡೆಯನಂತೆ! ನನ್ನ ಸಭೆಯಲ್ಲಿ ಇವನೀಮಾತನ್ನು ಆಡಬಹುದೆ? ಇವನ ನಾಲಗೆಯನ್ನು ಕತ್ತರಿಸಬೇಕಲ್ಲವೆ? ಕೊಬ್ಬಿರುವ

ಇವನನ್ನು ಈಕ್ಷಣವೇ ಯಮನ ಮನೆಗೆ ಕಳಿಸುತ್ತೇನೆ ಎಂದು ಗರ್ಜಿಸಿ ನುಡಿಯುತ್ತ ಪ್ರಳಯಕಾಲದ ರುದ್ರನಂತೆ ಬ್ರಹ್ಮನು ಮೇಲಕ್ಕೆದ್ದನು. ಆಗ ವಿಷ್ಣುವು ಕೆರಳಿ, ಎಲೊ! ನೀನು ನನ್ನನ್ನು ಮಾರಿ ಮಿಕ್ಕ ಕುರಿಯೆಂದು ಹೀಯಾಳಿಸಿದೆ; ಇರಲಿ; ನನ್ನ ಸತ್ತ್ವವನ್ನು ತೋರಿಸುತ್ತೇನೆ. ನನ್ನ ನಿನ್ನ ಜಯಾಪಜಯಗಳು ಗೊತ್ತಾಗಲಿ, ಎಂದು ಹೇಳಿ, ಆ ಕೂಡಲೇ ಹಸ್ತ್ಯಶ್ವರಥಪದಾತಿಸೈನ್ಯವನ್ನೆಲ್ಲ ಸೃಷ್ಟಿಸಿದನು. ಅದರ ಭಾರಕ್ಕೆ ಭೂಮಿಯು ಕುಸಿಯುವಂತಾಯಿತು. ಆದಿಶೇಷನು ದಿಗಿಲುಬಿದ್ದನು. ಆ ಸೇನೆಯ ಪಾದಧೂಳಿಯು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿತು. ಯಾವ ದಿಕ್ಕಿನಲ್ಲಿ ನೋಡಿದರೂ ವಿಷ್ಣುವಿನ ಆನೆಗಳೇ, ಎತ್ತ ನೋಡಿದರೂ ವಿಷ್ಣುವಿನ ಕುದುರೆಗಳೇ, ರಥಗಳೇ, ಕಾಲಾಳುಗಳೇ ತುಂಬಿಕೊಂಡವು. ಇದನ್ನೆಲ್ಲ ಬ್ರಹ್ಮನು ನೋಡಿ ಕಿಡಿಕಿಡಿಯಾಗಿ, ತನ್ನ ಸಭಿಕರ ಕಡೆಗೆ ದುರುದುರನೆ ನೋಡಿದನು. ಆ ಕೂಡಲೇ ಸಭೆಯಲ್ಲಿದ್ದವರೆಲ್ಲ ಎದ್ದರು. ಕೋಲಾಹಲವು ಬ್ರಹ್ಮಾಂಡವನ್ನು ವ್ಯಾಪಿಸಿತು. ಎಲ್ಲರೂ ಆಯುಧವನ್ನು ಹಿಡಿದರು. ಸಮರಭೇರಿಯು ಹೊಡೆಯಲ್ಪಟ್ಟಿತು. ವೀರಾವೇಶವು ವಿಜೃಂಭಿಸಿತು. ಮನುಮುನಿಗಳೂ ದೈತ್ಯದಾನವರೂ ದಿಕ್ಪಾಲಕರುಗಳೂ ಕಿನ್ನರಗಂಧರ್ವಾದಿಗಳೆಲ್ಲರೂ ತಮ್ಮ ತಮ್ಮ ವಾಹನವನ್ನೇರಿ ಆಯುಧವ ಜಳಪಿಸಿ ಯುದ್ಧಸನ್ನದ್ಧರಾದರು. ಎರಡು ಪಕ್ಷದಲ್ಲೂ ವಿಷ್ಣುಬ್ರಹ್ಮರಿರ್ವರ ಸೇನೆಯೂ ನಿಂತಿತು. ಮುಂದಣ ಸೈನ್ಯಗಳು ತಮ್ಮತಮ್ಮ ಮುಜರಾವರಪ್ಪಣೆಯನ್ನು ಪಡೆದು ಕಾಳಗಕ್ಕಾರಂಭಿಸಿದುವು. ಒಬ್ಬರೊಬ್ಬರಲ್ಲಿ ಪಂಥವನ್ನು ಕಟ್ಟಿ, ಹೀಯಾಳಿಸಿ, ಕತ್ತಿ, ಗದೆ, ಕೊಡಲಿ, ಕುಂತ ಪಾಶ, ಮುಸಲ ಮೊದಲಾದ ನಾನಾ ಆಯುಧಗಳಿಂದ ಹೊಡೆದಾಡುತ್ತಿದ್ದರು. ಸೇನೆಯು ಪದಹತಿಯಿಂದೆದ್ದ ಧೂಳಿಯು ಆಕಾಶವನ್ನೆಲ್ಲ ವ್ಯಾಪಿಸಿ ಸೂರ್ಯನ ತೇಜಸ್ಸನ್ನೇ ಮರೆಮಾಡಿ ಕತ್ತಲೆಯನ್ನುಂಟುಮಾಡಿತು. ಸಮುದ್ರದ ನೀರನ್ನೆಲ್ಲ ಹೀರಿಬಿಟ್ಟಿತು. "ಸೃಷ್ಟಿರಕ್ಷಣಕರ್ತರಾದ ಬ್ರಹ್ಮವಿಷ್ಣುಗಳೇ ಈರೀತಿಯಲ್ಲಿ ಕಾದಾಡುವುದಕ್ಕೆ ನಿಂತಬಳಿಕ ಇನ್ನು ಜಗತ್ತು ಉಳಿಯುವುದು ಹೇಗೆ? ಈ ಕಷ್ಟವನ್ನು ಯಾರಿಗೆ ಹೇಳಿಕೊಳ್ಳಬೇಕು? ಇವರಿಬ್ಬರ ಜಗಳವನ್ನು

ನಿಲ್ಲಿಸಿ ಲೋಕವನ್ನುದ್ಧರಿಸುವುದಕ್ಕೆ ಆ ಪರಮೇಶ್ವರನೊಬ್ಬನೇ ಸಮರ್ಥನು'' ಎಂದು ಲೋಕದ ಜನವೆಲ್ಲವೂ ಚಿಂತಿಸುತ್ತಿದ್ದಿತು. ಇತ್ತ ವಿಷ್ಣುಬ್ರಹ್ಮರೀರ್ವರ ಸೇನೆಯಲ್ಲೂ ಆನೆಆನೆಗಳೂ ಕುದುರೆಕುದುರೆಗಳೂ ರಥರಥಂಗಳೂ ಕಾಲಾಳುಕಾಲಾಳುಗಳೂ ಪರಸ್ಪರ ಸಂಧಿಸಿ ಆರ್ಭಟಿಸಿ, ಇರಿದು ತಿವಿದು ಕಡಿದು ಕತ್ತರಿಸಿ ಚುಚ್ಚಿ ಬಡಿದು ಸೀಳಿ ಹೋಳ್ಮಾಡಿ ಜಜ್ಜಿ ಸಿಗಿದು ಬಗಿದು ರಣಾಂಗಣವನ್ನೆಲ್ಲ ರಕ್ತಮಾಂಸಾದಿಮಯವನ್ನಾಗಿ ಮಾಡಿಬಿಟ್ಟುವು. ಆಗ ಬ್ರಹ್ಮವಿಷ್ಣುಗಳೀರ್ವರೂ ಸ್ವತಃ ಕಾದಲನುವಾಗಿ ಹಂಸ ಗರುಡಗಳನ್ನು ಹತ್ತಿ ನಿಂತರು. ತನ್ನ ಸುತ್ತಲೂ ಇರುವ ದೇವದಾನವಶ್ರೇಷ್ಠರ ತಿಂತಿಣಿಯನ್ನೆಲ್ಲ ನೋಡಿ ಬ್ರಹ್ಮನು ಹರಿಗೆ ತೋರಿಸಿ, ಈ ನವಬ್ರಹ್ಮರೂ, ದೈತ್ಯರೂ, ದಾನವರೂ, ಕಿನ್ನರರೂ, ಗಂಧರ್ವರೂ, ಕಿಂಪುರುಷರೂ, ಯಕ್ಷರೂ, ಚಾರರೂ ಸಹ ಜಗತ್ತಿನಲ್ಲಿ ಮತ್ತಿನ್ನಾರನ್ನು ಓಲೈಸುವರು? ನನ್ನ ಸಂಪತ್ತಿಗೆ ಎಣೆಯಾವುದು? ನೀನೂ ಕೂಡ ನನಗೆ ಸಮನೆ? ಹೇಳು ಎಂದು ಕೇಳಿದನು. ವಿಷ್ಣುವು—ಎಲೆ ಮೂಢನೇ! ಹಾಗಾದರೆ ನೋಡೆಂದು ಹೇಳಿ, ತನ್ನ ವಿಶ್ವರೂಪದಿಂದ ಮನುಮುನೀಂದ್ರಾದಿಸಕಲದೇವತೆಗಳನ್ನೂ ರಾಕ್ಷಸರನ್ನೂ, ಚತುರಂಗಸೈನ್ಯವನ್ನೂ, ಎಷ್ಟೋ ಮಂದಿ ಬ್ರಹ್ಮರನ್ನೂ, ಅನಂತವಿಷ್ಣುಗಳನ್ನೂ ಸಹ ಸೃಜಿಸಿ ತೋರಿಸಿದನು. ಈ ಸೈನ್ಯವೂ ಬ್ರಹ್ಮನಸೈನ್ಯವೂ ಅತ್ಯಂತ ವೀರಾಟೋಪದಿಂದ ಕಾದಾಡಿದುವು. ಎತ್ತನೋಡಿದರೂ ರುಂಡಗಳು, ಎತ್ತ ನೋಡಿದರೂ ಮುಂಡಗಳು, ಎತ್ತನೋಡಿದರೂ ರಕ್ತಪ್ರವಾಹ, ಎತ್ತನೋಡಿದರೂ ಕರುಳಸರ, ಎತ್ತನೋಡಿದರೂ ಹೆಣಗಳ ರಾಶಿಯು ತೋರುವಂತಾಯಿತು. ಭೂತಪಿಶಾಚಾದಿಗಳು ಮಾಂಸವನ್ನು ತಿಂದು ರಕ್ತವನ್ನು ಕುಡಿದು ಕರುಳಸರವನ್ನು ಹಾಕಿ ರುಂಡಗಳನ್ನು ಹಿಡಿದು ಕುಣಿಯುತ್ತಿದ್ದುವು. ಈರೀತಿಯಲ್ಲಿ ಉಭಯಸೇನಾಸಮುದ್ರವೂ ಕಲಕಿಹೋಗಿ ಭಯಂಕರವಾಗಿ ಕಾದಾಡಿ ಕ್ಷಣೆಕ್ಷಣೆ ಲಯವಾಗುತ್ತಲಿರುವುದನ್ನು ಹರಿಬ್ರಹ್ಮರುನೋಡಿ ತಮ್ಮತಮ್ಮವಾಹನಗಳನ್ನು ತೊಡೆಸನ್ನೆಯಿಂದ ಮುಂದಕ್ಕೆ ಸರಿಸಿದರು. ಆ ಹಂಸಗರುಡಗಳು ರೆಕ್ಕೆಯನ್ನು ಕೊಡಹಿದ ರಭಸಕ್ಕೆ ಬ್ರಹ್ಮಾಂಡವೆಲ್ಲ ಕಂಪಿ

ಸಿತು. ಹರಿಬ್ರಹ್ಮರು ತಮ್ಮ ತಮ್ಮ ಕೈಬಿಲ್ಲಸಿಂಜಿನಿಯನ್ನು ದನಿಮಾಡಿದರು. ಆ ಶಬ್ದವನ್ನು ಕೇಳಿ ಎಲ್ಲರ ಎದೆಯೂ ಬಿರಿದಿತು. ಹರಿಬ್ರಹ್ಮರು ಬಾಣವನ್ನು ಹೂಡಿ ಸಿಂಜಿನಿಯಲ್ಲಿ ಎರಡು ಬೆರಳನ್ನೂ ಸೇರಿಸಿ ಕರ್ಣಾಂತವಾಗಿ ಸೆಳೆದು, "ಎಲೋ ಬ್ರಹ್ಮನೇ ಬ್ರಹ್ಮಹತ್ಯಾದೋಷವುಂಟಾಗುವುದೆಂದು ಯೋಚಿಸಿ, ಇದುವರೆಗೂ ನಾನು ಸುಮ್ಮನಿದ್ದೆ, ಅದನ್ನು ನೀನು ತಿಳಿದುಕೊಳ್ಳದೆ ಹೋದೆ; ಮಾಡುವುದೇನು? ಈ ಏಟನ್ನು ತಡೆದುಕೊ" ಎಂದು ಹೇಳಿ ಬಾಣವನ್ನು ಪ್ರಯೋಗಿಸಿದನು. ಅದನ್ನು ಬ್ರಹ್ಮನು ಕತ್ತರಿಸಿ ಪ್ರತಿ ಬಾಣವನ್ನು ಬಿಟ್ಟನು. ಅದು ವಿಷ್ಣುವಿನ ಎದೆಗೆ ಹೊಕ್ಕು ಗಾಯವನ್ನು ಮಾಡಿತು. ಅದರಿಂದ ಹರಿಯು ಕೋಪಗೊಂಡು, ಎಲೊ ನೀಚಬ್ರಹ್ಮನೇ! ನೀನೇದೊಡ್ಡವನೆಂಬಹಂಕಾರದಿಂದ ನನ್ನೊಡನೆ ಕಾದಾಡಿದುದಕ್ಕೆ ಈಗ ಫಲವನ್ನುಣ್ಣು ಎಂದು ಹೇಳಿ, ಭೀಕರವಾದ ತೀಕ್ಷ್ಣಬಾಣವೊಂದನ್ನು ಪ್ರಯೋಗಿಸಿದನು. ಅದನ್ನು ಬ್ರಹ್ಮನು ನಡುದಾರಿಯಲ್ಲೇ ಖಂಡಿಸಿ, ವೀರನಾದವನ್ನು ಮಾಡಿ, ಬೆನ್ನಿನ ಬತ್ತಳಿಕೆಯಿಂದ ಬ್ರಹ್ಮಾಸ್ತ್ರವನ್ನು ತೆಗೆದು ಧನುಸ್ಸಿಗೆ ಸೇರಿಸಿ ಎಳೆದು ಆರ್ಭಟಿಸಿ ಹೊಡೆದನು. ಅದನ್ನು ಕಂಡು "ಓಹೋ ಜಗತ್ತು ಹಾಳಾಗುವ ಕಾಲ ಬಂದಿತು! ಎಲೋ ಮೂರ್ಖಬ್ರಹ್ಮನೇ! ಈಕ್ರೂರಬಾಣವನ್ನು ಪ್ರಯೋಗಿಸಬೇಡ; ನಿಲ್ಲಿಸು ನಿಲ್ಲಿಸು" ಎಂದು ಎಲ್ಲರೂ ಕೂಗಿಕೊಂಡರು. ಅಷ್ಟರಲ್ಲಿ ವಿಷ್ಣುವು ತನ್ನ ಬತ್ತಳಿಕೆಯಿಂದ ವೈಷ್ಣವಾಸ್ತ್ರವನ್ನು ತೆಗೆದು ಸಿಂಜಿನಿಗೆ ಸೇರಿಸಿದನು. ಆ ಬಾಣದ ತೀಕ್ಷ್ಣಜ್ವಾಲೆಯು ಜಗತ್ತನ್ನೆಲ್ಲ ತಲ್ಲಣಗೊಳಿಸಿತು. ಆ ಬಾಣವು ಸಿಂಜಿನಿಯಿಂದ ಬಿಡಲ್ಪಟ್ಟ ಕೂಡಲೇ ಫಾಲಾಕ್ಷನ ಉರಿಗಣ್ಣಿನಂತೆ ಅಗ್ನಿಕಣವನ್ನು ಸುರಿಸುತ್ತ ಬಿರುಸಿನಿಂದ ನುಗ್ಗಿತು. ಮಧ್ಯಮಾರ್ಗದಲ್ಲಿ ಬ್ರಹ್ಮಾಸ್ತ್ರವೈಷ್ಣವಾಸ್ತ್ರಗಳೆರಡೂ ಸಂಧಿಸಿ ಖಣಖಣಿಲನೆ ಕಾದಾಡುತ್ತಿದ್ದುವು. ಅವೆರಡರ ಪರಸ್ಪರ ಹತಿಯಿಂದ ಬೆಂಕಿಯಮಳೆಯೇ ಸುರಿಯುತ್ತಲಿದ್ದಿತು. ಅದರಿಂದ ಬ್ರಹ್ಮಾಂಡವೇ ಹೊತ್ತಿ ಉರಿಯುತ್ತಿದ್ದಿತು. ರಣಾಂಗಣದಲ್ಲಿ ಹರಿಬ್ರಹ್ಮರ ಮತ್ತು ಅವರ ವಾಹನಗಳ ಹೊರತ್ತು ಮತ್ತಾರೂ ನಿಲ್ಲಲಾರದೆ ಓಡಿಹೋದರು. ವಿಷ್ಣುವು ಗರುಡನಿಂದಿಳಿದು

ಗದೆಯನ್ನು ತೆಗೆದುಕೊಂಡು ಮುಂದೆ ಬಂದನು. ಅದನ್ನು ಕಂಡು ಬ್ರಹ್ಮನೂ ಹಂಸದಿಂದಿಳಿದು ಗದೆಯನ್ನು ಗ್ರಹಿಸಿ ಹತ್ತಿರಕ್ಕೆ ಬಂದನು. ಓರ್ವರನ್ನೋರ್ವರು ವಂಚಿಸಿ ಪ್ರಹರಿಸಲು, ಆ ಏಟನ್ನು ತಪ್ಪಿಸಿ ಗದೆಯನ್ನು ತಿರುಗಿ ಬರಸೆಳೆದು ಹೊಡೆದರು. ಆ ಪೆಟ್ಟಿಗೆ ಸಿಕ್ಕದೆ ತಪ್ಪಿಸಿಕೊಂಡು ಆರ್ಭಟಿಸಿ ಮತ್ತೆ ಹೊಡೆದರು. ಹೀಗೆ ಇಬ್ಬರೂ ನಿಂತಲ್ಲಿ ನಿಲ್ಲದೆ ಬುಗುರಿಗಳಂತೆ ಸುತ್ತುತ್ತ ಭುಜಬಲದಿಂದ ಕಾದಾಡಿ ಸೋಲುಗೆಲುಗಳನ್ನು ಕಾಣದೆ ಸಾಕಾಗಿ ಆ ಗದೆಗಳನ್ನೂ ಬಿಸುಟು, ಮಲ್ಲಗಾಳಗಕ್ಕೆ ಅಣಿಯಾದರು. ಅವರ ವಾಹನಗಳೂ ಕೂಡ ಪರಸ್ಪರ ಕಾದಾಡಲುನಿಂತು ಘೋರವಾಗಿ ಸೆಣಸಿ ಎರಡೂ ಸತ್ತವು. ಬಳಿಕ ವೀರರೀರ್ವರೂ ನಿಂತು ತೋಳ್ತೊಡೆಗಳನ್ನು ತಟ್ಟಿ, ಸಿಂಹನಾದವನ್ನು ಮಾಡಿ ದಂಡೆಗೊಟ್ಟು, ಎರಡು ಬೆಟ್ಟಗಳು ಗಿರುಗಿರನೆ ತಿರುಗಿದಂತೆ ಒಂದು ಜಾವದವರೆಗೆ ಸುತ್ತಿದರು. ಇವರ ಸುತ್ತಾಟಕ್ಕೆ ಭೂಮಿಯೆಲ್ಲ ನಡುಗಿತು. ಆಗ ಓರ್ವರನ್ನೋರ್ವರು ಹಿಡಿದು ತಿವಿದು ಅಪ್ಪಳಿಸಿ, ಅಡ್ಡಗಾಲಿಕ್ಕಿಟ್ಟು ಕೆಡಹಿ, ಎದ್ದು ಬೆನ್ನಿಗೆ ಬಂದು ಸುತ್ತಿ ತಿರುಹಿ, ಸೆಳೆದು ಬಿಟ್ಟು ಕೆಡಹಿ, ಮತ್ತೆ ಮೇಲೆದ್ದು ನುಗ್ಗಿ ಎತ್ತಿಹಾಕಿ, ಒಡನೆಯೇ ಹಾವುಗಳಂತೆ ಹೆಣೆದು ಹೊರಳಾಡಿ ಸಾಕಾದರು. ಆದರೂ ಯಾರೂ ಸೋಲಲಿಲ್ಲ. ಆಗ ಹರಿಯು ಅತ್ಯಂತ ರೋಷವನ್ನು ತಾಳಿ ಈ ನೀಚಬ್ರಹ್ಮನು ನನ್ನೊಡನೆ ಸಮಾನನಾಗಿ ಹೋರಾಡುವುದಕ್ಕೆ ಎಷ್ಟರವನು? ಇವನಹಂಕಾರವನ್ನೆಲ್ಲ ನಿಲ್ಲಿಸುತ್ತೇನೆಂದು ನಿರ್ಧರಿಸಿ, ಬ್ರಹ್ಮನ ಮುಷ್ಟಿಘಾತಕ್ಕೆ ತನ್ನ ಮೈಯೊಡ್ಡಿ ಬಳಿಕ ತೋಳನ್ನೆತ್ತಿ ಬ್ರಹ್ಮನ ತಲೆಯಮೇಲೆ ಬಲವಾಗಿ ಮುಷ್ಟಿಯ ಪೆಟ್ಟೊಂದನ್ನು ಕೊಟ್ಟನು. ಅದರಿಂದ ಬ್ರಹ್ಮನ ತಲೆಯು ಸಮನಾಗಿ ನಾಲ್ಕು ಹೋಳಾಯಿತು. ಆದರೇನು? ಲೋಕವನ್ನೇ ಹುಟ್ಟಿಸುವ ಬ್ರಹ್ಮನಿಗೆ ತನ್ನ ತಲೆಯನ್ನು ಹುಟ್ಟಿಸಿಕೊಳ್ಳುವುದು ದೊಡ್ಡದೆ? ಬ್ರಹ್ಮನು ಆ ನಾಲ್ಕುಹೋಳುಗಳನ್ನೇ ನಾಲ್ಕು ತಲೆಯನ್ನಾಗಿ ಮಾಡಿಕೊಂಡು ಅತಿಕೋಪದಿಂದ ಮತ್ತೆ ಯುದ್ಧಕ್ಕೆ ನಿಂತು ಇವನನ್ನು ಒಂದೇ ಏಟಿಗೆ ಮುರಿದಿಕ್ಕುವೆನೆಂದು ಆರ್ಭಟಿಸಿ ಎರಡು ತೋಳುಗಳನ್ನೂ ತಟ್ಟಿ, ಮೇಲೆ ಬೀಳಲನುವಾದನು. ಅಷ್ಟ

ರಲ್ಲಿ ಆಕಾಶದಿಂದ ಒಂದು ಶಬ್ದವು ಕೇಳಬಂದಿತೇನೆಂದರೆ—"ಎಲೆ ವಿಷ್ಣುವೆ ನೀನು ಅಜ್ಞನೆ? ಬ್ರಹ್ಮನೇ ನೀನು ಮೂರ್ಖನೆ? ನಿಮ್ಮಿಬ್ಬರಿಗೂ ಹೆಚ್ಚಿನ ವಸ್ತುವು ಬೇರೊಂದುಂಟು. ಅದು ಈಗ ನಿಮ್ಮಿಬ್ಬರ ಮಧ್ಯದಲ್ಲಿ ಮೂಡುತ್ತದೆ. ಅದರ ಪಾದವನ್ನಾಗಲಿ ಮಸ್ತಕವನ್ನಾಗಲಿ ನಿಮ್ಮಿಬ್ಬರಲ್ಲಿ ಯಾರು ಕಂಡು ಬರುವರೋ ಅವರೇ ದೊಡ್ಡ ಸಾಹಸಿಗಳು." ಎಂಬ ಈ ವಚನವನ್ನು ಕೇಳಿ ಇಬ್ಬರೂ ಬೆರಗಾಗಿ ಯುದ್ಧಕುತೂಹಲವನ್ನು ಬಿಟ್ಟು ನಿಂತರು. ಅಷ್ಟರಲ್ಲಿ ಅವರಿಬ್ಬರ ಮಧ್ಯದಲ್ಲಿ ಅನೇಕ ಸೂರ್ಯರನ್ನು ಕರಗಿಸಿ ಎರಕವೆರೆದ ದೊಡ್ಡಮೂಲಸ್ತಂಭವೋ ಎಂಬಂತೆಯೂ ಪ್ರಪಂಚದ ಪಂಚಭೂತಗಳನ್ನೂ ಅಳೆಯುವುದಕ್ಕಾಗಿ ಮಾಡಿಟ್ಟ ಚಿನ್ನದ ಅಳತೆಯ ದಂಡವೋ ಎಂಬಂತೆಯೂ, ಮುಂದೆ ಸೃಷ್ಟಿಸಲ್ಪಡುವ ಲೋಕಗಳು ಜರಿದು ಬೀಳಬಾರದೆಂಬುದಾಗಿ ಅವುಗಳ ಆಶ್ರಯಕ್ಕೆ ಕೊಡಲೋಸುಗ ಸಿದ್ಧಮಾಡಿಟ್ಟ ಚಿನ್ನದ ದೊಡ್ಡಮುಂಡಿಗೆಯೋ ಎಂಬಹಾಗೆಯೂ ಮಹಾಲಿಂಗವು ಉದಿಸಿತು. ಅದಕ್ಕೆ ಭೂಮಿಯೇ ಪೀಠವಾಗಿತ್ತು. ಪರ್ವತಗಳೇ ಭುಜವಾಗಿದ್ದುವು. ಸಪ್ತಸಮುದ್ರಗಳೇ ಹೊಟ್ಟೆಯಾಗಿದ್ದುವು. ಚಂದ್ರಸೂರ್ಯಾಗ್ನಿಗಳೇ ಮೂರು ಕಣ್ಣಾಗಿದ್ದುವು. ಪಾತಾಳವೇ ಪಾದವಾಗಿದ್ದಿತು. ನಕ್ಷತ್ರಗಳೇ ಹೂವಾಗಿದ್ದುವು. ಪ್ರಮಥಗಣರೇ ಓಲೈಸುವವರಾಗಿದ್ದರು. ಇಂತಹ ಮಹಾಲಿಂಗವನ್ನು ನೋಡಿ ವಿಷ್ಣುಬ್ರಹ್ಮರೀರ್ವರೂ ಬೆರಗಾದರು. ಆ ಲಿಂಗದ ಮಹಾತೇಜಸ್ಸಿನ ಮುಂದೆ ಇವರ ತೇಜಸ್ಸು ಮಿಂಚುಹುಳುವಿಗೆ ಸಮನಾಗಿದ್ದಿತು. ಆಗ ಅವರೀರ್ವರಲ್ಲಿ ವಿಷ್ಣುವು ಲಿಂಗದ ಪಾದವನ್ನೂ, ಬ್ರಹ್ಮನು ಶಿರಸ್ಸನ್ನೂ ನೋಡಿ ಬರುತ್ತೇವೆಂದು ನಿಶ್ಚೈಸಿ, ವಿಷ್ಣುವು ಹಂದಿಯ ಆಕಾರವನ್ನು ಧರಿಸಿ, ಭೂಮಿಯನ್ನು ಕೊರೆದುಕೊಳ್ಳುತ್ತಾ ಹೋದನು. ಬ್ರಹ್ಮನು ಹಂಸನಾಗಿ ಆಕಾಶದಕಡೆಗೆ ಹಾರಿದನು. ಶಿವನ ಮಸ್ತಕದಿಂದ ನಿರ್ಮಾಲ್ಯವಾದ ಕೇತಕಿಯು (ತಾಳೆಯ ಹೂವು) ಇಳಿದು ಬರುತ್ತಿದ್ದಿತು. ಅದನ್ನು ಬ್ರಹ್ಮನು ಮಧ್ಯಮಾರ್ಗದಲ್ಲಿ ಸಂಧಿಸಿ, ಎಲೆ ಮಹಾತ್ಮನೇ ನಮಸ್ಕಾರ, ನೀನೆಲ್ಲಿಂದ ದಯೆಮಾಡಿಸಿದೆ ? ಎಂದು ಕೇಳಲು, ಕೇತಕಿಯು ತನ್ನ ಸಂಗತಿಯನ್ನು ಹೇಳಿ, ನೀನಾರೆಂದು ಕೇಳಿತು. ಅದಕ್ಕವ

ನು–ನಾನು ಬ್ರಹ್ಮ, ಶಿವನ ಶಿರಸ್ಸನ್ನು ಕಾಣುವುದಕ್ಕೆ ಹೋಗುತ್ತೇನೆಂದು ಹೇಳಿ, ಇನ್ನೆಷ್ಟು ಗಾವುದದ ದೂರವಿರುವುದೆಂದು ಕೇಳಿದನು. ಅದಕ್ಕೆ ತಾಳೆಯು ನಕ್ಕು, ನೀನು ಇನ್ನೆಷ್ಟೋ ಯುಗಾಂತರಗಳು ಪ್ರಯಾಣ ಮಾಡಿದರೂ ಮಸ್ತಕದರ್ಶನವಾಗುವುದು ದುರ್ಲಭವೆಂದಿತು. ಅದನ್ನು ಕೇಳಿದಕೂಡಲೇ ಬ್ರಹ್ಮನು ದಿಗಿಲು ಬಿದ್ದು ಬೆರಗಾದನು. ಮತ್ತು ಆ ಕೇತಕಿಯೊಡನೆ ಪ್ರೀತಿಯಿಂದ ಮೆಲ್ಲಗೆ ಬಂದು ಮಾತನಾಡತೊಡಗಿದನು– ಎಲೆ ಕೇತಕಿಯೇ ನಾನು ಶಿವನ ಮಸ್ತಕವನ್ನು ಕಂಡು ಬರುತ್ತೇನೆಂದು ವಿಷ್ಣುವಿನೊಡನೆ ಭಾಷೆಗೊಟ್ಟು ಬಂದೆನು. ಈಗ ನಾನು ನೋಡದೆ ಬಂದೆನೆಂದರೆ ಬಹು ಅವಮಾನವಾಗುವುದು. ಅದಕ್ಕಾಗಿ ನೀನು ಈಗ ನನ್ನ ಮಾನವನ್ನು ಕಾಪಾಡಬೇಕು. ಇದರಮೇಲೆ ನಾನು ನಿನ್ನೊಡನೆ ಹೆಚ್ಚು ಹೇಳಿಕೊಳ್ಳಬೇಕಾದದ್ದೇನಿದೆ? ಎಂದನು. ಆಗ ತಾಳೆಯು ಆಗಲಿ ಬಾರೆಂದು ಹಿಂತಿರುಗಿ ಪೂರ್ವದರಣಾಂಗಣಕ್ಕೆ ಕರೆದುಕೊಂಡುಬಂದಿತು. ಅತ್ತ ವಿಷ್ಣುವು ಎಷ್ಟೋ ದೂರ ಭೂಮಿಯನ್ನು ಕೊರೆದುಕೊಂಡು ಹೋದರೂ ಕಡೆಗೆ ಮೂಲವನ್ನು ಕಾಣದೆ ಬೇಸತ್ತು ಅಸಾಧ್ಯವೆಂದು ನಿಶ್ಚಯಿಸಿ, ಹಿಂತಿರುಗಿ ರಣಾಂಗಣಕ್ಕೆ ಬಂದು, ತನಗಿಂತಲೂ ಮುಂದಾಗಿ ಬಂದು ನಿಂತಿರುವ ಬ್ರಹ್ಮನನ್ನು ಕಂಡು, ನೀನು ಶಿವನ ಶಿರಸ್ಸನ್ನು ಕಂಡುಬಂದೆಯಾ? ಎಂದು ಕೇಳಲು, ಬ್ರಹ್ಮನು ಕಂಡೆನೆಂದು ನುಡಿದನು. ಅದಕ್ಕೆ ಸಾಕ್ಷಿಯಾರೆಂದು ಹರಿಯು ಕೇಳಲು, ಕೇತಕಿಯನ್ನು ತೋರಿಸಿದನು. ಬ್ರಹ್ಮನು ಶಿವನ ಶಿರಸ್ಸನ್ನು ನೋಡಿದುದು ನಿಜವೆಂದು ಅದು ನುಡಿಯಲು, ನೀನು ಅನೃತವಾದಿ; ಅದುಕಾರಣ ಇನ್ನು ಮುಂದೆ ಪೂಜೆಗೆ ಅಯೋಗ್ಯನಾಗೆಂದು ವಿಷ್ಣುವು ಕೇತಕಿರಾಜನಿಗೆ ಶಾಪವನ್ನಿತ್ತನು. ಅದು ಗೋಳಾಡುತ್ತ ಹೊರಟುಹೋಯಿತು. ಬಳಿಕ ಲಿಂಗವು ಭೀಕರಾಕಾರವನ್ನು ಧರಿಸಿತು. ಇದನ್ನು ನಾವು ನೋಡಿ ಸೈರಿಸಿಕೊಳ್ಳುವೆವೇ? ಎಂದು ವಿಷ್ಣುಬ್ರಹ್ಮರು ಬೆದರಿ ಸ್ತುತಿ ಮಾಡಿದರು. ಆಗ ಶಿವನು ಶಾಂತರೂಪವನ್ನು ಧರಿಸಿದನು. ಹರಿಬ್ರಹ್ಮರೀರ್ವರೂ ಜಯಜಯ ಶಂಕರ ಮಹಾದೇವ ಎಂದು ಮೊದಲಾಗಿ ಸ್ತುತಿಸಿ, ನಮ್ಮನ್ನು ಉದ್ಧಾರ ಮಾಡಬೇಕೆಂದು ಪ್ರಾರ್ಥಿಸಿದರು.

ಅವರ ಸ್ತುತಿಗೂ ಭಕ್ತಿಭಾವಕ್ಕೂ ಈಶ್ವರನು ಮೆಚ್ಚಿ, ಕರುಣದಿಂದ ಪ್ರಸನ್ನನಾಗಿ, ಪಂಚಮುಖದಶಭುಜ ಜಟಾಪಟಲ ಚಂದ್ರರೇಖೆ ಮೊದಲಾದುವುಗಳನ್ನು ಧರಿಸಿ ನಿಜರೂಪದಿಂದ ಪ್ರತ್ಯಕ್ಷನಾದನು. ಆಗ ಅವರೀರ್ವರೂ ಸಂತುಷ್ಟರಾಗಿ ಅತಿಶಯಭಕ್ತಿಯಿಂದ ಮತ್ತೆ ಕೊಂಡಾಡಿದರು. ಆಗ ಶಿವನು ವಿಷ್ಣುವನ್ನು ಕರೆದು ಬ್ರಹ್ಮನ ಅಸತ್ಯದಿಂದ ಕರಗಿ ಬಿದ್ದು ಹಾಳಾಗಿರುವ ಭೂಮಿಯನ್ನು ಮುನ್ನಿನಂತೆ ನಿಲ್ಲಿಸಿ ರಕ್ಷಿಸಿಕೊಂಡಿರೆಂದು ಹೇಳಿ ಅಪ್ಪಣೆ ಕೊಟ್ಟು ಕಳಿಸಿ, ಬಳಿಕ ಬ್ರಹ್ಮನನ್ನು ಸಮೀಪಕ್ಕೆ ಕರೆದು ನೀನು ಇನ್ನು ಮುಂದೆ ಇಂತಹ ಅಹಂಕಾರವನ್ನು ಮಾಡಬೇಡ; ಅಸತ್ಯವನ್ನು ಬಿಡು; ಸ್ಥಿರಬುದ್ಧಿಯಿಂದ ಪೂರ್ವದಂತೆ ಜಗತ್ಸೃಷ್ಟಿಯನ್ನು ಮಾಡಿಕೊಂಡಿರು, ನಿಮ್ಮನಿಮ್ಮಲ್ಲಿ ಕಲಹವನ್ನು ಮಾಡಬೇಡಿ, ಎಂದು ಆಜ್ಞಾಪಿಸಿ, ಅಂತರ್ಹಿತನಾದನು. ವಿಷ್ಣುವು ವರಾಹರೂಪಿನಿಂದಲೇ ತನ್ನ ಮೂತಿಯಿಂದ ಭೂಮಿಯನ್ನೆತ್ತಿ ನಿಲ್ಲಿಸಿ, ಸೃಷ್ಟಿಯನ್ನು ಮಾಡೆಂದು ಬ್ರಹ್ಮನಿಗೆ ಹೇಳಿ, ತಾನು ಕ್ಷೀರಸಮುದ್ರದ ಉತ್ತರ ಭಾಗದಲ್ಲಿ ಶೇಷನ ಮೇಲೆ ಮಲಗಿಕೊಂಡನು ಎಂಬಲ್ಲಿಗೆ ೫ ನೇ ಅಧ್ಯಾಯವು ಸಂಪೂರ್ಣವು.

---

## ೬ ನೇ ಅಧ್ಯಾಯವು.

### ಅ ರ್ಧ ನಾ ರೀ ಶ್ವ ರ ಲೀ ಲೆ .

ಚತುರ್ಮುಖಬ್ರಹ್ಮನಿಗೆ ಜಗತ್ಸೃಷ್ಟಿಯು ಅವನ ಅಸತ್ಯದಿಂದ ಅಸಾಧ್ಯವಾಗಿರಲು, ಬಹು ಕಾಲ ಈಶ್ವರನನ್ನು ಕುರಿತು ತಪಸ್ಸು ಮಾಡಿದನು. ಶಿವನು ಪ್ರತ್ಯಕ್ಷನಾಗಿ ಇಷ್ಟಾರ್ಥವೇನು ? ಬೇಡೆನಲು, ಸ್ವಾಮೀ ! ತಮ್ಮಪ್ಪಣೆಯಂತೆ ನಾನು ಜಗತ್ಸೃಷ್ಟಿಯನ್ನು ಮಾಡಬೇಕೆಂದು ಯಾವಯಾವವಿಧದಲ್ಲಿ ಪ್ರಯತ್ನಿಸಿದರೂ ತಮ್ಮ ಅವಲಂಬನವಿಲ್ಲದಕಾರಣ ಸಾಧ್ಯವಾಗದೆ ಇರುವುದು. ಅದುಕಾರಣ ನೀವೇ ಮೊದಲು ನನ್ನ ದೇಹದಿಂದುದ್ಭವಿಸಿ ಸೃಷ್ಟಿಕಾರ್ಯಕ್ಕೆ ಸಹಾಯಗೊಳಿಸಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಶಿವನು— ಅಯ್ಯಾ ! ನೀನೇನೊ

ಈ ವರವನ್ನು ಕೇಳಿಕೊಂಡೆ. ನಿನ್ನಿಷ್ಟದಂತೆ ನಾನು ನಿನ್ನ ಶರೀರದಿಂದ ಮೂಡಿದೆನಾದರೆ, ಆ ಕೂಡಲೆ ನಿನಗೆ ಹಾನಿಯು ತಪ್ಪುವುದಿಲ್ಲ. ಅದುಕಾರಣ ಈ ವರವು ಬೇಡವೆಂದರೂ ಬ್ರಹ್ಮನು ಕೇಳದೆ, ಆದರಾಗಲಿ ಅದನ್ನೇ ದಯಪಾಲಿಸೆಂದು ಕೇಳಿಕೊಂಡನು. ಶಿವನಾದರೋ— ಹಾಗಾದರೆ ನಿನ್ನಿಷ್ಟದಾತೆಯೇ ಆಗಲಿ: ನೀನು ಹೀಗೆಯೇ ನಿಶ್ಚಲಸಮಾಧಿಸ್ಥಿತನಾಗಿರು ಎಂದು ಹೇಳಿ ಬಯಲಾಗಿ, ಸ್ಫಟಿಕಕಲಶದಲ್ಲಿ ತೋರುವ ದೀಪದಂತೆ ಆ ಬ್ರಹ್ಮನ ಶರೀರದಲ್ಲಿ ಪರಶಿವನು ಉಮಾಶಕ್ತಿಸಮೇತನಾಗಿ ಷಟ್ಚಕ್ರವನ್ನೂ ಭೇದಿಸಿಕೊಂಡು ಅವನ ಹಣೆಯಿಂದ ಆವಿರ್ಭವಿಸಿದನು. ಶಕ್ತಿಸಮೇತವಾದ ಆ ತೇಜೋಮೂರ್ತಿಯು ಮಹಾಂಧಕಾರದೊಡನೆ ಬೆರೆದು ಬಂದ ಶತಕೋಟಿಸೂರ್ಯರಂತೆ ತೋರುತಿದ್ದಿತು. ಒಡೆದು ಬಂದ ಆ ರಭಸಕ್ಕೆ ಬ್ರಹ್ಮನ ದೇಹವು ಇಬ್ಭಾಗವಾಯಿತು. ಆಗ ಪರಶಿವನು ಅತಿ ರೌದ್ರಾಕಾರದಿಂದ ರುದ್ರಮೂರ್ತಿಯೆನಿಸಿಕೊಂಡನು. ಉಮೆಯು ಕಾಳಿಯಾದಳು. ರುದ್ರನು ಆ ಕಾಳಿಯೊಡನೆ ಕ್ರೀಡಿಸುತ್ತ ಕೆಲವು ಕಾಲವನ್ನು ಕಳೆದನು. ಆಗ ರುದ್ರನು ಸ್ವಸದೃಶರಾದ ನೀಲಲೋಹಿತ ಮೊದಲಾದ ಅನೇಕ ರುದ್ರಗಣಗಳನ್ನೂ, ಬಲವಿಕರಣಿ ಬಲಪ್ರಮಥಿನಿ ಮೊದಲಾದ ಶಕ್ತಿದೇವಿಯರನ್ನೂ ಸೃಷ್ಟಿಸಿ, ಅವರವರಿಗೆ ದಾಂಪತ್ಯವನ್ನುಂಟುಮಾಡಿದನು. ಇತ್ತ ಅಳಿದಿರುವ ಬ್ರಹ್ಮನಮೇಲೆ ದಯೆಗೊಂಡು ಅವನ ದೇಹದ ಎರಡು ಹೋಳುಗಳನ್ನೂ ಕೂಡಿಸಿ ಕಟಾಕ್ಷಿಸಲು, ಮಲಗಿದ್ದವರೇಳ್ವಂತೆ ಬ್ರಹ್ಮನು ಎದ್ದು, ಮಹಾರುದ್ರಕಾಳಿಗಳ ರೌದ್ರರೂಪವನ್ನು ನೋಡಿ, ಭಯಪಟ್ಟು, ಹರಹರಾ! ತವಿಸ್ಮೃತರ ಭಯಂಕರಾಕೃತಿಯನ್ನು ನೋಡಿ ನನ್ನೆದೆಯು ಒಡೆದುಹೋಗುತ್ತಿದೆ. ನನ್ನಲ್ಲಿ ಕರುಣವಿಟ್ಟು, ಶಾಂತವಾದ ಏಕಮೂರ್ತಿಯನ್ನು ಧರಿಸಿ ದರ್ಶನವನ್ನು ಕೊಡಬೇಕೆಂದು ಬೇಡಲು, ಆಗ ಪರಶಿವನು ಅರ್ಧನಾರೀಶ್ವರರೂಪನ್ನು ಧರಿಸಿದನು. ಎಡಗಡೆಯಲ್ಲಿ ಸ್ತ್ರೀರೂಪವನ್ನೂ, ಬಲಗಡೆಯಲ್ಲಿ ಪುಂರೂಪವನ್ನೂ ಧರಿಸಿದ್ದ ಆ ಮೂರ್ತಿಯು ಇಂದ್ರನೀಲ ಮುತ್ತು ರತ್ನಗಳೆರಡೂ ಒಂದಾಗಿ ಸೇರಿದಂತೆ ತೋರುತ್ತಿದ್ದಿತು. ಆ ಮೂರ್ತಿಯಲ್ಲಿ ಒಂದು ಕಡೆ ತುರುಬೂ, ಒಂದು ಕಡೆ ಜಡೆಯೂ, ಅದರಂತೆಯೇ

ಓಲೆಯೂ, ಕರ್ಣ್ಣಕುಂಡಲವೂ, ಕಂಠಹಾರವೂ, ಗಂಡಮಾಲೆಯೂ ಕೆ ನ್ನೈದಿಲೂ ಶೂಲವೂ, ರತ್ನದಸರವೂ, ಸರ್ಪಮಾಲಿಕೆಯೂ, ಪಟ್ಟೆಸೀ ರೆಯೂ ಚರ್ಮಾಂಬರವೂ, ಸಹ ಎಸೆಯುತ್ತಿದ್ದುವು. ಈ ಶಾಂತಮೂರ್ತಿ ಯನ್ನು ಬ್ರಹ್ಮನು ಕಂಡು ಸಂತೋಷದಿಂದ ಕೊಂಡಾಡಿ, ಸ್ವಾಮಿಾ! ಮುಂದೆ ಜಗತ್ಸೃಷ್ಟಿಯನ್ನು ಮಾಡುವುದು ಹೇಗೆಂಬ ವಿವರವನ್ನು ನನಗೆ ತಿಳಿಸಬೇಕೆಂದು ಪ್ರಾರ್ಥಿಸಿದನು. ಶಂಕರನು— ಬ್ರಹ್ಮನೇ ಈ ನೀಲಲೋಹಿತಾದಿರುದ್ರಗಣಸಮೇತನಾಗಿ ಸೃಷ್ಟಿ ಮಾಡೆನಲು, ಅವರ ರೌದ್ರರೂಪವನ್ನು ನೋಡಿ ಹೆದರಿ, ಸ್ವಾಮಿಾ! ಸಾಕು, ನನಗೆ ಇವರ ಸಹವಾಸವು ಸಲ್ಲದು ಎಂದು ನುಡಿದನು. ಆಗ ಶಿವನು ನಕ್ಕು, ನೀನು ಮೊದಲಿನಂತೆಯೇ ಜನನಮರಣಬದ್ಧವಾದ ಜಗತ್ಸೃಷ್ಟಿಯನ್ನು ಮಾ ಡೆಂದು ನಿರವಿಸಿ ಅಂತರ್ಹಿತನಾದನು. ಬಳಿಕ ಬ್ರಹ್ಮನು ಲೋಕಸೃ ಷ್ಟಿಯನ್ನು ಮೊದಲಂತೆಯೇ ಮಾಡಿ, ಸತ್ಯಲೋಕದಲ್ಲಿ ಸಕಲ ದೇವತೆ ಗಳೊಡನೆ ಅತಿ ವೈಭವದಿಂದ ಒಡ್ಡೋಲಗಂಗೊಂಡು ಸುಖದಿಂದಿದ್ದ ನೆಂದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ಪೇಳ್ದನೆಂಬಲ್ಲಿಗೆ ಆರನೇ ಅಧ್ಯಾಯವು ಸಂಪೂರ್ಣ್ಣವು.

---

## ೭ ನೇ ಅಧ್ಯಾಯವು.

### ಬ್ರಹ್ಮಶಿರಶ್ಛೇದನವು.

ಬ್ರಹ್ಮನು ಸಕಲ ಮನುಮುನಿದೇವತಾದಿಗಳಿಂದ ಸೇವೆಗೊಳ್ಳುತ ಸಭೆಯಲ್ಲಿರಲು, ಮುನಿಗಳೆದ್ದು ಬ್ರಹ್ಮನಿಗೆ ಕೈಮುಗಿದು, ಭಕ್ತಿಯಿಂಕೊಂ ಡಾಡಿ, ಎಲೈ ಸ್ವಾಮಿಯೇ! ಜಗತ್ತಿಗೆಲ್ಲ ವಂದ್ಯನೂ ನಿತ್ಯನೂ ಆದ ದೇವನಾರು ? ಹೇಳು. ಅವನನ್ನು ನಾವು ಭಯಭಕ್ತಿಯಿಂದ ಸದಾ ಉಪಾಸಿಸುವೆವು ಎಂದು ಕೇಳಿಕೊಂಡರು. ಆಗ ಬ್ರಹ್ಮನು ಕೇಕೆಹಾಕಿ ನಕ್ಕು, ಸಕಲ ಲೋಕಪೂಜ್ಯನಾದ ದೇವನಾರೆಂದು ನನ್ನನ್ನೇ ನೀವು ಕೇ ಳುವಿರಾ ? ಈ ಸಕಲಜಗತ್ಸೃಷ್ಟಿಸ್ಥಿತಿಪ್ರಳಯಗಳೆಲ್ಲ ನನ್ನಧೀನ ವಾಗಿದ್ದು, ಇವರ ಭಾರವನ್ನೆಲ್ಲ ವಹಿಸಿಕೊಂಡಿರುವವನು ನಾನಲ್ಲದೆ ಮ

ತ್ತಿರುಂಟು ? ಹರಿಹರೇಂದ್ರಾದಿಗಳೂ ಕೂಡ ನನ್ನನ್ನೇ ಸದಾ ಧ್ಯಾನಿಸುತ್ತಿರುವರು. ಅದರಿಂದಲೇ ನನಗೆ ಸುರಜ್ಯೇಷ್ಠನೆಂಬ ಹೆಸರು ಬಂದಿರುವುದು. ಅದುಕಾರಣ ನಾನೇ ಪರಬ್ರಹ್ಮ, ನನಗಿಂತಲೂ ಪರವಾದ ದೈವವು ಬೇರೊಂದಿಲ್ಲವೆಂದು ತಿಳಿದುಕೊಳ್ಳಿರಿ. ಎಂದು ಹೇಳುತ್ತಿದ್ದನು. ಈ ವಾರ್ತೆಯನ್ನು ವಿಷ್ಣುವು ಕೇಳಿ, ಬ್ರಹ್ಮನ ಈ ಅಜ್ಞಾನವನ್ನು ತೊಲಗಿಸಬೇಕೆಂದು ಯೋಚಿಸಿ, ಬಂದು, ಮುಂದೆ ನಿಂತು, ಇದೇನಯ್ಯ ಬ್ರಹ್ಮ! ನೀನು ಮೇರೆದಪ್ಪಿ ಮಾತನಾಡಿದ ಬಳಿಕ ಇದನ್ನು ಸಮಾಧಾನನಡಿಸುವರಾರು ? ಇದೇಕೆ ನಿನಗಿಂತಹ ಹುಚ್ಚು ಹಿಡಿದಿತು? ಇದೆಲ್ಲ ಶಿವನ ಮಾಯೆಯಲ್ಲದಿದ್ದರೆ ನೀನು ತಾನೇ ಹೀಗಾಡುತ್ತಿದ್ದೆಯಾ ? ಚೆನ್ನಾಯಿತು!! ನೀನು ಜಗತ್ಸೃಷ್ಟಿಕರ್ತ; ನಾನು ಪಾಲನ ಕರ್ತ; ನಮ್ಮಿಬ್ಬರಿಗೂ ಶಿವನೇ ಸ್ವಾಮಿಯು; ಅವನೇ ಪರದೈವವು. ಸಕಲ ಲೋಕಾಧಾರನು. ನಾನು ನೀವು ಸೇರಿ ನಮ್ಮೆಲ್ಲರ ಸಹಿತ ಸಕಲರೂ ಅಸ್ವತಂತ್ರರು. ನಾವೆಲ್ಲರೂ ಆ ಪರಶಿವನ ಸೂತ್ರದ ಗೊಂಬೆಗಳು. ಹೀಗಿರುವಲ್ಲಿ ನೀನು ಅಹಂಕಾರದ ಮಾತನಾಡಬಹುದೆ? ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲದಿದ್ದರೆ ವೇದಗಳನ್ನೇ ಕೇಳು ಎಂದನು. ಅಷ್ಟರಲ್ಲಿ ಋಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ವೇದಗಳೂ ಸಾಕಾರವಾಗಿ ಬಂದು, ಮುಂದೆ ನಿಂತು, ಎಲೆ ಬ್ರಹ್ಮನೇ ! ಆ ಪರಶಿವನೊಬ್ಬನೇ ಅದ್ವಿತೀಯನು; ಅಭವನು, ಅತ್ಯತಿಷ್ಠದ್ದಶಾಂಗುಲನು. ಅವನೇ ಸರ್ವಲೋಕಾಧಾರನು. ನಿನಗೆ ಈ ಮರುಳುತನವು ಸಲ್ಲದು ಬಿಡು ಎಂದು ನುಡಿದುವು. ಬಳಿಕ ವೇದಮೂಲವಾದ ಪ್ರಣವವೂ ಸಾಕಾರವಾಗಿ ಬಂದು, ಎಲೆ ಬ್ರಹ್ಮನೇ! ಶಿವನೊಬ್ಬನೇ ಅಜ, ಅಪ್ರಮೇಯ, ಅವ್ಯಯ, ತ್ರಿಜಗದ್ವಂದಿತ; ಸಾಕ್ಷಾತ್ಪರಬ್ರಹ್ಮ; ನೀನು ದೇವೋತ್ತಮನೆಂದು ಹೇಳಿಕೊಳ್ಳುವ ಅಹಂಕಾರದ ಮಾತು–ಹಿಂದೆ ಯಾವನೋ ಒಬ್ಬನು "ನನ್ನ ತಾಯಿ ಬಂಜೆ, ಇದು ಸತ್ಯ" ವೆಂದು ಸಾಧಿಸಿ ನುಡಿದ ಗಾಥೆಗೆ ಸಮನಾಗಿದೆ. ಸಾಕು; ನಿನ್ನ ಮರುಳ್ತನವನ್ನು ಬಿಡೆಂದು ಬೋಧಿಸಿ ಬಯಲಾಯಿತು. ಇದನ್ನೆಲ್ಲ ಬ್ರಹ್ಮನು ಕೇಳಿ ಧಿಃಕರಿಸಿ, ವಿಷ್ಣುವಿನ ಮುಖವನ್ನು ನೋಡಿ, ಏನಯ್ಯಾ! ಹೆಂಡತಿಗೆ ಅರ್ಧದೇಹವನ್ನು ಕೊಟ್ಟು, ಚರ್ಮವನ್ನು ಹೊ

ದೆವು, ಸ್ಮಶಾನದಲ್ಲಿ ಓಡಿಯಾಡುತ್ತ ಅಶುಚಿಯಾಗಿರುವ ಆ ತಿರುಕನನ್ನು ದೇವೋತ್ತಮನೆಂದು ಹೇಳಿದರೆ ಅದು ಹೇಗೆ ನಂಬುವುದು? ಎಂದು ದೂಷಿಸುತ್ತಿರುವಷ್ಟರಲ್ಲಿ ಗಾಢಾಂಧಕಾರವನ್ನು ತೊಲಗಿಸಲು ಉದಯಿಸುವ ಮಾರ್ತಾಂಡಮಂಡಲದಂತೆಯೂ, ಅಜ್ಞಾನವನ್ನು ಹೋಗಲಾಡಿಸಲೈತಂದ ಸುಜ್ಞಾನದಂತೆಯೂ, ಪಂಚಮುಖ ದಶಭುಜ ಜಟಾಪಟಲ ಚಂದ್ರರೇಖೆ ಚರ್ಮಾಂಬರ ಮೊದಲಾದುವುಗಳಿಂದೊಪ್ಪುವ ಜ್ಯೋತಿರ್ಮಯನಾದ ಪರಶಿವನು ಬ್ರಹ್ಮನ ಮುಂದೆ ಪ್ರತ್ಯಕ್ಷನಾದನು. ಆಗ ಇಂದ್ರಾದಿದೇವತೆಗಳೆಲ್ಲರೂ ಅಭಿವಂದಿಸಿದರು. ಬ್ರಹ್ಮನು ಆ ಮಹಾಸ್ವಾಮಿಯನ್ನು ನೋಡಿ ಇವನೆಯೋ ಜಗದೀಶ್ವರ? ಬಲು ಚೆನ್ನಾಯಿತು! ಇವನ ವೇಷವನ್ನು ನೋಡಿ ನಕ್ಕು ನಕ್ಕು ನನ್ನ ಹೊಟ್ಟೆಯೆಲ್ಲ ನೋಯುತ್ತಿರುವುದು. ಸಾಕು, ನೀವೇ ನೋಡಿ, ಎಂದು ಹೇಳಿ, ಕೆಲಬಲದವರ ಮೇಲೆ ಕೈ ಹೊಯ್ದು ನಕ್ಕು ಗೇಲಿ ಮಾಡಿ, ತಿರುಕನಿಗೆ ಮಾನವೆಂದರೇನು? ತಲೆಯ ಮಾಲಿಕೆಯನ್ನು ಕಟ್ಟಿಕೊಂಡಿರುವ ಗೊರವನಿಗೆ ಮಹಿಮೆಯೆಂದರೇನು? ಸರ್ಪಾಭರಣನಿಗೆ ಸ್ಥಿರತ್ವವೆಲ್ಲಿರುವುದು? ಸ್ಮಶಾನವಾಸಿಗೆ ಶುಭವೆಲ್ಲುಟು? ಈ ಹುಚ್ಚನಿಗೆ ತಾನು ೫ ಮುಖವನ್ನು ಧರಿಸಿರುವೆನೆಂಬ ಅಹಂಕಾರವೊಂದಿರಬಹುದು. ಇದಾವ ಮಹಾಘನ? ೫ ಶಿರಸ್ಸನ್ನು ನಾನೂ ಧರಿಸಿಕೊಳ್ಳುತ್ತೇನೆ ನೋಡಿರೆಂದು ಮತ್ತೊಂದು ಶಿರಸ್ಸನ್ನು ಸೃಜಿಸಿ ಪಂಚಶಿರಸ್ಕನಾಗಿ ಮತ್ತೆ ಶಿವನನ್ನು ಜರೆಯಲು ತೊಡಗಿ... ನೀನೇ ಸಕಲ ಜಗದಾಧಾರನಂತೆ! ಈ ದೇವತೆಗಳಿಗೆಲ್ಲ ನೀನೇ ಕರ್ತನಂತೆ! ವೇದಗಳೆಲ್ಲ ನಿನ್ನನ್ನೇ ಹೊಗಳುವವಂತೆ! ನೀನೇ ಪರಬ್ರಹ್ಮನಂತೆ! ನೀನೆಲ್ಲಿ ಹುಟ್ಟಿದೆ? ನಿನಗೆ ತಾಯ್ತಂದೆಗಳಾರು? ಎಂದು ಗೇಲಿ ಮಾಡಿದನು. (ಈ ನಿಂದಾಪರಿಹಾಸವಚನಗಳೆಲ್ಲ ಆ ಪರಮಾತ್ಮನನ್ನು ಹೊಗಳುವ ವಚನವಾಗಿಯೇ ಕಾಣುತ್ತಿರುವಲ್ಲಿ ಆತನ ಘನಮಹಿಮೆಯು ಎಂಥಾದ್ದು!) ಬಳಿಕ ಬ್ರಹ್ಮನು ಇಷ್ಟೊಂದು ವಿಧವಾಗಿ ಜರೆದದ್ದು ಸಾಲದೆ, ಮತ್ತೂ "ನೀನು ಈ ವೇಷಾಡಂಬರವನ್ನೆಲ್ಲ ಬಿಟ್ಟು ನನ್ನ ಮರೆಹೊಕ್ಕರೆ ನಿನಗೆ ಬೇಕಾದ ಉತ್ತಮಪದವಿಯನ್ನು ಕೊಡುತ್ತೇನೆ ಬದುಕು. ಹಾಗಲ್ಲದ ಪಕ್ಷದಲ್ಲಿ ಈಗಲೇ ನಿನ್ನನ್ನು ಬಡಿದು ಪ್ರಾಣವು ನೆತ್ತಿಯಿಂದ ಹೊರ

ಹೋಗುವಂತೆ ಮಾಡುತ್ತೇನೆ ನೋಡು" ಎಂದು ಹೇಳಿ ಘುಡುಘುಡಿಸಿ ಕೈಯನ್ನು ಮೇಲಕ್ಕೆತ್ತಿದನು. ಆಗ ದೇವತೆಗಳೆಲ್ಲರೂ ಇನ್ನೇನನಾಹುತವಾಗುವುದೋ! ಎಂದು ಬೆದರಿದರು. ವಿಷ್ಣುವು ಬ್ರಹ್ಮನ ಮರುಳ್ತನವನ್ನು ಕುರಿತು ಜರೆಯುತ್ತಿದ್ದನು. ಆಗ ಪರಶಿವನು ರೌದ್ರರೂಪದಿಂದ ಕರವಾಯುಧಗಳನ್ನು ಝಳಪಿಸಲು, ಓಲಗದವರೆಲ್ಲರೂ ದಿಕ್ಕುದಿಕ್ಕಿಗೆ ಓಡಿದರು. ಬ್ರಹ್ಮನು ಬೆದರಿದನು. ಶಿವನು ಬ್ರಹ್ಮನ ೫ ನೇ ಮುಖವನ್ನು ನೋಡಿ, "ಹಾಸ್ಯವಾಡು, ಹಾಸ್ಯವಾಡು" ಎಂದು ನುಡಿಯುತ್ತ, ಕ್ರೂರಾಸ್ತ್ರದಂತೆ ಕಾಂತಿಯನ್ನುಗುಳುತ್ತಿರುವ ತನ್ನ ಎಡಗೈಯ್ಯ ಕಿರುಬೆರಳಿನುಗುರಿನಿಂದ ಆ ೫ ನೇ ತಲೆಯನ್ನು ಲೀಲಾಮಾತ್ರದಲ್ಲಿ ಚಿಗುಟಿಬಿಟ್ಟನು. ಕೂಡಲೇ ಆ ಬ್ರಹ್ಮನ ದೇಹದಿಂದ ರಕ್ತವು ಪ್ರವಾಹವಾಗಿ ಹರಿದು ಲೋಕವನ್ನೆಲ್ಲ ಮುಳುಗಿಸುತ್ತಿದ್ದಿತು. ಈ ಅನರ್ಥವನ್ನು ತಪ್ಪಿಸುವುದಕ್ಕಾಗಿ ಪರಶಿವನು ತನ್ನ ಫಾಲನೇತ್ರವನ್ನು ತೆರೆಯಲು, ಅಗ್ನಿಯು ಕ್ಷಣಮಾತ್ರದಲ್ಲಿ ಆ ರಕ್ತವನ್ನೆಲ್ಲ ಹೀರಿ ಬ್ರಹ್ಮನ ತಲೆಯೋಡನ್ನು ಹೋಳುಮಾಡಿತು. ಆ ಕಪಾಲವನ್ನು ಶಿವನು ತನ್ನ ಕೈಗೆ ತೆಗೆದುಕೊಂಡನು. ಬ್ರಹ್ಮನಾದರೋ ಶಿವನ ಕರದಲ್ಲಿರುವ ತನ್ನ ಶಿರಃಕಪಾಲವನ್ನೂ, ರಕ್ತವನ್ನೆಲ್ಲ ಶಿವನ ನೇತ್ರಾಗ್ನಿಯು ಹೀರಿದುದನ್ನೂ, ಶಿವನನ್ನು ಬಳಸಿ ಹೊಗಳುತ್ತಿರುವ ದೇವತೆಗಳನ್ನೂ, ಸ್ತುತಿಸುತ್ತಿರುವ ವೇದಗಳನ್ನೂ, ಕೊಂಡಾಡುತ್ತಿರುವ ವಿಷ್ಣುವನ್ನೂ, ನೋಡಿ ಬೆರಗಾಗಿ, ಶಿವಶಿವಾ! ಈ ಮಹಾದೇವದೇವೋತ್ತಮನ ಪ್ರಭಾವವನ್ನು ಅರಿಯದೆ ಇವನೊಡನೆ ಹೋರಾಡಿದೆನಲ್ಲ! ಎಂದು ಚಿಂತಿಸಿ, ತಲೆಯಮೇಲೆ ಕೈಯನ್ನು ಹೊತ್ತುಕೊಂಡು, "ಅಕಟಕಟಾ! ಇಂತಹ ಮಹಾದೇವನೊಡನೆ ನನಗೆ ಸೆಣಸಾಟವೆಂದರೇನು? ಈ ವಿಶ್ವಭರಿತನೊಡನೆ ನನಗಹಂಕಾರವೆಂದರೇನು? ಲೋಕಶಿಕ್ಷಕನಾದ ಇವನನ್ನು ನಿಂದಿಸುವುದೆಂದರೇನು? ಈ ಮಹಾಮಹಿಮನ ಮುಂದೆ ನಾನು ಉನ್ನತಾಸನದಲ್ಲಿ ಕುಳಿತುಕೊಳ್ಳುವುದೆಂದರೇನು? ಕಂಡೂ ಕಂಡು, ಕೇಳಿಯೂ ಕೇಳಿ ನಾನು ಮರುಳಾಗಬಹುದೆ? ಈ ನನ್ನ ಶಿವದ್ರೋಹದ ಪ್ರಾಯಶ್ಚಿತ್ತಕ್ಕಾಗಿ ನನ್ನ ಉಳಿದ ಶಿರಸ್ಸುಗಳನ್ನೂ ಕತ್ತರಿಸಿ, ಧನ್ಯನಂ ಮಾಡು" ಎಂದು

ಶಿವನ ಪಾದಕ್ಕೆ ನಮಸ್ಕರಿಸಿದನು. ಭಕ್ತಿಭರದಿಂದ ಅವನ ಕಣ್ಣಿನಲ್ಲಿ ಸುರಿಯುತ್ತಿದ್ದ ಬಾಷ್ಪವೇ ಶಿವನ ಪಾದಕ್ಕೆ ಅಭಿಷೇಕಜಲವಾಯಿತು. ಅವನ ಕಿರೀಟರತ್ನಗಳೇ ರನ್ನದ ಹೂವುಗಳಾದುವು. ಸ್ತೋತ್ರವಚನವೇ ಮಂತ್ರವಾಯಿತು. ನೇತ್ರವಜ್ರಗಳೇ ದೀಪರಾಜಿಯಾದುವು. ಇದರಿಂದ ಬ್ರಹ್ಮನು ಶಿವನ ಪಾದವನ್ನು ಅರ್ಚಿಸುವಂತೆ ತೋರುತ್ತಿದ್ದನು. ಸಕಲದೇವತಾನಿಕುರುಂಬವೂ ಜಯಜಯವೆಂದು ನುತಿಸುತ್ತಿದ್ದಿತು. ಆಗ ಪರಶಿವನು ಸಕಲ ದೇವತೆಗಳನ್ನು ಕೃಪೆಯಿಂದ ನೋಡಿ, ಪಾದದಲ್ಲಿ ಮಣಿದಿರುವ ಬ್ರಹ್ಮನನ್ನು ಹಿಡಿದೆತ್ತಿ, ತಲೆಯಮೇಲೆ ಹಸ್ತವನ್ನಿಟ್ಟು ಹೆದರಬೇಡವೆಂದು ಅಭಯದಾನ ಮಾಡಿ, ಮಂದಹಾಸದಿಂದ ವಿಷ್ಣುವನ್ನವಲೋಕಿಸಿ, ಸರ್ವರನ್ನೂ ಅನುಗ್ರಹಿಸಿದನು. ಎಂದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ಬೋಧಿಸಿದನೆಂಬಲ್ಲಿಗೆ ೭ ನೇ ಅಧ್ಯಾಯವು ಮುಗಿದುದು.

---

## ೮ ನೇ ಅಧ್ಯಾಯವು.

### ಭಿಕ್ಷಾಟನ ಲೀಲೆ.

ಬ್ರಹ್ಮಶಿರಃಕಪಾಲವನ್ನು ಕೈಯಲ್ಲಾಂತ ಪರಶಿವನು ಆ ಕಪಾಲಕ್ಕೆ ತೃಪ್ತಿಪಡಿಸುವ ವ್ಯಾಜದಲ್ಲಿ ವಿಷ್ಣ್ವಾದಿಗಳ ಭಕ್ತಿಭಾವವನ್ನು ಪರೀಕ್ಷಿಸಬೇಕೆಂದು ಭಿಕ್ಷಾಟನ ಲೀಲೆಯನ್ನು ಧರಿಸಿದನು. ಆತನ ನಗುಮೊಗವು ಕೋಟಿಚಂದ್ರರ ಕಿರಣವನ್ನು ಜರೆಯುತ್ತಿದ್ದಿತು. ದೇಹಕಾಂತಿಯು ಸೂರ್ಯಕೋಟಿ ತೇಜಸ್ಸನ್ನು ತಿರಸ್ಕರಿಸುತ್ತಿದ್ದಿತು. ದೇಹಲಾವಣ್ಯವು ಶತಕೋಟಿ ಮನ್ಮಥ ವಸಂತ ಜಯಂತ ನಳಕೂಬರರ ಸೌಂದರ್ಯವನ್ನು ವಿಾರಿಸುತ್ತಿದ್ದಿತು. ರೂಪಾತಿಶಯವನ್ನು ಹೊಗಳುವುದಕ್ಕೆ ಕೋಟ್ಯನುಕೋಟಿ ಆದಿಶೇಷರಿಂದಲೂ ಅಸಾಧ್ಯವೆಂಬಂತೆ ತೋರುತ್ತಿದ್ದ ಪರಶಿವನು ಜಟಾಪಟಲವನ್ನೂ, ಹಣೆಯಲ್ಲಿ ಭಸಿತ ತ್ರಿರೇಖೆಯನ್ನೂ, ಕಿವಿಯಲ್ಲಿ ಕುಂಡಲಗಳನ್ನೂ ಒಂದು ಕೈಯಲ್ಲಿ ತ್ರಿಶೂಲವನ್ನೂ, ಮತ್ತೊಂದರಲ್ಲಿ ಬ್ರಹ್ಮಶಿರಃಕಪಾಲವನ್ನೂ, ಧರಿಸಿ, ಸುಲಿಪಲ್ಲು, ಚೆಲ್ವನಾ

ಸಿಕ, ತುಂಬಿದ ಗಲ್ಲ, ಕೆಂದುಟಿ, ದೀರ್ಘನೇತ್ರಗಳನ್ನು ತಳೆದು, ಸ್ತ್ರೀಕುಲವನ್ನು ಜೈಸಲು ಧನುರ್ಧಾರಿಯಾಗಿ ಹೊರಟ ಮನ್ಮಥನಂತೆ ೧೬ ವರ್ಷದ ಪ್ರಾಯದವನಾಗಿ, ಈತನೇನು ಶೃಂಗಾರರಸದ ಅಚ್ಚೋ, ಮುಕ್ತಿಯ ಗುರುವೋ, ಮೋಹರಸದ ಸಮುದ್ರವೋ, ಪುಣ್ಯದ ದೇಹವೋ, ಸೌಖ್ಯವೆಂಬ ಬಳ್ಳಿಯ ಹೊಸಕುಡಿಯೋ, ಸೊಗಸಿನ ಮನೆಯೋ, ಪ್ರಣವದ ಜೋಡಿಯೋ, ಶುಭದ ಆಕಾರವೋ, ಶಿವತತ್ತ್ವದ ಸಾರವೋ, ಮನ್ಮಥರಾಜ್ಯದ ಬೆಳಸೋ, ಭಕ್ತಿಯ ಬೆಳಕೋ ಎಂಬದಾಗಿ ಶಿವಯೋಗಿಗಳು ಯೋಚಿಸುತ್ತಿರಲು, ಮೋಹಬ್ರಹ್ಮನಾದ ಆ ಪರಶಿವನು ನಡೆಗೊಂಡನು. ಮೊದಲು ವಿಷ್ಣುವಿನ ವೈಕುಂಠಲೋಕಕ್ಕೆ ತೆರಳಿ, ಆ ಪಟ್ಟಣದ ರಾಜವೀಧಿಯಲ್ಲಿ ಬರುತ್ತಿರಲು, ಅಲ್ಲಿನ ಸ್ತ್ರೀಜನವು ಈ ಮಹಾದೇವನ ಸೌಂದರ್ಯ ಲಾವಣ್ಯಾದಿಗಳನ್ನು ನೋಡುವ ಆಸೆಯಿಂದ ತಮ್ಮ ಮನೆಗೆಲಸವನ್ನೆಲ್ಲ ಹಾಗೆಹಾಗೆಯೇ ಬಿಟ್ಟು ಒಬ್ಬರಮೇಲೊಬ್ಬರು ಬಿದ್ದು ಓಡಿಬಂದು ಸಾಲುಸಾಲಾಗಿ ನಿಂತು ನೋಡಿ ಆಶ್ಚರ್ಯಪಟ್ಟು ಕಾಮವಿಹ್ವಲೆಯರಾಗುತ್ತಿದ್ದರು. ಆಗ ಪರಶಿವನು ನೆಟ್ಟಗೆ ಹರಿಯ ಅರಮನೆಯ ಬಾಗಿಲಿಗೆ ಬಂದು ಒಳಹೊಗುತ್ತಿದ್ದನು. ದ್ವಾರಪಾಲಕನಾಗಿದ್ದ ವಿಷ್ವಕ್ಸೇನನು ಒಳಗೆ ಹೋಗಲಾಗದೆಂದು ಶಿವನನ್ನು ತಡೆಯಲು, ಆ ಕೂಡಲೇ ಅವನನ್ನು ಕರದ ಶೂಲದಿಂದಿರಿದು ಮೇಲಕ್ಕೆತ್ತಿದನು. ಶೂಲದ ಮೇಲಿರುವ ವಿಷ್ವಕ್ಸೇನನು ಆ ಎಡೆಗೆ ಹೆದರದೆ ಕೇಕೆಹಾಕಿ ನಕ್ಕನು. ನಗುವುದಕ್ಕೆ ಕಾರಣವೇನೆಂದು ಶಿವನು ಕೇಳಲು, ಬ್ರಹ್ಮನಿಗೂ ಕೂಡ ಗೋಚರವಾಗದ ನಿನ್ನ ಶಿರಸ್ಸಿನ ದರ್ಶನವು ನನಗೆ ಆದದ್ದೇ ನನ್ನ ಸಂತೋಷಕ್ಕೆ ಕಾರಣವೆಂದು ನುಡಿದನು. ಆಗ ಶಿವನು ಮೆಚ್ಚಿ, ಶೂಲದಿಂದವನನ್ನು ಕೆಳಕ್ಕಿಳುಹಲು ಪ್ರಯತ್ನಿಸಿದನು, ತನ್ನನ್ನು ಅಲ್ಲೇ ಇರಿಸಬೇಕೆಂದು ವಿಷ್ವಕ್ಸೇನನು ಪ್ರಾರ್ಥಿಸಿಕೊಂಡು ಶೂಲಾಗ್ರದ ಮೇಲೆಯೇ ನೆಲಸಿದನು. ಇಷ್ಟರಲ್ಲಿ ಒಬ್ಬನು ಒಳಗೆ ಹೋಗಿ ನಡೆದ ಸಂಗತಿಯನ್ನೆಲ್ಲ ವಿಷ್ಣುವಿಗೆ ಅರಿಕೆಮಾಡಿದನು. ಆಗ ಹರಿಯು ಥಟ್ಟನೆದ್ದು ಓಡಿಬಂದು ಬಾಗಿಲಲ್ಲಿ ನಿಂತಿರುವ ಶಿವನನ್ನು ಕಂಡು, ಹಿಗ್ಗಿ, ಭಕ್ತಿಯಿಂದ ದೂರದಲ್ಲೇ ಭೂಮಿಯಮೇಲೆ ಅಡ್ಡಬಿದ್ದು ಎದ್ದು, ಕುಣಿದಾಡಿ, ಜಯ ಜಯ

ವಿರೂಪಾಕ್ಷ, ವಿಶ್ವೇಶ, ಜನನಮರಣವಿನಾಶ, ಕರುಣಾಕೋಶ ಜಯಜಯ ಎಂದು ಮೊದಲಾಗಿ ಸ್ತುತಿ ಮಾಡುತ್ತಿದ್ದನು. ಪರಶಿವನು ಮೆಚ್ಚಿ, ಎಲೈ ವಿಷ್ಣುವೆ! ನಾವು ಬಂದ ಹದನೇನೆಂಬುದನ್ನು ತಿಳಿದುಕೊಳ್ಳದೆ ಹೀಗೆ ಸುಮ್ಮನೆ ಸ್ತೋತ್ರಮಾಡುತ್ತಿದ್ದರೆ ಫಲವೇನು? ಎಂದು ನುಡಿಯಲು, ವಿಷ್ಣುವಿಗೆ ಜ್ಞಾನೋದಯವಾಯಿತು. ಶಿವನ ಹಸ್ತದಲ್ಲಿರುವ ಕಪಾಲವು ತುಂಬಿಕೊಳ್ಳುವಂತೆ ತನ್ನ ಹಸಿಯ ರಕ್ತವನ್ನೇ ಭಿಕ್ಷೆಯನ್ನಾಗಿ ನೀಡಬೇಕೆಂದು ಯೋಚಿಸಿದನು. ಕೂಡಲೇ ಕೈಯಲ್ಲಿದ್ದ ಚಕ್ರಾಯುಧದಿಂದ ಹಣೆಯನ್ನು ಭೇದಿಸಿ, ಕಪಾಲಕ್ಕೆ ಶಿರಸ್ಸನ್ನು ಬಗ್ಗಿಸಿದನು. ಬೆಟ್ಟದಮೇಲಿಂದಿಳಿವ ಗಿರಿನದೀಪ್ರವಾಹದಂತೆ ರಕ್ತವು ಝುರ್ರನೆ ಅವಿಚ್ಛಿನ್ನವಾಗಿ ಸುರಿಯುತ್ತಿದ್ದರೂ ಆ ಕಪಾಲವು ಮಾತ್ರ ತುಂಬಲಿಲ್ಲ. ದೇವಮಾನದ ಸಹಸ್ರವರ್ಷಗಳವರೆಗೆ ಅವಿಚ್ಛಿನ್ನವಾಗಿ ಸ್ರವಿಸಿದ್ದರಿಂದ ಹರಿಯ ದೇಹದ ರಕ್ತಮಾಂಸಮಜ್ಜಾದಿಗಳೆಲ್ಲವೂ ಕಳೆದು ಹೋದುವು. ಆಗ ವಿಷ್ಣುವು ನಿಸ್ಸತ್ವನಾಗಿ ಚರ್ಮಾಸ್ಥಿಗಳು ಮಾತ್ರ ಉಳಿದುಕೊಳ್ಳಲು, ನಿಂತುಕೊಳ್ಳಲಾರದೆ ತಟ್ಟಾಗಿ ನೆಲದಮೇಲೆ ಬಿದ್ದನು. ಆಗ ಶಿವನ ಮನಸ್ಸು ಕರಗಿತು. ಹೋ ಹೋ! ಸಾಕು ಸಾಕು, ನಿಲ್ಲಿಸು, ನಿನ್ನ ಭಕ್ತಿಗೆ ನನ್ನ ಮನಸ್ಸು ಮೆಚ್ಚಿತು. ಬ್ರಹ್ಮನ ಅಹಂಕಾರದಿಂದ ಹುಟ್ಟಿದ್ದ ನಮ್ಮ ಕೋಪವೆಲ್ಲವೂ ಶಾಂತವಾಯಿತು. ನಿನಗೆ ಸಮಾನರಾದ ಭಕ್ತರು ಇನ್ನೀಜಗತ್ತಿನಲ್ಲಿಲ್ಲ. ಎಂದು ಹೇಳಿ, ಅವನನ್ನು ಯಥಾಸ್ಥಿತನನ್ನಾಗಿ ಮಾಡಿ ಅನುಗ್ರಹಿಸಿ, ಅಲ್ಲಿಂದ ಪರಶಿವನು ಇಂದ್ರನ ಪುರಕ್ಕೆ ತೆರಳಿದನು. ಆ ಅಮರಾವತಿಯ ರಾಜವೀಧಿಯಲ್ಲಿ ಬರುತ್ತಿರುವಾಗ್ಗೆ ಮುಂಗಡೆಯಲ್ಲಿದ್ದ ವಾರಾಂಗನೆಯರು ಈಶಿವನ ರೂಪಯೌವನವಿಭ್ರಮಾದಿಗಳನ್ನು ನೋಡಿ ಇದುವರೆಗೂ ನಾವು ಕಂಡ ಯಾವ ಮೋಹನಾಂಗನಲ್ಲೂ ಈ ವಿಧದ ಚೆಲ್ವಿಕೆ ಯಿರಲಿಲ್ಲವೆಂತಲೂ, ವಿಷ್ಣುಬ್ರಹ್ಮೇಂದ್ರಾದಿಗಳಾರೂ ಇವನ ಸೌಂದರ್ಯದೊಡನೆ ಹೋಲರಾದ್ದರಿಂದ ಇವನೇ ಸಾಕ್ಷಾತ್ಪರಶಿವನಾಗಿರಬಹುದೆಂತಲೂ ಮಾತನಾಡಿಕೊಳ್ಳುತ್ತಿದ್ದರು. ಈ ತ್ರಿಲೋಕದ ಸುಂದರಮೂರ್ತಿಯನ್ನು ನೋಡುವ ಆತುರದಿಂದ ಅನೇಕರು ಬಂದೇಶೋಳಗೆ ರವಿಕೆಯನ್ನಿಕ್ಕಿಕೊಂಡೂ, ಬಾಚುತ್ತಿದ್ದ ಕೊದಲನ್ನು

ಕೈಯಲ್ಲೇ ಹಿಡಿದುಕೊಂಡೂ, ಒಂದೇ ಕಣ್ಣಿಗೆ ಸೋಗೆಯನ್ನು ಬಳೆದು ಕೊಂಡೂ, ಅವಸರದಿಂದ ಓಡಿಬರುತ್ತಿದ್ದರು. ಬಂದು ನೋಡಿದ ಸ್ತ್ರೀಯರೆಲ್ಲರೂ ಮೋಹಿತರಾಗಿ ವಿರಹವ್ಯಥೆಯನ್ನನುಭವಿಸುತ್ತಿದ್ದರು. ರಂಭೆ, ಊರ್ವಶಿ, ಮೇನಕಿ, ತಿಲೋತ್ತಮೆ, ಮಂಜುಘೋಷೆ, ಮಧುಕೇಶಿ, ಮೊದಲಾದ ಮೂರು ಲಕ್ಷದ ಮೂವತ್ತಾರು ಸಾವಿರ ದೇವತಾಸ್ತ್ರೀಯರು ಆ ಪರಶಿವನನ್ನೇ ಬೆನ್ನಟ ಹೋಗುತ್ತಿದ್ದರು. ಇದನ್ನು ಕಂಡು ಶಿವನು ನಸುನಗುತ್ತಲೂ, ಅವರಿಗೆ ಮನಸ್ಸನ್ನು ಸೋತವನಂತೆ ಹೆಜ್ಜೆಹೆಜ್ಜೆಗೆ ನಿಂತು ಅವರನ್ನು ನೋಡುತ್ತಲೂ, ಕೈಯ ತ್ರಿಶೂಲವನ್ನು ವಿನೋದದಿಂದ ತಿರುಗಿಸುತ್ತಲೂ, ಸೊಗಸಿನಿಂದ ಓರೆನೋಟವನ್ನು ನೋಡುತ್ತಲೂ, ಇವನೆಂತಹ ಮಾಯಾವಿಯೋ ಎಂದು ಎಲ್ಲರೂ ಬೆರಗುಗೊಳ್ಳುವಂತೆಯೂ ಗಮಿಸುತ್ತಿದ್ದನೆಂಬಲ್ಲಿಗೆ ೮ ನೇ ಅಧ್ಯಾಯವು ಮುಗಿದುದು.

---

## ೯ ನೇ ಅಧ್ಯಾಯವು.

### ದಿಕ್ಪಾಲಭಿಕ್ಷಾಟನವು.

ಪರಶಿವನು ಕೈಯಲ್ಲಿ ತ್ರಿಶೂಲವನ್ನೂ ವಿಷ್ವಕ್ಸೇನನಹೆಣವನ್ನೂ ಕಪಾಲವನ್ನೂ ಹೊತ್ತು ನಡೆಯುತ್ತಿದ್ದರೂ ಆ ರೂಪನ್ನು ನೋಡಿ ಯಾರೊಬ್ಬಳೂ ಭೀತಿಗೊಳ್ಳಲಿಲ್ಲವೆಂಬುದನ್ನು ವಿಚಾರ ಮಾಡಿ ನೋಡಲಾಗಿ ಮೋಹರಸದ ಮುಂದೆ ಮತ್ತಿನ್ನಾವರಸಗಳೂ ತಲೆಯೆತ್ತಲಾರವೆಂಬುದೂ, ಕಾಮಿಗಳಿಗೆ ಕಣ್ಣು ಕಾಣುವುದಿಲ್ಲವೆಂಬುದೂ ಸುಳ್ಳಲ್ಲವಲ್ಲವೆ? ಈ ರೀತಿಯಲ್ಲಿ ಮೋಹನಾಂಗನಾಗಿದ್ದ ಪರಶಿವನು ದೇವೇಂದ್ರನ ಮನೆಯ ಬಾಗಿಲಿಗೆ ಹೋಗಿ ನಿಂತು, ದ್ವಾರಪಾಲಕರಿರ್ರ್ವರನ್ನೂ ಲಕ್ಷಿಸದೆ ಶೂಲವನ್ನು ಮೇಲಕ್ಕೆತ್ತಿ, ಬ್ರಹ್ಮನ ಕಪಾಲವನ್ನು ನೀಡಿ ಭಿಕ್ಷಾ ಭಿಕ್ಷಾ ಎಂದು ಗಟ್ಟಿಯಾಗಿ ಕೂಗಿದನು. ಆ ದನಿಯನ್ನು ಕೇಳಿ ಇಂದ್ರನು ಸಂತೋಷದಿಂದೆದ್ದು ಶಚೀಸಮೇತನಾಗಿ ಓಡಿಬಂದು, ಭಯಭಕ್ತಿಯಿಂದ ದೀರ್ಘದಂಡ ನಮಸ್ಕಾರವನ್ನು ಮಾಡಿದನು. ಮತ್ತು ಗುಡುಗಿನ ದನಿಯನ್ನು ಕೇಳಿದ ನವಿಲಿನಂತೆಯೂ, ನನ್ನುಗುರುವನ್ನು ಕಂಡ ಶಿಷ್ಯನಂ

ತೆಯೂ, ನಿಧಿಯನ್ನು ಕಂಡ ಬಡವನಂತೆಯೂ, ದೇವೇಂದ್ರನು ಮೈಯುಬ್ಬಿ, ರೋಮಾಂಚವೇರಿ, ಆನಂದಬಾಷ್ಪಗಳನ್ನು ಸುರಿಸಿ, "ದೇವದೇವೋತ್ತಮನೇ! ಈ ದಿವಸ ತಮ್ಮ ಆಗಮನದಿಂದ ನನ್ನ ಪುಣ್ಯಲತೆಯು ಫಲಿಸಿತು. ಮುಕ್ತಿನದೀಪ್ರವಾಹನೇ ಹರಿದುಬಂದಂತಾಯಿತು. ನನ್ನ ಜನ್ಮಾಂತರಗಳೆಲ್ಲ ಸಫಲವಾದುವು" ಎಂದು ನಾನಾವಿಧವಾಗಿ ಕೊಂಡಾಡಿ ಮತ್ತೆ ನಮಸ್ಕರಿಸಿದನು. ದಂಪತಿಗಳೀರ್ವರನ್ನೂ ಪರಶಿವನು ಕರುಣಾಕಟಾಕ್ಷದಿಂ ನೋಡಿ ಹಿಡಿದೆತ್ತಿದನು. ಅಷ್ಟರಲ್ಲಿ "ಎಲೆ ದೇವೇಂದ್ರನೇ ಪರಶಿವನ ಹಸ್ತಕಮಲದಲ್ಲಿರುವ ಬ್ರಹ್ಮನ ಕಪಾಲಕ್ಕೆ ನಿನ್ನ ಶಕ್ತಿವಂಚನೆಯಿಲ್ಲದಂತೆ ಭಿಕ್ಷೆಯಂ ನೀಡು" ಎಂದು ಆಕಾಶವಾಣಿಯಾಯಿತು. ಅದನ್ನು ಇಂದ್ರನು ಕೇಳಿ ಎಚ್ಚೆತ್ತು, ಗಣನಾತೀತವಾದ ವಸ್ತುಗಳನ್ನು ತಂದು ಆ ಕಪಾಲಕ್ಕೆ ಭಿಕ್ಷೆಯ ನೀಡೆಂದು ಪತ್ನಿಯಾದ ಶಚಿಗೆ ಆಜ್ಞಾಪಿಸಿದನು. ಆಕೆಯು ಸಿಂ ಲಕ್ಷ ದೇವತಾಸ್ತ್ರೀಯರೊಡನೆ ಕೂಡಿ ರತ್ನಖಚಿತವಾದ ಬಂಗಾರದ ಬಟ್ಟಲುಗಳಲ್ಲಿ ತಮ್ಮ ಮನೆಯಲ್ಲಿದ್ದ ಧನಕನಕಾದಿಸಕಲೈಶ್ವರ್ಯವನ್ನೂ ತಂದು ನೀಡುತ್ತಿದ್ದಳು. ಎಷ್ಟನ್ನು ನೀಡಿದರೂ ಕಪಾಲವು ತುಂಬದೆ ಇರಲು, ಇಂದ್ರನು ಚಿಂತಾರತ್ನವನ್ನೂ ಅಮೃತಕಲಶವನ್ನೂ ನೀಡುವುದಕ್ಕೆ ಬಂದನು. ಆಗ ಶಂಕರನು— "ಎಲೋ ಸಾಕು ಸಾಕು ನಿಲ್ಲಿಸು, ಈ ಅಮೃತವು ದೇವತೆಗಳ ಜೀವನಕ್ಕೆ ಆಧಾರವಾದದ್ದು. ಇದನ್ನು ಕಳೆಯದೆ ಜೋಕೆಯಿಂದಿಡಬೇಕು" ಎಂದು ಹೇಳಿ ನಿಲ್ಲಿಸಿ, ಅವರನ್ನನುಗ್ರಹಿಸಿ, ಅಲ್ಲಿಂದ ಅಗ್ನಿಯ ಪುರಕ್ಕೆ ಹೋಗಿ ಸತ್ಕಾರಗೊಂಡು, ಅಲ್ಲಿಂದ ಯಮಪುರದ ಕಡೆಗೆ ತೆರಳಿದನು. ಅಲ್ಲಿ ಹುಳುಗೊಂಡ ಮೊದಲಾದ ಅನೇಕ ಕೋಟ್ಯಂತರ ಸಾಮಾನ್ಯನರಕಗಳೂ, ಎಪ್ಪತ್ತೆಂಟುಕೋಟಿ ನಾಯಕನರಕಗಳೂ ಅದರಲ್ಲೆಲ್ಲ ಯಾತನೆಗೊಳ್ಳುತ್ತಿರುವ ನಾರಕಿಗಳೂ ತುಂಬಿದ್ದರು. ಅವರೆಲ್ಲರೂ ಈ ಶಿವನ ದರ್ಶನಮಾತ್ರದಿಂದಲೇ ಬಂಧಮುಕ್ತರಾಗಿ ಕೈಲಾಸಲೋಕವನ್ನು ತೆರಳಿದರು. ಅಲ್ಲಿಂದ ನೆಟ್ಟಗೆ ಯಮನರಮನೆಗೆ ಹೋಗಿ, ಅವನಿಂದ ಸತ್ಕಾರಗೊಂಡು, ಅಲ್ಲಿಂದ ನಿಋತಿ, ವರುಣ, ವಾಯು, ಕುಬೇರ, ಈಶಾನರ ಲೋಕಗಳಿಗೆಲ್ಲ ಹೋಗಿ ಅವರಿಂದ ಯಥೋಚಿತಭಿಕ್ಷೆಯನ್ನು

ಪಡೆದು ಹೊರಟು, ಸಕಲ ಗಿರಿ ನದೀವನಭೂಮಿಗಳನ್ನೆಲ್ಲ ತನ್ನ ಪಾದ ನ್ಯಾಸದಿಂದ ಪವಿತ್ರ ಮಾಡಿ ಹಿಮವತ್ಪರ್ವತದ ಬಳಿಗೆ ನಡೆತಂದನು. ಆ ಪರ್ವತದ ತಪ್ಪಲಿನಲ್ಲಿ ದಾರುಕಾವನವಿದ್ದಿತು. ಅಲ್ಲಿ ಗೌತಮ, ಭೃಗು, ಭಾರದ್ವಾಜ, ಅತ್ರಿ, ಗಾಲವ, ವಸಿಷ್ಠ, ಕೌಶಿಕ, ಕಾಶ್ಯಪ, ವ್ಯಾಸ, ಆಂಗೀರಸ, ಬಾಗುರಿ, ಪರಾಶರ, ಗಾರ್ಗ್ಯ, ಕಣ್ವ ಮೊದಲಾದ ಮಹರ್ಷಿಗಳೆಲ್ಲ ತಮ್ಮ ತಮ್ಮ ಯೋಗದಲ್ಲಿ ನಿರತರಾಗಿದ್ದರು. ಅವರ ಬಳಿಯಲ್ಲಿ ದೇಹವನ್ನನುಸರಿಸಿರುವ ನೆಳಲಿನಂತೆಯೂ, ಕರ್ಮಕ್ಕನುಸಾರವಾದ ಬುದ್ಧಿಯಂತೆಯೂ, ನುಂಗಿದ ಪಾದರಸವು ದೇಹದಲ್ಲಿ ಚುಚ್ಚಿದ ಬಳಿಗೆ ಬರುವಂತೆಯೂ, ಪತಿಗಳ ಆಜ್ಞಾನುವರ್ತಿಗಳಾಗಿದ್ದುಕೊಂಡು ಸೇವೆ ಮಾಡುತ್ತಿರುವ ಕೋಮಲಾಂಗಿಯರಾದ ಪತಿವ್ರತಾಸ್ತ್ರೀಯರು ರಂಜಿಸುತ್ತಿದ್ದರು. ಶಿವನು ಅವರಾಶ್ರಮವನ್ನು ಹೊಕ್ಕು ತನ್ನ ರೂಪಾತಿಶಯದಿಂದ ಮುನಿಸ್ತೋಮವನ್ನೆಲ್ಲ ಬೆರಗುಗೊಳಿಸಿದನು. ಸ್ತ್ರೀಯರು ತಮ್ಮ ಮನೆಗೆಲಸದಲ್ಲಿದ್ದುಕೊಂಡಿರುವಲ್ಲಿ ಶಿವನು "ಭಿಕ್ಷಾಂದೇಹಿ" ಎಂಬದಾಗಿ ಮಾಡಿದ ಗಂಭೀರಧ್ವನಿಯನ್ನು ಕೇಳಿ, ಪಾತ್ರೆಯಲ್ಲಿ ಪಾಯಸಾನ್ನವನ್ನು ತಂದು ಭಿಕ್ಷಾಪಾತ್ರೆಗೆ ನೀಡಿ ಕಣ್ಣನ್ನು ಮೇಲಕ್ಕೆತ್ತಿ ನೋಡಿ ತಲೆ ಬಗ್ಗಿಸಿಕೊಂಡು ಹೋಗುತ್ತಿರುವಲ್ಲಿ, ತಮ್ಮ ಕಾಲಬೆರಲಿನುಗುರಿನಲ್ಲಿ ಪ್ರತಿಬಿಂಬಿಸಿರುವ ಶಿವನ ರೂಪವನ್ನು ನೋಡಿ ಥಟ್ಟನೆ ಮೋಹಪರವಶೆಯರಾದರು. ಆ ಕೂಡಲೇ ಮುನಿಸ್ತ್ರೀಯರು ಪಾತ್ರೆಗಳನ್ನು ಬೆಳಗುವ ಗಂಧಾಕ್ಷತೆಗಳನ್ನಣಿಮಾಡುವ ಸಮಿದ್ದರ್ಭೆಗಳನ್ನು ಕೂಡಿಸಿಡುವ ಕೆಲಸಗಳನ್ನೆಲ್ಲ ಬಿಟ್ಟು, ಅತ್ತೆ ಮಾವ ಮಕ್ಕಳುಗಳನ್ನು ಸಹ ಲಕ್ಷಿಸದೆ ಮನೆಯನ್ನು ಬಿಟ್ಟು ಈ ಸುಂದರನಾರು? ಈ ಗಾಡಿಕಾರನಾರಾಗಿರಬಹುದು? ಶಿವಶಿವಾ! ಕಾಣೆವೆಲ್ಲ! ಎಂದು ಹಂಬಲಿಸುತ್ತ, ಈಶ್ವರನನ್ನೇ ಅನಿಮೇಷದೃಷ್ಟಿಯಿಂದ ನೋಡುತ್ತಿದ್ದರು. ಶಿವನ ಆ ಜಗನ್ಮೋಹಕರೂಪಿನಿಂದ ಮೋಹಿತೆಯರಾದ ಮುನಿಸ್ತ್ರೀಯರುಗಳು ಕಾಮಾತುರಂಗೊಂಡು ಬೆದರೇರಿ, ಬಾಯ್ಬಿಟ್ಟು, ನಡೆಗೆಟ್ಟು, ಮರುಳಾಗಿ, ಬೆಣ್ಣೆಯಂತೆ ಕರಗಿ, ಸೊರಗಿ, ಸೂಜಿಗಲ್ಲು ತಿರುಗಿದ ಕಡೆಗೆ ತಿರುಗುವ ಸೂಜಿಯಂತೆ ಅವನನ್ನೇ ಹಿಂಬಾಲಿಸಿ ಬರುತ್ತಿದ್ದರು. ಆಗ

ಶಿವನು ಮುನಿಜನಕ್ಕೆ ಕೋಪವನ್ನುಂಟುಮಾಡಿ ನೋಡಬೇಕೆಂಬ ವಿನೋದಕ್ಕೆಳಸಿ, ತನ್ನ ಪವಿತ್ರಹಸ್ತದಿಂದ ಋಷಿಸ್ತ್ರೀಯರನ್ನು ಸ್ಪರ್ಶಿಸಿದನು. ಆ ಕ್ಷಣದಲ್ಲೇ ಮುನಿಕಾಂತೆಯರ ಗರ್ಭದಿಂದ ಶಿವಸಮಾನರೂಪುಳ್ಳ ಶಿಶುಗಳು ಕಳಚಿ ಬಿದ್ದುವು! (ಆ ಶಿವನ ಮಹಿಮೆಯನ್ನು ತಿಳಿಯುವರಾರು?) ಆಗ ಅಲ್ಲಿದ್ದ ಬ್ರಹ್ಮಚಾರಿಗಳು ಈ ಆಶ್ಚರ್ಯಕೃತ್ಯವನ್ನು ಕಂಡು ತಮ್ಮ ಗುರುಗಳ ಬಳಿಗೆ ಓಡಿಹೋಗಿ ಅಡ್ಡಬಿದ್ದು ನಿಂತು ಕೈಮುಗಿದು "ಇನ್ನು ನಿಮ್ಮ ಜಪತಪೋಧ್ಯಾನಗಳೆಲ್ಲ ಉರಿದುಹೋದುವು! ಎದ್ದು ನೋಡಿ, ಯಾವನೋ ಒಬ್ಬ ಮಾಯಾವಿಯು ಬಂದು ನಿಮ್ಮ ಸತಿಯರೆಲ್ಲರನ್ನೂ ಮರುಳ್ಮಾಡಿ ಕರೆದುಕೊಂಡು ಹೋಗುತ್ತಿರುವನು" ಎಂದು ದೂರಿದರು. ಆ ಮಾತನ್ನು ಕೇಳಿ ಋಷಿಗಳು ಕಣ್ಣನ್ನು ತೆರೆದು ಜಪದಿಂದೆದ್ದು ಕೋಪಗೊಂಡು ಕಿಡಿಕಿಡಿಯಾಗಿ, ಆಹಾ! ಇಂತಹ ನೀಚಕೃತ್ಯವನ್ನು ಮಾಡಿದವನಾರು? ತೋರಿಸು, ಅವನನ್ನೆಲ್ಲಿದ್ದರೂ ಹುಡುಕಿ ಎಳೆದುಕೊಂಡುಬಾರೆಂದು ಹೇಳಿ ಸಿಹ್ಮೋಗ್ರನೆಂಬ ಬ್ರಹ್ಮಚಾರಿಗೆ ನಿಯಮಿಸಿ ಕಳಿಸಿದರು. ಅವನು ಕಡುಕೋಪದಿಂದ ಕೆಂಗಣ್ಣನ್ನು ಬಿರುಬಿರನೆ ಬಿಡುತ್ತ ಭಿಕ್ಷುಕನಿದ್ದ ಬಳಿಗೆ ಓಡಿಬಂದು, ಎಲೆ ಮಾಯಕಾರ! ಮಹರ್ಷಿಗಳು ನಿನ್ನನ್ನು ಕರೆದುಕೊಂಡು ಬರ ಹೇಳಿರುವರು ಬಾರೆಂದು ನುಡಿದನು. ಶಿವನಾದರೊ— "ಋಷಿಗಳು ಕರೆದುಕೊಂಡುಬಾರೆಂದು ಹೇಳಿಕಳಿಸಿದಮಾತ್ರದಿಂದಲೇ ನಾವು ಬರಬೇಕಾದದ್ದೇನು? ಭಿಕ್ಷೆಗೂ ಉದ್ದೇಶವಿಲ್ಲದ ಬಳಿಗೆ ಹೋಗಬೇಕಾದ ಅವಶ್ಯಕತೆಯು ನಮಗೇನೂ ಇಲ್ಲ; ಬಂದ ದಾರಿಯನ್ನು ಹಿಡಿದು ಸುಮ್ಮನೆ ಹೋಗು" ಎಂದು ಉತ್ತರ ಕೊಟ್ಟನು. ಆಗ ಸಿಹ್ಮೋಗ್ರನು ಕೋಪಗೊಂಡ ಸಿಹ್ಮದಂತೆ ಆರ್ಭಟಿಸಿ, ಎಲೆ ಮೂಢಮನುಷ್ಯನೇ! ಪ್ರತ್ಯುತ್ತರವನ್ನು ಕೊಡುವೆಯಾ? ಹಾಗಾದರೆ ನೀನೀಗಲೇ ಭಸ್ಮವಾಗಿ ಹೋಗು, ಎಂದು ಶಾಪವನ್ನಿತ್ತನು. ಆದರೇನು? ನರಿಯ ಕೋಪಕ್ಕೆ ಆನೆಯ ಮೈಯ್ಯ ರೋಮವಾದರೂ ನಡುಗುವುದೆ? ಋಷಿವಟುವು ಶಪಿಸಿದರೆ ಪರಶಿವನಿಗೆ ಆಗುವ ಹಾನಿಯೇನು? ಶಿವನು ತನ್ನಷ್ಟಕ್ಕೆ ತಾನು ನಸುನಗುತ್ತ ಹೋಗುತ್ತಿದ್ದನು. ಇವನ್ನು ಕಂಡು ಋಷಿಪುತ್ರ

ನು ಹಿಂದಿರುಗಿ ಮುನಿಗಳ ಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲ ಹೇಳಿದನು. ಅವರದನ್ನು ನಂಬದೆ ಮತ್ತಷ್ಟು ಕೋಪಾಕ್ರಾಂತರಾಗಿ ತಾವೇ ಎದ್ದು ಬಂದು ಈ ಭಿಕ್ಷುಕನನ್ನು ನೋಡಿ ಒಟ್ಟಿಗೆ ಶಾಪವನ್ನು ಕೊಟ್ಟರು. ಅದಕ್ಕೆ ಶಿವನು ಲೇಶಮಾತ್ರವೂ ಲಕ್ಷಿಸಲಿಲ್ಲ. ಪುನಃ ಮಂತ್ರಿಸಿ ದರ್ಭಾಸ್ತ್ರವನ್ನು ಬಿಟ್ಟರು. ಅದು ಕಾಲಾಗ್ನಿಯಂತೆ ಉರಿಯುತ್ತ ಬಂದು ಶಿವನ ಬಳಿಗೆ ಹೋಗಿ ಹಾಗೆಯೇ ನಂದಿಹೋಯಿತು. ಋಷಿಗಳು ಇದನ್ನು ಕಂಡು ಅತ್ಯಂತ ಕೋಪವೇರಿ ಮಾರಣಹೋಮವನ್ನು ಮಾಡುವುದಕ್ಕುಜ್ಜುಗಿಸಿದರು. ಒಂದು ಯೋಜನದಗಲಕ್ಕೆ ಕುಂಡವನ್ನು ಮಾಡಿಸಿದರು. ನಾನಾಸಿದ್ಧಿಗಳುಳ್ಳ ಸಮಿತ್ತುಗಳನ್ನೆಲ್ಲ ಕೂಡಿಸಿದರು. ೪೮ ಸಾವಿರ ಮುನಿಗಳು ಒಂದುಗೂಡಿ ಘೋರಮಂತ್ರಗಳಿಂದ ಕೋಟಿ ಕೋಟಿ ಆಜ್ಯಾಹುತಿಯನ್ನು ಕೊಡುತ್ತ, ಆ ಭಿಕ್ಷುಕನನ್ನು ದಹಿಸೆಂದು ಪ್ರಾರ್ಥಿಸುತ್ತಿದ್ದರು. ಆಗ ಮಹಾಗ್ನಿಜ್ವಾಲೆಯು ಭಯಂಕರವಾದ ಹುಲಿಗಳು ಸರ್ಪಗಳು ಆಯುಧಗಳು ಭೂತಗಣಗಳು ಶಕ್ತಿಗಳು ಸಹ ಹುಟ್ಟಿ "ನಮಗಪ್ಪಣೆಯೇನು? ಆಹುತಿಯನ್ನು ಕೊಡಿ" ಎಂದು ಕೇಳುತ್ತಿದ್ದುವು. ಮಹಾಋಷಿಗಳು ಭಿಕ್ಷುಕನ ಕಡೆಗೆ ಸನ್ನೆ ಮಾಡಿ ತೋರಿಸಿ ಅವನನ್ನು ನುಂಗುವಂತೆ ಆಜ್ಞಾಪಿಸಿದರು. ಅವು ಶಿವನಮೇಲೆ ಬೀಳಲು, ಶಂಕರನು ನಸುನಗುತ್ತ, ಜಿಂಕೆಯನ್ನು ಕೈಯಲ್ಲಿ ಹಿಡಿದು, ಹುಲಿಯನ್ನು ಸೀಳಿ ಚರ್ಮವನ್ನು ಸುಲಿದುಟ್ಟು, ಸರ್ಪಗಳನ್ನು ಹಿಡಿದು ಆಭರಣ ಮಾಡಿಕೊಂಡು ಧರಿಸಿ, ಆಯುಧಗಳನ್ನು ಕೈಯಲ್ಲಿ ಹಿಡಿದು, ಶಕ್ತಿಗಳನ್ನು ಕಾಲಲ್ಲಿ ಮೆಟ್ಟಿ, ಉರಿಯನ್ನು ಕೈಯಲ್ಲಿ ಹಿಡಿದು, ಅಪಸ್ಮಾರನನ್ನು ಮುಂದಲೆ ಹಿಡಿದು ಕೆಡಹಿ, ಪಾದದಿಂ ತುಳಿದು ಕುಣಿದಾಡುತ್ತಿದ್ದನು. ಭೂತಗಳು ತಾಳಮದ್ದಳೆಗಳನ್ನು ಬಾಜಿಸಿ ಹಾಡುತ್ತಿದ್ದುವು. ಇದನ್ನೆಲ್ಲ ಋಷಿಗಳು ಕಂಡು ಬೆರಗಾಗಿ, ಇವನೇ ಸಾಕ್ಷಾತ್ಪರಶಿವನೆಂದು ತಿಳಿದುಕೊಂಡು ಹೊಗಳಲಾರಂಭಿಸಿದರು. ಶಿವನೇ! ಹಲವು ಕಾಲ ಕಣ್ಣನ್ನು ಮುಚ್ಚಿ ತಪಸ್ಸನ್ನು ಮಾಡಿದರೆ ಬಂದ ಭಾಗ್ಯವೇನು? ನೀನಾಗಿ ನಮ್ಮ ಆಶ್ರಮಕ್ಕೆ ದಯೆಮಾಡಿಸಿದ್ದರೂ ನಾವು ತಿಳಿಯಲಾರದೆ ಹೋದೆವು. ನಮ್ಮಂತಹ ಮರುಳರಾರೂ ಇಲ್ಲ. ನಾವು ಮಾತ

ಬಾರದ ಅಪರಾಧಗಳನ್ನು ಮಾಡಿದೆವು. ಇದನ್ನೆಲ್ಲ ನೀನು ಕ್ಷಮಿಸಿ ರಕ್ಷಿಸಬೇಕು. ಎಂದು ನಾನಾವಿಧವಾಗಿ ದೈನ್ಯೋಕ್ತಿಯಿಂದ ಬೇಡಿಕೊಂಡರು. ಆಗ ಶಿವನು ಪ್ರಸನ್ನನಾಗಿ ಕೃಪಾದೃಷ್ಟಿಯಿಂದ ನೋಡಿ ಸರ್ವರನ್ನೂ ಅನುಗ್ರಹಿಸಿದನು. ಅವರು ತಮಗೆ ಜ್ಞಾನೋಪದೇಶವನ್ನು ಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಆಗ ಶಿವನು ತನ್ನ ಕೈಯಲ್ಲಿದ್ದ ಭಿಕ್ಷಾಪಾತ್ರೆಯನ್ನು ಭೈರವನ ಕೈಗೆ ಕೊಟ್ಟು, ಮುನೀಶ್ವರರಿಗೆ ತತ್ವೋಪದೇಶವನ್ನು ಮಾಡುವುದಕ್ಕಾಗಿ ತಾನು ದಕ್ಷಿಣಾಮೂರ್ತಿರೂಪವನ್ನು ಧರಿಸಿ, ವಟವೃಕ್ಷದಡಿಯಲ್ಲಿ ಕುಳಿತು ಬೋಧಿಸಿ ಮುನೀಶ್ವರರ ಮನಸ್ಸನ್ನೆಲ್ಲ ಸಮಾಧಾನಗೊಳಿಸಿ, ಅವರೆಲ್ಲರನ್ನೂ ಪತ್ನೀಸಮೇತರನ್ನಾಗಿ ಕಳಿಸಿಕೊಟ್ಟು, ತಾನು ಪಾರ್ವತಿಯನ್ನು ನೆನೆದು ಕೈಲಾಸವನ್ನು ಕುರಿತು ತೆರಳಿದನು ಎಂಬಲ್ಲಿಗೆ ೯ ನೇ ಅಧ್ಯಾಯವು ಮುಗಿದುದು.

## ೧೦ ನೇ ಅಧ್ಯಾಯವು.

### ಕಂಕಾಳಧರಲೀಲೆ.

ಬಳಿಕ ಚೆನ್ನಬಸವೇಶನು ಸಿದ್ಧರಾಮೇಶನನ್ನು ಕುರಿತು ಹೇಳತೊಡಗಿದನೆಂತೆಂದರೆ—ಹಿಂದೆ ತಮನೆಂಬ ರಾಕ್ಷಸನೊಬ್ಬನು ವೇದವನ್ನು ಕದ್ದು ಸಮುದ್ರದಲ್ಲಿ ಮುಳುಗಿಕೊಂಡನು. ಆಗ ಭೂಮಿಯಲ್ಲಿ ಸದಾಚಾರ ತಪೋಧರ್ಮ ಜಪ ಹೋಮಾದಿ ಕ್ರಿಯೆಗಳೆಲ್ಲ ನಡೆಯಲವಕಾಶವಿಲ್ಲದೆ ನಿಂತುಹೋದುವು. ಇದರಿಂದ ದೇವತೆಗಳ ಹವಿಸ್ಸಿಗೆ ಭಂಗಬಂದು ಅವರೆಲ್ಲರೂ ಅಸಂತುಷ್ಟರಾಗಿ ಕ್ಲೇಶಪಡುತ್ತಿದ್ದರು. ಹೀಗೆ ಕೆಲವು ಕಾಲ ಕಳೆದ ಬಳಿಕ ತಮ್ಮ ಸಂಕಟಕ್ಕೆ ಪರಿಹಾರವನ್ನು ಕಲ್ಪಿಸಿಕೊಳ್ಳಬೇಕೆಂದು ದೇವತೆಗಳೆಲ್ಲರೂ ಬ್ರಹ್ಮನ ಬಳಿಗೆ ಹೋಗಿ ಮೊರೆಯಿಟ್ಟರು. ಅವನು ಇದು ಶಿವನಿಂದ ಪರಿಹೃತವಾಗಬೇಕಲ್ಲದೆ ನನ್ನಿಂದ ಸಾಧ್ಯವಲ್ಲವೆಂದು ನುಡಿಯಲು, ಸರ್ವರೂ ಒಟ್ಟಾಗಿ ಸೇರಿ ಪರಶಿವನ ಬಳಿಗೆ ಬಂದು ನಮಸ್ಕರಿಸಿ, ತಮ್ಮ ವೃತ್ತಾಂತವನ್ನೆಲ್ಲ ಹೇಳಿಕೊಂಡರು. ಶಿವನು ಕೇಳಿ ತತ್ಪರಿಹಾರಕ್ಕಾಗಿ ವಿಷ್ಣುವಿಗಾಜ್ಞಾಪಿಸಿದನು. ಆ ಕೂಡಲೆ

ಹರಿಯು ಶಿವನಿಗೆ ನಮಸ್ಕರಿಸಿ, ಅಪ್ಪಣೆಯನ್ನು ಪಡೆದು ಮಹಾಮತ್ಸ್ಯರೂಪವನ್ನು ಧರಿಸಿ, ಸಮುದ್ರವನ್ನು ಹೊಕ್ಕು ಅಲ್ಲಿದ್ದ ತಮನೆಂಬ ದೈತ್ಯಾರಿಯನ್ನು ಕೊಂದು ವೇದಗಳನ್ನು ಕಿತ್ತು ತಂದು ದೇವತೆಗಳಿಗಿತ್ತು ಆ ಮಹಾವಿರಾಡ್ರೂಪದಿಂದಲೇ ಅಹಂಕರಿಸಿ ಸಮುದ್ರದಲ್ಲಿ ಚಲಿಸಾಡುತ್ತಿದ್ದನು. ಆ ಮಹಾಮತ್ಸ್ಯದ ಚಲನದ ರಭಸಕ್ಕೆ ಸಪ್ತಸಮುದ್ರಗಳೆಲ್ಲ ಕದಡಿ ಮೇರೆದಪ್ಪಿ ಉಕ್ಕಿ ಭೂಸಮುದ್ರಗಳೆಲ್ಲ ಒಂದಾದುವು. ಇದರಿಂದ ಪ್ರಳಯಕಾಲವು ಸಮೀಪಿಸಿದಂತಾಗಲು, ಬ್ರಹ್ಮನು ದೇವತೆಗಳನ್ನೆಲ್ಲ ಕಟ್ಟಿಕೊಂಡು ಶಿವನಬಳಿಗೆ ಬಂದು ಈ ವೃತ್ತಾಂತವನ್ನೆಲ್ಲ ಅರುಹಿದನು. ಆಗ ಶಂಕರನು ಸಮುದ್ರದ ಬಳಿಗೆ ಬಂದು ಮತ್ಸ್ಯವನ್ನು ನೋಡಿ ಆಹಾ ಇಂತಹ ಮಹಾಮತ್ಸ್ಯವನ್ನು ಹೀಗೆಯೇ ಬಿಟ್ಟುಬಿಟ್ಟರೆ ಇದರಿಂದ ಜಗತ್ತಿಗೆ ಹಾನಿಯಾಗುವುದೇ ನಿಜವೆಂದು ಯೋಚಿಸಿ, ಪಾದದಿಂದದನ್ನು ಮೆಟ್ಟಿ ಕಟವಾಯ್ಗೆ ಹಸ್ತವನ್ನಿಟ್ಟು ಎರಡು ಹೋಳಾಗಿ ಸೀಳಿ, ಅದರ ಬೆನ್ನಿನ ಮೂಳೆಯನ್ನು ಮುರಿದು ಕಂಕಾಳಾಯುಧವನ್ನು ಮಾಡಿ ಕೈಯಲ್ಲಿ ಹಿಡಿದುಕೊಂಡನು ಎಂದು ಹೇಳಲು; ಸಿದ್ಧರಾಮೇಶನು—ಶಿವನಪ್ಪಣೆಯ ಮೇರೆಯೇ ಆ ವಿಷ್ಣುವು ಲೋಕಹಿತಾರ್ಥವಾಗಿ ಮತ್ಸ್ಯರೂಪವನ್ನು ಧರಿಸಿ, ತಮನನ್ನು ಕೊಂದು ವೇದವನ್ನು ತಂದು ಕೊಟ್ಟಬಳಿಕ ಅಂತಹ ವಿಷ್ಣುವು ಅಜ್ಞಾನದಿಂದ ಅಹಂಕರಿಸಿ ಮತ್ತೆ ಸಮುದ್ರದಲ್ಲಿ ಸಂಚರಿಸುತ್ತಿದ್ದುದೇಕೆ? ಈಶ್ವರನು ಅವನನ್ನು ಕೊಂದುದೇತಕ್ಕೆ? ಎಂದು ಕೇಳಿದನು. ಅದಕ್ಕೆ ಕಾರಣವನ್ನು ಚೆನ್ನಬಸವೇಶನು ಹೇಳತೊಡಗಿದನೆಂತೆಂದರೆ—ಆದಿಕಾಲದಲ್ಲಿ ದೇವದಾನವರುಗಳು ತಮ್ಮ ತಮ್ಮ ಜನ್ಮದ್ವೇಷದಿಂದ ೧೦ ದಿವ್ಯಸಹಸ್ರವರ್ಷಗಳವರೆಗೆ ಯುದ್ಧವನ್ನು ಅವಿಚ್ಛಿನ್ನವಾಗಿ ಮಾಡಲು, ಆ ಮಧ್ಯದಲ್ಲಿ ಪುತ್ರಮಿತ್ರರು ಅಣ್ಣತಮ್ಮಂದಿರು ಮೊದಲಾದವರೆಲ್ಲ ಸಾಯಲು, ಇದನ್ನು ದೇವೇಂದ್ರನು ನೋಡಿ ಸಂಕಟಪಟ್ಟು, ತಮ್ಮ ಗುರುವಾದ ಬೃಹಸ್ಪತಿಯೊಡನೆ ಈ ವಿಪತ್ತನ್ನು ಉಸುರಿದನು. ಅದಕ್ಕವನು— ಅಯ್ಯಾ ದೇವೇಂದ್ರನೆ! ಯುದ್ಧವೆಂದರೆ—ಚಿತ್ರಪಟದೊಳಗಣ ಬೊಂಬೆಗಳ ಜಗಳದಂತೆಯೊ? ನೀನು ಪುತ್ರಮಿತ್ರಬಾಂಧವಾದಿಗಳೆಲ್ಲ ಅಳಿದರೆಂದು ವ್ಯಸನಪಟರೆ ಇ

ನ್ನು ನಿನಗೆ ದೇವೇಂದ್ರತ್ವವು ಏತಕ್ಕೆ? ಸುಮ್ಮನೆ ಯಜ್ಞಯಾಗಾದಿಗಳ ಹವಿಸ್ಸನ್ನುಂಡು ತೃಪ್ತಿಪಟ್ಟಿರಬಹುದಲ್ಲವೆ? ಯುದ್ಧದಲ್ಲಿ ಸೋಲುಗೆಲುವುಗಳು ಯಾರಧೀನದಲ್ಲಿರುವುವು? ಶಿವಕುಮಾರನಿಗಾದರೂ ಆಗಬೇಕಾದದ್ದು ಆಗದೆ ಬಿಟ್ಟಿತೆ? ಅದುಕಾರಣ ನಾನು ಈಗ ಹಿಮವತ್ಪರ್ವತದ ತಪ್ಪಲಿಗೆ ಹೋಗಿ ಅಲ್ಲಿ ಶಿವನನ್ನು ಕುರಿತು ತಪಸ್ಸನ್ನಾಚರಿಸಿ, ಸತ್ತವರನ್ನು ಬದುಕಿಸುವ ಸಂಜೀವಿನೀಮಂತ್ರವನ್ನು ಉಪದೇಶ ಮಾಡಿಸಿಕೊಂಡು ಬರುತ್ತೇನೆಂದು ಹೇಳಿ ಹೊರಟುಹೋಗಿ ತಪಸ್ಸಿನಲ್ಲಿದ್ದನು. ಈ ಸುದ್ದಿಯನ್ನು ರಾಕ್ಷಸಗುರುವಾದ ಶುಕ್ರನು ಕೇಳಿ, ಬೃಹಸ್ಪತಿಯು ಕುಳಿತಿದ್ದ ಬಳಿಗೆ ಹೋಗಿ ಇದಿರಾಗಿ ಕುಳಿತು, ಸಂಜೀವಿನೀಮಂತ್ರವನ್ನು ಪಡೆಯಬೇಕೆಂದು ತಾನೂ ಶಿವನನ್ನು ಕುರಿತು ಉಗ್ರತಪಸ್ಸನ್ನಾಚರಿಸುತ್ತಿದ್ದನು. ಹೀಗೆ ಹಲವುಕಾಲವಿರಲು, ಶಿವನು ಪ್ರಸನ್ನನಾಗಿ ಎಲೆ ಗುರುಶುಕ್ರರುಗಳಿರಾ; ನಿಮ್ಮಿಷ್ಟಾರ್ಥವೇನು? ಏತಕ್ಕೆ ತಪಸ್ಸನ್ನು ಮಾಡುವಿರಿ? ಎಂದು ಕೇಳಲು, ಅವರೀರ್ವರೂ ತಮ್ಮ ತಮ್ಮ ಬಯಕೆಗಳನ್ನು ವಿಜ್ಞಾಪಿಸಿದರು. ಇವರಿಬ್ಬರ ಇಷ್ಟವೂ ಒಂದೇಆಗಿರುವುದನ್ನು ಈಶ್ವರನು ಕೇಳಿ, ಇನ್ನು ನಾನು ಇವರಿಗೆ ಮಂತ್ರೋಪದೇಶವನ್ನು ಮಾಡದೆ ಇರುವುದಕ್ಕೂ ಆಗುವುದಿಲ್ಲ, ಮಾಡಿಬಿಟ್ಟರೆ ದೈತ್ಯರಿಂದ ಮಹಾಬಾಧೆಯು ಸಂಭವಿಸದೆ ಹೋಗುವುದಿಲ್ಲ; ಅದಕ್ಕಾಗಿ ಒಂದುಪಾಯವನ್ನು ಮಾಡಿ ಇವರಿಂದ ಅಸಾಧ್ಯವೆನಿಸಿಬಿಡಬೇಕೆಂದು ಯೋಚಿಸಿ, ಅವರಿಬ್ಬರ ಹೆಸರನ್ನೂ ಹಿಡಿದು ಕರೆದು, ನಿಮ್ಮಿಷ್ಟಾರ್ಥವನ್ನು ನಾನು ಕೊಡುತ್ತೇನೆ, ನಾನು ಹೇಳಿದಂತೆ ಮಂತ್ರಪುರಶ್ಚರಣೆ ಮಾಡಲು ನಿಮ್ಮಿಂದ ಸಾಧ್ಯವಾದರೆ ಮಾಡಿ; ಹೇಗೆಂದರೆ— ಚಚ್ಚೌಕವಾಗಿ ಒಂದು ದೊಡ್ಡ ಕುಂಡವನ್ನು ತೆಗೆಯಬೇಕು, ಅದರಲ್ಲಿ ದೊಡ್ಡಬೆಂಕಿಯನ್ನೊಟ್ಟಬೇಕು, ಅದರೊಳಗೆ ನೀವಿಬ್ಬರೂ ನುಗ್ಗಿ ಉರಿಯ ಮಧ್ಯದಲ್ಲಿ ತಲೆಯನ್ನು ಕೆಳಗುಮಾಡಿ ಆಕಾಶದಲ್ಲಿ ನಿಶ್ಚಲರಾಗಿ ನಿಂತು ಅಗ್ನಿಯ ಹೊಗೆಯನ್ನು ಉಚ್ಛ್ವಸಿಸುತ್ತ ಈ ಮಂತ್ರಪುನಶ್ಚರಣೆಯನ್ನು ದಿವ್ಯಸಹಸ್ರವರ್ಷಗಳವರೆಗೆ ಮಾಡುತ್ತಿದ್ದರೆ ಸಂಜೀವಿನೀಮಂತ್ರವು ನಿಮಗೆ ಸಿದ್ಧಿಸುವುದು ಎಂದು ನುಡಿದನು. ಅದನ್ನು ಕೇಳಿ ಬೃಹಸ್ಪತಿಯು ಗಡ

ಗಡನೆ ನಡುಗಿ, ನನ್ನಿಂದಿದು ಅಸಾಧ್ಯವೆಂದು ಹೇಳಿ ಶಿವನ ಪಾದಕ್ಕೆ ನಮಸ್ಕರಿಸಿ, ಹಿಂತೆಗೆದನು. ಶುಕ್ರನಾದರೂ- ತನ್ನ ಜಾಣ್ನುಡಿಯಿಂದ ಶಿವನನ್ನು ಮೆಚ್ಚಿಸಿದನು. (ಎಂದರೆ- ನಾನು ಹಾಗೆಯೇ ಮಾಡುತ್ತೇ ನೆಂದು ಬಿನ್ನೈಸಿದನು.) ಅವನ ಧೈರ್ಯಕ್ಕೆ ಪರಶಿವನು ಮೆಚ್ಚಿದನು. ಮೂಗಿನಮೇಲೆ ಬೆರಲಿಟ್ಟು ತಲೆದೂಗಿ, ನೀನೇ ಜಾಣನೆಂದು ಶ್ಲಾಘಿಸಿದನು. ಬಳಿಕ ದಯೆಯಿಂದ ಅವನಿಗೆ ಮಂತ್ರೋಪದೇಶವನ್ನು ಮಾಡಿ ಕೈಲಾಸಕ್ಕೆ ತೆರಳಿದನು. ಇತ್ತ ಶುಕ್ರನು ಪರಮಸಂತೋಷಮಗ್ನನಾಗಿ ಬಂದು, ತನ್ನ ಶಿಷ್ಯರೆಲ್ಲರನ್ನೂ ಕರೆದು- ನಮಗೆ ಈಗ ಶಿವನ ಕರುಣೆಯುಂಟಾಯಿತು. ಆ ಮಂತ್ರವು ನನಗೆ ಸಿದ್ಧಿಸುವವರೆಗೂ ನೀವೆಲ್ಲರೂ ಭಸ್ಮರುದ್ರಾಕ್ಷಜಟಾದಿಗಳನ್ನು ಧರಿಸಿ, ಅಲ್ಲಲ್ಲಿ ತಪಸ್ಸನ್ನು ಮಾಡಿಕೊಂಡಿರಿ; ಆ ಸಮಯದಲ್ಲಿ ನಿಮ್ಮ ಶತ್ರುಗಳು ನಿಮ್ಮಮೇಲೆ ಬಿದ್ದು ಕೊಲ್ಲುವುದಕ್ಕೆ ಬಂದರೆ ಆಗ ನಮ್ಮ ತಂದೆಯಾದ ಭೃಗುವನ್ನು ನೀವುಗಳು ಮರೆಹುಗಿ, ಎಂದು ಹೇಳಿ ಎಲ್ಲರನ್ನೂ ಕಳಿಸಿಬಿಟ್ಟು, ತಂದೆಯ ಆಶ್ರಮಕ್ಕೆ ತಾನು ಹೋಗಿ ಈ ವೃತ್ತಾಂತವನ್ನೆಲ್ಲ ಅವನೊಡನೆ ಬಿನ್ನೈಸಿ, ಅವನಪ್ಪಣೆಯನ್ನು ಪಡೆದು ಹೋಗಿ ತಪಸ್ಸನ್ನಾಚರಿಸುತ್ತಿದ್ದನು. ಈ ಸುದ್ದಿಯನ್ನೆಲ್ಲ ದೇವತೆಗಳು ಕೇಳಿ ದಿಗಿಲುಬಿದ್ದು ಬುದ್ಧಿ ತೋರದೆ, ವಿಷ್ಣುವಿನ ಬಳಿಗೆ ಹೋಗಿ ಶುಕ್ರಾಚಾರ್ಯನ ಪ್ರಯತ್ನವನ್ನೆಲ್ಲ ಬಿನ್ನೈಸಿದರು. ಆಗ ವಿಷ್ಣುವು- ಶಿವನು ಕೊಟ್ಟಪ್ಪಣೆಯು ಹುಸಿಯುವುದಿಲ್ಲ; ಅದುಕಾರಣ ಬಲಾಢ್ಯನಾದ ಶುಕ್ರನು ತಪಸ್ಸನ್ನು ಮಾಡಿ ಮಂತ್ರಸಿದ್ಧಿಯನ್ನು ಪಡೆದುಕೊಂಡು ಬರುವುದರೊಳಗಾಗಿ ರಾಕ್ಷಸಕುಲವನ್ನೆಲ್ಲ ನಿರ್ಮೂಲ ಮಾಡಿಬಿಡಬೇಕು. ಆದುದರಿಂದ ಅವರೆಲ್ಲೆಲ್ಲಿ ತಪಸ್ಸನ್ನಾಚರಿಸುತ್ತಿದ್ದರೂ ಹುಡುಕಿ ಮೇಲೆ ಬಿದ್ದು ಕೊಲ್ಲಿರೆಂದು ಅಷ್ಟದಿಕ್ಪಾಲಕರಿಗೆ ಅಪ್ಪಣೆಯಿತ್ತನು. ಆ ಕೂಡಲೇ ಇಂದ್ರಾದಿಗಳೆಲ್ಲರೂ ಚತುರಂಗಸೈನ್ಯಸಮೇತರಾಗಿ ಹೊರಟು, ಗಿರಿ ನದಿ ಗುಹಾದಿಗಳನ್ನೆಲ್ಲ ತಡಕಿ, ನಿರಾಯುಧರಾಗಿ ಶಿವಧ್ಯಾನದಲ್ಲಿ ಕುಳಿತಿರುವ ರಾಕ್ಷಸರನ್ನೆಲ್ಲ ತರಿದು ಇರಿದು ಕೊಂದು ಸಿಗಿದು ಬಿಗಿದು ಬಗಿದು ಕೊಲ್ಲುತ್ತ ಬರುತ್ತಿದ್ದರು. ಆಗ ಉಳಿದಿದ್ದ ರಾಕ್ಷಸರೆಲ್ಲರೂ ತಪಸ್ಸಿನಿಂದೆದ್ದು ಓಡಿಬರುತ್ತ,

"ಆಹಾ! ಹುಟ್ಟಿದಂದಿನಿಂದ ನಮ್ಮನ್ನು ಕಂಡಕೊಡನೇ ದಿಕ್ಕುಗೆಟ್ಟು ಓಡುತ್ತಿದ್ದ ಈ ಬಡದೇವತೆಗಳು ಈಗ ನಮ್ಮ ಗುರುವಿನಾಜ್ಞೆಯಿಂದ ನಾವು ನಿರಾಯುಧರಾಗಿರುವಾಗ್ಗೆ ನಮ್ಮ ಮೇಲೆ ಬಿದ್ದು ಕೊಲ್ಲುತ್ತಿರುವುದು ಹುಲಿಯ ಮೀಸೆಯನ್ನು ನರಿಯು ಕಿತ್ತಂತಾಯಿತು. ಏನುಮಾಡುವುದು! ಗುರುವಿನಪ್ಪಣೆಗಾಗಿ ಸುಮ್ಮನಿರಬೇಕಾಗಿದೆ. ಇಲ್ಲದಿದ್ದರೆ ಬೆಟ್ಟಗಳನ್ನೇ ಕಿತ್ತು ಇವರಮೇಲಿಟ್ಟು ಓಡಿಸುತ್ತಿದ್ದೆವಲ್ಲ!" ಎಂದು ಮಚ್ಚರಿಸಿ ಹಲ್ಲನ್ನು ಕಡಿದುಕೊಳ್ಳುತ್ತ ಬಂದು ಭೃಗುಋಷಿಯ ಆಶ್ರಮವನ್ನು ಹೊಕ್ಕು "ಘೋಳ್" ಎಂದು ಮೊರೆಯಿಟ್ಟರು. ಆಗ ಶುಕ್ರನು ಶಿವೈಕಾಯತ್ತಚಿತ್ತನಾಗಿ ಬಾಹ್ಯವ್ಯಾಪಾರವನ್ನು ಮರೆತಿದ್ದನು. ಆತನ ಪತ್ನಿಯು ಈ ಕೂಗೇನೆಂದು ಬಂದು ಕೇಳುವಲ್ಲಿ, ರಾಕ್ಷಸರೆಲ್ಲರೂ ಅಡ್ಡಬಿದ್ದು, ತಾಯಿ! ನಿರಾಯುಧರಾಗಿ ನಿರಪರಾಧಿಗಳಾಗಿದ್ದ ನಮ್ಮನ್ನು ದೇವತೆಗಳು ಓಡಿಸಿಕೊಂಡುಬಂದು ಕೊಲ್ಲುತ್ತಿರುವರು; ಎಷ್ಟೋಮಂದಿಗಳು ಆಗಲೇ ಹತರಾದರು; ಅಗೋ ಇಂದ್ರಾಗ್ನಿಯಮಾದಿಗಳೆಲ್ಲ ಆಯುಧಗಳನ್ನು ಝಳಪಿಸುತ್ತ ಮೇಲೇರಿ ಬರುತ್ತಿರುವರು; ನಾವೂ ಹತರಾಗಬೇಕಾಗುವುದು; ಕರುಣಿಸಿ ಕಾಪಾಡಿ, ಕಾಪಾಡಿ; ಎಂದು ಬೇಡಿಕೊಂಡರು. ದೇವತೆಗಳ ಭಯದಿಂದ ನಡುಗುತ್ತ ಹಿಂತಿರುತಿರುಗಿ ನೋಡುತ್ತ ಕಣ್ಬಾಯ್ಬಿಡುತ್ತಿರುವ ದೈತ್ಯರಿಗೆ ಆ ಭೃಗುಪತ್ನಿಯು ಹೆದರಬೇಡಿರೆಂದು ಅಭಯದಾನ ಮಾಡಿ ಸಮಾಧಾನಪಡಿಸಿ, ಕ್ಷಣಾರ್ಧದಲ್ಲಿ ಶಿವನಾಮಸ್ಮರಣಪೂರ್ವಕವಾಗಿ ಮಂತ್ರಪುರಶ್ಚರಣೆ ಮಾಡಿದಳು. ಆಗ ಸಕಲ ದೇವತೆಗಳಿಗೂ ಕೈ ಕಾಲು ಸೇದಿಹೋಗಲು, ಚಿತ್ರದ ಬೊಂಬೆಗಳಂತೆ ಸ್ತಬ್ಧರಾಗಿ ನಿಂತುಕೊಂಡರು. ಅಷ್ಟರಲ್ಲಿ ದೇವೇಂದ್ರನು ತಮ್ಮ ಹಿಂದುಗಡೆಯಲ್ಲಿ ಬರುತ್ತಿರುವ ವಿಷ್ಣುವನ್ನು ನೋಡಿ, "ಇವಳೀಗ ಮಹಾಮಾಯಾದೇವಿ; ಇವಳಿಂದಲೇ ನಮ್ಮ ಕೈಕಾಲುಗಳೆಲ್ಲ ಕಟ್ಟಿಕೊಂಡಿರುವುವು; ಇವಳನ್ನು ಮೊದಲು ಚಕ್ರಾಯುಧದಿಂದ ಕೊಲ್ಲು" ಎಂದು ಹೇಳಿ ಮುಗಿಸುವಷ್ಟರಲ್ಲಿ, ವಿಷ್ಣುವು ಚಕ್ರಾಯುಧವನ್ನು ಭೃಗುಪತ್ನಿಯಮೇಲೆ ಪ್ರಯೋಗಿಸಲು, ಅದು ಕ್ಷಣಾರ್ಧದಲ್ಲಿ ಅವಳ ತಲೆಯನ್ನು ತೆಗೆಯಿತು. ದೇವತೆಗಳೆಲ್ಲರೂ ಬೋ! ಎಂದು ಕೂಗಿದರು

ರಾಕ್ಷಸರು ಹಾಹಾಕಾರವನ್ನು ಮಾಡುತ್ತ, ಬಾಯ್ಬಡಿದುಕೊಳ್ಳುತ್ತ, ಹೊಟ್ಟೆಯನ್ನು ಹಿಸುಕಿಕೊಳ್ಳುತ್ತ, ಭೂಮಿಯಮೇಲೆ ಬಿದ್ದು ತಲೆಯೊಡೆದುಕೊಂಡು ಅಳುತ್ತ, ಅಯ್ಯೋ ತಾಯೆ! ಪಾಪಾತ್ಮರಾದ ನಮ್ಮನ್ನು ಕಾಯುವುದಕ್ಕಾಗಿ ಬಂದ ನಿನಗೆ ಈ ವಿಧವಾದ ಮರಣವಾಗಬಹುದೆ? ಇನ್ನು ನಮ್ಮ ಗುರುವು ನಮ್ಮ ಮೇಲೆ ಎಷ್ಟು ಕೋಪವನ್ನಾದರೂ ಮಾಡಿಕೊಳ್ಳಲಿ, ನಾವು ದೇವತೆಗಳನ್ನೆಲ್ಲ ಕೊಂದುಬಿಟ್ಟು ಸಾಯುವುದೇ ನಿಜವೆಂದು ನಿರ್ಧರ ಮಾಡಿ ಕೋಟಿ ಸಿಡಿಲಿನಂತೆ ಗರ್ಜನೆ ಮಾಡಿದರು. ಆ ಕೂಗು ಸಮಾಧಿಸ್ಥಿತನಾಗಿದ್ದ ಭೃಗುಮುನಿಯ ಕಿವಿಯಲ್ಲಿ ತುಂಬಿ ಅವನನ್ನು ಬಹಿರ್ಮುಖಗೊಳಿಸಿತು. ಅವನು ಮಲಗಿದ್ದವರೆದ್ದಂತೆ ಕಣ್ಣನ್ನು ಬಿಟ್ಟು, ಮುಂದೆ ಸತ್ತು ಮಲಗಿರುವ ತನ್ನ ಪತ್ನಿಯನ್ನು ನೋಡಿದನು. ಹಾ! ತರುಣಿ! ಇದೇನು? ಎಂದು ಹಂಬಲಿಸಿದನು. ಅಯ್ಯೋ! ಸತಿಯೆ! ನಾನೀತಪಸ್ಸಿನಲ್ಲಿ ಕುಳಿತು ಬಹು ದಿನದಿಂದ ನಿನ್ನನ್ನಗಲಿದ್ದುದರಿಂದ ನೀನು ಕೋಪಿಸಿಕೊಂಡು ಪ್ರಾಣವನ್ನೀಗಿದೆಯೊ? ಇಗೋ ನಾನು ಬಂದಿದೇನೆ, ನೋಡು ಏಳು, ಆಲಿಂಗಿಸು, ಎಂದು ಹೇಳುತ್ತ ತಲೆಯನ್ನೆತ್ತಿ ಮುದ್ದಾಡಿ, ಅವಳ ರೂಪಗುಣಶೀಲಾದಿಗಳನ್ನು ನೆನೆನೆನೆದು ಪ್ರಲಾಪಿಸುತ್ತಿದ್ದನು. (ಸ್ತ್ರೀವಿಯೋಗವು ಎಂಥವರನ್ನೂ ಭ್ರಾಂತಿಗೀಡುಮಾಡುವುದಲ್ಲವೆ?) ಮತ್ತು "ನಾನು ಸ್ನಾನವನ್ನು ಮಾಡಿಕೊಂಡು ಬಂದಿದೇನೆ, ಹೋಮುಕ್ಕೆ ಣಿಮಾಡು, ದೇವಪೂಜಾಸಾಮಗ್ರಿಗಳನ್ನು ತಂದಿಡು, ಋಷಿಶ್ರೇಷ್ಠರು ನಮ್ಮಾಶ್ರಮಕ್ಕೆ ಬಂದಿದಾರೆ, ಅವರಿಗೆ ಅರ್ಘ್ಯಪಾದ್ಯಾಚಮನಗಳನ್ನು ನೀಡು, ಇದೇಕೆ ಮಾತಾಡದಿರುವೆ? ಇದುವರೆಗೆ ನಿನ್ನಿಂದಲೇ ನನ್ನ ತಪಸ್ಸೆಲ್ಲ ನಡೆದುಬರುತ್ತಿದ್ದಿತು. ಮುಂದೆ ನಾನು ಶಿವನನ್ನು ತಪಸ್ಸಿನಿಂದ ಮೆಚ್ಚಿಸುವುದು ಹೇಗೆ? ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಸಂಜೀವಿನೀಮಂತ್ರಸಿದ್ಧಿಯನ್ನು ಪಡೆದು ಬರುವ ಮಗನೊಡನೆ ನಿನ್ನ ಸುದ್ದಿಯನ್ನು ಏನೆಂದು ಹೇಳಲಿ? ನಿನ್ನ ಒಡಹುಟ್ಟಿನವರಿಗೆ ನೀನಳಿದ ಸುದ್ದಿಯನ್ನು ಹೇಗೆ ತಾನೇ ಹೇಳಲಿ? ಅಯ್ಯೋ! ಶಿವಶಿವಾ!" ಎಂದು ದುಃಖಿಸುತ್ತಿದ್ದನು. ಅಷ್ಟರಲ್ಲಿ ರಾಕ್ಷಸರು ಮುಂದೆ ಬಂದು ಅಡ್ಡಬಿ

ದ್ದು ನಿಂತು ಕೈ ಜೋಡಿಸಿ, ಗುರುವರ್ಯನೇ! ನಿಮ್ಮ ಕೈಮಕ್ಕಳನ್ನು ವಿಷ್ಣು ಮೊದಲಾದ ದೇವತೆಗಳು ಅಟ್ಟಿಕೊಂಡು ಬಂದು ಕೊಂದರು; ಎಷ್ಟೋ ಮಂದಿ ದೈತ್ಯರು ಸತ್ತರು; ನಾವು ತಪ್ಪಿಸಿಕೊಂಡು ಉಳಿದುಬಂದು ನಿಮ್ಮ ಆಶ್ರಮವನ್ನು ಹೊಕ್ಕು ಮೊರೆಯಿಟ್ಟುಕೊಂಡೆವು; ಆಗ ಈ ಮಹಾತಾಯಿಯು ನಮಗೆ ಅಭಯದಾನ ಮಾಡಿ ದೇವತೆಗಳಿಗೆಲ್ಲ ಹಸ್ತಪಾದಸ್ತಂಭನಗೊಳಿಸಿದಳು; ಅಷ್ಟರಲ್ಲಿ ಈಕೆಯ ಶಿರಸ್ಸು ಕತ್ತರಿಸಿ ಭೂಮಿಯಮೇಲೆ ಬಿದ್ದುದನ್ನು ನಾವು ಕಂಡೆವು; ಇಗೋ ನೋಡಿ; ದೇವತಾಸಮೂಹವೆಲ್ಲ ಇಲ್ಲೇ ನಿಂತಿದೆ; ಎಂದು ತೋರಿಸಿದರು. ಆಗ ಭೃಗುವಿನ ದುಃಖವು ಅಡಗಿಹೋಯಿತು. ರೋಷವು ಉಕ್ಕೇರಿತು. ಭುಗುಭುಗಿಲ್ಲೆಂದು ಋಷಿಯ ಮೈಯ್ಯಲ್ಲಿ ಉರಿಯೆದ್ದಿತು. ಆ ಉರಿಯು ದೇವತೆಗಳಮೇಲೆ ನುಗ್ಗಿ ಹಬ್ಬಿಕೊಂಡಿತು. ಋಷಿಯು ತಿರುತಿರುಗಿ ನೋಡಿದಕಡೆಯಲ್ಲೆಲ್ಲ ಉರಿಯು ಕರಕು ಬಡಿಯುತ್ತಿದ್ದಿತು. ವಿಷ್ಣುದೇವೇಂದ್ರಾದಿಗಳೆಲ್ಲರೂ ಕಾಡಿನಲ್ಲಿ ಅರೆಬೆಂದು ನಿಂತಿರುವ ಕೊರಡುಗಳಂತೆ ಕಾಣುತ್ತಿದ್ದರು. ಅವರನ್ನು ಭೃಗುವು ನೋಡಿ ಎಲೆ ಪಾಪಿಗಳಿರಾ! ಈ ಮಹಾಪತಿವ್ರತೆಗೆ ಇಂಥ ಕೇಡನ್ನುಂಟುಮಾಡಿದವರಾರು? ಎಂದು ಗರ್ಜಿಸಿ ನುಡಿದನು. ಋಷಿಯ ಆ ಭಯಂಕರಕೋಪವಚನವನ್ನು ಕೇಳಿ ದೇವತೆಗಳು ಕಣ್ಣುಬಾಯಿಬಿಟ್ಟರು. ಆಗ ವಿಷ್ಣುವು ಗಡಗಡನೆ ನಡುಗುತ್ತ, "ಮುನಿವರ್ಯನೇ! ಈ ಸತಿಗೆ ಕೇಡು ನನ್ನಿಂದ ಸಂಭವಿಸಿತು. ನೀನು ಪರಮಸಹಿಷ್ಣುತಾಭಾವದಿಂದ ನನ್ನಪರಾಧವನ್ನು ಕ್ಷಮಿಸಿ ಕಾಪಾಡು" ಎಂದು ಅತಿವಿನಯದಿಂದ ಬೇಡಿಕೊಳ್ಳಲು, ಋಷಿಯು ಕೋಪಾತಿಶಯದಿಂದ ವಿಷ್ಣುವನ್ನು ಕುರಿತು— ನೀನು ಸಕಲ ಜಗತ್ತನ್ನೂ ಸಲಹುತ್ತಿದ್ದು, ಪುಣ್ಯಪಾಪಸ್ವರೂಪವನ್ನೆಲ್ಲ ತಿಳಿದುಕೊಂಡಿದ್ದು, ಭಸ್ಮರುದ್ರಾಕ್ಷಧಾರಕರನ್ನು ಶಿವಸ್ವರೂಪರೆಂದು ತಿಳಿದಿದ್ದು, ನಿರಾಯುಧರನ್ನು ಕೊಲ್ಲಬಾರದೆಂಬ ನೀತಿಯನ್ನೂ ಬಲ್ಲವನಾಗಿದ್ದು, ನಮ್ಮನ್ನು ದೈತ್ಯರು ಮರೆಹೊಕ್ಕಿರುವರೆಂಬುದನ್ನೂ ತಿಳಿದಿದ್ದು, ಸ್ತ್ರೀಹತ್ಯವನ್ನು ಮಾಡುವುದು ವೀರನಿಗೆ ನಾಚಿಕೆಗೇಡೆಂಬುದನ್ನೂ ಅರಿತಿದ್ದು, ಆದರೂ ಹೇಸಿಕೆಯಿಲ್ಲದೆ ಇದಕ್ಕೆಲ್ಲ ವಿರುದ್ಧವಾಗಿ ಆಚರಿಸಿರುವೆಯೆ

ಲ್ಲ ! ಭಲಾ ! ಭಲಾಢ್ಯ! ಛೀ ಹೆಣೀಗು ! ಎಂದು ಹೀಯಾಳಿಸಿದನು. ಆಗ ವಿಷ್ಣುವು ಮತ್ತಷ್ಟು ಭಯಾಕ್ರಾಂತನಾಗಿ, ಎಲೌ ಶಿವಸ್ವರೂಪನೇ ! ಅಜ್ಞಾನದಿಂದ ನಾನು ಮಾಡಿದಪರಾಧವನ್ನು ಹೇಗಾದರೂ ಮನ್ನಿಸಬೇಕು ಎಂದು ಪ್ರಾರ್ಥಿಸಿದನು. ಆಗ ಋಷಿಯು ಘುಡುಘುಡಿಸಿ ಕೈಯೆತ್ತಿ-- ಎಲೈ ಭ್ರಾಂತನೇ! ಈಗ ಅಜ್ಞಾನದಿಂದ ನನ್ನ ಪ್ರಾಣಕಾಂತೆಯನ್ನು ಕೊಂದೆಯಾದ ಕಾರಣ ನೀನೂ ಅಜ್ಞಾನವನ್ನು ಹೊಂದಿ ಮತ್ಸ್ಯಾದಿದಶಜನ್ಮಗಳಲ್ಲಿ ಹುಟ್ಟು ಹೋಗೆಂದು ಶಪಿಸಿದನು. ಆಗ ವಿಷ್ಣುವು ಬೆದರಿ, ಮಾಡಿದುದಕ್ಕೆ ತಕ್ಕಫಲವಾಯಿತೆಂದು ಯೋಚಿಸಿ, ಮುನಿವರ್ಯನೇ! ಈ ಶಾಪಕ್ಕೆ ವಿಮೋಚನವೆಂದಿಗೋ? ಅದನ್ನಪ್ಪಣೆ ಕೊಡಿಸಬೇಕೆಂದು ಕೇಳಿಕೊಂಡನು. ಆಗ ಋಷಿಯು-ಮತ್ತೆ ನನ್ನೆದುರಿಗೆ ನಿಂತು ಮಾತನಾಡಬೇಡ, ಸುಟ್ಟುಬಿಡುತ್ತೇನೆ ನೋಡು; ಮುಂದಣ ನಿನ್ನ ಗತಿಯನ್ನು ಶಿವನೇ ನೋಡಿಕೊಳ್ಳುತ್ತಾನೆ ಎಂದು ಗದರಿ ನುಡಿದನು. ಅತ್ತ ತನ್ನ ಸತಿಯಮೇಲೆ ಕಲಶೋದಕವನ್ನು ಅಭಿಮಂತ್ರಿಸಿ ಪ್ರೋಕ್ಷಿಸಿ ಬದುಕಿಸಿಕೊಂಡನು. ಇತ್ತ ವಿಷ್ಣುವು ತಪಸ್ಸನ್ನು ಮಾಡಿ ಶಿವನನ್ನು ಮೆಚ್ಚಿಸಿದನು. ನಿನ್ನಿಷ್ಟವೇನೆಂದು ಶಂಕರನು ಕೇಳಲು, ಸ್ವಾಮೀ ! ಭೃಗುಋಷಿಯು ಕೋಪದಿಂದ ನನಗೆ ಮತ್ಸ್ಯಾದಿದಶಜನ್ಮವನ್ನೆತ್ತೆಂದು ಶಾಪವನ್ನು ಕೊಟ್ಟಿರುವನು; ಇದರಿಂದ ನಾನು ನಿಮ್ಮ ಪಾದಕ್ಕೆ ದೂರನಾಗುವುದು ಮಾತ್ರವಲ್ಲದೆ, ಈ ಹತ್ತು ಜನ್ಮಗಳನ್ನೆತ್ತುವುದು ಹೇಗೆ ? ಕೆಟ್ಟೆನಲ್ಲ! ಇನ್ನು ಗತಿಯೇನು ! ಎಂದು ಹಂಬಲಿಸಿದನು. ಆಗ ಶಿವನು ತಲೆದಡವಿ, "ಚಿಂತಿಸಬೇಡ, ನಿನ್ನ ಹತ್ತು ಜನ್ಮಗಳೂ ಭೂಮಿಗೆ ಹಿತಕರಗಳಾಗುವಂತೆ ನಾನು ಮಾಡುತ್ತೇನೆ; ಎಂದು ಹೇಳಲು, ವಿಷ್ಣುವು- ಆ ನನ್ನ ಜನ್ಮಗಳಲ್ಲಿ ನನಗೆ ಅಹಂಕಾರವಾವಿರ್ಭವಿಸಿ ಬಹುಕಾಲವಿರುವಂತಾದರೆ ನನ್ನ ಗತಿಯೇನು ? ಎಂದು ಕೇಳಲು, ಅಂಥ ಕಾಲದಲ್ಲಿ ನಾನೇ ಬಂದು ಆ ಅಹಂಕಾರವನ್ನು ಹೋಗಲಾಡಿಸಿ, ಆಯಾ ಜನ್ಮಗಳನ್ನು ಕಡೆಗಾಣಿಸಿ, ಆಯಾಯ ಜನ್ಮದ ಮೂರ್ತಿಗಳ ಕುರುಹೊಂದೊಂದನ್ನು ನಾನು ಧರಿಸಿ, ನಿನಗೆ ದೇಹಸಾರ್ಥಕ್ಯವನ್ನುಂಟುಮಾಡುತ್ತೇನೆ" ಎಂದು ಹೇಳಿ ಸಮಾಧಾನಪಡಿಸಿ ಕೈಲಾಸಕ್ಕೆ ತೆರಳಿದನು.

ಪೂರ್ವದಲ್ಲಿ ಹೀಗೆ ಕಾರ್ಯಕಾರಣಸಂಬಂಧವಿದ್ದುದರಿಂದಲೇ ಮಾತ್ಸರ್ಯವತಾಗದ ವಿಷ್ಣುವನ್ನು ಶಿವನು ದಂಡಿಸಬೇಕಾಯಿತು. ಇದರಂತೆಯೇ ಇನ್ನುಳಿದ ೯ ಜನ್ಮಗಳಲ್ಲೂ ಶಿವನು ವಿಷ್ಣುವಿಗೆ ಜನ್ಮೋತ್ತರಣವನ್ನುಂಟುಮಾಡಿರುವನೆಂದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ಹೇಳಿದನೆಂಬಲ್ಲಿಗೆ ೧೦ ನೇ ಅಧ್ಯಾಯವು ಸಂಪೂರ್ಣವು.

---

## ೧೧ ನೇ ಅಧ್ಯಾಯವು.

### ವಿಷಕಂಠಲೀಲೆ.

ಎಲೆ ಸಿದ್ಧರಾಮೇಶನೇ ಕೇಳು, ಒಂದು ದಿವಸ ದೇವೇಂದ್ರನು ಸಕಲ ದೇವಸ್ತ್ರೀಯರೊಡನೆ ಕೂಡಿ ಉದ್ಯಾನವನದಲ್ಲಿ ವಿನೋದದಿಂದ ಕಾಲಹರಣವನ್ನು ಮಾಡಿಕೊಂಡು ಹಿಂತಿರುಗಿ ಐರಾವತವನ್ನೇರಿ ವೈಭವದಿಂದ ಪಟ್ಟಣಕ್ಕೆ ಬರುತ್ತಿರುವಲ್ಲಿ, ದೂರ್ವಾಸಮಹರ್ಷಿಯು ಕೈಲಾಸಕ್ಕೆ ಹೋಗಿ ಶಿವದರ್ಶನವನ್ನು ಮಾಡಿಕೊಂಡು ಅವನಿಂದನುಗ್ರಹಿಸಲ್ಪಟ್ಟದ್ದ ಮಂದಾರಪುಷ್ಪದ ಪ್ರಸಾದ ಮಾಲಿಕೆಯನ್ನು ತೆಗೆದುಕೊಂಡು ಬರುತ್ತಿದ್ದು, ದೇವೇಂದ್ರನನ್ನು ಕಂಡು ಹರಪ್ರಸಾದಮಾಲಿಕೆಯನ್ನು ಈ ದೇವರಾಜನಿಗೆ ಕೊಟ್ಟನು. ಅದನ್ನು ಇಂದ್ರನು ಅಂಕುಶಾಗ್ರದಿಂದ ಹಿಡಿದು ತೆಗೆದುಕೊಂಡು ಆನೆಯ ಕುಂಭಸ್ಥಲದಮೇಲೆ ಇಟ್ಟುಬಿಟ್ಟನು. ಅದರ ಪರಿಮಳಕ್ಕೆ ಭ್ರಮರಗಳು ಬಂದು ಮುತ್ತಿ ಸುತ್ತುತ್ತಿರಲು, ಐರಾವತವು ತನ್ನ ಕಿವಿಯಿಂದ ಬಡಿದುಕೊಳ್ಳುತ್ತ, ಸೊಂಡಿಲಿನಿಂದ ಆ ಮಾಲಿಕೆಯನ್ನು ತೆಗೆದುಕೊಂಡು ಭೂಮಿಗೆ ಹಾಕಿ ಕಾಲಿನಿಂದ ಹೊಸಗಿಬಿಟ್ಟಿತು. ಇದನ್ನೆಲ್ಲ ದೂರ್ವಾಸನು ನೋಡಿದನು. ಕೂಡಲೇ ಪ್ರಳಯಕಾಲದ ರುದ್ರನಂತೆ ಕೋಪವೇರಿ, ಹಾ ಹಾ! ಶಿವನು ಅನುಗ್ರಹಿಸಿದ ಪ್ರಸಾದ ಮಾಲಿಕೆಗೆ ಈಗತಿ ಬಂದಿತೆ? ಎಂದು ಖೇದಗೊಂಡನು. (ದೂರ್ವಾಸನು ಕೋಪಗೊಂಡು ನಿಂತರೆ ವಿಷ್ಣುಬ್ರಹ್ಮಾದಿಗಳು ಕೂಡ ತಡೆಯುವುದುಂಟೆ?) ಆ ಕೂಡಲೇ ಎದ್ದು ನಿಂತು, ಕಣ್ಣನ್ನು ಕೆಂಪಗೆ ಮಾಡಿ, ಎಲೆ ನೀಚನೆ! ಶಿವನು ನನಗೆ ಅನುಗ್ರಹಿಸಿಕೊಟ್ಟದ್ದ ಮಹಾಪ್ರ

ಸಾದವನ್ನು ನಿನಗೆ ನಾನು ಕೊಟ್ಟರೆ, ನೀನದನ್ನು ವಿಶ್ವಾಸದಿಂದ ಪರಿಗ್ರಹಿಸದೆ, ಅಹಂಕಾರದಿಂದ ಆನೆಯ ತಲೆಯಮೇಲಿಟ್ಟು ಹೊಸಗಿಸಿಬಿಟ್ಟೆ, ಇದರಂತೆಯೇ ನಿನ್ನ ಐಶ್ವರ್ಯವೂ ಸಮುದ್ರದಲ್ಲಿ ಮುಳುಗಿ ಹಾಳಾಗಲಿ ಎಂದು ಶಪಿಸಿದನು. (ಮಹಾತ್ಮರ ವಿರೋಧವು ಬೆಳೆದ ಬಳಿಕ ಸಿರಿಗೆ ಕೊನೆಯಾಗದಿದ್ದೀತೆ) ? ಆಗ ಇಂದ್ರನು ಮರುಗಿ ಕೊರಗಿ ಆನೆಯಿಂದಿಳಿದು, ಋಷೀಶನ ಪಾದಕ್ಕೆ ನಮಸ್ಕರಿಸಿ, ನನ್ನ ತಪ್ಪನ್ನು ಕ್ಷಮಿಸಿ ಕಾಪಾಡಬೇಕೆಂದು ಬೇಡಿಕೊಳ್ಳಲು, ನಿನಗೆ ಶಿವನನುಗ್ರಹದಿಂದ ಎಲ್ಲ ಸಂಪತ್ತೂ ದೊರೆಯಲಿ ಎಂದು ವಿಶಾಪವನ್ನು ಕೊಟ್ಟು ತೆರಳಿದನು. ದೇವೇಂದ್ರನು ಮಹಾ ದುಃಖಸಮುದ್ರದಲ್ಲಿ ಮುಗ್ನನಾಗಿದ್ದನು. ಇತ್ತ ಐರಾವತ ಉಚ್ಚೈಃಶ್ರವಸ್ಸು ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಮೊದಲಾದ ಸಕಲ ಸಂಪತ್ತೆಲ್ಲ ಬಯಲಾಯಿತು. ಆಗ ಇಂದ್ರನು ಶಿವನನ್ನು ಕುರಿತು ದೀರ್ಘತಪಸ್ಸನ್ನಾಚರಿಸಿದನು. ಪರಶಿವನು ಪ್ರತ್ಯಕ್ಷನಾಗಿ ತಪಸ್ಸಿಗೆ ಕಾರಣವೇನೆಂದು ಕೇಳಲು, ತನ್ನ ವಿಪತ್ತನ್ನು ಇಂದ್ರನು ಬಿನ್ನೈಸಿದನು. ಅದಕ್ಕೆ ಶಿವನು— ವಿಷ್ಣುಬ್ರಹ್ಮಾದಿಸಕಲದೇವತೆಗಳೂ ರಾಕ್ಷಸರೂ ಸಹ ಕೂಡಿ ಕ್ಷೀರಸಮುದ್ರವನ್ನು ಕಡೆದರೆ ನಿನ್ನಸಂಪತ್ತೆಲ್ಲ ಪುನಃ ಹುಟ್ಟಬರುವುವು. ಎಂದು ಅಪ್ಪಣೆ ಕೊಟ್ಟು ತೆರಳಿದನು. ಇತ್ತ ದೇವೇಂದ್ರನು ಶಿವನಪ್ಪಣೆಯನ್ನು ಬ್ರಹ್ಮವಿಷ್ಣುಗಳಿಗೆ ಹೇಳಲು, ಅವರೂ ಸಕಲ ದೇವತೆಗಳನ್ನೂ ರಾಕ್ಷಸರನ್ನೂ ಬರಮಾಡಿ ಸರ್ವರೂ ಕ್ಷೀರಸಮುದ್ರಕ್ಕೆ ಹೋದರು. ಮಂದರಪರ್ವತವನ್ನೇ ಕಿತ್ತು ಕಡೆಗೋಲಾಗಿ ನಿಲ್ಲಿಸಿದರು. ಆದಿಶೇಷನನ್ನು ಕಡೆಯುವ ಹಗ್ಗವನ್ನಾಗಿ ಮಾಡಿ ಸುತ್ತಿದರು. ಒಂದು ಕಡೆ ರಾಕ್ಷಸರೂ ಒಂದುಕಡೆ ದೇವತೆಗಳೂ ಹಿಡಿದು ಸಮುದ್ರವನ್ನು ಮಥಿಸಿದರು. ಮೊದಲು ಹುಟ್ಟಿದ ವಸ್ತುವು ವಿಷ್ಣುವಿಗೆಂತಲೂ ಆಮೇಲೆ ಹುಟ್ಟಿದ ವಸ್ತುವು ನಮಗೆ ತಮಗೆಂತಲೂ ಆಲೋಚಿಸಿಕೊಳ್ಳುತ್ತಿದ್ದರು. ಆಗ ಉಂಟಾದ ಆಶ್ಚರ್ಯವನ್ನೇನು ಹೇಳಲಿ! ಮೊದಲು ಹುಟ್ಟಿದ ವಸ್ತುವು ಶಿವನಿಗಾಗಲಿ ಎಂದು ಹೇಳದೆ ಆರಂಭಿಸಿದ ಕಾರ್ಯವು ಶುಭಮುಖವಾಗುವುದೆ ? ಎಂದಿಗೂ ಇಲ್ಲ. ಕಡೆಯುವಿಕೆಯು ಬಲವಾದಂತೆಲ್ಲ ಆದಿಶೇಷನಿಗೆ ದಣಿವು ಹೆಚ್ಚಿತು. ಅದು ವಿಷವನ್ನು

ಕಾರುವುದಕ್ಕಾರಂಭಿಸಿತು. ಧಗಧಗಛಟಲ್ಛಿಟಲ್ಭುಗಿಲೆಂದು ವಿಷಾಗ್ನಿಯು ಭೋರ್ಗರೆದೆದ್ದು ಎಲ್ಲ ಕಡೆಯೂ ಪ್ರಸರಿಸುತ್ತ ಬಂದಿತು. ವಿಷ್ಣುಬ್ರಹ್ಮರು ತಮ್ಮ ತಮ್ಮ ವಾಹನವನ್ನೇರಿ ಓಡಿದರು. ಉಳಿದ ದೇವದಾನವರೆಲ್ಲ ತಮ್ಮ ಗತಿಯೇನೆಂದು ಚಿಂತಿಸುತ್ತ ದಿಕ್ಕುದಿಕ್ಕಿಗೆ ಕೆಡೆದೋಡಿದರು. ಕ್ಷಣಕಾಲದಲ್ಲಿ ಆ ಮಹಾಕಾಲಕೂಟದ ಬೇಗೆಯು ಸಕಲಲೋಕವನ್ನೂ ವ್ಯಾಪಿಸಿ ಸುಡುತ್ತಿದ್ದಿತು. ಅಯ್ಯೋ! ಋಷಿಶಾಪಕ್ಕೆ ಗುರಿಯಾಗಿ ಐಶ್ವರ್ಯವನ್ನು ನೀಗಿಕೊಂಡು ಮರುಳನಾಗಿರುವ ಇಂದ್ರನ ಮಾತನ್ನು ನಂಬಿ ದೇವರಾಕ್ಷಸರನ್ನೆಲ್ಲ ಕೂಡಿಸಿ ಸಮುದ್ರವನ್ನು ಕಡೆದು ಜಗತ್ತಿಗೆ ಹೀಗೆ ಕೇಡನ್ನುಂಟುಮಾಡಬಹುದೆ? ಅಯ್ಯೋ ಪಾಪಿಗಳಿರಾ! ಸೃಷ್ಟಿರಕ್ಷಣಕರ್ತರಾದ ನೀವಾದರೂ ಈ ವಿಪತ್ತನ್ನು ಪರಿಹರಿಸಬಾರದೆ? ಎಂದು ಬ್ರಹ್ಮವಿಷ್ಣುಗಳನ್ನು ಕುರಿತು ಜಗತ್ತಿನವರೆಲ್ಲರೂ ಮೊರೆಯಿಟ್ಟರು. ಕೆಲವರು ಇಂದ್ರನ ಶಿವದ್ರೋಹವನ್ನು ಕುರಿತು ವಾಚಾಮಗೋಚರವಾಗಿ ಬೈದರು. ಕೆಲರು ಶಿವನನ್ನು ಪ್ರಾರ್ಥಿಸಿದರು. ಕೆಲರು ದಿಕ್ಕುದಿಕ್ಕಿಗೆ ಓಡಿ ಎಲ್ಲೂ ಉಳಿವಿಲ್ಲದೆ ತರಹರಿಸುತ್ತಿದ್ದರು. ಇಂದ್ರಾದಿದೇವತೆಗಳೆಲ್ಲರೂ ಶಿವನಿಂದಲೇ ಇದರ ಪರಿಹಾರವಾಗಬೇಕೆಂದು ಯೋಚಿಸಿ, ಗುಂಪುಕೂಡಿ ಕೈಲಾಸಕ್ಕೆ ಹೋಗಿ, ಶಿವನಿದಿರಿಗೆ ನಿಂತು ಅಡ್ಡಬಿದ್ದು, ಎಲೌ ಸಕಲಲೋಕಶರಣ್ಯನೇ! ಕೃಪಾಮಯನೇ! ನಿನ್ನ ಹೊರತು ರಕ್ಷಕರು ಬೇರೊಬ್ಬರಿಲ್ಲ. ನಾವೆಲ್ಲರೂ ವಿಷಾಗ್ನಿಭೀತಿಯಿಂದ ಕಂಠಗತಪ್ರಾಣರಾಗಿರುವೆವು. ನಿನ್ನ ಪಾದಕಮಲಕ್ಕೆ ಏನೋ ದ್ರೋಹವನ್ನು ಮಾಡಿದ್ದುದರಿಂದ ನಮಗೀವಿಪತ್ತು ಸಂಭವಿಸಿರುವುದು. ನಮ್ಮಪರಾಧವನ್ನು ಮನ್ನಿಸಿ ಕಾಪಾಡು ಎಂದು ಪ್ರಾರ್ಥಿಸಿಕೊಂಡರು. ಆಗ ಶಂಕರನು ವಿಷವನ್ನು ನಾನೀಗಳೇ ಪರಿಹರಿಸದಿದ್ದರೆ ಜಗತ್ತೆಲ್ಲ ಹಾಳಾಗುವುದೆಂದು ಯೋಚಿಸಿ, ಅವರಿಗೆಲ್ಲ ಅಭಯದಾನ ಮಾಡಿ, ತಾನು ಪಾರ್ವತೀಸಮೇತನಾಗಿ ವೃಷಭವಾಹನವನ್ನೇರಿ ನಡೆಗೊಂಡು, ದಾರಿಯುದ್ದಕ್ಕೂ ವಿಷದ ಬೇಗೆಯಿಂದ ಬೇಯುತ್ತಿರುವವರನ್ನೂ, ಚೀರುತ್ತಿರುವವರನ್ನೂ, ಇಂದ್ರಾದಿದೇವಶ್ರೇಷ್ಠರನ್ನು ಬೈಯುತ್ತಿರುವವರನ್ನೂ, ಶಿವನೇ ಕಾಪಾಡು ಎಂದು ಮೊರೆಯಿಡುತ್ತಿರುವವರನ್ನೂ, ಕರು

ಣಾಕಟಾಕ್ಷದಿಂದ ನೋಡುತ್ತ, ಹೆದರಬೇಡಿರೆಂದು ಸಕಲದಿವಿಜದನುಜಮಾನವಾದಿಗಳಿಗೆಲ್ಲ ಅಭಯವನ್ನು ಕೊಟ್ಟು, ಆ ಕ್ರೂರಮಹಾವಿಷವನ್ನು ನೋಡಿ ಬಾರೆಂದು ಕರೆಯಲು, ಅದು ಮಹಾಭೀತಿಯಿಂದ ಬಟ್ಟುಗೂಡಿ ಬಂದು ಶಿವನ ಅಂಗೈಯಲ್ಲಿ ಕೃಷ್ಣಮಣಿಯಂತೆ ನಿಂತಿತು. ಲೋಕವೆಲ್ಲ ಹರ್ಷಾಬ್ಧಿಯಲ್ಲಿ ಮುಳುಗಿ, ಶಿವನನ್ನು ಹೊಗಳಿತು. ಆಗ ಶಿವನು ಕರದಲ್ಲಿರುವ ವಿಷವನ್ನು ನೋಡುವಲ್ಲಿ ಅದರೊಳಗೆ ತನ್ನ ಪ್ರತಿಬಿಂಬವು ಕಾಣಿಸಿಕೊಂಡಿತು. ಅದನ್ನು ಹೊರಹೋಗೆಂದು ನಿಯಮಿಸಲು ಅದು ಪುಷ್ಪದತ್ತನೆಂಬ ಹೆಸರಿನಿಂದ ಹೊರನಿಂತಿತು. ಆ ವಿಷವನ್ನು ಕುಡಿದುಬಿಟ್ಟರೆ ಹೊಟ್ಟೆಯಲ್ಲಿರುವ ಲೋಕವು ದಹಿಸಿಹೋದೀತೆಂದು ಯೋಚಿಸಿ, ಶಂಕರನು ಅದನ್ನು ತನ್ನ ಕೊರಲಲ್ಲಿ ಧರಿಸಿಕೊಂಡನು. ಬಳಿಕ ವಿಷ್ಣುಬ್ರಹ್ಮಾದಿಗಳೆಲ್ಲರನ್ನೂ ಹತ್ತಿರಕ್ಕೆ ಕರೆದು ಅಗ್ರಭಾಗವು ನಮಗೆ ಸಂದಂತಾಯಿತು; ಇನ್ನು ಮೊದಲಿನಂತೆಯೇ ಸಮುದ್ರವನ್ನು ಕಡೆಯಿರಿ; ನಿಮ್ಮಿಷ್ಟಾರ್ಥವು ಜನಿಸುವುದು ಎಂದು ಅನುಗ್ರಹಿಸಿ ಅಂತರ್ಹಿತನಾದನು. ಬಳಿಕ ದೇವಾಸುರರೆಲ್ಲರೂ ಶಿವನಪ್ಪಣೆಯನ್ನು ನಂಬಿ ಮುನ್ನಿನಂತೆ ಶೇಷನ ತಲೆ ಬಾಲಗಳ ಕಡೆಗೆ ಹಿಡಿದು ಕಡೆಯಲಾರಂಭಿಸಿದರು. ಆಗ ಶೀತಮಯವಾದ ಚಂದ್ರಮಂಡಲವು ಆವಿರ್ಭವಿಸಿತು. ಅದರ ಶೈತ್ಯದಿಂದ ಸಕಲರ ಕೈಕಾಲ್ಗಳೂ ಸೆಳೆದುಕೊಂಡುವು. ಇದರ ರೀತಿಯು ವಿಷದ ಭೀತಿಗೇನೂ ಕಡಮೆಯಾಗಲಿಲ್ಲ. ಆಗ ದೇವಾಸುರರು ಮತ್ತೆ ಶಿವನನ್ನು ಧ್ಯಾನಿಸಿದರು. ಸ್ವಾಮಿಯು ಪ್ರತ್ಯಕ್ಷನಾಗಿ, ಚಂದ್ರನ ಹದಿನಾರನೇ ಒಂದು ಭಾಗವನ್ನು ತನ್ನ ಶಿರಸ್ಸಿನಲ್ಲಿ ಧರಿಸಿ, ಚಂದ್ರನನ್ನು ಕುರಿತು— ನೀನಿನ್ನು ಭೂತಲಕ್ಕೆ ಸಮೀಪದಲ್ಲಿರದೆ ೨ ಲಕ್ಷ ಯೋಜನದಲ್ಲಿರು; ಮತ್ತು ಭೂಮಿಯ ಸಕಲೌಷಧಿಗಳನ್ನೂ ದೇವತೆಗಳನ್ನೂ ನಿನ್ನ ಕಿರಣಾಮೃತದಿಂದ ರಕ್ಷಿಸಿಕೊಂಡಿರು; ಎಂದು ನಿಯಮಿಸಿ ಕೈಲಾಸಕ್ಕೆ ತೆರಳಿದನು. ಬಳಿಕ ದೇವಾಸುರರು ಸಂತುಷ್ಟರಾಗಿ ಯಥಾಪ್ರಕಾರವಾಗಿ ಕಡೆಯಲು, ಲಕ್ಷ್ಮಿ, ಐರಾವತ, ಕಾಮಧೇನು, ಕಲ್ಪವೃಕ್ಷ, ಚಿಂತಾರತ್ನ, ಅಮೃತಕಲಶ, ಉಚ್ಚೈಶ್ರವಸ್ಸು, ಮೊದಲಾದ ಸಂಪತ್ತುಗಳೆಲ್ಲವೂ ಒಂದೊಂದಾಗಿ ಆವಿರ್ಭವಿಸಿದುವು. ವಿಷ್ಣು

ವು ಲಕ್ಷ್ಮಿಯನ್ನು ಪರಿಗ್ರಹಿಸಿದನು. ಉಳಿದುವನ್ನೆಲ್ಲ ದೇವೇಂದ್ರನಿಗೆ ಕೊಟ್ಟರು. ಆಗ ರಾಕ್ಷಸರು ಎಲ್ಲವನ್ನೂ ಬಿಟ್ಟು ಅಮೃತಕಲಶವನ್ನು ಮಾತ್ರ ಕಸಿದುಕೊಂಡು ಎದ್ದರು. ಇನ್ನು ರಾಕ್ಷಸರು ಅಮೃತವನ್ನು ಕುಡಿದುಬಿಟ್ಟರೆ ಮರಣವಿಲ್ಲದವರಾಗಿ ತಮಗೆ ನಿತ್ಯವೈರಿಗಳಾಗಿ ನಿಲ್ಲುವರೆಂಬ ಭಯದಿಂದ ದೇವತೆಗಳೆಲ್ಲ ಎದೆಯಾರಿ ಬಾಯ್ಬಾಯ್ಬಿಟ್ಟರು. ವಿಷ್ಣುವು ಉಪಾಯಾಂತರದಿಂದದನ್ನು ತರಬೇಕೆಂದು ಯೋಚಿಸಿ, ಮೋಹಿನೀರೂಪವನ್ನು ಧರಿಸಿ, ಆ ರಾಕ್ಷಸರಿದ್ದ ವನಕ್ಕೆ ಹೋದನು. ರಾಕ್ಷಸರೆಲ್ಲರೂ ಈ ಮೋಹಿನಿಯ ಸೌಂದರ್ಯದಿಂದ ಬೆರಗಾದರು. ದೇವರಾಕ್ಷಸರು ಅಮೃತಕಲಶಕ್ಕಾಗಿ ವಾಗ್ವಾದ ಮಾಡುತ್ತಿದ್ದರು. ಆ ಕಲಹವನ್ನು ನಿಲ್ಲಿಸುತ್ತೇನೆಂದು ಮೋಹಿನಿಯು ಪ್ರವರ್ತಿಸಿ, ದೈತ್ಯರ ಕೈಯಲ್ಲಿದ್ದ ಅಮೃತಕಲಶವನ್ನು ತೆಗೆದುಕೊಂಡು, ದೇವತೆಗಳನ್ನೊಂದು ಸಾಲಾಗಿಯೂ ರಾಕ್ಷಸರನ್ನೊಂದುಸಾಲಾಗಿಯೂ ಕುಳ್ಳಿರಿಸಿ, ಇಬ್ಬರಿಗೂ ಪಕ್ಷಪಾತವಿಲ್ಲದಂತೆ ಅಮೃತವನ್ನೆರೆಯುತ್ತೇನೆಂದು ಅಭಿನಯಿಸಿ, ದೇವತೆಗಳ ಸಾಲಿಗೆಲ್ಲ ಅಮೃತವನ್ನೂ, ಅದರ ಬಣ್ಣದಿಂದಲೇ ಇದ್ದ ಮದ್ಯವನ್ನು ರಾಕ್ಷಸರ ಸಾಲಿಗೂ ಹೀಗೆ ಎರಡು ಕೈಯಲ್ಲಿ ಎರಡು ಕಲಶವನ್ನು ಹಿಡಿದು ಎರೆಯುತ್ತಿದ್ದನು. ಈ ಕಪಟವನ್ನು ರಾಹುವೆಂಬ ರಾಕ್ಷಸನು ತಿಳಿದು ರೂಪಾಂತರದಿಂದ ದೇವತೆಗಳ ಪಙ್ತಿಯಲ್ಲಿ ಕುಳಿತುಕೊಂಡು ಅಮೃತವನ್ನು ಕುಡಿದನು. ಇದನ್ನು ಸೂರ್ಯಚಂದ್ರರು ತಿಳಿದು ವಿಷ್ಣುವಿಗೆ ಸನ್ನೆಮಾಡಿ ತಿಳಿಸಿಬಿಟ್ಟರು. ಆತನು ಚಕ್ರವನ್ನು ಬಿಟ್ಟು ರಾಕ್ಷಸನ ಕತ್ತನ್ನು ಕತ್ತರಿಸಿದನು. ಅಮೃತರಸಪ್ರಭಾವದಿಂದ ಆ ರುಂಡಮುಂಡಗಳೆರಡೂ ಸಜೀವಿಗಳಾಗಿ ರಾಹುಕೇತುಗಳೆಂಬ ಹೆಸರಿನಿಂದ ನಿಂತು ಸೂರ್ಯಚಂದ್ರರಮೇಲಣ ದ್ವೇಷವನ್ನು ತೀರಿಸಿಕೊಳ್ಳುವುದಕ್ಕಾಗಿ ಈಗಲೂ ಅವರನ್ನು ಪೀಡಿಸುತ್ತಿರುವುದರಿಂದಲೇ ಗ್ರಹಣಗಳುಂಟಾಗುತ್ತಿರುವುವು. ಎಂದು ಚೆನ್ನಬಸವೇಶನು ಹೇಳಿದನೆಂಬಲ್ಲಿಗೆ ೧೧ ನೇ ಅಧ್ಯಾಯವು ಮುಗಿದುದು.

## ೧೨ ನೇ ಅಧ್ಯಾಯವು.

## ಜಲಂಧರಾಸುರನ ಕಥೆ.

ಎಲೈ ಸಿದ್ಧರಾಮೇಶನೆ! ಬಳಿಕ ದೇವೇಂದ್ರನು ಶಿವಘಾದಪೂಜಾಘಲಾತಿಶಯದಿಂದ ದೇವಲೋಕವನ್ನಾಳುತ್ತ ಸುಖದಿಂದಿರುವಲ್ಲಿ, ರಾಕ್ಷಸರುಗಳು ದಾಯಾದಮತ್ಸರದಿಂದ ದೇವತೆಗಳ ಮೇಲೆ ಬಿದ್ದು ಮಹಾಯುದ್ಧವನ್ನು ಮಾಡಿದರು. ಇಂದ್ರನು ಅವರೆಲ್ಲರನ್ನೂ ಗೆದ್ದು ನಿರಾತಂಕದಿಂದೆಷ್ಟೋಕಾಲ ವಿಭವದಿಂದಿದ್ದನು. ಹೀಗಿರುವಲ್ಲಿ ತನ್ನನ್ನು ಜೈಸುವರಾರೂ ಇಲ್ಲವೆಂಬ ಅಹಂಕಾರವು ಇಂದ್ರನಿಗೆ ಮೂಡಲು, ಯುದ್ಧಕಾರ್ಯವಿಲ್ಲದೆ ಸುಮ್ಮನೆ ಬೇಸತ್ತಿರುವುದು ಚೆನ್ನಾಗಿಲ್ಲವೆಂದು ಯೋಚಿಸಿ, ಶಿವನನ್ನು ಕೇಳಿ ಒಬ್ಬ ಶತ್ರುವನ್ನು ಪಡೆಯಬೇಕೆಂದು ಕೈಲಾಸಕ್ಕೆ ಹೊರಟನು. ಮಹಾಸಭೆಯ ಮಧ್ಯದಲ್ಲಿ ಸೇವೆಗೊಳ್ಳುತ್ತಿರುವ ಪರಶಿವನಿಗೆ ನಮಸ್ಕರಿಸಿ, ಕೈಮುಗಿದು ನಿಂತು, ಸ್ವಾಮೀ! ನನಗೆ ಪ್ರತಿಭಟಿಸಿ ನಿಂತು ಯುದ್ಧಕೊಡುವ ಕೆಡುಗಲಿಯಾದ ಶತ್ರುವನ್ನು ದಯೆಪಾಲಿಸಬೇಕೆಂದು ಬೇಡಿದನು. ಇದನ್ನು ಕೇಳಿ ಶಿವನು ನಸುನಗುತ್ತ, ಮುಂದುಗಾಣದೆ ಇದೇನಿಂತಹ ವರವನ್ನು ಬೇಡುವೆ? ಎನಲು, ದೇವೇಂದ್ರನು ಮತ್ತೆ ಮಣಿದು, ಮಹಾದೇವನೇ! ನಾನು ಹಿಂದಣ ಯುದ್ಧದಲ್ಲಿ ಜಂಭಬಲ ನಮುಚಿ ವೃತ್ರ ಮೊದಲಾದ ದೈತ್ಯರನ್ನೆಲ್ಲ ಸೋಲಿಸಿ ಓಡಿಸಿದೆನು. ಅಂದಿನಿಂದ ಯುದ್ಧಕಾರ್ಯವು ನನಗೆ ಸ್ವಪ್ನೇಪಿ ದುರ್ಲಭವಾಗಿ ಹಂಬಲಿಸಿಕೊಳ್ಳುವಂತಾಗಿದೆ. ಅದಾಕಾರಣ ಅವಶ್ಯಕವಾಗಿ ನನಗೊಬ್ಬ ಶತ್ರುವನ್ನು ಅನುಗ್ರಹಿಸಬೇಕೆಂದು ಬಿನ್ನೈಸಿದನು. ಇದನ್ನು ಕೇಳಿ ಶಿವನಿಗೆ ಕೋಪವಾವಿರ್ಭವಿಸಲು, ದೇವೇಂದ್ರನನ್ನು ಸುಟ್ಟುಬಿಡುವುದಕ್ಕಾಗಿ ಫಾಲನೇತ್ರದಿಂದೊಂದುಕಿಡಿಯನ್ನುಗುಳಿಸಿದನು. ಆಗ ಸಭೆಯಲ್ಲೇ ಇದ್ದ ದೇವಗುರುವಾದ ಬೃಹಸ್ಪತಿಯು ನೋಡಿ, ಓಹೋ! ಇಂದ್ರನು ಕೆಡುವನೆಂದು ಯೋಚಿಸಿ, ಸಾಕು ಸಾಕು; ದೇವದೇವೋತ್ತಮನೇ! ನೀನು ಕೋಪಿಸಿ ಫಾಲನೇತ್ರಾಗ್ನಿಯನ್ನು ಇಂದ್ರನಮೇಲೆ ಪ್ರಯೋಗಿಸಿದರೆ ಅವನು ಉಳಿಯುವುದುಂಟೆ? ನೀನೇ ಅದನ್ನು ಉಪಸಂಹರಿಸಿ

ಕೊಳ್ಳಬೇಕೆಂದು ಪ್ರಾರ್ಥಿಸಲು, ಶಂಕರನು ಆ ಕಿಡಿಯನ್ನು ಸೆಳೆದು ಕೈಯಲ್ಲಿ ಹಿಡಿದು ಸಮುದ್ರಕ್ಕೆ ಬಿಸುಟು "ಇಂದ್ರನೆ ನಿನಗೆ ಶತ್ರುವನ್ನು ದಯಪಾಲಿಸಿರುವೆನು ಹೋಗು" ಎಂದು ಹೇಳಿ ಕಳುಹಿಸಿದನು. ಇಂದ್ರನು ಸಂತೋಷದಿಂದಮರಾವತಿಯನ್ನು ಸೇರಿದನು. ಅತ್ತ ಶಿವನು ಬಿಸುಡಿದ ಅಗ್ನಿಕಣವು ಶಿಶುವಾಗಿ ಗಂಗಾಸಮುದ್ರಸಂಗಮಸ್ಥಲದಲ್ಲಿ ಮಲಗಿ ಅಳುತ್ತಿದ್ದಿತು. ಸಮುದ್ರರಾಜನು ಶುಂಭನೆಂಬ ತನ್ನ ಮಗನು ಅಳಿದುಹೋಗಲು, ದೇವೇಂದ್ರನನ್ನು ಗೆಲ್ಲುವ ಪರಾಕ್ರಮದ ಮಗನೊಬ್ಬನನ್ನು ಪಡೆಯಬೇಕೆಂದು ಶಿವನನ್ನು ಕುರಿತು ತಪಸ್ಸನ್ನಾಚರಿಸುತ್ತಿದ್ದು, ಅಕಸ್ಮಾತ್ತಾಗಿ ಅಳುತ್ತಿರುವ ಈ ಶಿಶುವನ್ನು ಕಂಡು ಸಂತೋಷದಿಂದೆತ್ತಿ ತೊಡೆಯಮೇಲೆ ಮಲಗಿಸಿಕೊಂಡನು. ಆ ಶಿಶುವಾದರೊ ಬ್ರಹ್ಮಾಂಡಕಟಾಹವು ಸಿಡಿದೊಡೆಯುವಂತೆ ಅಬ್ಬರಿಸಿಕೊಂಡಿತು. ಬ್ರಹ್ಮನು ಇದೆಲ್ಲಿಯ ಶಬ್ದವೆಂದು ಆಶ್ಚರ್ಯಪಟ್ಟು, ಈ ಮಗುವಿದ್ದ ಬಳಿಗೆ ಬಂದನು. ಸಮುದ್ರರಾಜನು ಬ್ರಹ್ಮನನ್ನು ನೋಡಿ, ಭಕ್ತಿಯಿಂದ ನಮಸ್ಕರಿಸಿ, ಈ ಮಗನಿಗೆ ನಾಮಕರಣವನ್ನು ಮಾಡಿ ಲೋಕದಲ್ಲಿ ಯಾರಿಂದಲೂ ಮರಣ ವುಂಟಾಗದಂತೆ ಆಶೀರ್ವದಿಸಿರೆಂದು ಹೇಳಿ ಅವನ ಕೈಗೆ ಮಗುವನ್ನು ಕೊಟ್ಟನು. ಬ್ರಹ್ಮನು ಮಗುವನ್ನು ತೊಡೆಯಮೇಲೆ ಮಲಗಿಸಿಕೊಂಡು ಆ ಮಗುವಿನ ಶುಭಾಕೃತಿಯ ಚೆಲ್ವಿಕೆಯನ್ನು ನೋಡುತ್ತಿರಲು, ಮಗುವು ಬ್ರಹ್ಮನ ಗಡ್ಡವನ್ನು ಹಿಡಿದು ಸೆಳೆದಿತು. ಅದರಿಂದ ನೋವುಂಟಾಗಲು, ಬ್ರಹ್ಮನ ಕಣ್ಣಿನಿಂದ ನೀರು ಸುರಿದು ಮಗುವಿನಮೇಲೆ ಬಿದ್ದಿತು. ಬ್ರಹ್ಮನು ಗಡ್ಡವನ್ನು ಮೆಲ್ಲಗೆ ಬಿಡಿಸಿಕೊಂಡು ಎಲೆ ಸಮುದ್ರನೇ! ಈ ಮಗನು ನನ್ನ ಕಣ್ಣಿನ ಜಲವನ್ನು ಧರಿಸಿಕೊಂಡನಾದಕಾರಣ ಇವನಿಗೆ "ಜಲಂಧರ" ನೆಂಬ ನಾಮವು ಸಲ್ಲುವುದು. ಇವನು ಸಾಮಾನ್ಯನಲ್ಲ, ಯಾರಿಂದಿವನ ಜನನವಾಯಿತೋ ಅವನಿಂದಲೇ ಅಪೂರ್ವವಾದಾಯುಧದಿಂದ ಇವನಿಗೆ ಮರಣವಲ್ಲದೆ, ಉಳಿದ ಈ ಸಣ್ಣದೇವಾಸುರ ಮನುಜಕುಲದಿಂದ ಮರಣವಿಲ್ಲವೆಂದು ಆಶೀರ್ವದಿಸಿ, ಶುಕ್ರಾಚಾರ್ಯನ ಮೂಲಕವಾಗಿ ಅವನಿಗೆ ಅಸುರರಾಜಪಟ್ಟವನ್ನು ಕಟ್ಟಿಸಿ, ಬೀಳ್ಕೊಂಡು ತೆರಳಿದನು. ಇತ್ತ ಜಲಂಧರನು

ದಿನೆ ದಿನೆ ಪ್ರವರ್ಧಮಾನನಾದನು. ಶುಕ್ರನು ಈ ಜಲಂಧರಾಸುರನಿಗೆ ಕ್ರೌಂಚಾಸುರನ ಮಗಳಾದ ವೃಂದೆಯನ್ನು ತಂದು ದೇವೇಂದ್ರವೈಭವದಿಂದ ವಿವಾಹ ಮಾಡಿದನು. ಈತನು ಜಾಳಂಧರವೆಂಬ ಹೆಸರಿನಿಂದ ಒಂದು ಹೊಸಪಟ್ಟಣವನ್ನು ಕಟ್ಟಿಸಿ, ಗಿರಿಗುಹಾದಿಗಳಲ್ಲಡಗಿಕೊಂಡಿದ್ದ ರಾಕ್ಷಸರನ್ನೆಲ್ಲ ಬರಮಾಡಿ ಆ ಪಟ್ಟಣದಲ್ಲಿರಿಸಿಕೊಂಡು ಪತ್ನೀಸಮೇತನಾಗಿ ಸುಖದಿಂದಿರುತ್ತಿದ್ದನು. ಇವನು ಸಭೆಯಲ್ಲಿ ಒಡ್ಡೋಲಗಂಗೊಟ್ಟಿರುವಾಗ ಶುಕ್ರಾಚಾರ್ಯನು ಬಲಗಡೆಯಲ್ಲೂ, ಬಂಧುವರ್ಗವೆಲ್ಲವೂ ಹಿಂಗಡೆಯಲ್ಲೂ ಕುಳಿತಿರಲು, ಕೆವಿಸ್ಕಾಸೆ, ಕಾರೊಡಲು, ಕೆಂಗಣ್ಣು, ಜುಂಜುರದಸೆ, ಕೋರೆದಾಡೆ, ಕೊಬ್ಬಿದ ಮುಖ, ತುಂಬಿದ ಖಂಡ, ಕರ್ಕಶರೋಮಗಳನ್ನು ಹೊಂದಿ ಭೀಕರಾಯುಧಗಳನ್ನು ಧರಿಸಿ, ಬಿರುದಾಂಕಗಳನ್ನೂ ಮಣಿಕಿರೀಟಭುಜಕೀರ್ತಿಗಳನ್ನೂ ಧರಿಸಿ, ಸಿಡಿಲಂತೆ ಗರ್ಜಿಸುತ್ತ, ಶ್ವೇತದಂತ, ಸುಪಾರ್ಶ್ವ, ಪ್ರಜಂಘ, ಮಯ, ವಿಪ್ರಜಿತು, ವಿರೂಪಾಕ್ಷ, ವಿಪ್ರಾವಣ, ಮಹಾನಾಭ, ಪ್ರಲೋಮ, ಮಾರೀಚ, ಮಧಿರ, ಕೇತು, ಜರ್ಝರ, ವಾಮನ, ಗಜಶಿರ, ಕೇತುವೀರ್ಯ, ನಮುಚಿ, ಚುಂಡ, ತಟತ್ಕೇತು, ಶುಂಭ, ಧೂಮ್ರಾಕ್ಷ, ಮಧುಮತ್ತ, ಪ್ರಹೇತಿ, ಹೇತಿ, ದೀರ್ಘಬಾಹು, ಖಡ್ಗರೋಮ, ಭೀಮ, ಮೊದಲಾದ ರಾಕ್ಷಸರ ಸ್ತೋಮವು ಸಭೆಗೆ ಬರುತ್ತಿದ್ದಿತು. ಯಮಧರ್ಮನ ಕೈದಂಡವನ್ನೂ ಸೆಳೆಯುವ, ಪ್ರಳಯಕಾಲದ ಭೈರವನ ಕೋರೆದಾಡೆಯನ್ನೂ ಮುರಿಯುವ, ಕಾಲಮೃತ್ಯುವಿನ ಗಂಟಲನ್ನೂ ಕುಯ್ಯುವ, ದಿಕ್ಪಗಳನ್ನೂ ಕಿತ್ತು ಆಟವಾಡುವ, ಪ್ರಳಯಕಾಲದ ಸಿಡಿಲನ್ನೂ ಹಿಡಿದು ಧರಿಸಿಕೊಳ್ಳುವ, ಮಹಾಶೂರರಾಕ್ಷಸರೆಲ್ಲರೂ ಬಂದು ಸಭೆಯಲ್ಲಿ ನಿಂತು, ಒಲೈಸುತ್ತಿದ್ದರು. ಹೀಗಿರುವಲ್ಲಿ ತನ್ನ ಸಭೆಯಲ್ಲಿದ್ದ ರಾಹುಕೇತುಗಳಿಬ್ಬರ ಇರುವಿಕೆಯನ್ನು ಜಲಂಧರನು ನೋಡಿ, ಒಂದೇ ದೇಹವು ಎರಡಾಗಿರುವುದಕ್ಕೆ ಕಾರಣವೇನೆಂದು ಕೇಳಲು, ಶುಕ್ರಾಚಾರ್ಯನು ಪೂರ್ವದಸಮುದ್ರಮಥನದ ಸುದ್ದಿಯನ್ನೂ ಅಮೃತದ ಹಂಚುವಿಕೆಯನ್ನೂ, ವಿಷ್ಣುವು ಮೋಹಿನ್ಯವತಾರದಿಂದ ಚಕ್ರವನ್ನು ಬಿಟ್ಟು ಮೋಸದಿಂದ ಅಮೃತಪಾನ ಮಾಡಿದ್ದ ರಾಕ್ಷಸನೊಬ್ಬನನ್ನು ಎರಡು ತುಂಡು ಮಾಡಿದುದನ್ನೂ ವಿವರನಾಗಿ

ಹೇಳಿದನು. ಇದನ್ನು ಜಲಂಧರನು ಕೇಳಿ ಕೋಪವೇರಿ, ಘುಡುಘುಡಿಸಿ ಕೆಂಗಣ್ಣಿನಿಂದ ಕಿಡಿಯನ್ನು ಸುರಿಸುತ್ತ, ಆಹಾ! ಖೂಳದೇವೇಂದ್ರನು ನನ್ನ ತಂದೆಯಾದ ಸಮುದ್ರನನ್ನು ಮಥಿಸಿ ಸಕಲೈಶ್ವರ್ಯವನ್ನೂ ದೋಚಿಕೊಂಡನೇ? ಅವನ ಹೊಟ್ಟೆಯನ್ನು ನಾನು ಬಗಿದು ಕರುಳನ್ನು ಭೂತಗಣಕ್ಕುಣ್ಣಿಸಿ ತೃಪ್ತಿಪಡಿಸದೆ ಇರುವೆನೆ? ಇರಲಿ; ಸೈನ್ಯವೆಲ್ಲ ಸಿದ್ಧವಾಗುವಂತೆ ಹೇಳು ಎಂದು ಗರ್ಜಿಸಿದನು. ಇದನ್ನು ಶುಕ್ರಾಚಾರ್ಯನು ಕೇಳಿ, ಸಾಮ ದಾನ ಭೇದ ದಂಡವೆಂಬ ಚತುರುಪಾಯದಿಂದಲೂ ಪ್ರವರ್ತಿಸುವುದು ರಾಜನೀತಿಯಾದ ಕಾರಣ ಮೊದಲು ಸಾಮೋಪಾಯವನ್ನನುಸರಿಸಿ ಅದಕ್ಕೆ ಇಂದ್ರನು ಬಗ್ಗದಿದ್ದರೆ ಮುಂದಣ ಕೆಲಸವನ್ನು ನೋಡೆಂದು ಬೆಸಸಲು, ಹಾಗೆಯೇ ಆಗಲೆಂದೊಪ್ಪಿ, ಒಬ್ಬ ಚಾರನನ್ನು ಕರೆದು, "ನೀನು ದೇವೇಂದ್ರನ ಬಳಿಗೆ ಹೋಗಿ ನಮ್ಮ ತಂದೆಯಿಂದ ದೋಚಿಕೊಂಡಿರುವ ಕಾಮಧೇನು ಕಲ್ಪವೃಕ್ಷಾದಿವಸ್ತುಗಳನ್ನೆಲ್ಲ ನಮಗೆ ತಂದೊಪ್ಪಿಸಿ ವಿಧೇಯತೆಯಿಂದ ಬದುಕೆಂದು ಅವನಿಗೆ ತಿಳಿಸು" ಹೋಗು ಎಂಬದಾಗಿ ಹೇಳಿಕಳಿಸಿದನು. ದೂತನು ಅಲ್ಲಿಂದ ಹೊರಟು ಬೇಗನೆ ಅಮರಾವತಿಗೆ ಬಂದು, ಅರಮನೆಯ ಬಾಗಿಲಲ್ಲಿ ತಡೆದ ಕಾವಲುಗಾರರನ್ನು ಲಕ್ಷ್ಯಮಾಡದೆ ಒಳಹೊಕ್ಕು ಸಭೆಗೆ ಬಂದನು. ಇವನು ಇಷ್ಟು ಧೈರ್ಯದಿಂದ ಸಭೆಗೆ ಬಂದುದನ್ನು ದೇವಮಂತ್ರಿಯಾದ ಬೃಹಸ್ಪತಿಯು ನೋಡಿ— ನೀನು ಯಾರಕಡೆಯ ದೂತ? ನಮ್ಮೂರಿಗೆ ಏತಕ್ಕೆ ಬಂದೆ? ಯಾರು ಕಳುಹಿಸಿದರು? ಎಂದು ಕೇಳಿದನು. ಅದಕ್ಕೆ ಚಾರನು— ನಾನು, ಸಕಲ ದೇವತಾಸ್ತೋಮವೆಂಬ ಸಮುದ್ರಕ್ಕೆ ಬಡಬಾಗ್ನಿಯೂ ರಾಕ್ಷಸಕುಲಶೇಖರನೂ ಆದ ಜಲಂಧರಾಸುರನ ದೂತ. ನಮ್ಮೊಡೆಯನ ತಂದೆಯಾದ ಸಮುದ್ರನನ್ನು ನೀವುಗಳು ಕಡೆದು ಅದರಿಂದ ಹುಟ್ಟಿದ ಅನರ್ಘವಾದ ವಸ್ತುಗಳನ್ನೆಲ್ಲ ತೆಗೆದುಕೊಂಡಿರುವಿರಿ. ಆ ವಸ್ತುಗಳನ್ನೆಲ್ಲ ನಿಮ್ಮಿಂದ ಕೇಳಿ ಈಸಿಕೊಂಡುಬರುವುದಕ್ಕಾಗಿ ನಮ್ಮೊಡೆಯನು ನನ್ನನ್ನು ಕಳುಹಿಸಿರುವನು. ಅವನ್ನು ಕೊಟ್ಟು ಕಳುಹಿಸುವುದೇ ನಿಮಗೆ ಶ್ರೇಯಸ್ಸು. ಇಲ್ಲವಿದ್ದರೆ ಯುದ್ಧಕ್ಕೆ ಸನ್ನಾಹಗೊಳ್ಳಿರಿ, ಎಂದನು. ಆಗ ಗುರುವು— ದೂರ್ವಾಸಮಹರ್ಷಿಯು ಶಾಪವಂ ಕೊಟ್ಟುದರಿಂದ ಈ ನಮ್ಮ ದೇವೇಂ

ದ್ರನ ವಸ್ತುವಾಹನಗಳೆಲ್ಲ ಸಮುದ್ರದಲ್ಲಿ ಮುಳುಗಿದ್ದುವು. ಬಳಿಕ ಶಿವನ ಪ್ಪಣೆಯನ್ನು ಪಡೆದು ಸಮುದ್ರವನ್ನು ಕಡೆದು ಕಳೆದುಕೊಂಡಿದ್ದ ನಮ್ಮ ವಸ್ತುಗಳನ್ನೆಲ್ಲ ತೆಗೆದುಕೊಂಡುಬಂದಿರುವೆವು. ಅಷ್ಟೇ ಹೊರತು ದೇವ ರಾಜನು ಹೆರರ ಒಡವೆಗೆ ಆಸೆ ಮಾಡತಕ್ಕವನೆ? ಎನ್ನಲು, ದೂತನು ಕೇಳಿ, ಹಾಗಾದರೆ ನೀವು ಯುದ್ಧವನ್ನೇ ಕೋರುವವರಷ್ಟೆ? ಬೇಡಿರಿ, ಸುಮ್ಮನೆ ನಮ್ಮ ವಸ್ತುಗಳನ್ನು ನಮಗೆ ಕೊಟ್ಟು ಬದುಕಿ, ಎಂದು ಮತ್ತೆ ಹೇಳಿ, ಅವರು ಒಪ್ಪದಿರಲು, ಹಿಂದಿರುಗಿ ತಮ್ಮೊಡೆಯನ ಬಳಿಗೆ ಬಂದು ಮಣಿದು, ಜೀಯಾ! ನಿಮ್ಮಪ್ಪಣೆಯಾದಂತೆ ದೇವೇಂದ್ರನಬಳಿ ಯಲ್ಲಿ ತಿಳಿಸಿ ವಸ್ತುವನ್ನು ಬೇಡಿದೆನು. ಅದಕ್ಕೆ ಅವರು ವಿರೋಧಾಭಿ ಪ್ರಾಯವನ್ನು ತಿಳಿಸುವರೇ ಹೊರತು ಕೊಡುತ್ತೇವೆಂಬ ಮಾತನ್ನೇ ಆಡುವುದಿಲ್ಲ. ಎಂದು ಬಿನ್ನೈಸಿದನು. ಇದನ್ನು ಕೇಳಿದ ಕೂಡಲೇ ಜ ಲಂಧರನ ದೇಹದಲ್ಲಿ ಕೋಪಾಗ್ನಿಯು ಭುಗುಭುಗನೆ ಸ್ಫುರಿಸಿತು. "ಸಕ ಲ ದೈತ್ಯನಾಯಕರನ್ನೂ ಬರಮಾಡು, ಸೇನಾಪ್ರಯಾಣಸೂಚಕವಾದ ಭೇರಿಯನ್ನು ಹೊಡೆ" ಎಂದು ಆಗಳೇ ಅಪ್ಪಣೆಯನ್ನು ಮಾಡಿದನು. ಒಡನೆಯೇ ಭೇರಿಯನ್ನು ತಾಡಿಸಲು, "ದೇವದಾನವರ ಸಂಧಿಯು ತ ಪ್ಪಿತು. ದಾನವರು ಯುದ್ಧಸನ್ನದ್ಧರಾಗಿ ಹೊರಡುತ್ತಿರುವರು! ಶತ್ರು ಮದಗಜಗಳಿಗೆ ಸಿಂಹನಾದ ಜಲಂಧರಾಸುರನು ಇಗೋ ಬರುತ್ತಿರುವನು ದಿಕ್ಪಾಲಕರೆಲ್ಲ ಕಂಡಕಂಡ ಕಡೆಗೆ ಓಡಿಹೋಗಿ ತಲೆಯನ್ನುಳುಹಿಕೊ ಳ್ಳಿರಿ" ಎಂದು ಸಾರುತ್ತಿರುವಹಾಗೆ ಭೇರೀಶಬ್ದವು ದಿಙ್ಮಂಡಲವನ್ನೆಲ್ಲ ವ್ಯಾಪಿಸಿತು. ಚತುರಂಗಸೈನ್ಯವೂ ಸಿದ್ಧವಾಯಿತು. ವಾದ್ಯಗಳು ಮುಂ ಗಡೆಯಲ್ಲಿ ಆರ್ಭಟಿಸುತ್ತಿದ್ದುವು. ಈ ಅಬ್ಬರಕ್ಕೆ ಮೂರುಲೋಕವೂ ತಲ್ಲಣಿಸಿತು. ತನ್ನ ಗುರುವಾದ ಶುಕ್ರಾಚಾರ್ಯನು ಗೊತ್ತು ಮಾಡಿದ್ದ ಸುಮುಹೂರ್ತದಲ್ಲಿ ಜಲಂಧರಾಸುರನು ಪ್ರಯಾಣ ಮಾಡಿದನು. ಕಾ ಲಾಳುಗಳ ಹೂಂಕಾರವೂ, ಆನೆಗಳ ಗರ್ಜನೆಯೂ ಮತ್ತು ಗಂಟೆಯ ಶಬ್ದವೂ, ಕುದುರೆಗಳ ಕೆನೆಯುವಿಕೆಯೂ ಕಡಿವಾಣದ ಖಣಖಣಧ್ವನಿ ಯೂ ಮತ್ತು ಗೊರಸಿನ ಶಬ್ದವೂ, ರಥಗಳ ಚೀರುವಿಕೆಯೂ, ವೀರರ ಹಸ್ತಾಯುಧದ ಖಣಿಖಣಿಯೆಂಬ ಶಬ್ದವೂ, ತಮ್ಮಟೆ, ನಗಾರಿ ಮೊದ

ಲಾದ ವಾದ್ಯಗಳ ಹೆದ್ದನಿಯೂ ಒಟ್ಟುಗೂಡಿ ಬ್ರಹ್ಮಾಂಡವನ್ನೇ ಅಲ್ಲಾಡಿಸಿಬಿಟ್ಟುವು. ಎಲೆ ಸಿದ್ಧರಾಮನೇ ಕೇಳು. ರಥಗಳು ೫ ಪದ್ಮಗಳಿದ್ದುವು, ಮದವೇರಿದಾನೆಗಳು ೧೦೦ ಪದ್ಮಗಳಿದ್ದುವು. ವೇಗಶಾಲಿಗಳಾದ ಕುದುರೆಗಳು ೧೦೦೦ ಪದ್ಮವಿದ್ದುವು. ಕಾಲಾಳುಗಳು ೧೦೦೦೦ ಪದ್ಮವಿದ್ದರು. ಇಷ್ಟು ಸೇನೆಯೂ ಒಬ್ಬೊಬ್ಬ ದೈತ್ಯನಾಯಕನ ಬಳಿಯಲ್ಲಿದ್ದಿತು. ಅಂತಹ ದೈತ್ಯನಾಯಕರು ಶತಕೋಟಿಪದ್ಮಸಂಖ್ಯಾಕರಾಗಿದ್ದರು. ಇಂತಹ ಅಮಿತಬಲದೊಡನೆ ಕೂಡಿ ರಾಕ್ಷಸರಾಜನು ಹೊರಟನು. ಅವನ ಸುತ್ತಲೂ ಅವನಿಗೆ ಸರಿತೂಕದ ಬಲವುಳ್ಳ ಮುಖ್ಯದೈತ್ಯರು ಹೋಗುತ್ತಿದ್ದರು. ಮುಂಗಡೆಯಲ್ಲಿ ಸ್ತುತಿಪಾಠಕರು ಉಗ್ಗಡಿಸುತ್ತಿದ್ದರು. ಸೇನೆಯ ತೂಕಕ್ಕೆ ಭೂಮಿಯು ಕುಸಿಯದೆ ಉಳಿಯುವುದಿಲ್ಲವೆಂಬಂತೆ ತೋರುತ್ತಿದ್ದಿತು. ಸೈನ್ಯದಲ್ಲಿ ಎತ್ತ ನೋಡಿದರೂ ಕೆಂದೂಳಿ, ಎಲ್ಲಿ ನೋಡಿದರೂ ಆನೆ ಕುದುರೆ ರಥಗಳು. ಆವಕಡೆ ನಿರೀಕ್ಷಿಸಿದರೂ ರಾಕ್ಷಸರ ಆರ್ಭಟ, ಯಾವಲ್ಲಿ ಗಮನಿಸಿದರೂ ಛತ್ರ ಚಾಮರಗಳು, ಎತ್ತ ತಿರುಗಿದರೂ ಕತ್ತಿ ಬಾಣ ಮೊದಲಾದ ಆಯುಧಗಳ ಹೊಳಪು ತುಂಬಿ ತುಳುಕುತ್ತಿದ್ದಿತು. ಈ ಸೇನಾಪ್ರಯಾಣದಿಂದ ಧೂಳಿಯೆದ್ದು ಸಮುದ್ರವನ್ನೆಲ್ಲ ಹೀರಿ ಬತ್ತಿಸಿತು. ತೂಕಕ್ಕೆ ಆದಿಶೇಷನ ಕುತ್ತಿಗೆಯು ಕುಗ್ಗಿತು. ಆದಿಕೂರ್ಮನ ಬೆನ್ನೋಟೆಯು ತಗ್ಗಿಹೋಯಿತು. ವಾದ್ಯಧ್ವನಿಯು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿ ಶತ್ರುರಾಜರ ಎದೆಯನ್ನು ಬಿರಿಸಿತು. ದೇವಲೋಕದ ಗಡಿಗಳಲ್ಲಿದ್ದ ಸೇನೆಯು ಈ ಮಹಾಸೈನ್ಯವನ್ನು ನೋಡಿದಕೂಡಲೇ ದಿಗಿಲು ಬಿದ್ದು ಎದ್ದು ಓಡಿತು. ಈ ಜಲಂಧರನ ಸೈನ್ಯವು ದಾರಿಯಲ್ಲಿ ವಿನಯದಿಂದ ಕಂಡವರನ್ನು ಉಚಿತವಾಗಿ ಮನ್ನಿಸುತ್ತಲೂ, ಭೀತರಾದವರಿಗೆ ಅಭಯದಾನವನ್ನು ಮಾಡುತ್ತಲೂ, ಮಸಿಸಿದ್ದವರನ್ನು ಶಿಕ್ಷಿಸುತ್ತಲೂ, ಪ್ರತಿಭಟಿಸಿದವರ ಕೋಟೆಗಳನ್ನು ಧೂಳೀಪಟಲಮಾಡಿ, ಅವರ ಹೆಂಡಿರನ್ನೂ ವಸ್ತುವಾಹನಗಳನ್ನೂ ಸೂರೆ ಮಾಡಿ ದಂಡಿಸುತ್ತಲೂ, ಬೇಗಬೇಗನೆ ಅಮರಾವತಿಯ ದಾರಿಯನ್ನು ಹಿಡಿದು ಗಿರಿವನಜಲದುರ್ಗಗಳನ್ನೆಲ್ಲ ದಾಟಿ, ದೇವನಗರಿಯ ಸಮೀಪವನ್ನು ಸಾರಿತು. ಈ ಸುದ್ದಿಯನ್ನು ದೇ

ವೇಂದ್ರನು ಕೇಳಿದ ಕೂಡಲೇ ರೋಷದಿಂದ ಕಣ್ಣುಗಳಲ್ಲಿ ಕಿಡಿಯನ್ನು ಸುರಿಸಿದನು. ಸಕಲ ದಿಕ್ಪಾಲಕರನ್ನೂ ಯಕ್ಷ ಗಂಧರ್ವಕಿನ್ನರ ಕಿಂಪುರುಷಾದಿದೇವನಿಚಯವನ್ನೂ ಹಸ್ತ್ಯಶ್ವರಥಪದಾತಿಸೇನಾಸಮೇತವಾಗಿ ಜಲಂಧರನ ಮೇಲೆ ಯುದ್ಧ ಮಾಡುವುದಕ್ಕಾಗಿ ಬರಬೇಕೆಂದು ಆಜ್ಞಾಪಿಸಿದನು. ಆ ಕೂಡಲೇ ಅಮರಾವತಿಯೊಳಗೆಲ್ಲ ಆನೆಗೆ ಹೊದಿಕೆಯನ್ನು ಹಾಕು, ಕುದುರೆಗೆ ಕಡಿವಾಣವನ್ನು ಜೋಡಿಸು, ತೇರನ್ನು ಕಟ್ಟು, ಕವಚ ಟೊಪ್ಪಿಗೆಗಳನ್ನು ತೊಡು, ಬೇಗನೆ ಚಲ್ಲಣವನ್ನಿಕ್ಕು, ಮುಸಲ ಮುದ್ಗರ ತೋಮರ ಕುಂತ ಮೊದಲಾದ ಆಯುಧಗಳನ್ನು ಕೊಡು, ಬೇಗ ನಡೆ, ಎಂಬ ನಾನಾಬಗೆಯ ಯುದ್ಧಕುತೂಹಲದ ಗಜಬಜವು ತುಂಬಿಕೊಂಡಿತು. ತನ್ನನ್ನು ರಾಕ್ಷಸನ ಸೈನ್ಯವು ಮುತ್ತುವುದಕ್ಕೆ ಬರಲಾಗಿ ಅಮರಾವತಿಯು ಕಂಡು ಅದನ್ನು ಜೈಸುವುದಕ್ಕಾಗಿ ಪ್ರತಿ ಸೇನೆಯನ್ನೇ ಊದಿರುವಳೋ ಎಂಬಂತೆ ನಾನಾವಾದ್ಯಧ್ವನಿಗಳಿಂದ ಭೋರ್ಗರೆಯುತ್ತ, ಕತ್ತಿ ಗುರಾಣಿ ಬಿಲ್ಲು ಬಾಣ ಗದೆ ಮೊದಲಾದುವುಗಳನ್ನು ಹಿಡಿದು ಆರ್ಭಟಿಸುತ್ತಲಿರುವ ಶೂರಭಟರುಗಳು ಕೋಟ್ಯನುಕೋಟಿಯಾಗಿ ಪಟ್ಟಣದಿಂದ ಹೊರಟರು. ಆಗ ದೇವೇಂದ್ರನು ಶೃಂಗರಿಸಿದ ಐರಾವತವನ್ನೇರಿ ಸ್ತುತಿಪಾಠಕರಿಂದ ಹೊಗಳಿಸಿಗೊಳ್ಳುತ್ತ ಛತ್ರಚಾಮರಗಳಿಂದುಪಚರಿಸಿಕೊಳ್ಳುತ್ತ, ದಿಕ್ಪಾಲಕರ ಕರಾವಲಂಬನವನ್ನು ಸ್ವೀಕರಿಸುತ್ತ, ಮುನಿಮುನಿಗಳ ಆಶೀರ್ವಾದವನ್ನು ಪಡೆಯುತ್ತ, ಅತ್ಯಂತ ವೈಭವದಿಂದ ಯುದ್ಧಕ್ಕೆ ಹೊರಟನು. ಬಳಿಕ ಅಗ್ನಿಯು ತಗರನ್ನೂ, ಯಮನು ಕೋಣನನ್ನೂ, ನಿರೃತಿಯು ಮನುಷ್ಯನನ್ನೂ, ವರುಣನು ಮೊಸಳೆಯನ್ನೂ, ವಾಯುವು ಎರಳೆಯನ್ನೂ, ಕುಬೇರನು ಕುದುರೆಯನ್ನೂ, ಈಶಾನನು ವೃಷಭನನ್ನೂ, ಹತ್ತಿಕೊಳ್ಳಲು, ಉಳಿದ ಸುರನಿಲೇಶಗರುಡಗಂಧರ್ವಕಿನ್ನರಕಿಂಪುರುಷಾದಿಗಳೆಲ್ಲ ತಮ್ಮ ತಮ್ಮ ವಾಹನವನ್ನೇರಿ ಸಡಗರದಿಂದ ದೇವೇಂದ್ರನ ಎರಡು ಪಕ್ಕಗಳಲ್ಲೂ ಹೊರಟರು. ಆ ದೇವಸೇನೆಯಲ್ಲಿ ಪೈಷ್ಟಾಸ್ತರಣಗಳನ್ನು ಹೊದ್ದಿಸಿ ಗಂಟೆಗಳನ್ನು ಜೋಲುಬಿಟ್ಟು ಮೇಲೆ ಧ್ವಜವನ್ನು ಎತ್ತಿ ಹಿಡಿದು ಮುಖದ ಮೇಲೂ ಕಿವಿಯಮೇಲೂ ಚಿತ್ರಲೇಖೆಯನ್ನು ಬರೆದು ಕಿವಿಗಳಿಗೆ ಶ್ವೇತ

ಚಾಮರಗಳನ್ನು ಇಳಿಯಬಿಟ್ಟು ಅಲಂಕರಿಸಿದ ಆನೆಗಳು ಮದದಿಂದ ತೂಗಾಡುತ್ತ ಕಿವಿಯನ್ನು ರಪ್ಪಾಡಿಸುತ್ತ ಸೊಂಡಿಲನ್ನು ಒಲೆಯುತ್ತ ಹೋಗುತ್ತಿದ್ದುವು. ಕಡಿವಣವನ್ನೂ ಮೊಗರಂಬವನ್ನೂ ಹಾಕಿ ಸಬರವನ್ನಿಟ್ಟು ವಾಘೆಗಳಿಂದ ಸೆಳೆಯಲ್ಪಡುತ್ತಿರುವ ಕುದುರೆಗಳು ಚಪಲತರಗಳಾಗಿ ತಲೆಯನ್ನು ಕುಲುಕುತ್ತ ನಿಂತಲ್ಲಿ ನಿಲ್ಲದೆ ಗೊರಸಿನಿಂದ ಭೂಮಿಯನ್ನು ಕೆರೆಯುತ್ತ ನೊರೆಯನ್ನು ಸುರಿಸಿ ಕೆನೆಯುತ್ತ ನಡೆಯುತ್ತಿದ್ದುವು. ಒಳಗೆ ಬಾಣಗಳನ್ನು ತುಂಬಿ ಮೇಲೆ ಕಲಶವನ್ನು ಇಟ್ಟು ಭಂಗಾರದ ಮುಲಾಮುಮಾಡಿ ದಿವ್ಯಾಶ್ವಗಳನ್ನು ಹೂಡಿರುವ ರಥಗಳು ಚೀತ್ಕಾರವನ್ನು ಮಾಡುತ್ತ ಸಾರಥಿಯು ನಡಿಸಿದ ಕಡೆಗೆ ಹರಿಯುತ್ತಿದ್ದುವು. ಭುಜಕೀರೀಟವನ್ನೂ ಲೋಹಕವಚವನ್ನೂ ತೊಟ್ಟು ತಲೆಗೆ ಟೊಪ್ಪಿಗೆಯನ್ನಿಟ್ಟು ಕೈಯಲ್ಲಿ ಬಿಲ್ಲು ಬಾಣ ಕತ್ತಿ ಗದೆ ಮೊದಲಾದ ಆಯುಧಗಳನ್ನು ಹಿಡಿದು ವೀರನಾದವನ್ನು ಮಾಡುತ್ತಲಿರುವ ಕಾಲಾಳುಗಳ ಸಾಲುಗಳು ಹೋಗುತ್ತಿದ್ದುವು. ಹೀಗೆ ಅಮರಾವತಿಯಿಂದ ಹೊರಟ ಸಕಲ ಸೇನೆಯೊಡನೆಯೂ ದೇವೇಂದ್ರನು ಸಾಗಿ ಪಟ್ಟಣದ ಹೊರಬಾಗಿಲಿನ ಮುಂದಣ ಬೈಲಿನಲ್ಲಿ ಸೇನೆಯನ್ನೆಲ್ಲ ನಿಲ್ಲಿಸಿ, ವಿಸ್ತಾರವಾಗಿ ಸುತ್ತಲೂ ಸನ್ನದ್ಧವಾಗಿ ನಿಂತಿರುವ ಆ ದೊಡ್ಡದೇವಸೇನೆಯನ್ನು ನೋಡಿ ಅಚ್ಚರಿಗೊಂಡು, ಇಂಥ ಮಹಾಸೇನೆಯ ಇದಿರಿಗೆ ನಿಂತು ಕಾದುವ ಶೂರನು ಯಾರಿರುವನು? ಎಂದು ಉಬ್ಬುಗೊಳ್ಳುತ್ತ ಸೇನೆಯನ್ನು ಮುಂದಕ್ಕೆ ಸಾಗಿಸಿದನು ಎಂಬಲ್ಲಿಗೆ ಹನ್ನೆರಡನೇ ಅಧ್ಯಾಯವು ಸಂಪೂರ್ಣವು.

---

## ೧೩ ನೇ ಅಧ್ಯಾಯವು.

### ಜಲಂಧರನಿಂದ ದೇವೇಂದ್ರನಪಜಯು.

ಬಳಿಕ ಚೆನ್ನಬಸವೇಶನು ಸಿದ್ಧರಾಮೇಶನನ್ನು ಕುರಿತು ಮುಂದಣ ಸಂಗತಿಯನ್ನು ಹೇಳತೊಡಗಿದನೆಂತೆಂದರೆ— ದೇವೇಂದ್ರನು ಮುಂದು ಮುಂದೆ ತನ್ನ ಸೇನೆಯನ್ನು ನಡಿಸಿಕೊಂಡು ಹೋಗುತ್ತಿರುವಲ್ಲಿ ಇದಿರಿಗೆ ಜಲಂಧರಾಸುರನ ಮಹಾಸೇನೆಯು ಅತ್ಯದ್ಭುತವನ್ನು ಸೂಸುತ್ತ, ಅಗ

ಣಿತಯುಮಸ್ತೋಮದಂತೆಯೂ, ಮೃತ್ಯುವಿನ ಸೈನ್ಯದಂತೆಯೂ, ಪರಶಿವನ ಫಾಲನೇತ್ರಜ್ವಾಲೆಯಂತೆಯೂ, ಕಾಲಭೈರವನ ಪಡೆಯಂತೆಯೂ, ಸಿಡಿಲಗುಂಪಿನಂತೆಯೂ ಭಯಂಕರವಾಗಿ ಬರುತ್ತಿದ್ದಿತು. ರಾಕ್ಷಸಸೈನ್ಯವೂ ದೇವಸೈನ್ಯವೂ ಒಂದನ್ನೊಂದು ನೋಡಿದುವು. ಎರಡು ಕಡೆಯ ವಾದ್ಯಗಳೂ ಜಗದ್ಭಾಂಡವೇ ಒಡೆದುಹೋಗುವವುಟ್ಟಗೆ ಭೋರೆಂದು ಮಹಾಶಬ್ದ ಮಾಡಿದುವು. ಶೂರಭಟರುಗಳು ಸಿಂಹನಾದವನ್ನು ಮಾಡಿ ತೋಳ್ತೊಡೆಗಳನ್ನು ತಟ್ಟಿದರು. ಆನೆಕುದುರೆಗಳು ವಿಜೃಂಭಿಸಿ ಮುಂದೆ ಸರಿದುವು. ಧನುರ್ಧಾರಿಗಳು ಬಿಲ್ಲಿಗೆ ಸಿಂಜಿನಿಯನ್ನು ಹವಣಿಸಿ, ಧ್ವನಿಗೈದರು. ತೇರಿನಮೇಲಿನ ಧ್ವಜಪಟಗಳ ಕಟ್ಟು ಬಿಚ್ಚಲ್ಪಟ್ಟು ಗಾಳಿಗೆ ಬೀಸುತ್ತ ಪರಬಲವನ್ನು ಕೈ ಬೀಸಿ ಕರೆಯುವಂತೆ ತೋರುತ್ತಿದ್ದುವು. ಎರಡುಬಲವೂ ಒಂದನ್ನೊಂದು ಸಂಧಿಸುತ್ತ ಬಂದುವು. ಗಗನಮಂಡಲವನ್ನೆಲ್ಲ ಧೂಳಿಯು ಕವಿದುಕೊಂಡಿತು. ದಿಙ್ಮಂಡಲವನ್ನೆಲ್ಲ ಶಬ್ದವು ಆವರಿಸಿಕೊಂಡಿತು. ಪ್ರತಾಪಾಗ್ನಿಯ ಔಷ್ಣ್ಯವು ಅವರ ದೇಹರಕ್ತವನ್ನೂ ಅವರ ಆರುಣ್ಯವು ಕಣ್ಣುಗಳನ್ನೂ ಆಕ್ರಮಿಸಿಕೊಂಡಿತು. ಯುದ್ಧಭೇರಿಯು ಮಹಾಘೋಷವನ್ನೆಸಗಲು ಸೈನಿಕರೆಲ್ಲರೂ ದೇಹಾಭಿಮಾನವನ್ನು ಮರೆತರು. ಮೊದಲು ಉಭಯ ಸೈನ್ಯಗಳ ಮುಂಗಡೆಯು ಒಂದನ್ನೊಂದು ದುರುದುರನೆ ನೋಡುತ್ತ ಕಾದಾಡಹತ್ತಿದುವು. ಮುಂಗಡೆಯಲ್ಲಿದ್ದವರು ಅಬ್ಬರಿಸಿ ಕತ್ತಿ ಈಟಿ ಭಲ್ಲೆ ಕೊಡಲಿ ಗದೆ ಮೊದಲಾದುವುಗಳಿಂದ ಒಬ್ಬರನ್ನೊಬ್ಬರು ಕತ್ತರಿಸಿ, ತಿವಿದು, ಇರಿದು, ಕೊಚ್ಚಿ, ಬಡಿದು, ತುಳಿದು, ಕೊರೆದು, ಪ್ರತಿಬಲವನ್ನು ಧ್ವಂಸ ಮಾಡುತ್ತ ಬಂದರು. ಪರಸ್ಪರವಾಗಿ ಹೀಯಾಳಿಸುತ್ತಲೂ, ಕಡಿ, ಸಿಡಿ, ಜಡಿ, ಹಿಡಿ, ಮಿಡಿ, ಮಡಿ, ಉಡಿ, ಇಟಿ, ಕುಟಿ, ಬಡಿ, ಹೊಡೆ, ತಡೆ, ನಡೆ, ಕಡೆ, ಇರಿ, ಮುರಿ, ಸರಿ, ತರಿ, ಕೊಚ್ಚು, ಎಚ್ಚು, ಬಿಚ್ಚು, ಕಚ್ಚು, ಚುಚ್ಚು, ಉಗಿ, ಬಗಿ, ಬಿಗಿ, ಸುಗಿ, ಚಿಗಿ, ನೆಗೆ, ತೆಗೆ, ತಾಗು, ಬಾಗು, ಕೂಗು, ಬೀಗು, ನೂಕು, ತಾಕು, ಪೌಕು, ಇರುಕು, ತುರುಕು, ತೊಡಕು, ಅಡಕು, ಕುಲುಕು, ಬೆದಕು, ಇಕ್ಕು, ಒಕ್ಕು, ಕುಕ್ಕು, ಎಕ್ಕು, ಎಂದು ಮೊದಲಾಗಿ ಒಬ್ಬರಿಗೊಬ್ಬರು ಹೇಳಿ ಪ್ರೋ

ತ್ಸಾಹಿಸುತ್ತ, ಆಯುಧಗಳಿಂದ ಬಡಿದು ಹೋರಾಡುತ್ತಿದ್ದರು. ಎರಡು
ಕಡೆಯ ಶೂರಭಟರುಗಳೂ ಕತ್ತಿಯಿಂದ ಕತ್ತರಿಸಿ, ಬರ್ಚಿಯಿಂದ ತಿವಿದು,
ಈಟಿಯಿಂದಿರಿದು, ಕುಂತದಿಂದ ಬಡಿದು, ಗದೆಯಿಂದ ಹೊಡೆದು, ಕತ್ತ
ನ್ನು ಕೊರೆದು, ತೊಡೆಯನ್ನು ಮುರಿದು, ಹೊಟ್ಟೆಯನ್ನು ಬಗಿದು,
ಕರುಳನ್ನು ಸೆಳೆದು, ರಕ್ತವನ್ನೂ ಮಾಂಸವನ್ನೂ ಭೂತಗಣಕ್ಕುಣಿಸಿ,
ವೀರಾವೇಶದಿಂದ ಬೊಬ್ಬಿರಿಯುತ್ತ, ಮೂದಲಿಸಿದವರನ್ನು ಹಾರಿ ತಲೆ
ಮೆಟ್ಟಿ ಕೆಡಹಿ ಎದೆಯಮೇಲೆ ಕಾಲಿಟ್ಟು ಹಂಗಿಸಿ, ಯಮಲೋಕಕ್ಕೆ ಕಳಿ
ಸುತ್ತ, ಪ್ರಚಂಡಪರಾಕ್ರಮದಿಂದ ಕಾದಾಡುತ್ತಿದ್ದರು. ರಾವುತರು ವಾ
ಜಿಗಳನ್ನು ಸಡಿಲಬಿಟ್ಟು ಕುದುರೆಗಳನ್ನು ಚಿಮ್ಮಿಸಿ ಭರ್ಚಿಗಳಿಂದ ತಿವಿ
ದಾಡಿ ಕೆಡಹಿ ಯುದ್ಧಭೂಮಿಗಳನ್ನು ರಕ್ತಜಲದಿಂದಭಿಷೇಕಿಸಿದರು.
ಮಾವುತರು ಅಂಕುಶವನ್ನಿಕ್ಕಿ ಆನೆಗಳನ್ನು ಮುಂದಕ್ಕೆ ಸರಿಸಿ ಇದಿರಾನೆ
ಗಳನ್ನು ಬೆತ್ತರಿಸಿ, ಕೊಂಬುಗಳಿಂದ ಚುಚ್ಚಿಸಿ ಕಾಲಿಗೆ ಸಿಕ್ಕಿದವರನ್ನು
ಹೊಸಗಿ ಸಾಯಿಸಿ, ಸೊಂಡಿಲಿಗೆ ಸಿಕ್ಕಿದವರನ್ನು ಸೆಳೆದು ಮೇಲಕ್ಕೆಸೆ
ಯಿಸಿ, ಕೊಲ್ಲಿಸುತ್ತಿದ್ದರು. ರಥಿಕರು ಮುಂದಕ್ಕೆ ರಥಗಳನ್ನು ಸಾರಥಿ
ಗಳಿಂದ ನೂಗಿಸಿ, ಪುಂಖಾನುಪುಂಖವಾಗಿ ಬಾಣಾವಳಿಗಳನ್ನು ಬಿಡುತ್ತ
ಸರಳಮಳೆಯಿಂದಲೇ ಇದಿರುಬಲವನ್ನೆಲ್ಲ ಮುಚ್ಚಿ ವೀರನಾದವನ್ನು
ಮಾಡುತಲಿದ್ದರು. ಆನೆಗೆ ಆನೆ, ಕುದುರೆಗೆ ಕುದುರೆ, ಕಾಲಾಳಿಗೆ ಕಾ
ಲಾಳು, ರಥಿಕರಿಗೆ ರಥಿಕರು, ಇದಿರಾಗಿ ಮಹಾಪರಾಕ್ರಮದಿಂದ ಕಾದು
ತ್ತಿರಲು, ಆಯುಧತಾಡನಗಳ ಶಬ್ದವು ಘಳಿಘಳಿಲ್ಲೆಂದು ಕಿವಿಯ
ನ್ನು ಕಿವುಡುಮಾಡುತ್ತಿದ್ದವು. ಅಂತರಿಕ್ಷಕ್ಕೆ ಹಾರಿಹಾರಿಬೀಳುತ್ತಿ
ದ್ದ ತಲೆಬುರುಡೆಗಳೂ ಚಿಮ್ಮುತ್ತಿದ್ದ ರಕ್ತಧಾರೆಯೂ ಪ್ರತಿಕ್ಷಣದಲ್ಲೂ
ಹೆಚ್ಚುಹೆಚ್ಚಾಗುತ್ತಿದ್ದವು. ದೇವಬಲವು ಮುಂದಕ್ಕಿಟ್ಟ ಹೆಜ್ಜೆಯ
ನ್ನು ಹಿಂದೆಗೆಯದೆಯೂ, ಹಿಂದೆಗೆದವರನ್ನು ಜರೆದು ಬೈದು ಉಬ್ಬಿಸುತ್ತ
ಲೂ, ಕೆಳಗೆ ಬಿದ್ದವರನ್ನು ಸರಕುಗೊಳ್ಳದೆ ತುಳಿದು ಮುಂದರಿಯುತ್ತ
ಲೂ, ಇದಿರಾದವರನ್ನು ಮೋರೆ ನೋಡದೆ ಬಡಿದು ಸೆಳೆದು ತುಳಿದು ನು
ಗ್ಗುತ್ತಲೂ, ಕ್ಷಣೆ ಕ್ಷಣೆ ಹುಂಕರಿಸಿ ಶೌರ್ಯವನ್ನು ಹೆಚ್ಚಿಸುತ್ತಲೂ,
ಕಡಿದು ಸೀಳಿ ಪರಸೈನ್ಯದ ಚೂಣಿಯವರನ್ನು ಮುಖತಿರುಗುವಂತೆ ಮಾ

ಡ್ಡಿ ಓಡಿಸಿದರು. ಎತ್ತ ನೋಡಿದರೂ, ಹೆಣಗಳ ರಾಶಿ, ಎತ್ತ ನೋಡಿದರೂ ಕರುಳುಗಳ ಮಾಲೆ, ಎತ್ತ ನೋಡಿದರೂ ರಕ್ತದ ಕಾಲಿವೆ. ಎಲ್ಲಿ ನೋಡಿದರೂ ಮುರಿದಾಯುಧಗಳ ಗುಡ್ಡೆ, ಎಲ್ಲಿ ನೋಡಿದರೂ ಸೊಂಡಿಲು ಮುರಿದು ತೊಡೆಯು ಕಡಿದು ಬಿದ್ದು ಕಿರುಚುತ್ತಿರುವ ಆನೆಗಳು ಎತ್ತ ನೋಡಿದರೂ ರಕ್ತವನ್ನು ಕಾರುತ್ತ ಕುಂಟುತ್ತ ಒದ್ದಾಡುತ್ತಲಿರುವ ಕುದುರೆಗಳು, ಎಲ್ಲಿ ನೋಡಿದರೂ ಅಚ್ಚು ಮುರಿದು ನುಚ್ಚುನೂರಾಗಿ ಒಟ್ಟಿಲಾಗಿರುವ ತೇರುಗಳು ಕಾಣುತ್ತ ರಣಾಂಗಣವು ಬಹು ಭಯಂಕರವಾಗಿದ್ದಿತು. ಅಷ್ಟರಲ್ಲಿ ದೈತ್ಯಬಲವು ದೇವತೆಗಳ ಪೆಟ್ಟನ್ನು ತಾಳಲಾರದೆ ಧೈರ್ಯಗುಂದಿ ಹಿಂತಿರುಗಿ ಓಡುತ್ತಿರುವುದನ್ನು ರಾಕ್ಷಸದಳಪತಿಯಾಗಿದ್ದ ಶುಂಭಾಸುರನು ನೋಡಿ, ಬಹು ಕೋಪಾಟೋಪದಿಂದ ಕಣ್ಣಿನಲ್ಲಿ ಕೆಂಡವನ್ನು ಕರೆಯುತ್ತ ಹುಬ್ಬುಗಂಟಿಕ್ಕಿ ಆರ್ಭಟಿಸಿ ಕೈಕತ್ತಿಯನ್ನು ಝಳಪಿಸಿ, ಮೊರೆದು ಭೂಮಿಯು ಝಾಡಿಸಿ ತುಳಿದು, ತನ್ನ ಬಲವನ್ನೆಲ್ಲ ಕೈಬೀಸಿ ಮುಂದಕ್ಕೆ ದೇವತೆಗಳಮೇಲೆ ಸಾಗಿಸಿದನು. ಮತ್ತು — ಎಲೆ ಜಂಭಾಸುರನೇ! ನಡೆ, ಎಲೆ ನಿಶುಂಭನೇ ಸೇನೆಯನ್ನು ನಡಿಸು, ಚಂಡನೆ ಮುಂದಕ್ಕೆ ಸಾಗು, ಖಡ್ಗರೋಮನೇ ಪರಸೇನೆಯನ್ನು ಹಿಡಿ, ವಾಮನನೇ ನಿನ್ನ ಶೌರ್ಯವನ್ನು ತೋರಿಸು, ಲೋಮಾಸುರನೇ ನಿನ್ನ ಶಕ್ತಿಯೇನಾಯಿತು? ವಿರೂಪಾಕ್ಷನೇ ನಿನ್ನ ಕೈತೋರಿಸು, ದೀರ್ಘಬಾಹುವೇ ಏನು ಅಳುಕುತ್ತ ಸುಮ್ಮನಿರುವೆ? ಮಹಿಷಾಸುರನೇ ಅದೇಕೆ ನಿಂತಿರುವೆ? ಕಾಲನೇಮಿಯೆ ತಡವೇಕೆ? ಎಲೈ ರಾಕ್ಷಸಭಟಸ್ತೋಮವೇ ನಿಮ್ಮ ಶೌರ್ಯಧೈರ್ಯಸಾಮರ್ಥ್ಯಾದಿಗಳೆಲ್ಲ ಎಲ್ಲಿ ಹೋದುವು? ಎಂದು ಮೊದಲಾಗಿ ಹೀಯಾಳಿಸಿ ಉಬ್ಬಿಸಿ ದೇವತೆಗಳಮೇಲೆ ಸಾಗಿಸಿದನು. ರಾಕ್ಷಸನ ಚತುರಂಗಸೈನ್ಯವೂ ಘಟಾಪಟಾಟೋಪದಿಂದ ಮುರಿದೆದ್ದು ತೋಳ್ಗಳನ್ನು ತಟ್ಟಿ ಆರ್ಭಟಿಸಿ ಮೀಸೆಗಳನ್ನು ಹುರಿಮಾಡಿ ಕೈಕತ್ತಿಗಳನ್ನು ಝಳಪಿಸಿ ತಮ್ಮತಮ್ಮ ವಾಹನಗಳನ್ನು ಹತ್ತಿ ಅರಣ್ಯವನ್ನು ಮುತ್ತಿದ ಕಾಳ್ಗಿಚ್ಚಿನಂತೆ ದೇವವಾಹಿನಿಯಮೇಲೆ ಬಿದ್ದಿತು. ಈ ಅಬ್ಬರವನ್ನು ಕೇಳಿದಕೂಡಲೇ ದೇವೇಂದ್ರನು ಆರ್ಭಟಿಸಿ, ತನ್ನ ಸುತ್ತಲಿನ ದೇವಶ್ರೇಷ್ಠರನ್ನೆಲ್ಲ ಕೈಬೀಸಿ ಕರೆದು ಉತ್ಸಾಹಗೊಳಿಸಿ ದೈತ್ಯರ

ಮೇಲೆ ನೂಗಿಸಿದನು. ಸಕಲ ದಿಕ್ಪಾಲಕರೂ ತಮ್ಮ ತಮ್ಮ ಸೇನೆಯೊಡನೆ ಅತಿರಭಸದಿಂದ ರಾಕ್ಷಸರ ಮೇಲೆ ಬಿದ್ದರು. ಆಗ ಎರಡು ದಳಗಳಲ್ಲೂ ಶುಂಭಾಸುರನು ದೇವೇಂದ್ರನನ್ನೂ, ನಿಶುಂಭನು ಅಗ್ನಿಯನ್ನೂ, ವಾಮನನು ಯಮನನ್ನೂ, ಮಧಿರನು ನಿಋತಿಯನ್ನೂ, ದೀರ್ಘಬಾಹುವು ವರುಣನನ್ನೂ, ಖಡ್ಗರೋಮನು ವಾಯುವನ್ನೂ, ಪ್ರಚಂಡನು ಕುಬೇರನನ್ನೂ, ಚಂಡನು ಈಶಾನನನ್ನೂ ಇದಿರಾಗಿ ಮೂದಲಿಸಿ ಪರಸ್ಪರವಾಗಿ ಬಾಣದ ಮಳೆಯನ್ನು ಕರೆಯುತ್ತಿದ್ದರು. ರಣಾಂಗಣವನ್ನೆಲ್ಲ ಈ ಬಾಣಗಳು ಕವಿಯಲು, ಭೂಮ್ಯಂತರಿಕ್ಷಗಳೊಂದೂ ಕಾಣದಂತಾದುವು. ರಿಪುಗಳು ಮಾಡುವ ಬಾಣಪ್ರಯೋಗಕೌಶಲ್ಯಕ್ಕೆ ಮನಸ್ಸಿನಲ್ಲಿ ಮೆಚ್ಚುತ್ತ ಅದಕ್ಕಿಮ್ಮಡಿಯಾದ ಕರಚಮತ್ಕಾರದಿಂದ ತೀಕ್ಷ್ಣವಾದ ಬಾಣಗಳನ್ನು ಹೂಡಿ ಪ್ರತಿಬಾಣವನ್ನು ಮಧ್ಯದಲ್ಲೇ ಖಂಡಿಸಿ ರಿಪುವಿನ ಎದೆಯನ್ನು ಭೇದಿಸುತ್ತಲೂ, ಕಣ್ಣುಗಳನ್ನು ಕೆಂಪಗೆಮಾಡಿ ಹುಬ್ಬು ಗಂಟಿಕ್ಕಿ ಮೂದಲಿಸಿ, ಪ್ರತಿಬಲವನ್ನು ಬಾಣಾಹತಿಯಿಂದ ಭೂಮಿಗುರುಳಿಸಿ, ಭೂತಬೇತಾಳಗಳಿಗೆ ಅವರ ರಕ್ತಮಾಂಸಗಳನ್ನು ಔತಣ ಮಾಡಿಸುತ್ತಲೂ, ರಥವು ಮುರಿದುಹೋದರೆ ಭೂಮಿಗಿಳಿದು ಕತ್ತಿಯಿಂದಲೂ ಗದೆಯಿಂದಲೂ ಕುಂತಾಯುಧದಿಂದಲೂ ಹೋರಾಡುತ್ತಲೂ, ಓರ್ವರನ್ನೋರ್ವರು ಜರೆದು ಮುಸೆದು ಮೇಲೆ ಬಿದ್ದು ಹೊಡೆದು ಕೆಡಹಿ ಮೆಟ್ಟಿ ಕೊಲ್ಲುತ್ತಲೂ ಉಭಯಪಕ್ಷದವರೂ ಭಯಂಕರವಾಗಿ ಯುದ್ಧಮಾಡಿದರು. ಈರೀತಿಯಲ್ಲಿ ಘನಸಂಗ್ರಾಮವೆಸಗಿರುತ್ತಿರಲು ಕಡೆಕಡೆಗೆ ರಾಕ್ಷಸಭಟರುಗಳ ಪ್ರಹಾರಗಳು ಮಿತಿಮೀರುತ್ತ ಬಂದುವು. ರಣಾಂಗಣದ ಭೀಕರರೂಪನ್ನು ನೋಡುತ್ತ, ರಾಕ್ಷಸರು ವೀರಾವೇಶಪರವಶರಾದರು. ಅವರ ಏಟುಗಳ ಮುಂದೆ ದಿಕ್ಪಾಲಕರ ಸೈನ್ಯವು ಎದೆಗೊಟ್ಟು ನಿಲ್ಲಲಾರದೆ ಹೋಯಿತು. ದೇವೇಂದ್ರನು ಪಲಾಯನಸೂಕ್ತವನ್ನೋದಿದನು. ಅಗ್ನಿಯು ಕಾಲಿಗೆ ಬುದ್ಧಿಹೇಳಿದನು. ಯಮನು ಶತ್ರುಗಳಿಗೆ ಬೆನ್ನು ತೋರಿಸಿದನು. ನಿಋತಿಯು ನಗರಾಭಿಮುಖನಾದನು. ವರುಣನು ವಿಶ್ರಾಂತಿಯನ್ನಪೇಕ್ಷಿಸಿದನು. ವಾಯುವಿಗೆ ಶೈತ್ಯೋಪಚಾರಬೇಕಾಯಿತು. ಕುಬೇರನು ಚಿಕಿತ್ಸೆ ಮಾಡಿಸಿಕೊಳ್ಳುವುದಕ್ಕೆ ಹೋದನು. ಈಶಾನನು ಶಕ್ತಿಗುಂದಿ

ರಥದಲ್ಲಿ ಮಲಗಿದನು. ಹೀಗೆ ದೇವನಾಯಕರೆಲ್ಲರೂ ಹಿಮ್ಮೆಟ್ಟಿ ಓಡಿ ಹೋಗುತ್ತಿರಲು, ಅವರ ಚತುರಂಗಬಲವೂ ಅವರನ್ನೇ ಹಿಂಬಾಲಿಸಿತು. ಬಿರುಗಾಳಿಯು ಸಣ್ಣ ಕಸ ಕಡ್ಡಿಯನ್ನೆಲ್ಲ ಬಡಿದೋಡಿಸಿಕೊಂಡುಹೋಗುವಂತೆ ಅವರ ಹಿಂದಿನಿಂದ ರಾಕ್ಷಸಸೇನೆಯು ಜಡಿದು ಬಡಿದು ಓಡಿಸಿಕೊಂಡು ಹೋಗುತ್ತಿದ್ದಿತು. ದಿಕ್ಕುಗೆಟ್ಟು ದೇವತೆಗಳೋಡುತ್ತಿರುವುದನ್ನು ನೋಡಿ ರಾಕ್ಷಸರು ಕೇಕೆಹಾಕುತ್ತಲೂ, ಜರೆಯುತ್ತಲೂ, ಬೈಯುತ್ತಲೂ, ಕೈಗೆ ಸಿಕ್ಕಿದವರನ್ನು ಗುದ್ದಿ ತುಳಿದುಕೊಲ್ಲುತ್ತಲೂ, ಅವರ ಆನೆ ಕುದುರೆ ರಥಗಳಮೇಲೆ ಕುಳಿತು ಬೊಬ್ಬಿರಿಯುತ್ತಲೂ, ರಕ್ತವನ್ನು ಹೀರಿ ಚಪ್ಪರಿಸುತ್ತಲೂ ಯಥೇಚ್ಛವಾಗಿ ರಣಾಂಗಣದಲ್ಲಿ ವಿಹರಿಸುತ್ತಿದ್ದರು. ದಿಕ್ಕುಗೆಟ್ಟು ಓಡುತ್ತ ಕೈಗೆ ಸಿಕ್ಕಿದವರನ್ನು ತರಿಯುವುದಕ್ಕಾಗಿ ರಾಕ್ಷಸರು ಕೈಕತ್ತಿಯನ್ನೆತ್ತಿದರೆ ದೇವತೆಗಳು ಆ ಕತ್ತಿಯ ಕಡೆಗೇ ಕಣ್ಣನ್ನು ತಿರುಗಿಸಿ ದೈನ್ಯದಿಂದ ಹಲ್ಗಿರಿಯುತ್ತಲೂ, ಕೈಗಳನ್ನು ಚಾಚಿ ಕೊಲ್ಲಬೇಡಿರೆಂದು ಬೇಡಿ ಕಾಲ್ಗೆ ಬೀಳುತ್ತಲೂ, ಬಾಯಲ್ಲಿ ಹುಲ್ಲನ್ನು ಕಚ್ಚಿ ನಮ್ಮ ತಲೆಯನ್ನುಳಿಸಿ ಕಾಪಾಡಯ್ಯಾ! ನಿನ್ನ ಮನೆಯಾಳಾಗಿರುತ್ತೇವೆಂದು ಕೇಳಿಕೊಳ್ಳುತ್ತಲೂ, ತಲೆಯನ್ನುಳುಹಿಕೊಂಡು, ಸತ್ತು ಬಿದ್ದಿರುವ ಆನೆ ಕುದುರೆಗಳ ಮರೆಯಲ್ಲಿ ಅವಿತಿದ್ದು ಓಡಿಹೋಗುತ್ತಿದ್ದರು. ದೇವತೆಗಳ ಕಳೆದುಳಿದ ಚತುರಂಗಸೈನ್ಯವು ಒಂದರಮೇಲೊಂದು ಬಿದ್ದು ಕೈಕಾಲನ್ನುಮುರಿದುಕೊಂಡು ರಕ್ತವನ್ನು ಸುರಿಸುತ್ತ ಓಡಿಬಂದು ಅಮರಾವತಿಯ ಕಂದಕವನ್ನು ಬಂದು ಸೇರಿತು. ಕಿರಿದಾದ ಪಟ್ಟಣದ ಬಾಗಿಲಲ್ಲಿ ನಾನು ಮುಂದು ತಾನು ಮುಂದೆಂದು ಪಟ್ಟಣವನ್ನು ಹೊಕ್ಕಿಕೊಳ್ಳುವ ರಭಸದಲ್ಲಿ ಎಷ್ಟೋ ಮಂದಿಗಳು ಆನೆ ಕುದುರೆ ರಥಗಳಗೆ ಸಿಕ್ಕಿ ಅಂಗವಿಕಲರಾಗಿ ಅನೇಕರು ಪ್ರಾಣ ಕೊಟ್ಟರು. ಉಪ್ಪರಿಗಳಮೇಲೆ ಹೆಂಗುಸರು ನಿಂತು ನೋಡುತ್ತಿರಲು ಕೆಳಗಿನಿಂದ ಅವರಿಗೆ ಕೈಮುಗಿದು ದಯೆಯಿಟ್ಟು ಬೇಗನೆ ನಮ್ಮನ್ನು ಮೇಲಕ್ಕೆ ಸೇದಿಕೊಳ್ಳಿರೆಂದು ಕೆಲವರು ಬೇಡಿಕೊಳ್ಳುತ್ತಿದ್ದರು. ಇಷ್ಟರಲ್ಲಿ ರಾಕ್ಷಸಸೇನೆಯು ಅಮರಾವತಿಯ ಬಾಗಿಲಿಗೆ ಓಡಿಸಿಕೊಂಡುಬಂದಿತು. ಕಾವಲುಗಾರರು ಥಟ್ಟನೆ ಕೋಟೆಯಬಾಗಿಲನ್ನು ಮುಚ್ಚಿ ಬಂಧಿಸಿದರು. ಆಗ ರಾಕ್ಷಸ

ನ ಸೈನಿಕರು ಹೊರಗಿದ್ದವರ ಮೇಲೆ ಬಿದ್ದು ಎರಡೆರಡು ಹೋಳಾಗಿ ಸೀಳು, ಶುಂಭಾಸುರನ ಅಪ್ಪಣೆಯಮೇರೆ ಆಳ್ವೇರಿಯನ್ನು ಹತ್ತಲನುವಾದರು. ಕೋಟೆಯ ಮೇಲೆ ದಿಕ್ಪಾಲಕರು ನಿಂತು ಕೆಳಗಿನಿಂದೇರಿಬರುವ ರಾಕ್ಷಸರಮೇಲೆ ಬಾಣವರ್ಷವನ್ನು ಕರೆಯುತ್ತಿದ್ದರು. ಅವರೇಟಿಗೆ ರಾಕ್ಷಸರು ಉರುಳುರುಳಿ ಅಗಳನೊಳಗೆ ಬೀಳುತ್ತಿದ್ದರು. ಆಗ ಶುಂಭನು ತನ್ನ ಸೈನಿಕರನ್ನು ಜರೆದು ಹೀಯಾಳಿಸಲು, ಕಡುಭಟರುಗಳು ಬಾಣಹತಿಗೆ ಹೆದರದೆ ಬಿದ್ದವರನ್ನೇ ಒಟ್ಟಿ ಮೆಟ್ಟಿಲನ್ನು ಮಾಡಿ ಕೋಟೆಗಳನ್ನೇರಿ ಮೇಲಿದ್ದ ದೇವತೆಗಳ ತಂಡವನ್ನೆಲ್ಲ ತರಿದು ತರುಬಿ ಅಬ್ಬರಿಸಿ ಮಹಾಭೇರೀರವವನ್ನು ಮಾಡಿದರು. ಈ ಧ್ವನಿಯನ್ನು ಕೇಳಿ ಪ್ರತಿಗೃಹದಲ್ಲೂ ಹೆಂಗುಸರು ಬಾಗಿಲುಗಳನ್ನು ಮುಚ್ಚಿ ಒಳಗೆ ಅಡಗಿಕೊಂಡು ಕಣ್ಬಾಯಿಬ್ಬಿಡುತ್ತ ಬೆರಲುಗಳನ್ನು ನಟಿಕೆಗೊಳ್ಳುತ್ತ, ವಸ್ತ್ರಾಭರಣಾದಿಗಳನ್ನು ಮುಚ್ಚಿಡುತ್ತ, ಕಳವಳಿಸುತ್ತಿದ್ದರು. ಇನ್ನು ಕೆಲವರು “ರಾಕ್ಷಸರು ತಮ್ಮ ವಸ್ತುಗಳನ್ನು ಕೊಟ್ಟುಬಿಡಿರೆಂದು ನ್ಯಾಯವಾಗಿ ಹೇಳಿಕಳಿಸಿದ್ದರೆ ಈ ಪಾಪಿ ದೇವೇಂದ್ರನು ಕೊಟ್ಟುಬಿಡಲಾರದೆ ನಮ್ಮನ್ನೆಲ್ಲ ಈ ಅವಸ್ಥೆಗೆ ಗುರಿಮಾಡಬಹುದೆ? ಅಯ್ಯೋ! ಕೆಟ್ಟೆವಲ್ಲ!” ಎಂದು ಅಡಿಕೊಳ್ಳುತ್ತಿದ್ದರು. ಅತ್ತ ಒಂದು ಕಡೆ ಬೀದಿಯಲ್ಲಿ ರಾಕ್ಷಸಸ್ತೋಮವು ಕೋಟೆಯನ್ನು ಕೆಡಹುತ್ತಿರುವರೆಂಬುದನ್ನು ಕೇಳಿ ದೇವೇಂದ್ರನು ಕೆರಳಿ ಆಯುಧವನ್ನೆತ್ತಿ ಹೊರಟನು. ದೇವತೆಗಳು ಕಿಡಿಗಣ್ಣಾದರು. ದಿಕ್ಪಾಲಕರೆಲ್ಲರೂ ಮತ್ತೊಂದು ವೇಳೆ ರೋಷಾವೇಶದಿಂದ ಆಯುಧಗಳನ್ನು ಝಳಪಿಸುತ್ತ ರಾಕ್ಷಸಸ್ತೋಮದ ಮೇಲೆ ಬಿದ್ದು ಇರಿದು ಕೊಚ್ಚುತ್ತ ಬಂದರು. ಸಿಕ್ಕಿದವರ ಜುಟ್ಟುಗಳನ್ನು ಹಿಡಿದು ತಿರುವಿ ಕೋಟೆಯಿಂದಾಚೆಗೆ ಬಿಸುಡುತ್ತಿದ್ದರು. ತಲೆಗಳನ್ನು ಒಡೆದು ಹೊಟ್ಟೆಗಳನ್ನು ಬಗಿದು ನಡುಗಳನ್ನು ಮುರಿದು ಎದೆಯನ್ನು ಸೀಳಿ ರಾಕ್ಷಸಸೈನ್ಯವನ್ನು ನಾಶಗೊಳಿಸಿ ಕೋಟೆಯಿಂದ ಎಲ್ಲರನ್ನೂ ಕೆಡಹಿದರು. ಅಷ್ಟರೊಳಗೆ ಸಂಧ್ಯಾಕಾಲವಾಯಿತು. ರಾಕ್ಷಸರು ಕೋಟೆಯ ಸುತ್ತಲೂ ಬೀಡನ್ನು ಬಿಟ್ಟು ಪಟ್ಟಣವನ್ನು ಮುತ್ತಿಗೆ ಹಾಕಿದ್ದರು. ಇತ್ತ ಪಟ್ಟಣದೊಳಗೆ ದೇವೇಂದ್ರನು ಚಿಂತಾಕ್

ಲನಾಗಿ ಸಕಲ ದಿಕ್ಪಾಲಕರೊಡನೆ ಕೂಡಿ ಅರಮನೆಗೆ ಬಂದು ರಹಸ್ಯವಾಗಿ ಕುಳಿತು, ದೇವಗುರುವಾದ ಬೃಹಸ್ಪತ್ಯಾಚಾರ್ಯರೊಡನೆ ಯುದ್ಧದ ಸಂಕಟವನ್ನು ಕುರಿತು ಪ್ರಸ್ತಾಪಿಸಲನುವಾಗಿ " ಈ ನಮ್ಮ ಕೋಟೆಯು ಸಾಮಾನ್ಯವಾದದ್ದಲ್ಲ, ಇದನ್ನು ಕಾಪಾಡಿಕೊಂಡಿರುವ ಭಟರ ಶೌರ್ಯವೂ ಸಾಧಾರಣವಾದದ್ದಲ್ಲ, ನಮ್ಮಲ್ಲಿರತಕ್ಕ ಯುದ್ಧಸಾಮಗ್ರಿಗಳಾದರೂ ಸ್ವಲ್ಪವಾಗಿವೆಯೆ ? ಹೀಗಿದ್ದರೂ ಶತ್ರುಗಳು ನಿಮಿಷಮಾತ್ರದಲ್ಲಿ ನಮ್ಮನ್ನು ಪರಾಭವಗೊಳಿಸಿದರು; ಈ ದಿವಸವೇ ಕೋಟೆಯು ಅವರ ವಶವಾಗದೆ ಉಳಿದಿರುವುದು ಶಿವಕಟಾಕ್ಷವೇ ಹೊರತು ಶೂರರಾದ ಆ ರಾಕ್ಷಸರನ್ನು ಕೊಂದು ನಾವಿದನ್ನು ಉಳಿಸಿಕೊಳ್ಳುವುದು ಸಾಧ್ಯವೆ ? ಇನ್ನು ನಾವು ಈ ಪಟ್ಟಣದಲ್ಲಿರುವುದು ಸರಿಯಲ್ಲ; ಬೆಳಗಾದರೆ ರಾಕ್ಷಸರ ಹಾವಳಿಯನ್ನು ನಾವು ತಾಳಲಾರೆವು; ಇದಕ್ಕೆ ಹೇಗೆ ಮಾಡುವ ? '' ಎಂದನು. ಆಗ ಗುರುವು-ಎಲೈ ದೇವೇಂದ್ರನೇ ! ಬಹಳ ಮಾತನ್ನಾಡಿದೆ. ಇನ್ನು ನಾವಿಲ್ಲಿದ್ದರೆ ರಾಕ್ಷಸರಿಂದ ಗಾಸಿಗೊಳ್ಳುವುದೇ ನಿಜ; ನಾವು ನಮ್ಮ ವಸ್ತುವಾಹನಧನಕನಕಾದಿಗಳಿಗೆ ಅಪೇಕ್ಷೆ ಮಾಡದೆ ಬ್ರಹ್ಮಲೋಕಕ್ಕೆ ಹೊರಟುಹೋಗುವುದೇ ಯೋಗ್ಯವೆಂದು ಹೇಳಲು, ಇಂದ್ರಾದಿದಿಕ್ಪಾಲಕರೆಲ್ಲರೂ ಆ ಕೂಡಲೇ ತಮ್ಮ ರಾಣೀವಾಸದವರೊಡನೆ ಗೂಢದ್ವಾರದಿಂದ ಅಮರಾವತಿಯನ್ನು ಬಿಟ್ಟು ಬ್ರಹ್ಮನ ಸತ್ಯಲೋಕಕ್ಕೆ ಹೋದರು. ಅಲ್ಲಿ ಬ್ರಹ್ಮನು ಇವರೆಲ್ಲರನ್ನೂ ಕಂಡು ಸಂಗತಿಯೇನೆಂಬುದನ್ನು ತಿಳಿದು, ಇದರ ಪರಿಹಾರೋಪಾಯಚಿಂತನೆಗಾಗಿ ವಿಷ್ಣುವಿನಲ್ಲಿಗೆ ಹೋಗುವುದೇ ಸರಿಯೆಂದು ನಿರ್ಧರಿಸಿ, ಎಲ್ಲರೂ ಒಟ್ಟುಗೂಡಿ ವೈಕುಂಠಕ್ಕೆ ಹೋದರು. " ನೀಚ ಜಲಂಧರಾಸುರನು ಅಮರಾವತಿಗೆ ದಂಡೆತ್ತಿ ಬಂದು ಸ್ವರ್ಗಲೋಕವನ್ನು ಸ್ವಾಧೀನಪಡಿಸಿಕೊಂಡುದರಿಂದ ಈ ದಿಕ್ಪಾಲಕರೆಲ್ಲರೂ ದಿಕ್ಕುಗೆಟ್ಟು ನನ್ನ ಬಳಿಗೆ ಬಂದರು. ನಾನು ನಿಮ್ಮ ಬಳಿಗೆ ಕರೆದುಕೊಂಡು ಬಂದೆನು '' ಎಂಬದಾಗಿ ಬ್ರಹ್ಮನು ವಿಷ್ಣುವನ್ನು ಕುರಿತು ಹೇಳಿದನು. ಆಗ ವಿಷ್ಣುವು ಚೆನ್ನಾಗಿ ಯೋಚಿಸಿ, ಬಲಶಾಲಿಯಾದ ಜಲಂಧರನು ಹರನಿಂದಲ್ಲದೆ ಇತರರಿಂದ ಸಾಯುವವನಲ್ಲವೆಂಬುದನ್ನು ತಿಳಿದುಕೊಂಡನಾದರೂ, ದೂರು ಹೇಳಿಕೊಂಡವರನ್ನು ಸುಮ್ಮನೆ ಕಳಿಸಿಬಿಡುವುದು

ಯೋಗ್ಯವಲ್ಲವೆಂದರಿತು ಯುದ್ಧಕ್ಕೆ ತಕ್ಕ ಸನ್ನಾಹವನ್ನು ಮಾಡಿಕೊಂಡನು. ಇತ್ತ ಬೆಳಗಾದ ಕೂಡಲೇ ರಾಕ್ಷಸರು ಯುದ್ಧಸನ್ನದ್ಧರಾದರು. ಅಷ್ಟರಲ್ಲಿ ಒಬ್ಬ ದೂತನು ಓಡಿಬಂದು ದೇವತೆಗಳೆಲ್ಲರೂ ರಾತ್ರಿಯೇ ಪಟ್ಟಣವನ್ನು ಬಿಟ್ಟು ಓಡಿಹೋದರೆಂದು ತಿಳಿಸಿದನು. ಅದನ್ನು ಕೇಳಿ ಜಲಂಧರನು ಅತಿ ಸಂತೋಷಗೊಂಡು ತನ್ನ ಸೇನೆಯೊಡನೆ ಅಮರಾವತಿಯ ಸಂಪತ್ತನ್ನು ನೋಡುವುದಕ್ಕಾಗಿ ಹೊರಟನು. ಸುವರ್ಣರಜತಮಯವಾಗಿ ಕಟ್ಟಿರುವ ಉಪ್ಪರಿಗೆಗಳ ಸಾಲುಗಳಿಂದ ಸಂಪತ್ತನ್ನು ಬೀರುತ್ತಿರುವ ರಾಜವೀಥಿಗಳನ್ನೂ, ಸೌಂದರ್ಯವೇ ಮೂರ್ತಿಮತ್ತಾಗಿರುವ ದೇವನಾರಿಯರ ಸಾಲುಗಳನ್ನೂ, ತಂಡತಂಡವಾಗಿ ನಿಂತಿರುವಂತಹ ಹಸ್ತ್ಯಶ್ವರಥಪದಾತಿಗಳನ್ನೂ ನೋಡುತ್ತ ಬಂದು, ಅರಮನೆಯನ್ನು ಹೊಕ್ಕು, ಸಭಾಮಂದಿರದಲ್ಲಿ ಕುಳಿತು, ಪಟ್ಟಣದ ಜನರನ್ನೆಲ್ಲ ಬರಮಾಡಿಕೊಂಡು, ಅವರಿದಿರಿಗೆ ಶುಂಭಾಸುರನಿಗೆ ಸ್ವರ್ಗಲೋಕದ ಆಧಿಪತ್ಯವನ್ನು ವಹಿಸಿ, ಪಟ್ಟವನ್ನು ಕಟ್ಟಿ, ಎಲ್ಲ ದಿಕ್ಪಾಲಕರುಗಳ ಠಾಣೆಗಳಮೇಲೂ ತನ್ನ ಕಡೆಯ ಕಾವಲನ್ನಿರಿಸಿ, ದೇವೇಂದ್ರನ ಸಕಲ ವಸ್ತುವಾಹನಗಳೂ ಎಲ್ಲಿವೆ ಯೆಂದು ವಿಚಾರಿಸಲು, ಅಲ್ಲಿದ್ದ ಆಳುಗಳು– ಇಗೋ ಸಕಲ ವಸ್ತುಗಳೂ ಇಲ್ಲೇ ಇವೆ, ಚಿಂತಾಮಣಿಯೊಂದನ್ನು ಮಾತ್ರ ಅವರು ಸಂಗಡವೇ ತೆಗೆದುಕೊಂಡು ಹೋದರು, ಎಂದು ಹೇಳಿದರು. ಹಾಗಾದರೆ ದೇವೇಂದ್ರಾದಿಗಳು ಎತ್ತ ಹೋದರೆಂದು ಜಲಂಧರನು ಖಿನ್ನನಾಗಿ ಕೇಳುತ್ತಿದ್ದನು. ಅಷ್ಟರಲ್ಲಿ ಕಮಂಡಲು ಕಾಷಾಯವಸ್ತ್ರವನ್ನು ಧರಿಸಿ, ವೀಣೆಯಂ ಹಿಡಿದು, ಶಿವನಾಮಸಂಕೀರ್ತನವನ್ನು ಮಾಡುತ್ತ, ಬಿಳಿಯಮೋಡವು ಆಕಾಶದಿಂದಿಳಿದುಬಂದಂತೆ ನಾರದನು ಅಂತರಿಕ್ಷಮಾರ್ಗವಾಗಿ ಜಲಂಧರನ ಮುಂದೆ ಬಂದಿಳಿದನು. ಆಗ ರಾಕ್ಷಸೇಶ್ವರನು ಜಗ್ಗನೆದ್ದು ಮುನಿಯ ಪಾದಕ್ಕೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಅರ್ಘಾಸನದಲ್ಲಿ ಮುನೀಶ್ವರನನ್ನು ಕುಳ್ಳಿರಿಸಿಕೊಂಡನು. ನಾರದನು ಜಲಂಧರನ ಮುಖವನ್ನು ನೋಡಿ ನಿನಗೆ ಚಿಂತೆಯೇಕೆಂದು ಕೇಳಲು, ನಿಮಗೆ ತಿಳಿಯದೆ? ನಾವಿಷ್ಟ ಸಾಹಸವನ್ನು ಮಾಡಿಸುದೂ ವ್ಯರ್ಥವಾಯಿತು. ದೇವೇಂದ್ರನು ಮುಖ್ಯವಾದ ಚಿಂತಾಮಣಿಯನ್ನೆತ್ತಿಕೊಂಡು ಎಲ್ಲಿಗೋ ಹೊರಟುಹೋದನು.

ಎಂದು ರಾಕ್ಷಸನು ಹೇಳಲು, ಅವರೆಲ್ಲರನ್ನೂ ನಾನು ವೈಕುಂಠದಲ್ಲಿ ಕಂಡೆನೆಂದು ನಾರದನು ನುಡಿದನು. ಆ ಕೂಡಲೆ ಜಲಂಧರನು ಘುಡುಘುಡಿಸಿ ಎದ್ದು ಆಹಾ! ಆ ವಿಷ್ಣುವು ಇಂದ್ರನನ್ನು ಬೆನ್ನು ಹಾಕಿಕೊಂಡು ನಮ್ಮೊಡನೆ ಕಾದಿ ಬದುಕುವನೆ? ನೋಡುವ! ಏಳಿರಿ ಎಂದು ತನ್ನ ಸಕಲ ಬಲವನ್ನೂ ವೈಕುಂಠಲೋಕಕ್ಕೆ ತೆರಳಲು ಅಪ್ಪಣೆ ಮಾಡಿದನು. ಪ್ರಯಾಣದ ಭೇರಿಯಾಗಲು ರಾಕ್ಷಸಸೇನೆಯು ಮಹಾಸಮುದ್ರದಂತೆ ಮೊರೆಯುತ್ತ ಹೊರಟು, ವೈಕುಂಠಪುರವನ್ನು ಸಮೀಪಿಸಿತು. ಎಂಬಲ್ಲಿಗೆ ಹದಿಮೂರನೇ ಅಧ್ಯಾಯವು ಸಂಪೂರ್ಣವು.

---

## ೧೪ ನೇ ಅಧ್ಯಾಯವು.

### ವಿಷ್ಣುಬ್ರಹ್ಮೇಂದ್ರಾದಿಗಳ ಪರಾಜಯ.

ಜಲಂಧರಾಸುರನ ಸೈನ್ಯವು ಅತ್ಯಂತ ಸಮೀಪಿಸಿತೆಂಬ ವಾರ್ತೆಯನ್ನು ವಿಷ್ಣುವು ಕೇಳಿದಕೂಡಲೇ ರೋಷದಿಂದ ಕೆಂಪೇರಿದ ಕಣ್ಣುಗಳನ್ನು ಬಿರುಬಿರನೆ ಬಿಡುತ್ತ, ತನ್ನ ಸಕಲ ಸೈನ್ಯವೂ ಯುದ್ಧಕ್ಕೆ ಸಿದ್ಧವಾಗಲಿ ಯೆಂದು ಅಪ್ಪಣೆ ಮಾಡಿದನು. ವಿಷ್ಣುವಿನ ಮತ್ತು ಬ್ರಹ್ಮನ ಚತುರಂಗಸೈನ್ಯವೂ ಸಡಗರದಿಂದ ಅಣಿಯಾಗಿ ನಿಂತಿತು. ವಿಷ್ಣುಬ್ರಹ್ಮರುಗಳು ತಮ್ಮ ತಮ್ಮ ವಾಹನವನ್ನೇರಿ ಹೊರಟರು. ದೇವತೆಗಳ ಅಪರಿಮಿತವಾದ ಮಹಾಸೇನೆಯು ರಭಸದಿಂದ ಬರುತ್ತಿರುವ ವರ್ತಮಾನವನ್ನು ದಾನವೇಶ್ವರನು ಕೇಳಿ ಕೋಪಾವೇಶಗೊಂಡು ವೈಕುಂಠಪುರದಕಡೆಗೆ ಬೇಗಬೇಗನೆ ತನ್ನ ಸೈನ್ಯವನ್ನು ಸಾಗಿಸಿದನು. ಉಭಯಸೇನೆಗಳೂ ಮಹಾಸಮುದ್ರದಂತೆ ಭೋರ್ಗರೆಯುತ್ತ ಒಂದನ್ನೊಂದು ಸಂಧಿಸಿದುವು. ಬೆಟ್ಟಬೆಟ್ಟಗಳಿಗೆ ಗುದ್ದಾಟವೆಸಗಿದಂತೆ ಸೇನೆಯ ಮುಂಭಾಗದವರಿಗೆ ಪರಸ್ಪರ ಯುದ್ಧವಾರಂಭಿಸಿತು. ಕತ್ತಿಯನ್ನು ಹಿಡಿದವರು ಕತ್ತಿಯವರೊಡನೆಯೂ, ಭಲ್ಲೆಯವರು ಭಲ್ಲೆಯವರೊಡನೆಯೂ, ಧನುರ್ಧಾರಿಗಳು ಧನುರ್ಧಾರಿಗಳೊಡನೆಯೂ, ಗದಾಧಾರಿಗಳು ಗದಾಯುಧದವರೊಡನೆಯೂ, ಆನೆ ಆನೆಗಳೂ, ಕುದುರೆ ಕುದುರೆಗಳೂ,

ಕಾಲಾಳು ಕಾಲಾಳುಗಳೂ, ರಥಿಕರಥಿಕರುಗಳೂ ಒಬ್ಬರಮೇಲೊಬ್ಬರು ಬಿದ್ದು ಅತ್ಯಂತ ಶೌರ್ಯಸಾಹಸಗಳಿಂದ ಯುದ್ಧ ಮಾಡುತ್ತಿದ್ದರು. ರಾಕ್ಷಸರು ದೇವತೆಗಳನ್ನು ಕುರಿತು— ಓಹೋ ! ಈ ಮುಂದೆ ನಿಂತಿರುವರಾರು ? ದೇವನಾಯಕರೊ ? ಅಹುದಹುದು ! ಮಹಾವೀರರು !! ನಿಮ್ಮ ಪಟ್ಟಣದ ಸೂಳೆಗೇರಿಯಲ್ಲಿ ನಿಂತು ಹೆಣ್ಣುಗಳ ಮುಂದೆ ಪೌರುಷದ ಪಂಥವನ್ನು ಕೊಚ್ಚಿಕೊಂಡು ಬಂದು ಯುದ್ಧದಲ್ಲಿ ಎದೆಗೊಟ್ಟು ನಿಲ್ಲದೆ ಓಡಿಹೋದ ಮೂಗುಮಾರಿಗಳೇ ನೀವಲ್ಲವೆ ? ಎಲೆ ವಿಷ್ಣುವೇ ಈ ಬಡಪಾಯಿಗಳನ್ನು ಮುಂದಕ್ಕೆಬಿಟ್ಟು ರಣದೇವತೆಗೆ ಬಲಿಯನ್ನಾಗಿ ಅದೇಕೆ ಅರ್ಪಿಸುವೆ ? ಎಂದು ವಿಧವಿಧವಾಗಿ ಮೂದಲಿಸುತ್ತ ದೇವತೆಗಳನ್ನು ಹೊಡೆದು ಲಯಗೊಳಿಸುತ್ತಿದ್ದರು. ದೇವತೆಗಳು ರಾಕ್ಷಸರನ್ನು ಕುರಿತು— "ಹೆಂಡವನ್ನು ಕುಡಿದು ಬಾಯಿಗೆ ಬಂದಂತೆ ನೀವು ಬಗುಳಬಿಟ್ಟರೆ ಆಯಿತೆ ? ಯುದ್ಧದಲ್ಲಿ ನಿಂತು ಹೋರಾಡುವಷ್ಟು ಬಲಶಾಲಿಗಳೇ ನೀವು ? ನಿಮ್ಮ ದೊಡ್ಡದೊಡ್ಡದೇಹಗಳನ್ನೆಲ್ಲ ಸೀಳಿ ಭೂತಬೇತಾಳಗಳಿಗೆ ಉಣ್ಣಿಸುತ್ತೇವೆ ನಿಂತುಕೊಳ್ಳಿರಿ" ಎಂದು ಪ್ರತಿಯಾಗಿ ಮೂದಲಿಸಿ, ಕೈಕತ್ತಿಗಳನ್ನು ಜಳಪಿಸಿ, ಮಹಾಪರಾಕ್ರಮದಿಂದ ರಾಕ್ಷಸರ ಮೇಲೆ ಬಿದ್ದು ಕಡಿದು ಕೊಲ್ಲುತ್ತ ಬಂದರು. ದೇವತೆಗಳ ಅಬ್ಬರವನ್ನು ನೋಡಿ ಶುಂಭಾಸುರ ಧೂಮ್ರಾಕ್ಷಾದಿಗಳು ರೋಷವೇರಿ, ಸೇನೆಯನ್ನು ಹಿಂದು ಮಾಡಿ ಮುಂದೆ ಬಂದು ನಿಂತರು. ಹೀಗೆ ದಾನವಾಧಿನಾಯಕರು ಮುಂದೆ ಬಂದುದನ್ನು ಕಂಡು ಸುರನಾಯಕರು ತಮ್ಮಸೇನೆಯನ್ನು ಹಿಂದಕ್ಕೆ ತಳ್ಳಿ ಮುಂಗಡೆಗೆ ಬಂದು ನಿಂತರು. ಮತ್ತು ಮಹಾವೀರನಾದವನ್ನು ಮಾಡಿ ಪರಬಲವು ಅಚ್ಚರಿಪಡುವಂತೆ ದಿವ್ಯಾಸ್ತ್ರಗಳನ್ನು ಸಂಧಾನ ಮಾಡಿ ಶತ್ರುಗಳ ಮೇಲೆ ಪ್ರಯೋಗಿಸುತ್ತ ಬಂದರು. ರಾಕ್ಷಸರುಗಳು ಪ್ರತ್ಯಸ್ತ್ರವನ್ನು ಪ್ರಯೋಗಿಸುತ್ತ ಮಹಾಘೋರಯುದ್ಧವನ್ನು ಮಾಡಿದರು. ಉಭಯ ಸೇನೆಯೂ ಒಬ್ಬರನ್ನೊಬ್ಬರು ಜರೆಯುತ್ತಲೂ, ಬಾಣವೆಸುಗೆಯು ಸ್ವಲ್ಪ ತಗ್ಗಿದಾಗ ಮೇಲೆ ಬಿದ್ದು ಹಿಂದಕ್ಕಟ್ಟುತಲೂ, ಪ್ರತಿಪಕ್ಷದ ಕೈಬಲವಾದಾಗ ಸ್ವಲ್ಪ ಹಿಂಜರಿಯುತ್ತಲೂ, ತೀಕ್ಷ್ಣತರವಾದ ಬಾಣಗಳಿಂದ ಶತ್ರುಗಳ ತಲೆಯನ್ನು ಚಂಡಾ

ಡಿಸಿದಾಗ ಅತ್ಯಂತವಾಗಿ ಆರ್ಭಟಿಸುತ್ತಲೂ ಕಾದಾಡುತ್ತಿದ್ದರು. ಬಾಣಗಳ ಝಣಿರೆಂಬ ಧ್ವನಿ, ಸಿಂಜನಿಯ ನಾದ, ವೀರಭಟರ ಕೋಲಾಹಲ, ಭೇರಿಯ ಮಹಾಶಬ್ದ, ಆನೆ ಕುದುರೆಗಳ ಉಚ್ಚಸ್ವನ, ಆಯುಧಪ್ರಹಾರಗಳ ಕಟುತರಧ್ವಾನ ಇವುಗಳೆಲ್ಲ ಸೇರಿ ಆಕಾಶವನ್ನು ಶಬ್ದಾಯಮಾನವಾಗಿ ಮಾಡಿದ್ದುವು. ರಣಾಂಗಣದಲ್ಲಿ ಎತ್ತ ನೋಡಿದರೂ ಹೆಣಗಳು, ರುಂಡಮುಂಡಗಳು, ತೋಳು ತೊಡೆ ಕಾಲು ಕೈ ತುಂಡುಗಳು, ಕರುಳು ಮಾಂಸಗಳ ರಾಶಿಗಳು, ರಕ್ತದ ಕಾಲುವೆಗಳು, ಮೂಳೆಗಳ ಬೆಟ್ಟಗಳು, ತುಂಬಿತ್ತಲ್ಲದೆ, ಒಂದಾಗೈಯಗಲದ ಬರಿಯ ಭೂಮಿಯು ಎಲ್ಲೂ ಕಾಣುತ್ತಿರಲಿಲ್ಲ. ಇಷ್ಟಾಗುವುದರೊಳಗೆ ರಾಕ್ಷಸಸೇನೆಯು ಶೌರ್ಯಾಟೋಪದ ಮುಂದೆ ದೇವಸೇನೆಯು ನಿಲ್ಲಲಾರದೆ ಹಿಮ್ಮೆಟ್ಟುತ್ತ ಬಂದಿತು. ಅದನ್ನು ವಿಷ್ಣುವು ಕಂಡು,– ಇವರು ಅಮರಾವತಿಯ ಕೋಟೆಯೊಳಗಿದ್ದುಕೊಂಡೂ ರಾಕ್ಷಸರೊಡನೆ ಕಾದಾಡಲಾರದೆ ನಡುರಾತ್ರಿಯಲ್ಲಿ ಅಂಜಿ ಓಡಿಬಂದವರಲ್ಲವೆ? ಇಂಥವರು ಬೈಲಿನಲ್ಲಿ ನಿಂತು ಎದೆಗೊಟ್ಟು ಕಾದಾಡುವುದುಂಟೆ? ಹೇಡಿಗಳು ಓಡಿಬರುವುದನ್ನು ನೋಡಿರಿ ಎಂದು ಹೀಯಾಳಿಸಿ, ತನ್ನ ಮಣಿರಥವನ್ನು ರಾಕ್ಷಸಸೇನೆಗಿದಿರಾಗಿ ನಡಿಸಿದನು. ಹೀಗೆ ಮಹಾವಿಷ್ಣುವೇ ಕೋಪದಿಂದ ಯುದ್ಧಕ್ಕೆ ಬಂದು ನಿಲ್ಲಲು, ಚೂಣಿಯಲ್ಲಿದ್ದ ದೈತ್ಯನಾಯಕರೆಲ್ಲರೂ ಅಂಜಿ, ಜಲಂಧರಾಸುರನ ಮರೆಹೊಕ್ಕುಕೊಂಡರು. ಅದನ್ನು ಕಂಡು ಜಲಂಧರನು ಓಹೋ! ನಮ್ಮೊಡನೆ ಸೆಣಸುವುದಕ್ಕೆ ವಿಷ್ಣುವೇ ಬಂದನೊ? ಒಳ್ಳೇದು, ಎಂದು ಹೂಂಕರಿಸಿ, ತನ್ನ ಧನುಸ್ಸಿನ ಸಿಂಜನಿಯನ್ನು ಮಿಡಿದು ಶಬ್ದ ಮಾಡಿ, ರಥವನ್ನು ವಿಷ್ಣುವಿಗೆದುರಾಗಿ ಬಿಡಿಸಿದನು. ಆಗ ವಿಷ್ಣುವು ಧನುಸ್ಸನ್ನು ಸೆಳೆದು ದನಿ ಮಾಡಿ, "ಎಲೆ ದಾನವನೆ! ಇದುವರೆಗೆ ನನ್ನೊಡನೆ ಯುದ್ಧಕ್ಕೆ ನಿಂತು ಹಾನಿಯನ್ನು ಪಡೆಯದೆ ಹೋದ ದೈತ್ಯರೊಬ್ಬರೂ ಪ್ರಪಂಚದಲ್ಲಿಲ್ಲ; ಆದರಿಂದಲೇ ನನಗೆ ದನುಜಾರಿಯೆಂಬ ಹೆಸರುಬಂದಿರುವುದು; ಇದನ್ನು ತಿಳಿದಿದ್ದರೂ ನೀನು ನನ್ನಮೇಲೆ ಯುದ್ಧಕ್ಕೆ ನಿಂತಿರುವುದು ಅಜ್ಞಾನವಲ್ಲವೆ? ಚಿಂತೆಯಿಲ್ಲ; ನೀನು ಯಾರು? ನಿನ್ನ ಹೆಸರೇನು? ಸ್ಥಲವಾವುದು? ನಿಜವಾಗಿ ಹೇಳು, ಮರೆಮಾಜಬೇಡ" ಎಂದು ಕೇಳ

ದನು. ಆಗ ದಾನವೇಂದ್ರನು ಹುಸಿನಗೆ ನಕ್ಕು, "ನಿನಗೆ ದಾನವಾರಿಯೆಂಬ ಹೆಸರಿರುವುದೆಂಬುದನ್ನು ಕೇಳಿ ಅದನ್ನು ಅಸಾರ್ಥಕಪಡಿಸಿ ತಪ್ಪಿಸುವುದಕ್ಕಾಗಿಯೇ ನಾನು ಬಂದಿರುವೆನು; ನನ್ನ ಹೆಸರು ಜಲಂಧರ; ನನ್ನ ಪಟ್ಟಣವು ಸಂಜ್ಞೆ; ದೇವೇಂದ್ರನನ್ನು ನೀನು ಮರೆಹಾಕಿಕೊಂಡಿರುವ ರೋಗಕ್ಕಾಗಿ ತಕ್ಕ ಔಷಧವಂ ಪ್ರಯೋಗಿಸುವುದನ್ನು ನಾನು ಬಲ್ಲೆನು; ನೋಡು" ಎಂದು ಹೇಳಿ, ಒಂದುಬಾರಿಗೆ ೧೦ ಬಾಣಗಳನ್ನು ಜೋಡಿಸಿ ವಿಷ್ಣುವಿನಮೇಲೆ ಪ್ರಯೋಗಿಸಿದನು. ಅವನ್ನು ಹರಿಯು ಪ್ರತಿಬಾಣದಿಂದ ಮಧ್ಯದಲ್ಲೇ ಕಡಿದು– "ಆಹಾ! ಬಡದೇವತೆಗಳ ಕೋಟೆಯನ್ನು ಹಿಡಿದುಕೊಂಡು ಅವರನ್ನು ಓಡಿಸಿಬಿಟ್ಟಮಾತ್ರದಿಂದಲೇ ನೀನು ಜಗಕ್ಕೆಲ್ಲ ದೊಡ್ಡವನೆ? ಬಡಬಾಗ್ನಿಯಮೇಲೆ ಸಮುದ್ರವು ಉಕ್ಕಿಬಂದು ಬಿದ್ದಂತೆ ನೀನು ನನ್ನಮೇಲೆ ಬಿದ್ದಿರುವೆ. ಇದು ನಿನಗೆ ಯೋಗ್ಯವಲ್ಲ; ಈಗಲೂ ನನ್ನ ಹಿತವಾದವನ್ನು ಕೇಳಿ ನೀನು ಹಿಂದಿರುಗಿ ಹೋಗುವೆಯಾದರೆ ತೊಟ್ಟಿರುವ ಬಾಣವನ್ನು ನಾನು ನಿಲ್ಲಿಸಿಬಿಡುವೆನು. ಹಾಗಲ್ಲದಪಕ್ಷದಲ್ಲಿ ರಕ್ತದೋಕುಳಿಗೆ ಸಿದ್ಧನಾಗು" ಎಂದು ಹೇಳಿ ೫ ಬಾಣವನ್ನು ದೈತ್ಯನಮೇಲೆ ಪ್ರಯೋಗಿಸಿದನು. ಆ ಏಟಿನ ಗಾಯದಿಂದ ದೈತ್ಯನು ಬಾಣಘಾತಕ್ಕೆ ಗುರಿಯಾದ ಹುಲಿಯಂತೆ ನೊಂದು ಅಬ್ಬರಿಸಿ, ನಿಮಿಷಮಾತ್ರದಲ್ಲಿ ಒಂದೆರಡು ಮೂರು ನಾಲ್ಕೈದು ನೂರು ಸಾವಿರ ಲಕ್ಷಾಂತರಬಾಣಗಳನ್ನು ಹರಿಯಮೇಲೆ ಕರೆದುಬಿಟ್ಟನು. ಒಡನೆಯೇ ವಿಷ್ಣುವೂ ಅದಕ್ಕೆ ದ್ವಿಗುಣವಾಗಿ ಬಾಣವರ್ಷವನ್ನು ಕರೆದನು. ಈ ಉಭಯರ ಬಾಣಗಳೂ ಉಭಯಸೇನಾಮಂಡಲವನ್ನೆಲ್ಲಹೊಕ್ಕು ಸೀಳಿ ಆಕಾಶಮಂಡಲವೆಲ್ಲೆಲ್ಲ ತುಂಬಿಕೊಂಡುವು. ದಾನವ ಮಾಧವರಿಬ್ಬರೂ ಒಬ್ಬರ ಬಾಣ ಧನುಸ್ಸುಗಳನೊಬ್ಬರು ಕತ್ತರಿಸುತ್ತಲೂ, ಪ್ರತಿಧನುರ್ಬಾಣಗಳನ್ನು ಸ್ವೀಕರಿಸುತ್ತಲೂ, ಓರ್ವರೋರ್ವರ ರಥಗಳನ್ನು ಮುರಿದು ಹೊಸಹೊಸತೇರುಗಳನ್ನು ಹತ್ತುತ್ತಲೂ, ಪದೆಪದೆ ಮಾದಲೆಯ ಮಾತುಗಳನ್ನಾಡಿ ಬಾಣಗಳನ್ನೆಸೆದು ಕರಚಾತುರ್ಯವನ್ನು ತೋರಿಸುತ್ತಲೂ, ಪರಸ್ಪರ ಘಾತದಿಂದ ಮೂರ್ಛೆ ಹೊಂದುತ್ತಲೂ, ಒಬ್ಬರೊಬ್ಬರ ಏಟನ್ನು ಮೆಚ್ಚಿಕೊಳ್ಳುತ್ತಲೂ, ಒಬ್ಬರನ್ನೊಬ್ಬರು ಗಾಯಗೊಳಿಸುತ್ತಲೂ

ಅತ್ಯಂತ ವಿಕ್ರಮದಿಂದ ಕಾದಾಡಿದರು. ಆಗ ಹರಿಯು ಒಂದೇಸಮನಾಗಿ
ಸೆಣಸುತ್ತಿರುವ ದೈತ್ಯೇಂದ್ರನನ್ನು ನೋಡಿ ಬಹು ರೋಷವೇರಿ, ಪ್ರ
ಬಲತರವಾದ ಮಹಾಬಾಣವೊಂದನ್ನು ಚಾಪಕ್ಕೆ ಹೂಡಿ, ಕಿವಿಯುವರೆಗೆ ಸೆ
ಳೆದು, ದೈತ್ಯನ ರಥಕ್ಕೆ ಪ್ರಯೋಗಿಸಿ, ಸಿಹ್ಮನಾದವನ್ನು ಮಾಡಿದನು.
ಆ ಬಾಣವು ದೈತ್ಯನನ್ನು ರಥಸಮೇತವಾಗಿ ಆಕಾಶಕ್ಕೆ ಹಾರಿಸಿತು. ಅದ
ರಿಂದವನು ಕಡುಕೋಪವೇರಿ, ಅಂತಹ ಪ್ರತ್ಯಸ್ತ್ರದಿಂದಲೇ ವಿಷ್ಣುವಿನ
ರಥವನ್ನು ಹೊಡೆಯಲು, ಅದೂ ಆಕಾಶಮಂಡಲಕ್ಕೆ ಹಾರಿ ಗಿರ್ರನೆ ತಿರು
ಗುತ್ತ ನಿಂತುಕೊಂಡಿತು. ಇಬ್ಬರೂ ಅಂತರಿಕ್ಷದಲ್ಲೇ ನಿಂತು ಕಾದಾ
ಡಲುಪಕ್ರಮಿಸಿದರು. ಅವರಿಬ್ಬರೂ ಪ್ರಯೋಗಿಸುವ ಬಾಣಾವಳಿಗಳು
ಪ್ರಳಯಕಾಲದಲ್ಲಿ ಮೇಘದಿಂದ ಸುರಿಯುವದೊಡ್ಡಮಳೆಯಂತೆ ಕಾಣಿಸು
ತ್ತಿದ್ದುವು. ಹೀಗೆ ಸಮನಾಗಿ ಕಾದಾಡುತ್ತಿದ್ದ ಇಬ್ಬರೂ ಭೂಮಿ
ಗಿಳಿದರು. ಅಲ್ಲೂ ಕೆಲಹೊತ್ತು ಎಚ್ಚಾಡಿದರು. ಒಬ್ಬರೂ ಸೋಲ
ಲಿಲ್ಲ. ಕೊನೆಗೆ ರಾಕ್ಷಸನು ಅತ್ಯಂತ ರೋಷವೇರಿ ಒಂದೇಪ್ರಹಾರದಿಂ
ದ ವಿಷ್ಣುವನ್ನು ಧರೆಗುರುಳಿಸುವೆನೆಂದು ನಿಶ್ಚೈಸಿ, ತನ್ನ ಬತ್ತಳಿಕೆಯ
ಲ್ಲೆಲ್ಲ ಹುಡುಕಿ ಅಗ್ನ್ಯಸ್ತ್ರವನ್ನು ತೆಗೆದು, ಧನುಸ್ಸಿನಲ್ಲಿ ಹೂಡಿ ವಿಷ್ಣು
ವಿನಮೇಲೆ ಪ್ರಯೋಗಿಸಿದನು. ಅದು ಶಿವನ ಹಣೆಗಣ್ಣಿನಂತೆ ಅಗ್ನಿ
ಯನ್ನು ಕಾರುತ್ತ ಜಗತ್ತನ್ನೆಲ್ಲ ತಲ್ಲಣಗೊಳಿಸಿತು. ಅದರ ಜ್ವಾಲೆ
ಗೂ ಬೇಗೆಗೂ ಉಭಯಸೇನೆಯೂ ನಿಸ್ಸತ್ವಗೊಂಡು ಬೆರಗಾಯಿತು.
ಇದನ್ನು ಹರಿಯು ನೋಡಿ ತನ್ನ ಸೇನೆಗೆ ಅಭಯವನ್ನು ಹೇಳುತ್ತ,
ಬತ್ತಳಿಕೆಯಿಂದ ಜಲಾಸ್ತ್ರವನ್ನು ತೆಗೆದು ಹೂಡಿ ಪ್ರಯೋಗಿಸಿದನು.
ಅದು ಪ್ರಳಯಕಾಲದ ಮೇಘಗಳಂತೆ ಜಲವನ್ನು ಕರೆದು ಕ್ಷಣಕಾಲದಲ್ಲಿ
ಬೆಂಕಿಯನ್ನಾರಿಸಿ, ರಣಾಂಗಣವನ್ನು ನೀರಿನಲ್ಲಿ ತೇಲಾಡುವಂತೆ ಮಾಡಿತು.
ಬಳಿಕ ದಾನವೇಂದ್ರನು ಮತ್ತಷ್ಟು ರೋಷದಿಂದ ಸರ್ಪಾಸ್ತ್ರವನ್ನು
ಪ್ರಯೋಗಿಸಿದನು. ಅದಕ್ಕೆ ಹರಿಯು ಗರುಡಾಸ್ತ್ರವನ್ನು ಬಿಟ್ಟು ಖಂ
ಡಿಸಿದನು. ಜಲಂಧರನು ಗಿರಿಬಾಣವನ್ನು ಎಸೆಯಲು, ವಿಷ್ಣುವು ವ
ಜ್ರಾಸ್ತ್ರವನ್ನು ಬಿಟ್ಟು ಕಡಿದುಹಾಕಿದನು. ದೈತ್ಯನು ಅಂಧಕಾರಾಸ್ತ್ರ
ವನ್ನು ಬಿಡಲು, ಮಾಧವನು ಸೂರ್ಯಾಸ್ತ್ರವನ್ನು ಬಿಟ್ಟು ಕತ್ತಲೆಯ

ನ್ನು ತೊಲಗಿಸಿದನು. ಮೇಘಾಸ್ತ್ರವನ್ನು ರಾಕ್ಷಸನು ಪ್ರಯೋಗಿಸಲು, ಹರಿಯು ಮಾರುತಾಸ್ತ್ರವನ್ನು ಬಿಟ್ಟು ಮೇಘಗಳನ್ನು ಓಡಿಸಿಬಿಟ್ಟನು. ಮತ್ತು ತನ್ನ ಬಾಣದಿಂದ ದೈತ್ಯನ ಕೈಬಿಲ್ಲನ್ನೂ ಬಾಣವನ್ನೂ ರಥ ತುರಗ ಸಾರಥಿಗಳನ್ನೂ ಕಡಿದು ಹಾಕಿದನು. ಇದನ್ನು ದೈತ್ಯಾಧಿಪತಿಯು ನೋಡಿ ಕಡುಕೋಪವೇರಿ ಸಿಂಹದಂತೆ ಆರ್ಭಟಿಸಿ, ಭೂಮಿಗಿಳಿದು ಬಂದು ಮಹಾರೋಷದಿಂದ ಹರಿಯು ರಥವನ್ನೆತ್ತಿ ಬುಗುರಿಯಂತೆ ತಿರುಗಿಸಿ ಆಕಾಶಕ್ಕೆಸೆದುಬಿಟ್ಟನು. ಸಕಲ ದೇವಾಸುರರೂ ಇದನ್ನು ನೋಡಿ ಆಶ್ಚರ್ಯಪಟ್ಟರು. ಆಗ ವಿಷ್ಣುವು ಭೂಮಿಗಿಳಿದು ಹೊಸದೊಂದು ರಥವನ್ನು ಏರಿದನು. ಅದನ್ನೂ ದೈತ್ಯನು ಮೊದಲಿನಂತೆ ಇಟ್ಟನು. ಹರಿಯು ಮತ್ತೆ ಹೊಸರಥವನ್ನೇರಲು, ತಿರುಗಿ ದೈತ್ಯನು ಆಕಾಶಕ್ಕಿಡುತ್ತಿದ್ದನು. ಹೀಗೆ ೨೧ ಬಾರಿ ಆಕಾಶಕ್ಕೆಸೆದನು. ಇದರಿಂದ ಹರಿಗೆ ಅತ್ಯಂತ ಖತಿಯುಂಟಾಯಿತು. ರಥವನ್ನು ಬಿಟ್ಟು ಕೈಯಲ್ಲಿ ಕೌಮೋದಕಿಯೆಂಬ ಗದೆಯನ್ನು ಹಿಡಿದು ದೈತ್ಯನ ಮುಂದೆ ನಿಂತು- “ಇಂತಹ ಯಕ್ಷಿಣೀವಿದ್ಯೆಯನ್ನು ನೀನು ಯುದ್ಧದಲ್ಲಿ ತೋರಿಸದಿದ್ದರೆ ಶೂರರು ಮೆಚ್ಚಿಕೊಳ್ಳುವರೆ? ಇಗೋ ನೋಡು, ಈ ಗದೆಯು ಮಧುಕೈಟಭ ಮೊದಲಾದ ಅನೇಕ ದೈತ್ಯರನ್ನು ಬಡಿದು ಕೊಂದಿರುವುದು. ಇದರ ರುಚಿಯನ್ನು ನೀನು ಯಾವಾಗಲೂ ಕಂಡಿಲ್ಲ. ಎಡಬಲಕ್ಕೆ ಹಾರಿ ತಪ್ಪಿಸಿಕೊಳ್ಳದೆ ಗದೆಯನ್ನು ಹಿಡಿದು ಇದಿರಾಗು, ಇಬ್ಬರ ಶೌರ್ಯವನ್ನೂ ಈ ಮಹಾಸೇನೆಯು ನೋಡಲಿ” ಎಂದು ನುಡಿದನು. ಆಗ ದೈತ್ಯನಾಥನೂ ಗದೆಯನ್ನು ಹಿಡಿದು ಮುಂದಾದನು. ಇಬ್ಬರೂ ಸಜ್ಜಾಗಿ ನಿಂತು ತಮ್ಮ ತಮ್ಮ ಗದೆಗಳನ್ನು ತಿರುಹುತ್ತ ಒಬ್ಬರ ಮೇಲೊಬ್ಬರು ಪ್ರಯೋಗಿಸುತ್ತ ಬಂದರು. ಒಬ್ಬರೇಟನ್ನು ಮತ್ತೊಬ್ಬರು ತಪ್ಪಿಸಿಕೊಳ್ಳುತ್ತ, ಆಯವರಿದು ಹೊಡೆಯುತ್ತ, ಚಿಮ್ಮುತ್ತ, ತಿರುಹುತ್ತ, ಹಾರಿ ಬಡಿಯುತ್ತ, ಸರ್ವರೂ ಅಚ್ಚರಿಗೊಳ್ಳುವಂತೆ ಹೋರಾಡಿದರು. ಅದರಲ್ಲೂ ದೈತ್ಯನು ಸೋಲದೆ ಹೋಗಲು, ವಿಷ್ಣುವು ಬೇಸರಗೊಂಡು, ಈ ದುಷ್ಟನನ್ನು ಮಲ್ಲಗಾಳಗದಿಂದಲಾದರೂ ಸೋಲಿಸಬೇಕೆಂದು ಯೋಚಿಸಿ, ಎಲೆ ಖಳನೇ ಮಲ್ಲಯುದ್ಧಕ್ಕೆ ನಿಲ್ಲು ; ಎಂದು ಹೇಳಲು,

ದೈತ್ಯನು "ಆಗಲಿ" ಎಂದು ನಕ್ಕು ಗದೆಯನ್ನು ಬಿಸುಟು, ತೋಳ್ತೊಡೆಗಳನ್ನು ತಟ್ಟಿ ಮುಷ್ಟಿಯುದ್ಧಕ್ಕೆ ಸಿದ್ಧನಾದನು. ಇಬ್ಬರೂ ಕೈಕೈ ಕೂಡಿಸಲು ಎರಡಾನೆಗಳು ಸುಂಡಿಲನ್ನು ಸೇರಿಸಿ ಹೆಣಗಾಡುವಂತೆ ತೋರಿದರು. ಇರ್ವರೂ ಕತ್ತು, ಕಂಕುಳು, ನಡು ಬೆನ್ನು ತೊಡೆ ವಕ್ಕ ಮೊದಲಾದುವುಗಳನ್ನು ಪಟ್ಟಾಗಿ ಹಿಡಿದು ನುಲಿದು ಕೆಡಹಿ ಉರುಳಿ ಹೆಣಗಾಡುತ್ತಿದ್ದರು. ಒಂದೊಂದುಬಾರಿ ಹರಿಯು ಪಟ್ಟಿಗೆ ಸಿಕ್ಕಿಹೋಗಿ ಬಿದ್ದುಕೊಳ್ಳುವಂತೆ ತೋರುತ್ತಿದ್ದು, ಅಷ್ಟರಲ್ಲಿ ನುಣುಚಿಕೊಂಡು ದೈತ್ಯನನ್ನು ಕೆಡಹಿ ಸೋಲಿಸುವ ಸ್ಥಿತಿಗೆ ತರುವನು. ದೈತ್ಯನು ಬಿಡಿಸಿಕೊಂಡೆದ್ದು ಹರಿಯನ್ನು ತಬ್ಬಿ ಎತ್ತಿ ಕೆಳಕ್ಕೆ ಕುಕ್ಕುವನು. ಹಾಗೆಯೇ ಹರಿಯು ರಕ್ಕಸನ ನಡುವಿಗೆ ನುಗ್ಗಿ ಎತ್ತಿಹಾಕಿ ಮುಷ್ಟಿಘಾತವನ್ನು ಮಾಡಿ ಬೊಬ್ಬಿರಿಯುತ್ತಿದ್ದನು. ಹೀಗೆ ಸೆಣಸುತ್ತಿರುವಲ್ಲಿ ದೈತ್ಯನು ರೋಷದಿಂದ ಅತ್ಯಂತಾವೇಶಗೊಂಡು ತನ್ನ ಬಾಹುಯುಗ್ಮದಿಂದ ವಿಷ್ಣುವನ್ನು ಬಲವಾಗಿ ತಬ್ಬಿ ಕೀಸರಾಡಿ ಗರಗರನೆ ತಿರುಗಿಸಿ ಬೀಸಿ ಅಪ್ಪಳಿಸಿಬಿಟ್ಟನು. ಆ ರಭಸದೇಟನಿಂದ ಹರಿಯು ನಿಶ್ಚೇತನನಾಗಿ ಧರೆಯಮೇಲೆ ಉರುಳಿಕೊಂಡನು. ರಕ್ಕಸನನ್ನು ಗೆಲ್ಲುವ ಆಸೆಯು ಅಲ್ಲಿಗೆ ಬಿಟ್ಟುಹೋಯಿತು. ಇಂದ್ರಾದಿದೇವತೆಗಳೆಲ್ಲರೂ ತಲ್ಲಣಿಸಿದರು. ಆಗ ವಿಷ್ಣುವು ಒಂದುಪಾಯವನ್ನು ಯೋಚಿಸಿ, ಮುಗುಳ್ನಗೆನಕ್ಕು, ವಿನಯದಿಂದ ದೈತ್ಯೇಂದ್ರನನ್ನು ಕುರಿತು— "ಎಲೆ ದೈತ್ಯನಾಯಕನೇ! ನಿನ್ನ ಪರಾಕ್ರಮಕ್ಕೆ ಮೆಚ್ಚಿದೆನು; ನಿನ್ನ ಇಷ್ಟಾರ್ಥವೇನಿರುವುದು ಹೇಳು, ಕೊಡುತ್ತೇನೆ" ಎಂದನು. ಅವಕ್ಕೆ ದಾನವೇಂದ್ರನು ನಕ್ಕು—"ಕಪಟದಿಂದ ನೀನು ಮಧುಕೈಟಭಾದಿರಾಕ್ಷಸರನ್ನು ಗೆದ್ದಹಾಗಲ್ಲ; ಈಗ ನೀನು ಮೆಚ್ಚಿಕೊಂಡರೆ ಒಳ್ಳೇದಾಯಿತು. ನೀನು ಪತ್ನೀಸಮೇತನಾಗಿ ಬಂದು ನನ್ನ ಮನೆಯಲ್ಲಿ ಸೆರೆಯಾಳಾಗಿರಬೇಕು" ಎಂದು ಹೇಳಿದನು. ಈ ದೈತ್ಯನು ಹಾಗೆ ಮಾಡದೆ ಬಿಡುವನಲ್ಲವೆಂದು ಹರಿಯು ನಿರ್ಧರಿಸಿ, ಲಕ್ಷ್ಮಿಯನ್ನು ಕರೆದುಕೊಂಡು ಇಬ್ಬರೂ ಜಲಂಧರನ ರಥದಲ್ಲೇ ಕುಳಿತು ಹೊರಟರು. ಇಂದ್ರಾದಿದಿಕ್ಪಾಲಕರೆಲ್ಲರನ್ನೂ ಒಡನೆ ಹೊರಡಿಸಿಕೊಂಡು ಜಲಂಧರಾಸುರನು ಸಕಲ ಸೇನೆಯೊಡನೆ ವಿಜೃಂಭಣೆಯಿಂದ

ತನ್ನ ಪಟ್ಟಣಕ್ಕೆ ತಿರುಗಿದನು. ಸಕಲಾಲಂಕಾರಪೂರ್ಣವಾಗಿದ್ದ ಪಟ್ಟಣವನ್ನು ಸಂತೋಷದಿಂದ ಪ್ರವೇಶಿಸಿ, ಲಕ್ಷ್ಮೀನಾರಾಯಣರನ್ನು ಒಂದು ಅರಮನೆಯಲ್ಲಿರಿಸಿ, ಅವರಮೇಲೆ ನೂರು ಕೋಟಿ ರಾಕ್ಷಸರ ಕಾವಲನ್ನಿಟ್ಟು, ಬ್ರಹ್ಮೇಂದ್ರಾದಿದೇವನಾಯಕರನ್ನೆಲ್ಲ ಕರೆದು, ನೀವುಗಳು ನನ್ನ ಸೇವೆಯನ್ನು ಮಾಡಿಕೊಂಡಿರಿ ಎಂದು ಆಜ್ಞಾಪಿಸಲು ಅವರು ಹಾಗೆಯೇ ಆಗಲೆಂದೊಪ್ಪಿ ನಡಿಸುತ್ತಿದ್ದರು. ಪ್ರತಿದಿನವೂ ಬ್ರಹ್ಮನು ಜಲಂಧರನಿಗೆ ಮಂತ್ರಾಕ್ಷತೆಯನ್ನು ಕೊಟ್ಟು ಆಶೀರ್ವದಿಸುವನು. ದೇವೇಂದ್ರಾದಿದಿಕ್ಪಾಲಕರು ರಾಕ್ಷಸನ ಇಷ್ಟಾನುಸಾರವಾಗಿ ತಮತಮಗೆ ಕೊಟ್ಟದ್ದ ಊಳಿಗವನ್ನು ಮಾಡಿಕೊಂಡಿದ್ದರು. ಜಗತ್ತಿನಲ್ಲಿ ಶಿವನ ಕೈಲಾಸವೊಂದು ಹೊರತು ಉಳಿದ ಭೂಸ್ವರ್ಗಲೋಕವೆಲ್ಲವೂ ಜಲಂಧರನ ವಶವಾಗಿದ್ದಿತು. ಈರೀತಿಯಾದ ಆಧಿಪತ್ಯದಿಂದ ಸಕಲ ಸಂಪತ್ತನ್ನೂ ಪಡೆದು ಜಲಂಧರನು ಮೂರರ್ಬುದ ವರ್ಷಗಳ ವರೆಗೆ ನಿಶ್ಚಿಂತನಾಗಿ ಆಳಿಕೊಂಡಿರುತ್ತಿದ್ದನು. ಹೀಗಿರುವಲ್ಲಿ ದೇವನಾಯಕರೆಲ್ಲರೂ ತಮ್ಮ ಸ್ಥಿತಿಯನ್ನು ಕುರಿತು ಅತಿಶಯವಾಗಿ ಚಿಂತಿಸಿ ಕೊರಗುತ್ತ, ಒಂದು ದಿನ ವಿಷ್ಣುಬ್ರಹ್ಮರ ಬಳಿಯಲ್ಲಿಗೆ ಗುಪ್ತವಾಗಿ ಹೋಗಿ, ಈ ದೈತ್ಯನ ಸಂಪತ್ತಿಗೆ ಕೊನೆಯಾವಾಗ ? ನೀವು ನಿರ್ಬಂಧದಿಂದ ಬಿಡುಗಡೆ ಹೊಂದಿ ಸುಖವಾಗಿ ಬಾಳುವುದಾವಾಗ? ಎಂದು ಯೋಚಿಸಿ, ಕೊನೆಗೆ " ಈ ನಮ್ಮ ದುರವಸ್ಥೆಯನ್ನೆಲ್ಲ ಪರಮೇಶ್ವರನೊಡನೆ ಹೇಳಿಕೊಂಡರೆ ಆ ಸ್ವಾಮಿಯು ನಮ್ಮ ಕಷ್ಟವನ್ನು ಪರಿಹರಿಸಬಹುದು. ಆತನಿಂದಲೂ ಸಾಧ್ಯವಲ್ಲದೆ ಹೋದರೆ ನಾವುಗಳು ಹೀಗೆ ಬಾಳುವುದಕ್ಕಿಂತಲೂ ಪ್ರಾಣತ್ಯಾಗ ಮಾಡಿಕೊಳ್ಳುವುದೇ ಲೇಸು" ಎಂದು ನಿಶ್ಚೈಸಿದರು. ಸಮಯವನ್ನು ನಿರೀಕ್ಷಿಸಿಕೊಂಡಿದ್ದು, ಒಂದು ದಿನ ರಾತ್ರಿ, ವಿಷ್ಣುಬ್ರಹ್ಮೇಂದ್ರಾದಿಗಳೆಲ್ಲರೂ ರಹಸ್ಯವಾಗಿ ತಪ್ಪಿಸಿಕೊಂಡು ಹೊರಟು ಕೈಲಾಸವನ್ನು ಸೇರಿದರು. ಸಭೆಯಲ್ಲಿ ಕುಳಿತಿರುವ ಪರಮಶಿವನಿಗೆ ಸರ್ವರೂ ಸಾಷ್ಟಾಂಗವಾಗಿ ನಮಸ್ಕರಿಸಿದರು. ಪರಮೇಶ್ವರನು ಇವರೆಲ್ಲರನ್ನೂ ನೋಡಿ, ಪ್ರೀತಿಯಿಂದ ವಿಷ್ಣುವನ್ನು ಕುರಿತು– ಇದೇನು ಸರ್ವರೂ ಬಂದಿರುವಿರಿ ? ಎಂದು ಕೇಳಿದನು. ಅದಕ್ಕೆ ಹರಿಯು– ಸ್ವಾಮಿಯೆ ! ನಮ್ಮ ಬಿನ್ನಹವನ್ನು ಲಾಲಿಸಬೇ

ಕು. ನೀಚನಾದ ಜಲಂಧರನೆಂಬ ದೈತ್ಯನು ಪ್ರಬಲಿಸಿ ನಮ್ಮ ಪಟ್ಟಣಗಳನ್ನೆಲ್ಲ ಹಿಡಿದು ಸುಲಿದು ನಮ್ಮನ್ನು ತನ್ನ ಮನೆಯ ಸೆರೆಯಲ್ಲಿಟ್ಟುಕೊಂಡಿದ್ದನು; ಅಲ್ಲಿಂದ ತಪ್ಪಿಸಿಕೊಂಡು ಈಗ ತಮ್ಮ ಬಳಿಗೆ ಬಂದಿರುವೆವು; ನಮ್ಮನ್ನುದ್ಧರಿಸಬೇಕು, ಎಂದು ಬೇಡಿಕೊಂಡನು. ಶಿವನಾದರೋ– ಆ ಧೂರ್ತನನ್ನು ನಾನು ಸಂಹರಿಸುವೆನು ಹೆದರಬೇಡಿರಿ ಎಂದು ನಂಬುಗೆಯನ್ನು ಕೊಟ್ಟು ಸಮಾಧಾನಪಡಿಸಿದನೆಂಬಲ್ಲಿಗೆ ಹದಿನಾಲ್ಕನೇ ಅಧ್ಯಾಯವು ಸಂಪೂರ್ಣವು.

---

## ೧೫ ನೇ ಅಧ್ಯಾಯವು.

### ಜಲಂಧರ ಸಂಹಾರ.

ಇತ್ತ ಜಲಂಧರಾಸುರನು ಮರುದಿವಸ ಒಡ್ಡೋಲಗದಲ್ಲಿ ಕುಳಿತು ಸೆರೆಯಲ್ಲಿದ್ದ ದೇವತೆಗಳೊಬ್ಬರೂ ಇಲ್ಲವೆಂಬ ವಾರ್ತೆಯನ್ನು ಕೇಳಿ ಅತ್ಯಂತ ರೋಷಾಕ್ರಾಂತನಾಗಿ, ಸತ್ಯಲೋಕ ವೈಕುಂಠಲೋಕಗಳಿಗೆ ಚಾರರನ್ನು ಕಳಿಸಿ, ಅಲ್ಲಿಯೂ ಒಬ್ಬರೂ ಇಲ್ಲವೆಂಬ ವರ್ತಮಾನವನ್ನು ತಿಳಿದು, ಸಿಡಿದುಬಿದ್ದೆದ್ದು, ಸ್ವರ್ಗಮರ್ತ್ಯಪಾತಾಳಗಳಲ್ಲಿ ನನ್ನ ಪ್ರಣೆಯು ತಡೆಯಿಲ್ಲದೆ ನಡೆಯುತ್ತಿರುವುದು, ಮೋಸದಿಂದ ತಪ್ಪಿಸಿಕೊಂಡು ಹೋಗಿರುವ ಈ ದೇವತೆಗಳನ್ನು ಮರೆಹಾಕಿಕೊಳ್ಳುವ ಸಮರ್ಥರಾರನ್ನೂ ನಾನು ಕಾಣೆ, ಹೀಗಿರುವಲ್ಲಿ ಇವರೆಲ್ಲಿ ಹೋದರು? ಎಂದು ಕೇಳಲು, ಶುಕ್ರಾಚಾರ್ಯನು– ಎಲೆ ಹುಚ್ಚಾ! ಸಕಲ ಬ್ರಹ್ಮಾಂಡವನ್ನೆಲ್ಲ ಹೊಟ್ಟೆಯಲ್ಲಿಟ್ಟುಕೊಂಡು ರಕ್ಷಿಸುವ ಜಗದೇಕನಾಯಕನಾದ ಪರಮೇಶ್ವರನನ್ನು ದೇವತೆಗಳೆಲ್ಲರೂ ಮರೆಹೊಕ್ಕಿರುವರು ಎಂದು ಹೇಳಿದನು. ಜಲಂಧರನು ಕೇಳಿ ಕಡುಕೋಪವೇರಿ, ಆಹಾ! ನನ್ನನ್ನು ಬಿಟ್ಟು ಲೋಕಕ್ಕೆಲ್ಲ ಅಧಿಪತಿಯಾದವನು ಬೇರೊಬ್ಬನಿರುವನೆಂಬ ಅಚ್ಚರಿಯ ಮಾತನ್ನು ಈಗ ಕೇಳಿದೆ! ಜಗತ್ತಿನಲ್ಲಿ ಅಂಥವನು ಯಾರೂ ಇಲ್ಲವೆಂದು ತಿಳಿದು ಯುದ್ಧಪ್ರಸಕ್ತಿಯನ್ನು ಬಿಟ್ಟುಬಿಟ್ಟಿದ್ದೆ; ಹಾಗಾದರೆ ನನ್ನ ಹಸ್ತ್ಯಶ್ವರಥಪದಾತಿಸೈನ್ಯವೆಲ್ಲ ಯುದ್ಧಕ್ಕೆ ಸಿದ್ಧವಾಗಲಿ ಎಂದು ಅಪ್ಪಣೆ

ಮಾಡಿದನು. ಶಿವದ್ವೇಷವು ಕೆಟ್ಟದೆಂದು ಶುಕ್ರಾಚಾರ್ಯನು ಬೋಧಿಸಿದರೂ ಖಳರಾಕ್ಷಸೇಂದ್ರನು ಕೇಳದೆಹೋದನು. ಸಕಲದಾನವಸೇನೆಯೂ ಸಿದ್ಧವಾಗಿ ಕೈಲಾಸಪರ್ವತದ ಕಡೆಗೆ ಸಾಗಿತು. ಅಲ್ಲಿನ ಜನವೆಲ್ಲವೂ ಬೆದರಿ ಬಿದ್ದೆದ್ದು ಶಿವಪುರಕ್ಕೆ ಓಡಿತು. ಪರಶಿವನು ಇವರಿಂದ ರಾಕ್ಷಸನ ಸೈನ್ಯದ ಬರುವಿಕೆಯನ್ನು ಕೇಳಿ ನಕ್ಕು, ನಂದೀಶನನ್ನು ಕುರಿತು—ಜಲಂಧರಾಸುರನೊಡನೆ ಸೆಣಸುವ ಸಂಧಿಯು ಬಿದ್ದಿದೆ, ಸೈನ್ಯವು ಸಿದ್ಧವಾಗಲಿ, ಎಂದು ಅಪ್ಪಣೆ ಮಾಡಿದನು. ಅದರಂತೆ ನಂದಿನಾಥನು ಡಂಗುರವನ್ನು ಹೊಡೆಯಿಸಿದನು. ಶಿವನು ಥಟ್ಟನೆ ಸರ್ವಸನ್ನಾಹದಿಂದ ಕೂಡಿ ವೃಷಭನನ್ನೇರಿದನು. ಎಡಬಲದಲ್ಲಿ ಚತುರ್ವೇದಪುರುಷರು ಉದ್ಘೋಷಿಸುತ್ತಿದ್ದರು. ಹರಿಬ್ರಹ್ಮರು ಪಕ್ಕಗಳಲ್ಲಿ ತಮ್ಮ ತಮ್ಮ ವಾಹನವನ್ನೇರಿ ಹೊರಟರು. ಸಕಲ ಗಣಸ್ತೋಮವೂ ಪಯಣಗೊಂಡಿತು. ಮಹಾಧ್ವನಿಯು ದಿಕ್ತಟವನ್ನೆಲ್ಲ ತುಂಬಿತು. ಮಹಾದಿಗ್ಗಜಗಳಂತೆ ಪರ್ವತಾಕಾರದ ಆನೆಗಳು ಲೆಕ್ಕವಿಲ್ಲದಷ್ಟು ಹೊರಟುವು. ಸುವರ್ಣದ ಕೆಲಸದ ಕೋಗೀರನ್ನು ಹಾಕಿರುವ ಕುದುರೆಗಳು ಮಿತಿಯಿಲ್ಲದಷ್ಟು ನಡೆದುವು. ರನ್ನದ ತೇರುಗಳ ಸಾಲಿಗೆ ಗಣನೆಯೇ ಇಲ್ಲವಾಯಿತು. ಶೂರರಾದ ಕಾಲಾಳುಗಳು ಪಾರವೇ ಇಲ್ಲದಂತೆ ತೆರಳುತ್ತಿದ್ದರು. ಆ ಸೇನಾಮಧ್ಯದಲ್ಲಿ ಬೀಸುವ ಚಾಮರಗಳು, ಕಂಪಿಸುವ ಧ್ವಜಪಟಗಳು, ಶೋಭಿಸುವ ಛತ್ರಗಳು, ಮಿರುಗುವ ಆಯುಧಗಳು, ಕಿವುಡುಗೊಳಿಸುವ ವಾದ್ಯಗಳು, ಎತ್ತೆತ್ತಲೂ ಕಾಣುತ್ತಿದ್ದುವು. ಆ ಸೇನೆಯ ಭಾರಕ್ಕೆ ಆದಿಕೂರ್ಮನೂ ದಿಗ್ಗಜಗಳೂ ಕುಗ್ಗಿಹೋದುವು. ಅದರ ಧೂಳಿಯು ಧ್ರುವಲೋಕದ ಪರ್ಯಂತವೂ ವ್ಯಾಪಿಸಿ ಮಬ್ಬನ್ನುಂಟುಮಾಡಿತು. ಇಷ್ಟೊಂದು ಅಪಾರವಾದ ಸೇನೆಯು ಕೈಲಾಸಪರ್ವತದಿಂದ ಹೊರಡಲು, ಅದಕ್ಕೆದುರಾಗಿ ಜಲಂಧರಾಸುರನ ಮಹಾಸೈನ್ಯವು ನುಗ್ಗುತ್ತಿದ್ದಿತು. ಮುಂಗಡೆಯವರು ಪರಸ್ಪರವಾಗಿ ಮಾರ್ಬಲವನ್ನು ನೋಡಿ ವೀರನಾದವನ್ನು ಮಾಡತೊಡಗಿದರು. ಮೊದಮೊದಲು ಪರಸ್ಪರವಾಗಿ ಮಾನಸೂನ್ನನೋಟವೂ ಕಾದಾಡಹತ್ತಿದುವು. ಬಳಿಕ ಕೈಕತ್ತಿಗಳು ಹೊಳೆಹೊಳೆದು ಹೋರಾಡಲಾರಂಭಿಸಿದುವು. ರೋಷದಿಂದ ಉಭಯಪಕ್ಷದ ಮುಂ

ದಾಳುಗಳಲ್ಲೂ ಪರವಶತೆಯುಂಟಾಯಿತು. ಆನೆ ಆನೆಗಳೂ ಕುದುರೆ ಕುದುರೆಗಳೂ ರಥ ರಥಗಳೂ ಪ್ರತಿಭಟಿಸಿ ಕಾದಾಡನಿಂತುವು. ಆನೆಗಳ ಬೃಂಹಿತವೂ, ಕುದುರೆಗಳ ಹೇಷಾಧ್ವನಿಯೂ, ರಥಗಳ ಚೀತ್ಕಾರವೂ, ಕಾಲಾಳುಗಳ ಭುಜಾಸ್ಫಾಲನ ವೀರನಾದಗಳೂ, ಸಿಂಜಿನಿಯ ಠಂಕಾರವೂ, ಖಡ್ಗಗಳ ಝಣತ್ಕಾರವೂ, ಕಾಳೆಗಳ ಘೀಂಕಾರವೂ, ಭೇರಿಗಳ ಭೂಂಕಾರವೂ, ಒಡನೆ ಕೂಡಿ ರಣಾಂಗಣವನ್ನು ಶಬ್ದಾಯಮಾನವಾಗಿ ಮಾಡಿದ್ದುವು. ವಾದ್ಯಧ್ವನಿಯು ಪ್ರತಿಕ್ಷಣದಲ್ಲಿಯೂ ಸೈನಿಕರನ್ನು ಉತ್ಸಾಹಗೊಳಿಸಿತು. ಕಾಲಾಳ್ಗಳು ಒಬ್ಬರನ್ನೊಬ್ಬರು ಹೆಣಗಿ ಎಡಗೈಯಲ್ಲಿ ಮುಂದಲೆಯನ್ನು ಹಿಡಿದು ಜಡಿದು ಬಗ್ಗಿಸಿ ಬಲಗೈಯ ಕತ್ತಿಯಿಂದ ಕತ್ತರಿಸುತ್ತಲೂ, ನಡುವಿಗೆ ನುಗ್ಗಿ ತಬ್ಬಿ ಸುತ್ತಿ ಕೆಡಹಿ ಮೇಲೆ ಕುಳಿತು ಸುರಗಿಯಿಂದ ಹೊಟ್ಟೆಯನ್ನು ಬಗಿಯುತ್ತಲೂ, ಮೇಲೆಬೀಳುವ ಪ್ರಹಾರಕ್ಕೆ ಗುರಾಣಿಯನ್ನೊಡ್ಡಿ ತಪ್ಪಿಸಿಕೊಳ್ಳುತ್ತಲೂ, ಕಾಲ್ಗೆ ಸಿಕ್ಕಿದ ಹೆಣಗಳನ್ನು ಓರೆ ನೂಕಿ ಬಲವಾಗಿ ನಿಂತು ಪ್ರತಿಭಟನನ್ನು ಮೂದಲಿಸುತ್ತಲೂ, ಮಗ್ಗುಲಿಗೆ ಬಂದವನನ್ನು ಹಿಡಿದು ಕಂಕುಳಲ್ಲಿ ಇರುಕುತ್ತಲೂ, ಕೈಗೆ ಸಿಲ್ಕದವನನ್ನು ಬಾಣದಿಂದ ಹೊಡೆದು ಕೆಡಹುತ್ತಲೂ, ಕ್ಷಣಕಾಲದಲ್ಲಿ ವೀರಾವೇಶದಿಂದ ಬುಗುರಿಯಂತೆ ತಿರುಗುತ್ತಲೂ, ಕೋಪಾವೇಶದಿಂದ ತರಿದಾಡುತ್ತಲೂ ಯುದ್ಧಾಂಗಣವನ್ನು ರುಂಡಮುಂಡ ರಕ್ತಮಾಂಸಾದಿಗಳಿಂದ ತುಂಬಿಸಿಬಿಟ್ಟರು. ಹೀಗೆ ಕಾಲಾಳ್ಗಳು ಕಾದಾಡಿ ನಷ್ಟವಾಗಲು, ಹಿಂದಣ ಸೈನ್ಯವು ಮುಂದೆ ಸಾಗಿ, ಆನೆಗಳು ಆನೆಗಳಮೇಲೂ, ಕುದುರೆಗಳು ಕುದುರೆಗಳಮೇಲೂ, ತೇರುಗಳು ತೇರುಗಳಮೇಲೂ, ಭಟರು ಭಟರಮೇಲೂ ಬಿದ್ದು ಹೋರಾಡಲಾರಂಭಿಸಿದರು. ಬಳಿಕ ಮಹಾತುಮುಲಯುದ್ಧವೆಸಗಿ ಅತ್ಯಂತ ಭೀಕರವೂ ಆಶ್ಚರ್ಯವೂ ಆಯಿತು. ಕ್ಷಣಮಾತ್ರದಲ್ಲಿ ಸಕಲ ಸೇನೆಯೂ ರಕ್ತವೃಷ್ಟಿಯಿಂದ ನೆನದಿತು. ಕಣ್ಣು ಮುಚ್ಚಿ ತೆರೆಯುವುದರೊಳಗೆ ಲಯವಾಗಹತ್ತಿತು. ಆನೆಗಳು ಕಡಿವೊತ್ತೆದು ಬೆಟ್ಟದ ಗುಡ್ಡೆಗಳಂತೆ ಒಟ್ಟೊಟ್ಟಲಾಗಿ ಬಿದ್ದುಕೊಂಡುವು. ಕುದುರೆಗಳು ಸೀಳ್ಗೊಂಡು ರಣಾಂಗಣವನ್ನೆಲ್ಲ ಮುಚ್ಚಿ ಬಿದ್ದಿದ್ದುವು. ರಥಗಳು ನುಚ್ಚುನೂರಾಗಿ ದಿಕ್ಕು

ದಿಕ್ಕಿಗೆ ಚದರಿಹೋದುವು. ಕಾಲಾಳುಗಳ ದೇಹವು ಕಡಿತುಂಡಾಗಿ ಅಣ್ಣೆಕಲ್ಲಾಡಿದಂತೆ ಚೆಲ್ಲಾಡಿದ್ದುವು. ರುಧಿರಮಾಂಸಮಜ್ಜಾದಿಗಳು ರಣಾಂಗಣದಮೇಲೆಲ್ಲ ಹಾಸುಗೆಯನ್ನು ಹಾಸಿದಂತೆ ಹರಡಿ ಭೂಮಿಯ ನ್ನೇ ಕಾಣದಂತೆ ಮಾಡಿದ್ದುವು. ಹೀಗೆ ಉಭಯಬಲವೂ ನಷ್ಟವಾದುದ ನ್ನು ಕಂಡು ರಾಕ್ಷಸಸೈನ್ಯದಲ್ಲಿ ವಾಮನ, ವಿರೂಪಾಕ್ಷ, ಜಂಭ, ಶುಂಭ ಖಡ್ಗರೋಮ, ವಜ್ರನಾಭ, ಕಾಲನೇಮಿ ಮೊದಲಾದ ದೈತ್ಯೇಂದ್ರರು ತಾವೇ ಯುದ್ಧಕ್ಕೆ ಮುಂದೆ ಬಂದರು. ಇದನ್ನು ಕಂಡು ಹರಿಬ್ರಹ್ಮೇಂ ದ್ರಾದಿಗಳು ಭಯಪಟ್ಟು ಓಡಿಹೋಗುತ್ತಿದ್ದರು. ಶಿವನು ನೋಡಿ ಅವ ರನ್ನು ತಡೆದು, ರಾಕ್ಷಸೇಂದ್ರನ ಸೇನೆಯಮೇಲೆ ಬೀಳುವುದಕ್ಕೆ ತನ್ನ ಗಣಸ್ತೋಮಕ್ಕೆ ಅಪ್ಪಣೆ ಮಾಡಿದನು. ಆಗ ನಂದಿ, ಮಹಾಕಾಳ, ಕಾಲಹರ, ಕಂಕಾಳಧರ, ರೇಣುಕ, ಭೈರವ ಮೊದಲಾದ ಗಣವರರು ಧನುರ್ಬಾಣಗಳನ್ನು ಧರಿಸಿ, ಕಾದಲನುವಾಗಿ ನಿಂತು ಬಾಣವೃಷ್ಟಿ ಯನ್ನು ಕರೆದರು. ದೈತ್ಯವಾಹಿನಿಯಲ್ಲಿ ಕ್ಷುದ್ರಸೈನ್ಯವು ಕ್ಷಣಕಾಲ ಕಾದಾಡಿ ಹಿಮ್ಮೆಟ್ಟಿ ಓಡಿತು. ಪ್ರಮುಖರಾದ ಶುಂಭ, ಧೂಮ್ರಾಕ್ಷ, ವೃತ್ರಾಸುರಾದಿಗಳು ಮುಂದೆ ಬಂದು ಕಾಳಗಗೊಟ್ಟರು. ಜಂಭನಿಗೆ ಉಗ್ರನೂ, ಶುಂಭನಿಗೆ ವೃಷಭನೂ, ನಿಶುಂಭನಿಗೆ ಭೈರವನೂ, ವೃತ್ರಾ ಸುರನಿಗೆ ದಂಡಧರನೂ, ಕುಂಭನಿಗೆ ಕಾಲಹರನೂ, ನಿಕುಂಭನಿಗೆ ಕಂ ಕಾಳಧರನೂ, ಇದಿರಾಗಿ ಕಾದಾಡಿದರು. ಅವರೆಲ್ಲರಿಗಿಂತಲೂ ಶುಂಭಾ ಸುರ ನಂದೀಶ್ವರರ ಯುದ್ಧವು ಮಹಾಘೋರವಾಗಿದ್ದಿತು. ಅಬ್ಬರಕ್ಕೆ ಅಬ್ಬರ, ಏಟಿಗೆ ಏಟು, ಗಾಯಕ್ಕೆ ಗಾಯ, ಮೂದಲೆಗೆ ಮೂದಲೆಗಳ ನ್ನು ಸಮನಾಗಿ ಮಾಡುತ್ತಿದ್ದರು. ಒಬ್ಬರ ಬಾಣವನ್ನೂ ಬಿಲ್ಲನ್ನೂ ಮತ್ತೊಬ್ಬರು ಕತ್ತರಿಸುತ್ತಲೂ, ಅದಕ್ಕೆ ಪ್ರತಿಯಾಗಿ ಹಾಗೆಯೇ ಇದಿ ರಾಳು ಮಾಡುತ್ತಲೂ, ಒಬ್ಬರೊಬ್ಬರ ರಥಸಾರಥಿಅಶ್ವಾದಿಗಳನ್ನು ನು ಚ್ಚುಗೆಡಹುತ್ತಲೂ, ಅದರಂತೆಯೇ ಪ್ರತಿಕಕ್ಷಿಯು ಮಾಡಿ ಹೊಸರಥ ವನ್ನೇರುತ್ತಲೂ ಕಾದಲು, ಲೆಕ್ಕವಿಲ್ಲದಷ್ಟು ಬಿಲ್ಲು ಬಾಣ ಬತ್ತಳಿಕೆ ರಥಾಶ್ವಾದಿಗಳು ಕಡಿತುಂಡಾಗಿ ಬೆಟ್ಟದಂತೆ ಗುಡ್ಡೆಯಾಗಿ ಬಿದ್ದುವು. ಇವರುಗಳು ಬಿಟ್ಟ ಬಾಣವು ಸಕಲ ದಿಗಂತವನ್ನೂ ತುಂಬಿಕೊಂ

ಡುವು. ಕೊನೆಗೆ ನಂದೀಶನು ಅತ್ಯಂತ ರೋಷಾವೇಶದಿಂದ ಭೀಕರ
ವಾದೊಂದು ಬಾಣವನ್ನು ಕರ್ಣಾಂತವಾಗಿ ಸೆಳೆದು ಬಿಡಲು, ಅದು
ಶುಂಭನ ರಥಪತಾಕಛತ್ರಚಾಮರಸಾರಥಿಗಳನ್ನೆಲ್ಲ ಸುಟ್ಟು ಮಾಡಿ
ರಾಕ್ಷಸನ ದೇಹಕ್ಕೆ ಜ್ವಾಲೆಯನ್ನು ತುಂಬಿಸಿತು. ಅದುವರೆಗೂ
ಹಿಮ್ಮೆಟ್ಟದೆ ಕಾದಾಡಿದ ಶುಂಭನಿಗೆ ಮುಂದೆ ನಿಂತು ಕಾದಲು ಅಳವಿ
ಲ್ಲದೆ ಹೋಗಲು, ಅವನು ಪೌರುಷಗೆಟ್ಟು ಪಾಪಕ್ಕೆ ಹೆಸರದೆ ರಣಾಂ
ಗಣದಿಂದ ಕಾತ್ತೆಗೆದು ಹಿಮ್ಮೆಟ್ಟಿ ಓಡಿಹೋದನು. ಇವನಂತೆಯೇ ಕಾ
ದುತ್ತಿದ್ದ ದೈತ್ಯೇಂದ್ರರೆಲ್ಲರೂ ಶೌರ್ಯಗೆಟ್ಟು ಭೀತಿಪಟ್ಟು ಕಾಲಿಗೆ ಬು
ದ್ಧಿ ಹೇಳಿದರು. ಶಿವಗಣಾಗ್ರಗಣ್ಯರೆಲ್ಲರೂ ಜಯಘೋಷವನ್ನು ಮಾಡು
ತ್ತ ರಾಕ್ಷಸರನ್ನು ಅಟ್ಟಿಕೊಂಡು ಕರ್ಣಾಂತವಾಗಿ ಸೆಳೆದು ಬಾಣಗ
ಳನ್ನು ಪ್ರಯೋಗಿಸುತ್ತ ಹೋದರು. ಆಗ ರಾಕ್ಷಸರು ತೋಳನಿಗೆ
ಹೆದರಿ ಓಡುವ ಕುರಿಗಳಂತೆ ದಿಕ್ಕು ದಿಕ್ಕಿಗೆ ಚದರಿ ಓಡಿಹೋಗಿ, ಘೋ
ಳೆಂದು ಕೂಗಿ ಜಲಂಧರನು ನಿಂತಿದ್ದ ಸ್ಥಾನದಲ್ಲಿ ಹೋಗಿ ಬಿದ್ದರು.
ಸೋತು ಕೆಟ್ಟು ಬಂದ ಆ ರಾಕ್ಷಸರ ಅವಸ್ಥೆಯನ್ನು ದೈತ್ಯಾಧಿರಾಜನು
ನೋಡಿ ಕೋಪವೇರಿ ಹುಬ್ಬು ಗಂಟಿಕ್ಕಿ, ಕೆಂಗಣ್ಣನಲ್ಲಿ ಕಿಡಿಯನ್ನು ಸು
ರಿಸುತ್ತ ತಾನೇ ಯುದ್ಧಕ್ಕೆ ಸನ್ನದ್ಧನಾಗಿ ಹೊರಟನು. ಅವನ ಸನ್ನೆ
ಯಂತೆ ಬಲಶಾಲಿಯಾದ ಮುಖ್ಯಸೇನೆಯು ಅವನ ಸುತ್ತಲೂ ಆವರಿಸಿ
ತೆರಳಿತು. ಕರಾಳಕಾಲಸ್ತೋಮದಂತೆ ಕೆರಳಿ ಈ ಉಗ್ರರಾಕ್ಷಸಸೈನ್ಯ
ವು ಬರುವುದನ್ನು ಪರಶಿವನು ಕಂಡು ನಸುನಗುತ್ತ, ತನ್ನ ಪಿನಾಕವೆಂಬ
ಧನುಸ್ಸನ್ನು ಎಡಗೈಗೆ ತೆಗೆದುಕೊಂಡು ಮುಂದಕ್ಕೆ ಸರಿದು ಒಂದೇಒಂದು
ಬಾಣವನ್ನು ಹೂಡಿ ಲೀಲೆಯಿಂದ ಪ್ರಯೋಗಿಸಿದನು. ಆ ಬಾಣವು
ದನುಜೇಂದ್ರನ ಚತುರಂಗಸೈನ್ಯವನ್ನೂ ತರಿದು ಮಲಗಿಸಿತು. ಮುಖ್ಯ
ಮುಖ್ಯ ರಾಕ್ಷಸರನ್ನೆಲ್ಲ ಸೀಳಿತು. ಕೆಲವರಿಗೆ ಮೂರ್ಛೆಯನ್ನುಂಟು
ಮಾಡಿತು. ಕ್ಷಣಕಾಲದಲ್ಲಿ ಇಂದ್ರಜಾಲದಂತೆ ರಾಕ್ಷಸಸೈನ್ಯದಲ್ಲಿ ಅವಿ
ತವಾದ ಲಯವುಂಟಾಯಿತು. ಹೀಗೆ ತನಗಾದ ಪರಭವವನ್ನು ಜಲಂಧ
ರನು ನೋಡಿ ಅತ್ಯಂತ ಕೋಪವೇರಿ, ತನ್ನ ತೇರನ್ನು ಶಿವನ ಮುಂದು
ಗಡೆಗೆ ಬಿಡಿಸಿ, ಧನುಸ್ಸನ್ನು ನಾದ ಮಾಡಿ ಬಾಣವನ್ನು ತೊಡಿಸಿ, ಶಿವ

ನನ್ನು ಕುರಿತು— ನೀನೆಯೊ ಮಹೇಶನೆಂಬುವನು ? ಎಂದು ಕೇಳುತ್ತ ಒಂದರಹಿಂದೊಂದಾಗಿ ಅಗಣಿತವಾದ ಬಾಣಗಳನ್ನು ಅತಿ ಚಮತ್ಕಾರದಿಂದ ಪ್ರಯೋಗಿಸುತ್ತ ಬಂದನು. ದಾನವನ ಅದ್ಭುತಶರಚಮತ್ಕಾರವನ್ನು ಶಿವನು ಕಂಡು, ಮತ್ತೊಂದು ಬಾಣವನ್ನು ತಾನು ಪ್ರಯೋಗಿಸಿ, ಲೀಲಾಮಾತ್ರದಿಂದ ರಾಕ್ಷಸನ ಬಾಣಗಳನ್ನೆಲ್ಲ ನಡುದಾರಿಯಲ್ಲೇ ಛೇದಿಸಿ ಅವನನ್ನು ಬೆರಗುಗೊಳಿಸಿದನು. ಜಲಂಧರನಾದರೊ "ಆಹಾ ! ಈಗ ನಿನ್ನ ಪೌರುಷವನ್ನು ನೋಡುತ್ತೇನೆ, ಮತ್ತೆ ನನ್ನ ಬಾಣಗಳನ್ನು ಕಡಿ, ನೋಡುವ" ಎಂದು ಹೇಳಿ, ರೋಷಾವೇಶದಿಂದ ಬಾಣಾಸಾರವನ್ನು ಕರೆದು ಸಕಲ ದಿಕ್ಕುಗಳನ್ನೂ ತುಂಬಿಬಿಟ್ಟನು. ಶಿವನು ಪ್ರತಿಬಾಣವನ್ನೆಸೆದು ಅವುಗಳನ್ನೆಲ್ಲ ಕತ್ತರಿಸಿದ್ದಲ್ಲದೆ ಜಲಂಧರನ ಅತುಲಪ್ರತಾಪಕ್ಕೆ ಮೆಚ್ಚಿ ತಲೆದೂಗಿ ಪ್ರಸನ್ನನಾಗಿ ನಿಜರೂಪವನ್ನು ತೋರಿಸಿದನು. ಆ ಕೂಡಲೇ ದಾನವೇಶ್ವರನು ತನ್ನ ಹೃದಯದಲ್ಲಿ ಧ್ಯಾನಗೋಚರವಾಗಿರುವ ಪರವಸ್ತುವೇ ಮುಂದೆ ಬಂದು ನಿಂತಿರುವುದನ್ನು ನೋಡಿದನು. ಬಾಣಗಳನ್ನು ಬಿಸುಟು ದೀರ್ಘದಂಡವಾಗಿ ನಮಸ್ಕರಿಸಿ, ಭಯಭಕ್ತಿಯಿಂದ ಪರಶಿವನನ್ನು ಸ್ತುತಿಸಿದನು. ಶಿವನಾದರೊ— ಮಗನೆ! ನಿನ್ನ ಭಕ್ತಿಗೆ ನಾನು ಮೆಚ್ಚಿರುವೆನು, ನಿನ್ನ ಇಷ್ಟಾರ್ಥವೇನು ? ಕೇಳೆಂದು ನುಡಿದನು. ಆಗ ದೈತ್ಯನು— "ಸ್ವಾಮಿಾ ! ದುರಹಂಕಾರದಿಂದ ಅಜ್ಞನಾದ ನಾನು ಸಚ್ಚಿದಾನಂದಸ್ವರೂಪನಾದ ನಿನ್ನಮೇಲೆ ಕೈಮಾಡಿದೆನು. ಈ ನನ್ನ ದುಷ್ಟ ಶರೀರವನ್ನು ನೀನು ಈಗಳೇ ಸೀಳಿ ಬಿಸುಟು ನನ್ನ ಆತ್ಮನನ್ನು ನಿನ್ನೊಡನೆ ಐಕ್ಯಮಾಡಿಕೊ" ಎಂದು ಪ್ರಾರ್ಥಿಸಿದನು. ಆಗ ಶಿವನು ಆ ಪ್ರಾರ್ಥನೆಯಂತೆಯೇ ಅವನಿಗೆ ಸಾಯುಜ್ಯಪದವಿಯನ್ನೀಯಲು ಕೃಪೆಮಾಡಿದನು. ತನ್ನ ಪಾದದ ಹೆಬ್ಬೆರಲಿನಿಂದ ಭೂಮಿಯಮೇಲೆ ಒಂದು ಚಕ್ರವನ್ನು ಬರೆದು ಅದನ್ನು ತನ್ನ ಮೂರು ಕಣ್ಣಿನಿಂದಲೂ ನೋಡಿದನು. ಸೂರ್ಯಚಂದ್ರರೇ ಆ ಚಕ್ರದ ಹಲ್ಲುಗಳೂ, ಅಗ್ನಿಯೇ ಅದರಸುತ್ತು ಪಟ್ಟಿಯೂ ಆದುವು. ಆ ಚಕ್ರವನ್ನು ಶಿವನು ಎತ್ತಿ ಜಲಂಧರನ ಕೊರಳಿಗೆ ಎಸೆಯಲು, ಥಟ್ಟನೆ ಶಿರಸ್ಸನ್ನು ಛೇದಿಸಿತು. ಅವನ ಆತ್ಮವು ಜ್ಯೋತಿರಾಕಾರ

ವಾಗಿ ಶಿವನ ನೇತ್ರದಲ್ಲಿ ಐಕ್ಯಗೊಂಡಿತು. ಕೂಡಲೇ ಅಂತರಿಕ್ಷದಿಂದ ಶಿವನ ಮಕುಟದಮೇಲೆ ಹೂವಿನ ಮಳೆಯು ಸುರಿಸಿತು. ದೇವದುಂದುಭಿಯು ಮೊಳಗಿತು. ವಿಷ್ಣುಬ್ರಹ್ಮೇಂದ್ರಾದಿಗಳೆಲ್ಲರೂ ಸಂತೋಷದಿಂದಲೂ ಭಕ್ತಿಯಿಂದಲೂ ಶಿವನ ಪಾದಕ್ಕೆರಗಿ ವೇದಮಂತ್ರದಿಂದ ಕೊಂಡಾಡಿದರು. ಶಿವನು ಆ ಸಕಲ ದೇವತೆಗಳನ್ನೂ ಕರುಣಾದೃಷ್ಟಿಯಿಂದ ನೋಡಿ, ಉಚಿತವಚನಗಳಿಂದ ಎಲ್ಲರನ್ನೂ ಸಮಾಧಾನಗೊಳಿಸಿ, ಅವರವರ ಲೋಕಕ್ಕೆ ಅವರವರನ್ನು ಕಳಿಸಿಕೊಟ್ಟನು. ಗಣಸ್ತೋಮದೊಡನೆ ಕೂಡಿ ತಾನು ಕೈಲಾಸಪರ್ವತಕ್ಕೆ ಬಂದು ಅರಮನೆಯಲ್ಲಿ ನಿಜಾನಂದಮಯನಾಗಿದ್ದನೆಂಬಲ್ಲಿಗೆ ಹದಿನೈದನೇ ಅಧ್ಯಾಯವು ಸಂಪೂರ್ಣವು.

---

## ೧೬ ನೇ ಅಧ್ಯಾಯವು.

### ಚಕ್ರಪ್ರದಾನ.

ಜಲಂಧರಾಸುರನನ್ನು ಕೊಂದ ಚಕ್ರವು ಶಿವನ ವಶದಲ್ಲಿರಲು, ಅದನ್ನು ಶಿವನಿಂದ ತಾನು ಪಡೆದುಕೊಳ್ಳಬೇಕೆಂದು ವಿಷ್ಣುವು ಯೋಚಿಸಿ, ಅದಕ್ಕಾಗಿ ಪರಶಿವನನ್ನು ಕುರಿತು ಅತ್ಯಂತ ನಿಷ್ಠೆಯಿಂದ ಉಗ್ರತಪಸ್ಸನ್ನು ಮಾಡಿದನು. ಪರಶಿವನು ಆ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿ ನಿನ್ನಿಷ್ಟವೇನೆಂದು ಕೇಳಿದನು. ವಿಷ್ಣುವು ಎದ್ದು ಭಕ್ತಿಯಿಂದ ನಮಸ್ಕರಿಸಿ, ಎಲೆ ಸ್ವಾಮಿಯೆ! ನಿನ್ನಪ್ಪಣೆಯಮೇರೆ ನಾನು ಲೋಕಸಂರಕ್ಷಣೋದ್ಯೋಗವನ್ನು ಮಾಡಿಕೊಂಡಿರುತ್ತಿರುವಲ್ಲಿ ಒಬ್ಬೊಬ್ಬ ನೀಚರು ಮಧ್ಯೆಮಧ್ಯೆ ಹುಟ್ಟಿ ಲೋಕಕಂಟಕರಾಗಿ ವರ್ತಿಸುವರು. ಅವರನ್ನು ಶಿಕ್ಷಿಸುವುದಕ್ಕಾಗಿ ನನಗೆ ಪ್ರಬಲತರವಾದ ಆಯುಧವೊಂದು ಬೇಕು. ಅದಕ್ಕಾಗಿ ಮಹಾಸ್ವಾಮಿಯು ಬಳಿಯಲ್ಲಿರುವ ಚಕ್ರಾಯುಧವನ್ನು ದಯೆಪಾಲಿಸಬೇಕೆಂದು ಬೇಡಿದನು. ದಯಾಳುವಾದ ಶಿವನು ಅವನಿಷ್ಟಾರ್ಥವನ್ನು ಕೊಟ್ಟು ಸ್ವಸ್ಥಾನಕ್ಕೆ ತೆರಳಿದನು. ಇತ್ತ ವಿಷ್ಣುವು ತನ್ನ ವೈಕುಂಠದಲ್ಲಿ ಸುಖವಾಗಿರುತ್ತ ದುಷ್ಟನಿಗ್ರಹಶಿಷ್ಟರಕ್ಷಣವನ್ನು ಮಾಡಿಕೊಂಡಿರಲು, ಕಲವು ಕಾಲಾನಂತರ ಕ್ಷುವನೆಂಬ ವಿಷ್ಣುಭಕ್ತ ರಾಜ

ನೊಬ್ಬನು ದಧೀಚಿಮುನಿಯೊಡನೆ ಪಗಡೆಯಾಡುವುದಕ್ಕೆ ಕುಳಿತನು. ಮುನಿಯು ಪರಮಶಿವಭಕ್ತನು. ಇವರಿಬ್ಬರಿಗೂ ನೀನು ಸೋತರೆ ವಿಷ್ಣುಭಕ್ತನಾಗಬೇಕೆಂತಲೂ ನೀನು ಸೋತರೆ ಶಿವಭಕ್ತನಾಗಬೇಕೆಂತಲೂ ಶಪಥವಾಯಿತು. ಕಡೆಗೆ ೩ ಬಾರಿಯೂ ವೈಷ್ಣವರಾಜನೇ ಸೋತನು. ಪಂಥದ ಪ್ರಕಾರ ಶಿವಭಕ್ತನಾಗಬೇಕೆಂದು ಮುನಿಯು ರಾಜನನ್ನು ಕೇಳಿದನು. ಅವನಾದರೊ ಧಿಃಕರಿಸಿ, ಚಾರರಿಂದ ಮುನಿಯನ್ನು ಹೊರಕ್ಕೆ ದಬಿಸಿದನು. ಆ ಋಷೀಶನು ತಪಸ್ಸನ್ನಾಚರಿಸಿ ಶಿವನಿಂದ ವಜ್ರಕಾಯವನ್ನು ಪಡೆದು ಬಂದು ಕ್ಷುಪರಾಜನನ್ನು ಯುದ್ಧಕ್ಕೆ ಕರೆದನು. ದೊರೆಯು ಚತುರಂಗಸೇನಾಸಮೇತನಾಗಿ ಬಂದನು. ವಜ್ರಾಂಗಿಯಾದ ಮುನಿಯು ಯಾವ ಆಯುಧಪ್ರಹಾರಕ್ಕೂ ಹೆದರದೆ, ದರ್ಭೆಗಳನ್ನು ಅಭಿಮಂತ್ರಿಸಿ ಬಾಣದಂತೆ ಪ್ರಯೋಗಿಸುತ್ತಾ ದೊರೆಯ ಸೇನೆಯನ್ನೆಲ್ಲ ಲಯಗೊಳಿಸಿದನು. ದೊರೆಯು ದಿಕ್ಕುಗೆಟ್ಟು ಓಡಿ ತನ್ನ ಉಪಾಸ್ಯದೇವತೆಯಾದ ವಿಷ್ಣುವನ್ನು ಮರೆಹೊಕ್ಕನು. ಹರಿಯು ಭಕ್ತೋದ್ಧಾರಕ್ಕಾಗಿ ಋಷಿಯಮೇಲೆ ಯುದ್ಧಕ್ಕೆ ನಿಲ್ಲಬೇಕಾಯಿತು. ನಾನಾಆಯುಧಗಳನ್ನು ಋಷಿಯಮೇಲೆ ಪ್ರಯೋಗಿಸಿದನು. ಯಾವುದೂ ಫಲಕಾರಿಯಾಗಲಿಲ್ಲ. ಕೊನೆಗೆ ವಿಷ್ಣುವು ಕೆರಳಿ ಚಕ್ರಾಯುಧವನ್ನೇ ಪ್ರಯೋಗಿಸಿದನು. ಋಷೀಶನು ರಭಸದಿಂದ ಬಂದ ಆ ಚಕ್ರವನ್ನು ಆಶು ಕೈಯಲ್ಲಿ ಹಿಡಿದು ಹೊಸೆದು ನುಚ್ಚುಮಾಡಿ ಬಿಸುಟು, ಹರಿಯ ಮೇಲೆ ಬೀಳಲಾರಂಭಿಸಿದನು. ವಿಷ್ಣುವು ಸೋತು ತಲೆಯನ್ನು ಕೆದರಿ ಓಡಿದನು. ದೊರೆಯು ಗತಿಗಾಣದೆ ಗಡಗಡನೆ ನಡುಗಿ, ಶಿವಭಕ್ತರೇ ದಿಮ್ಮಿದರೆಂದು ಮುನೀಶನ ಪಾದಕ್ಕೆ ಮರೆಹೊಕ್ಕು ಶಿವದೀಕ್ಷೆಯನ್ನು ಪಡೆದುಕೊಂಡನು. ಇತ್ತ ಹರಿಯು ಕಳೆದುಕೊಂಡ ಚಕ್ರವನ್ನು ಮತ್ತೆ ಪಡೆಯುವುದಕ್ಕಾಗಿ ಶಿವನನ್ನು ಕುರಿತು ತಪಸ್ಸನ್ನು ಮಾಡುತ್ತಾ ಪ್ರತಿ ದಿನವೂ ತಪ್ಪದೆ ಶಿವನನ್ನು ಸಹಸ್ರಕಮಲಗಳಿಂದ ಪೂಜಿಸುವ ನಿಯಮವುಳ್ಳವನಾಗಿದ್ದನು. ಒಂದು ದಿನ ಭಕ್ತನ ಮನೋದೃಢತ್ವವನ್ನು ನೋಡುವುದಕ್ಕಾಗಿ ಶಿವನು ಆ ಎಣಿಕೆಯ ಕಮಲಗಳಲ್ಲಿ ಒಂದನ್ನು ಕಾಣದಂತೆ ಮಾಡಿದನು. ಅರ್ಚನೆಯನ್ನು ಮಾಡುವಾಗ ಒಂದು ಕಡಮೆಯಾಗಿರಲು, ವಿಷ್ಣುವು ತನ್ನ ವ್ರತಗೆಡುವು

ದೆಂದು ಯೋಚಿಸಿ, ಕೂಡಲೇ ಹೆದರದೆ ಆ ಕಮಲಕ್ಕೆ ಪ್ರತಿಯಾಗಿ ತನ್ನ ದಕ್ಷಿಣನೇತ್ರಕಮಲವನ್ನು ಕೊರೆದು ಸಮರ್ಪಿಸಿದನು. ಆಗ ಶಂಕರನು ಮೆಚ್ಚಿ ಪ್ರತ್ಯಕ್ಷನಾಗಿ, ನಿನ್ನ ಇಷ್ಟವೇನು ಕೇಳೆನಲು, ಹರಿಯು ತಾನು ಚಕ್ರವನ್ನು ಕಳೆದುಕೊಂಡುದನ್ನು ವಿವರಿಸಿ ಹೇಳಿ, ಮತ್ತೆ ಅದನ್ನು ದಯೆಪಾಲಿಸಬೇಕೆಂದು ಬೇಡಿದನು. ಪಾರ್ವತೀಪತಿಯಾದರೊ ಮತ್ತೆ ಚಕ್ರವನ್ನು ದಾನ ಮಾಡಿ, ಎಲೆ ವಿಷ್ಣುವೇ! ಕೇಳು, ನಾನು ಯಾವಾಗಳೂ ನನ್ನ ಭಕ್ತರ ಹೃದಯದಲ್ಲಿಯೇ ವಾಸ ಮಾಡಿಕೊಂಡಿರುವೆನು; ಅವರೇ ನನಗೆ ಪ್ರಾಣವು; ಅಂತಹ ನನ್ನ ಭಕ್ತರಾಗಿರುವ ಶಿವಚಿಹ್ನಧಾರಿಗಳಮೇಲೆ ನೀನು ಇನ್ನಾವಾಗಳೂ ಈ ಚಕ್ರವನ್ನು ಪ್ರಯೋಗಿಸಕೂಡದು.'' ಎಂದು ಹೇಳಿ ಕಟ್ಟು ಮಾಡಿ, ವಿಷ್ಣುವನ್ನು ಕಳಿಸಿಕೊಟ್ಟು ತಾನು ಪಾರ್ವತೀಸಮೇತನಾಗಿ ಕೈಲಾಸವನ್ನು ಸೇರಿ ಶಿವಗಣಸಭೆಯಲ್ಲಿ ಸುಖದಿಂದಿದ್ದನೆಂಬಲ್ಲಿಗೆ ಹದಿನಾರನೇ ಅಧ್ಯಾಯದೊಡನೆ ೧ ನೇ ಕಾಂಡವು ಮುಗಿದುದು.

ಮಂಗಳವಾಗಲಿ.

---

## ೨ ನೆಯ ಕಾಂಡ.

---

### ೧ ನೇ ಅಧ್ಯಾಯವು.

### ಗಜಾಸುರ ಸಂಹಾರ.

ಚೆನ್ನಬಸವೇಶನು ಸಿದ್ಧರಾಮೇಶನನ್ನು ಕುರಿತು ಹೇಳತೊಡಗಿದನೆಂತೆಂದರೆ-- ಪೂರ್ವದಲ್ಲಿ ಅಗಸ್ತ್ಯಮಹರ್ಷಿಯು ಕಾವೇರೀನದಿಯ ಮೂಲಸ್ಥಲದಲ್ಲಿ ತಪಸ್ಸನ್ನಾಚರಿಸುತ್ತಿರಲು, ಒಬ್ಬ ಗಂಧರ್ವನು ಪತ್ನೀಸಮೇತನಾಗಿ ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಹೋಗುತ್ತಿದ್ದು, ತಪಸ್ಸಿನಲ್ಲಿರುವ ಋಷಿಯನ್ನು ಕಂಡು ಹಾಸ್ಯ ಮಾಡಿ, ತನ್ನ ಹೆಂಡತಿಯ ತಲೆಯ ಹೂವಿನ ಸರದಿಂದ ಹೊಡೆದನು. ಋಷಿಯು ಕಣ್ಣನ್ನು ತೆರೆದು

ಮೇಲೆ ನೋಡಿ, ಗಂಧರ್ವನನ್ನು ಕಂಡು ಕೋಪವೇರಿ, ಕಯ್ಯೆತ್ತಿ, "ಎಲಾ ಮದಾಂಧನೇ! ನೀನು ಗರ್ವದಿಂದ ನನ್ನನ್ನು ಮಾಡಿದ ಹೂವಿನಿಂದಿಟ್ಟ ಕಾರಣದಿಂದ ಭೂಮಿಯಲ್ಲಿ ಮತ್ತಗಜವಾಗಿ ಹುಟ್ಟಿ ದುಷ್ಟತನದಿಂದ ಲೋಕಕ್ಕೆ ಕಂಟಕನಾಗಿರು" ಎಂದು ಶಾಪವನ್ನು ಕೊಟ್ಟನು. ಅದನ್ನು ಕೇಳಿ ಗಂಧರ್ವನು ಬೆದರಿ ಚಿಂತೆಯಿಂದ ಇಳಿದು ಬಂದು ಋಷಿಯ ಪಾದಕ್ಕೆ ನಮಸ್ಕರಿಸಿ, ಮುನಿವರ್ಯನೇ! ಶಾಪವನ್ನು ವಿಮೋಚನಗೊಳಿಸಿ ರಕ್ಷಿಸು ಎಂದು ಬೇಡಿಕೊಳ್ಳಲು, ಮಹರ್ಷಿಯು— ನೀನು ದುಷ್ಟಗಜವಾಗಿ ಹುಟ್ಟಿ ಯಾರಿಗೂ ಬಗ್ಗದೆ ಇರು; ಕೊನೆಗೆ ಶಿವನಿಂದ ನಿನಗೆ ಮುಕ್ತಿಯಾಗುವುದು ಹೋಗು ಎಂದು ನುಡಿದನು. ಅಗಸ್ತ್ಯರ್ಷಿಯು ಸಾಮಾನ್ಯನೆ? ಶಾಪಶಕ್ತಿಯಿಂದ ಕೂಡಲೇ ಗಂಧರ್ವನ ವಿಮಾನವು ಬಯಲಾಯಿತು. ಹೆಂಡತಿಯು ಕಾಣದಾದಳು. ಗಂಧರ್ವನಾದರೂ ಪರ್ವತಾಕಾರದ ಮಹಾಗಜನಾದನು. ಅದರ ಭೀಕರಸ್ವರೂಪವು ಜಗದಾಶ್ಚರ್ಯಕರವಾಗಿದ್ದಿತು. ಆಕಾಶದ ನಕ್ಷತ್ರಪಂಕ್ತಿಗಳು ಆ ಆನೆಗೆ ಕಟ್ಟಿದ ಗೆಜ್ಜೆಯ ಸರಗಳಂತೆ ಕಾಣುತ್ತಿದ್ದುವು. ಅದು ನಾಲ್ಕು ಸಮುದ್ರದ ನೀರನ್ನು ಒಂದೇಬಾರಿಗೆ ಸೊಂಡಿಲಿಂದ ಸುರ್ರನೆ ಹೀರುವಂತೆಯೂ, ಮೇಲಕ್ಕೆ ಸೊಂಡಿಲನ್ನು ನೀಡಿ ಉಸುರನ್ನು ಬಿಟ್ಟರೆ ಸತ್ಯಲೋಕದಲ್ಲಿರುವ ಬ್ರಹ್ಮನ ಪೀಠವಾದ ಕಮಲವನ್ನೂ ನಡುಗಿಸುವಂತೆಯೂ ಇದ್ದಿತು. ಸೂರ್ಯಚಂದ್ರಬಿಂಬಗಳೆರಡೂ ಆ ಗಜದ ಪಕ್ಕಗಳಲ್ಲಿ ನೇತುಗಟ್ಟಿರುವ ದೊಡ್ಡಗಂಟೆಗಳಂತೆ ಕಾಣುತ್ತಿದ್ದುವು. ಅದರ ಓಟಕ್ಕೆ ಬ್ರಹ್ಮಾಂಡವೆಲ್ಲ ಅದಿರುತ್ತಿದ್ದಿತು. ಅದರ ಗರ್ಜನೆಯು ಲೋಕಕ್ಕೆಲ್ಲ ಮೂರ್ಛೆಯನ್ನುಂಟುಮಾಡುತ್ತಿದ್ದಿತು. ಅದರ ಕುಂಭಸ್ಥಲಗಳು ಪರ್ವತಕ್ಕೆ ಸಮನಾಗಿದ್ದುವು. ಅದರ ಉದ್ದವಾದ ಬಾಲವು ಕಾಲನ ದಂಡದಂತೆ ಭಯಂಕರವಾಗಿದ್ದಿತು. ಅದರ ನೋಟವು ಎಲ್ಲರ ಎದೆಯನ್ನೂ ಬಿರಿಸುತ್ತಿದ್ದಿತು. ಅದರ ಕೊಂಬಿನತಿವಿತಕ್ಕೆ ಕುಲಾಚಲಗಳೆಲ್ಲ ಪುಡಿಪುಡಿಯಾಗಿ ಹೋದುವು. ಅದರ ಓಡಾಡುವ ರಭಸಕ್ಕೆ ಪ್ರಾಣಿತತಿಗಳೆಲ್ಲ ತೂರಿಬಿದ್ದು ಸಾಯುತ್ತಿದ್ದುವು. ಅದರಿದಿರಿಗೆ ನಿಲ್ಲುವುದಕ್ಕೆ ಸ್ವರ್ಗಮರ್ತ್ಯಪಾತಾಳದಲ್ಲಾರಿಗೂ ಎದೆಯಿಲ್ಲದಂತಾಯಿತು. ಅದರ ಸುದ್ದಿಯನ್ನು ಕೇಳಿದ ಕೂಡಲೇ ಜನಗ

ಳು ದಿಕ್ಕುಗೆಟ್ಟು ಓಡುವಂತಾಯಿತು. ಮೂರು ಲೋಕವೂ ಈ ಮಹಾಗಜದ ಭೀತಿಯಿಂದ ಕೊರಗಿ, ತಮ್ಮನ್ನುದ್ಧರಿಸುವರಾರೆಂದು ಚಿಂತಾಕುಲವಾಯಿತು. ಅಷ್ಟದಿಕ್ಪಾಲಕರು ಈ ಆನೆಯ ಸುದ್ದಿಯನ್ನು ಕೇಳ ಯಾವ ಮೂಲೆಗೋಡಿಹೋದರೋ ಗೊತ್ತೇ ಇಲ್ಲದಂತಾದರು. ಪಾತಾಳಲೋಕದ ಸರ್ಪಗಳೆಲ್ಲವೂ ಹೆಡೆಯನ್ನು ಮುಚ್ಚಿ ದರಿಗಳಲ್ಲಿ ಸೇರಿ ಈಚೆಗೆ ತಲೆಯಿಕ್ಕದಂತಾದುವು. ಜಗತ್ತೆಲ್ಲ ಗಜಾಸುರನ ಬಾಧೆಗೀಡಾಗಿ ರೋದನಮಯವಾಯಿತು. ದೇವೇಂದ್ರಾದಿಗಳು ಕಂಗೆಟ್ಟು ಬ್ರಹ್ಮವಿಷ್ಣುಗಳ ಬಳಿಗೆ ಓಡಿಬಂದು ಮಹಾಗಜಾಸುರನ ಹಾವಳಿಯನ್ನು ಅವರೊಡನೆ ದೂರಲು, ಅವರು ಸೇನಾಸಮೇತರಾಗಿ ಹೊರಟು, ಮತ್ತಗಜಕ್ಕೆ ಇದಿರಾಗಿ ಕಾಳಗ ಮಾಡಿದರು. ಪ್ರಚಂಡಮಾರುತಕ್ಕೆ ಇದಿರಾದ ತರಗೆಲೆಗಳಂತೆ ಇವರ ಸೇನೆಯು ಕ್ಷಣಕಾಲದಲ್ಲಿ ಗಜಾಸುರನ ಹೊಯ್ಲಿಗೆ ತಡೆಯಲಾರದೆ ತೂರಿಹೋಯಿತು. ಕಳೆದುಳಿದವರು ದಿಕ್ಕುದಿಕ್ಕಿಗೆ ಪಲಾಯನಗೊಂಡರು. ಕಡೆಗೆ ಹರಿಬ್ರಹ್ಮರೇ ಇದಿರಾಗಿ ಕಾದಿ, ಪೆಟ್ಟನ್ನು ತಿಂದು, ನಿಲ್ಲಲಾರದೆ ಅವರೂ ಪರಶಿವನ ಬಳಿಗೆ ಓಡಿದರು. ಸರ್ವರೂ ಶಂಕರನಿಗೆ ದೀರ್ಘದಂಡನಮಸ್ಕಾರ ಮಾಡಿ ಎದ್ದು ಕೈಮುಗಿದು ನಿಂತು, ಸ್ವಾಮೀ ! ಗಜಾಸುರನೆಂಬ ನೀಚದೈತ್ಯನು ಹೆಚ್ಚಿಕೊಂಡು ನಮ್ಮನ್ನೆಲ್ಲ ಕಾಳಗದಲ್ಲಿ ಸೋಲಿಸಿ ಓಡಿಸಿ, ಲೋಕಗಳನ್ನೆಲ್ಲ ಸಂಹರಿಸುತ್ತಿರುವನು; ನೀನು ಜಗತ್ತಿಗೆಲ್ಲ ಉಳಿಗಾಲವನ್ನುಂಟುಮಾಡಬೇಕು. ಎಂದು ಪ್ರಾರ್ಥಿಸಿದರು. ಶಂಕರನು ದಯೆಗೊಂಡು— ಅವರೆಲ್ಲರಿಗೂ ಹೆದರಬೇಡಿರೆಂದು ಅಭಯದಾನ ಮಾಡಿ, ವೃಷಭನನ್ನು ಹತ್ತಿ ಕೈಲಾಸದಿಂದ ಹೊರಟನು. ಹರಿಬ್ರಹ್ಮಾದಿಗಳೆಲ್ಲರೂ ತಮ್ಮ ತಮ್ಮ ವಾಹನವನ್ನೇರಿ ಚತುರಂಗಸೇನಾಸಮೇತರಾಗಿ ಹೊರಟರು. ಗರುಡ ಗಂಧರ್ವ ಕಿನ್ನರ ಕಿಂಪುರುಷ ವಿದ್ಯಾಧರ ಯಕ್ಷಾದಿಗಳೂ, ಭೂತಗಣರುದ್ರಗಣಗಳೂ ಶಿವನ ಸುತ್ತುವರಿದು ನಡೆಗೊಂಡರು. ಈ ಮಹಾದೇವಸೇನಾಸಮುದ್ರದಲ್ಲಿ ಆಗುತ್ತಿದ್ದ ಭೇರೀಕಹಳಾದಿನಾದಧ್ವನಿಯೂ ಹಸ್ತ್ಯಶ್ವಾದಿಗಳ ಕೂಗೂ ಒಟ್ಟುಗೂಡಿ ದಿಙ್ಮಂಡಲವನ್ನೆಲ್ಲ ಕಿವುಡುಗೊಳಿಸುತ್ತಿದ್ದುವು. ಈ ಸೇನಾಪಾದಹತಿಯಿಂದ ಭೂಮಿಯೆಲ್ಲ ಧೂಳಿಮಯವಾಗಿ ಕಂಪಿಸುತ್ತಿ

ದ್ದಿತು. ಆಗ ಇದಿರಿನಲ್ಲಿ ನೀಲಗಿರಿಯು ಕೈಕಾಲು ಮೂಡಿ ನಡೆತರುತ್ತಿರುವಂತೆಯೂ, ಪ್ರಳಯಕಾಲದ ಮೇಘಗಳು ಗಜಾಕೃತಿಯನ್ನು ತಾಳಬರುವಂತೆಯೂ, ಗಜಾಸುರನು ಮಹಾಗರ್ಜನೆಯನ್ನು ಮಾಡಿಕೊಂಡು ಬ್ರಹ್ಮಾಂಡವೆಲ್ಲ ನಡುಗುವಂತ ಶ್ವಾಸೋಚ್ಛ್ವಾಸಗಳನ್ನು ಮಾಡುತ್ತ ಬರುತ್ತಿದ್ದನು. ಇದಿರಿಗೆ ಸಿಕ್ಕಿದ ಬೆಟ್ಟಗಳ ಬುಡಕ್ಕೆ ಕೊಂಬನ್ನು ನಟ್ಟು ಚಿಮ್ಮುತ್ತಲೂ, ತಗ್ಗಲ್ಲಿದ್ದ ಮರಗಳನ್ನು ಸುಂಡಿಲಿನಿಂದ ಸುತ್ತಿ ಬುಡಸಹಿತ ಕಿತ್ತು ಎಸೆಯುತ್ತಲೂ, ದೊಡ್ಡದೊಡ್ಡಗುಂಡುಗಳನ್ನು ಸುಂಡಿಲಿನಿಂದ ಹಿಡಿದು ದಿಕ್ಕುದಿಕ್ಕಿಗೆ ಬೀರುತ್ತಲೂ, ಧೂಳಿಯನ್ನೆತ್ತಿ ಬಿರುಸಾಗಿ ಬೀಸುತ್ತಲೂ ಆರ್ಭಟಿಸುತ್ತಲೂ ದೇವಸೇನೆಯನ್ನು ಸಂಧಿಸಿದನು. ಆಗ ಸೈನಿಕರೆಲ್ಲರೂ— "ಶಿವನೇ! ಈತನೇ ಲೋಕವನ್ನೆಲ್ಲ ತಿಂದು ತೇಗಿದ ಮಹಾಗಜಾಸುರನು!" ಎಂದು ಕೂಗಿಕೊಂಡು ಬಡಬಾಗ್ನಿಯನ್ನು ಸಮುದ್ರದ ನೀರು ಮುತ್ತುವಂತೆ ಎಲ್ಲರೂ ಶೌರ್ಯಾಟೋಪದಿಂದ ಆನೆಯನ್ನು ಮುತ್ತಿದರು. ಒಂದು ಕಡೆಯಲ್ಲಿ ಕತ್ತಿ ಕೊಡಲಿ ಈಟ ಮೊದಲಾದ ಆಯುಧಗಳ ಪ್ರಹಾರವೂ, ಒಂದು ಕಡೆ ಕುಂತ ಗದೆ ದಂಡಾಯುಧಗಳ ಹೊಡೆತವೂ, ಬೇರೊಂದು ಕಡೆಯಲ್ಲಿ ಬಾಣ ಅಂಕುಶ ಮೊದಲಾದುವುಗಳ ಇರಿತವೂ, ಇನ್ನೊಂದು ಕಡೆಯಲ್ಲಿ ಕಲ್ಲು ಗುಂಡು ಮೊದಲಾದುವುಗಳ ಏಟೂ, ಅವಿಚ್ಛಿನ್ನವಾಗಿ ಆನೆಯಮೇಲೆ ಸುರಿಯುತ್ತಿದ್ದುವು. ಮೈಯತುಂಬ ಬಾಣಗಳು ಕವಿದಿದ್ದ ಗಜರಾಜನು ಬೆತ್ತದ ಮೆಳೆಗಳು ಮುತ್ತಿದ ದೊಡ್ಡಬೆಟ್ಟದಂತೆ ಕಾಣುತ್ತಿದ್ದನು. ಹೀಗೆ ಬಲವಾದ ಪೆಟ್ಟಿಗೆ ಸಿಕ್ಕಿದ ದಾನವನು ಕ್ಷಣಕಾಲವೂ ನಿಂತಲ್ಲಿ ನಿಲ್ಲದೆ ಬಾಲವನ್ನು ಬೀಸಿ ಅಪ್ಪಳಿಸುತ್ತಲೂ, ಸುಂಡಿಲನ್ನು ಝಾಡಿಸಿ ಸದೆ ಬಡಿಯುತ್ತಲೂ, ಕೊಂಬಿನಿಂದ ಇರಿಯುತ್ತಲೂ, ಕಾಲಿಗೆ ಸಿಕ್ಕಿದವರನ್ನು ತುಳಿಯುತ್ತಲೂ, ಸಿಕ್ಕಿದವರನ್ನು ಹಿಡಿಹಿಡಿದು ಚಂಡಿನಂತೆ ಆಕಾಶಕ್ಕೆ ಎಸೆಯುತ್ತಲೂ, ಲೀಲಾಜಾಲದಿಂದ ಸೇನೆಯನ್ನು ಬರಿದುಮಾಡುತ್ತಿದ್ದನು. ಮತ್ತೆ ಮತ್ತೆ ಹೊಸಸೇನೆಯು ಕವಿಯುವುದಕ್ಕೂ, ಗಜರಾಜನು ಬಯಲು ಮಾಡುವುದಕ್ಕೂ ಕೊನೆ ಮೊದಲಿಲ್ಲವಾಯಿತು. ಎಲ್ಲಿ ನೋಡಿದರೂ ಕೈಕಾಲುಡಿದು ರಕ್ತವನ್ನು ಕಾರಿ ಪ್ರಾಣವನ್ನು ಬಿಟ್ಟು ಬಿಡುತ್ತಲೂ ಇರುವ

ಕಾಲಾಳುಗಳೂ, ನುಚ್ಚುನುರಿಯಾದ ತೇರುಗಳೂ, ಸದ್ದಡಗಿ ಕಣ್ಮುಚ್ಚಿ ಉಬ್ಬರಿಸಿ ಉರುಳಿರುವ ಆನೆಗಳೂ, ಕತ್ತರಿಸಿ ಕಡಿತುಂಡಾಗಿ ಬಿಟ್ಟಲಾಗಿರುವ ಕುದುರೆಗಳೂ ರಣಾಂಗಣದಲ್ಲೆಲ್ಲ ಬಿದ್ದು ಭೀಕರವಾಗಿದ್ದುವು. ಎತ್ತನೋಡಿದರೂ ರಕ್ತಪ್ರವಾಹವೂ, ಮಾಂಸಖಂಡಗಳೂ, ರುಂಡಮುಂಡಗಳೂ, ಕಿರೀಟಬಾಹುಪೂರಗಳೂ, ಮುರಿದ ಛತ್ರಚಾಮರಗಳೂ ಹರಡಿಕೊಂಡಿದ್ದುವು. ಇದನ್ನೆಲ್ಲ ನೋಡಿ ಹರಿಬ್ರಹ್ಮರಿಗೂ ಇಂದ್ರಾದಿದಿಕ್ಪಾಲಕರಿಗೂ ರೋಷವು ನೂರ್ಮಡಿಯಾಯಿತು. ಈ ದೇವನಾಯಕರುಗಳೇ ಸ್ವತಃ ಯುದ್ಧಕ್ಕೆ ಅಣಿಯಾಗಿ, ಸುತ್ತಲೂ ಗಜಾಸುರನನ್ನು ಮುತ್ತಿ, ಮುಸಲ ಮುದ್ಗರ ಕುಂತ ಗದಾ ಬಾಣ ಪರಶುಗಳಿಂದ ಹೊಡೆದು ಬಡಿದು ಕಡಿದು ಬೊಬ್ಬಿರಿಯುತ್ತ ಬಂದರು. ಗಜರಾಜನು ಬುಗುರಿಯಂತೆ ಬಿರುಬಿರನೆ ತಿರುಗುತ್ತ ಸುಂಡಿಲನ್ನು ನಾಲ್ಕು ಕಡೆಯೂ ರಭಸದಿಂದ ತಿರುಗಿಸುತ್ತ, ಪ್ರಳಯಕಾಲದ ಮೇಘದಂತೆ ಗರ್ಜಿಸುತ್ತ, ಮೇಲೆ ಬಿದ್ದು, ಒಬ್ಬೊಬ್ಬರನ್ನಾಗಿ ರಥದಿಂದೆಳೆದು ಸುಂಡಿಲಿನಲ್ಲಿ ಸುತ್ತಿ ಅವರವರ ದಿಕ್ಕಿಗೆ ಒಗೆದು, ರಥಗಳನ್ನು ನೂಂಕಿ ಉರುಳಿಸುತ್ತಿದ್ದಿತು. ಬ್ರಹ್ಮನ ಮೇಲೆ ಬಲವಾಗಿ ಉಸಿರನ್ನು ಬಿಟ್ಟು ಫೂತ್ಕರಿಸಿ "ಸತ್ಯಲೋಕದಲ್ಲಿ ಸುಖವಾಗಿರು ಹೋಗು" ಎಂದು ಅಟ್ಟಿದಂತೆ ಆಕಾಶಕ್ಕೆ ಹಾರಿಸಿಬಿಟ್ಟಿತು. ಅಷ್ಟರಲ್ಲಿ ವಿಷ್ಣುವು ಗಜಾಸುರನ ಮಹಾಪ್ರಳಯವನ್ನು ನೋಡಿ ಅತ್ಯಂತ ರೋಷಾವಿಷ್ಟನಾಗಿ, ತನ್ನ ಸುವರ್ಣರಥವನ್ನು ಗಜಾಸುರನಮುಂದಕ್ಕೆ ಸರಿಸಿ, ಪುಂಖಾನುಪುಂಖವಾಗಿ ಬಾಣಗಳನ್ನು ಆನೆಯಮೇಲೆ ವರ್ಷಿಸಿದನು. ಇದನ್ನು ಕಂಡಕೂಡಲೇ ದೈತ್ಯನು ಸರ್ರನೆ ಬಂದು ಅವನರಥವನ್ನೇ ಸುಂಡಿಲಿನಿಂದಸುತ್ತಿ ಗರಗರನೆ ತಿರುಗಿಸಿ ಬೀಸಿ ಎಸೆದನು. ಹರಿಯು ಕೈಯಲ್ಲಿ ಗದೆಯನ್ನು ಹಿಡಿದು ರಥದಿಂದ ದುಮಿಕಿ ಸಿಹ್ಮನಾದವನ್ನುಮಾಡಿ ಆನೆಯಕುಂಭಸ್ಥಲದಮೇಲೆ ಬಲವಾಗಿ ಅಪ್ಪಳಿಸಿದನು. ಆಪೆಟ್ಟನ್ನು ಆನೆಯು ಲಕ್ಷಿಸದೆ ಭರ್ರನೆ ಹರಿಯನ್ನು ಅಟ್ಟಿಕೊಂಡು ಹೋಗಿ ಹಿಡಿದುಕೊಂಡಿತು. ವಿಷ್ಣುವು ಅದರ ಸುಂಡಿಲಿನಿಂದ ನುಣುಚಿಕೊಂಡು ಹಾರಿ ದೂರದಲ್ಲಿ ನಿಂತು ಗರ್ಜಿಸಿದನು. ಸೂರ್ಯೇಂದ್ರಾದಿಗಳ ಅವಸ್ಥೆಯೆಲ್ಲವೂ ಹೀಗಾದುದನ್ನು ಲೋಕದ ಜನವು ನೋಡಿ ಭೀತಿಪಟ್ಟು ನಮಗಿನ್ನುಳಿ

ಗಾಲವು ಬರಲಿಲ್ಲವೆಂದು ಚಿಂತಿಸುತ್ತ ಶಿವನ ಮನೆಹೊಕ್ಕು ಮೊರೆಯಿಟ್ಟರು. ಆಗ ಶಂಕರನೇ ಚಿತ್ತೈಸಿ, ಗಜಾಸುರನಿಗಿದಿರಾಗಿ ತನ್ನ ಪಿನಾಕವೆಂಬ ಧನುಸ್ಸಿನ ಸಿಂಜಿನಿಯನ್ನು ಸೆಳೆದು ಧ್ವನಿ ಮಾಡಿ, ಇದಿರಲ್ಲಿರುವ ಗಜಾಸುರನನ್ನು ಕರುಣಾಕಟಾಕ್ಷದಿಂದ ನೋಡಿ, ಗುರಿ ಯಿಟ್ಟು ಪ್ರಯೋಗಿಸಿದನು. ಕೂಡಲೇ ಗಜದ ರುಂಡವು ಕಡಿತುಂಡಾಗಿ ಹಾರಿತು. ಮುಂಡವು ಭೂಮಿಯ ಮೇಲೆ ಬಿದ್ದಿತು. ಇದನ್ನು ಕಂಡು ಜಗತ್ತೆಲ್ಲವೂ ಆನಂದಾಬ್ಧಿಯಲ್ಲಿ ಮುಳುಗಿ ಕೋಲಾಹಲವನ್ನು ಮಾಡಿತು. ಕೂಡಲೇ ಗಜಾಸುರನಾಗಿದ್ದ ಗಂಧರ್ವನು ತನ್ನ ಪೂರ್ವದ ಗಾಂಧರ್ವರೂಪವನ್ನು ಧರಿಸಿ, ಚಂದ್ರಶೇಖರನ ಪಾದಾರವಿಂದಕ್ಕೆ ಭಕ್ತಿಯಿಂದ ನಮಸ್ಕರಿಸಿ, ಸ್ತುತಿಸಿ, ನಾನು ಜನ್ಮವೆತ್ತಿದ್ದ ಈ ಆನೆಯ ಶರೀರದ ಯಾವುದಾದರೊಂದು ಚಿಹ್ನವನ್ನು ಸ್ವಾಮಿಯು ಧರಿಸಬೇಕೆಂದು ಬೇಡಿಕೊಂಡನು. ಭಕ್ತಸುಲಭನಾದ ಸ್ವಾಮಿಯು ಹಾಗೆಯೇ ಆಗಲೆಂದು ನುಡಿದು, ಆನೆಯಚರ್ಮವನ್ನು ಸುಲಿದು ಹೊದ್ದು, ಆ ಗಂಧರ್ವನಿಗೆ ಗಣಪದವಿಯನ್ನು ದಯೆಪಾಲಿಸಿ, ದೇವತೆಗಳಿಗೆ ಸುಖಗೊಳಿಸಿ, ಕೈಯಲ್ಲಿ ಗಜದ ರುಂಡವನ್ನು ಹಿಡಿದು ನರ್ತಿಸುತ್ತ, ಕೈಲಾಸಕ್ಕೆ ತೆರಳಿದನು. ಅಂತಃಪುರದಲ್ಲಿದ್ದ ಪಾರ್ವತಿಯು ತನ್ನ ದೇಹದ ಮೇಲಣ ಕೊಳೆಯನ್ನು ತೆಗೆದು ಆಕೃತಿಯನ್ನು ಮಾಡಿ ಪ್ರಾಣವನ್ನು ತುಂಬಿ ಅವನನ್ನು ಬಾಗಿಲ ಕಾವಲಿಗೆ ಇರಿಸಿರಲು, ಆತನು ಅಂತಃಪುರಪ್ರವೇಶವನ್ನು ಮಾಡುತ್ತಿದ್ದ ಶಿವನನ್ನು ಕಂಡು ಒಳಹೋಗಬೇಡವೆಂದು ತಡೆದನು. ಶಿವನಾದರೊ ಥಟ್ಟನೆ ಆತನ ತಲೆಯನ್ನು ಕಡಿದುರುಳಿಸಿ ಒಳಹೊಕ್ಕನು. ತನ್ನ ಪುತ್ರನು ಶಿವನ ಹಸ್ತದಿಂದ ಹೀಗೆ ಅಳಿದನೆಂಬ ಸುದ್ದಿಯನ್ನು ಪಾರ್ವತಿಯು ಕೇಳಿ ಮನಸ್ಸಿನಲ್ಲಿ ಬಹುಳವಾಗಿ ನೊಂದು ಪರಶಿವನೊಡನೆ ಕೋಪಿಸಿಕೊಂಡಳು. ಶಂಕರನಾದರೊ– ದೇವಿಯೆ! ನಿನ್ನ ಮಗನು ಬದುಕಿರುವನು; ನೋಡು ಬಾರೆಂದು ಹೇಳಿ ಕರೆತಂದು, ತನ್ನ ಕೈಯಲ್ಲಿದ್ದ ಆನೆದಲೆಯನ್ನು ಬಾಗಿಲಲ್ಲಿ ಬಿದ್ದಿದ್ದ ಪಾರ್ವತಿಯ ನಂದನನ ಮುಂಡಕ್ಕೆ ಜೋಡಿಸಲು, ಪ್ರಾಣವಳಿದಿದ್ದ ಆ ಶರೀರದಲ್ಲಿ ಮುನ್ನಿನಂತೆ ಪ್ರಾಣವು ಕೂಡಿಕೊಂಡಿತು. ಅದರೆ ಮಗನಿಗೆ ಉಂಟಾದ ಮುಖವಿಕಾರವನ್ನು ಪಾರ್ವತಿಯು ನೋಡಿ ಖೇದಗೊಂ

ಡಳು. ಆಗ ಶಿವನು— ಎಲೈ ಪಾರ್ವತಿಯೇ ! ನಿನ್ನ ಕುಮಾರನ ಮುಖವು ವಿಕಾರವಾಯ್ತೆಂದು ಚಿಂತಿಸಬೇಡ; ಇವನಿಗೆ ನನ್ನ ಗಣಸಮೂಹದಮೇಲೆ ಆಧಿಪತ್ಯವನ್ನು ಇತಃಪರಿ ಕೊಟ್ಟಿರುವೆನು; ಮತ್ತು ಇವನನ್ನು ಭಜಿಸಿದವರೆಲ್ಲರಿಗೂ ಸಕಲೇಷ್ಟಾರ್ಥಗಳೂ ಸಿದ್ಧಿಸುವಂತೆ ವರವನ್ನು ಪಾಲಿಸಿರುವೆನು; ಎಂದು ಹೇಳಿ ಪಾರ್ವತಿಯ ಮನಸ್ಸನ್ನು ಸಮಾಧಾನಪಡಿಸಿ, ಸಂತೋಷಗೊಳಿಸಿ, ಸುತ್ತಲೂ ನಿಂತಿರುವ ವಿಷ್ಣುಬ್ರಹ್ಮಾದಿಗಳೆಲ್ಲರಿಗೂ ಅಪ್ಪಣೆಯನ್ನಿತ್ತು ಕಳಿಸಿ, ಸರ್ವಮಂಗಳೆಯೊಡನೆ ಅಂತಃಪುರಕ್ಕೆ ತೆರಳಿದನೆಂಬಲ್ಲಿಗೆ ೧ ನೇ ಅಧ್ಯಾಯವು ಸಂಪೂರ್ಣವು.

---

## ೨ ನೇ ಅಧ್ಯಾಯವು.

### ಶಿವಲೋಕ ಶಿವಸಭಾ ವರ್ಣನವು.

ಎಲೈ ಸಿದ್ಧರಾಮೇಶನೆ ! ಏಕಾಗ್ರಚಿತ್ತದಿಂದ ಕೇಳು. ಈ ಬ್ರಹ್ಮಾಂಡವನ್ನೆಲ್ಲ ಒಂದು ಸುವರ್ಣದೇವಾಲಯವನ್ನಾಗಿ ಭಾವಿಸಿದರೆ ಅದರಮೇಲೆ ಮುತ್ತಿನ ಕಲಶವನ್ನಿಟ್ಟಿರುವಂತೆ ನಿರ್ಮಲಸ್ಫಟಿಕವರ್ಣವಾದ ಶಿವಲೋಕವು ಬ್ರಹ್ಮಾಂಡವೆಲ್ಲಕ್ಕೂ ಇಷ್ಟಾರ್ಥವನ್ನು ಕೊಡುವ ಕಲ್ಪವೃಕ್ಷದಂತೆ ಕಾಣಿಸುತ್ತಿರುವುದು. ಇದರ ಮಹಿಮೆಯು ವೇದಗಳಿಗೂ ಹೇಗೂ ಕೂಡ ಗೋಚರವಾಗದೆ ಇರುವುದು. ಅದರಲ್ಲಿರುವ ಶಿವನ ರಾಜಧಾನಿಯು ೧೭ ಕೋಟಿ ಯೋಜನದ ವಿಸ್ತಾರವುಳ್ಳದ್ದಾಗಿರುವುದು. ಅದರ ಸುತ್ತಲೂ ತೇಜೋಮಯವಾದ ಕೋಟೆಯು ಆವರಿಸಿರುತ್ತಿರಲು, ಬ್ರಹ್ಮಾನಂದದಿಂದ ಪರಿಪೂರ್ಣವಾದ ದೊಡ್ಡ ಬೊಕ್ಕಸದಂತೆ ತೋರುತ್ತಿರುವುದು. ಅದಕ್ಕೆ ಎಂಟು ಬಾಗಿಲುಗಳಿರುವುವು. ಇವುಗಳೊಳಗೆ ಇಂದ್ರದಿಕ್ಕಿನಬಾಗಿಲಲ್ಲಿ ಸಿತಾಂಗನೆಂಬ ಭೈರವನು ಕೆಂಬಣ್ಣದ ಶರೀರವುಳ್ಳವನಾಗಿ ಹಂಸವನ್ನೇರಿ ಬ್ರಾಹ್ಮಿ ಎಂಬ ಶಕ್ತಿಯೊಡನೆ ಕೂಡಿ ಕಾವಲಿರುವನು. ಅಗ್ನಿದಿಕ್ಕಿನ ಬಾಗಿಲಲ್ಲಿ ರುರು ಎಂಬ ಭೈರವನು ಹೇಮವರ್ಣದವನಾಗಿ ಮಾಹೇಶ್ವರಿ ಯೆಂಬ ಶಕ್ತಿಯೊಡನೆ ಕೂಡಿ ಆಡನ್ನು ಹತ್ತಿ ಕಾವಲಿರುವನು. ಯಮದಿಕ್ಕಿನಲ್ಲಿ ಚಂಡನೆಂಬ ಭೈರವನು ಹಳದೀಬಣ್ಣ

ವುಳ್ಳವನಾಗಿ ಕೌಮಾರಿ ಯೆಂಬ ಶಕ್ತಿಯೊಡನೆ ಕೂಡಿ ನವಿಲನ್ನೇರಿ ವಾಸಿಸುವನು. ನಿಋ್ಋತಿದಿಕ್ಕಿನಲ್ಲಿ ಕ್ರೋಧನೆಂಬ ಭೈರವನು ಹೊಂಬಣ್ಣದವನಾಗಿ ವೈಷ್ಣವಿ ಯೆಂಬ ಶಕ್ತಿಯಿಂದ ಕೂಡಿ ಗರುಡನನ್ನೇರಿ ಕಾದಿರುವನು. ವರುಣದಿಕ್ಕಿನಲ್ಲಿ ಉನ್ಮತ್ತನೆಂಬ ಭೈರವನು ಕೆಂಪುಬಣ್ಣದವನಾಗಿ ವಾರಾಹಿ ಯೆಂಬ ಶಕ್ತಿಯೊಡನೆಕೂಡಿ ಕೋಣವನ್ನೇರಿ ಕಾವಲಿರುವನು. ವಾಯುದಿಕ್ಕಿನಲ್ಲಿ ಕಾಪಾಲಿ ಭೈರವನು ರನ್ನದ ಬಣ್ಣವುಳ್ಳವನಾಗಿ ಮಾಹೇಂದ್ರಿ ಯೆಂಬ ಶಕ್ತಿಯೊಡನೆ ಕೂಡಿ ಆನೆಯನ್ನೇರಿ ವಾಸವಾಗಿರುವನು. ಕುಬೇರದಿಕ್ಕಿನಲ್ಲಿ ಭೀಷಣನೆಂಬ ಭೈರವನು ಬೂದಿಬಣ್ಣದವನಾಗಿ ಚಾಮುಂಡಿ ಯೆಂಬ ಶಕ್ತಿಯೊಡನೆ ಕೂಡಿ ಸಿಂಹವಾಹನನಾಗಿ ಕಾದಿರುವನು. ಈಶಾನದಿಕ್ಕಿನಲ್ಲಿ ಸಂಹಾರಭೈರವನು ಹೇಮವರ್ಣದವನಾಗಿ ಕಾಳಿಯೆಂಬ ಶಕ್ತಿಯಿಂದ ಕೂಡಿ ಇಲಿಯನ್ನೇರಿ ಕಾವಲಿರುವನು. ಪ್ರತಿಯೊಬ್ಬ ಭೈರವರೂ ತ್ರಿನೇತ್ರ ಚತುರ್ಭುಜಗಳುಳ್ಳವರಾಗಿ ಆಯುಧಗಳನ್ನು ಹಿಡಿದು ಸಮಾನಶಕ್ತಿಯುತರಾದ ೭೦ ಕೋಟಿ ಪರಿವಾರದಿಂದ ಕೂಡಿರುತ್ತಿರುವರು. ಇಂತಹ ಬಾಗಿಲನ್ನು ಕಳೆದು ಒಳಗೆ ನುಗ್ಗಿ ನೋಡಿದರೆ, ಕಣ್ಣಿಗೆ ಹಬ್ಬವಾಗಿ ಪುಣ್ಯದ ಪ್ರವಾಹದಂತೆ ತೋರುತ್ತಿರುವ ಬೀದಿಗಳು ೧ ಲಕ್ಷವಿರುವುವು. ಪ್ರತಿಯೊಂದು ಬೀದಿಯಲ್ಲೂ ಮುಂದೆ ಹೊನ್ನಿನ ಗೋಪುರವು ಶೋಭಿಸುತ್ತ ಇಕ್ಕೆಲದಲ್ಲೂ ಸುವರ್ಣರಜತನಿರ್ಮಿತವಾದ ರತ್ನಖಚಿತಮಂದಿರಗಳು ಅಗಣಿತವಾಗಿ ಸಾಲುಸಾಲಾಗಿ ಥಳಥಳಿಸುತ್ತಿರುವುವು. ಪ್ರತಿಯೊಂದು ಕೇರಿಯನ್ನು ಒಬ್ಬೊಬ್ಬ ಗಣಾಧೀಶನು ಶಿವನಾಜ್ಞೆಯ ಮೇರೆ ಕಾದುಕೊಂಡಿರುವನು. ಪ್ರತಿಯೊಂದು ಬೀದಿಯಲ್ಲೂ ಅಲ್ಲಿಗಲ್ಲಿಗೆ ವೃಷಭಧ್ವಜಗಳನ್ನು ನಿಲ್ಲಿಸಿ ತೋರಣಗಳನ್ನು ಕಟ್ಟಿ ಭೂಮಿಯನ್ನು ಕಸ್ತೂರೀಕುಂಕುಮಾದಿಗಳಿಂ ಸಾರಿಸಿ ಮುತ್ತಿನ ರಂಗವಲ್ಲಿಯನ್ನಿಕ್ಕಿ ಅಲಂಕರಿಸಿರುವರು. ಅಲ್ಲಲ್ಲಿ ಮಂಗಳವಾದ್ಯಗಳು ಮೊಳಗುತ್ತಿರುವುವು. ನಿಷ್ಕಾಮಿಗಳೂ, ನಿಗಮಾಗಮವೇತ್ತರೂ, ನೀತಿಕೋವಿದರೂ, ನಿರ್ಜಿತಮಾಯರೂ, ನಿರ್ಲಿಪ್ತಮೋಹರೂ, ನಿರ್ಣೀತಬೋಧರೂ, ನಿರ್ಧೂತಪಾಪರೂ, ನಿಶ್ಚಲಚಿತ್ತರೂ, ನಿಜಭಕ್ತರೂ ಆದ ಮಹಾಶಿವಗಣದ ಸ್ತೋಮವು ದಟ್ಟವಾಗಿ ಸಂಚರಿಸುತ್ತಿರುವುದು. ಮಾಂಗಲ್ಯ ಲಾವಣ್ಯ ಶೃಂ

ಗಾನಸರ್ವಸ್ವದಾತಿರುವ ರುದ್ರಗಣಿಕೆಯರು ವಿಲಾಸವೈಭವದಿಂದ ತಿರುಗಾಡುತ್ತಿರುವರು. ಇಂತಹ ಆನಂದಶೋಭಾಪುಣ್ಯಮಯವಾದ ನಗರದ ಮಧ್ಯದಲ್ಲಿರುವ ಪರಶಿವನರಮನೆಯು, ಎಲ್ಲ ಬೆಟ್ಟಗಳ ಮಧ್ಯದಲ್ಲೂ ಮೇರುಪರ್ವತವು ಶೋಭಿಸುವಂತೆಯೂ, ನಕ್ಷತ್ರಮಧ್ಯದಲ್ಲಿ ಚಂದ್ರಮಂಡಲವಿರುವಂತೆಯೂ, ನಾನಾರತ್ನಗಳ ನಡುವೆ ಚಿಂತಾಮಣಿ ಯಿರುವಂತೆಯೂ ಗ್ರಹಮಂಡಲದ ಮಧ್ಯೆ ಸೂರ್ಯನೆಸೆಯುವಂತೆಯೂ, ಕ್ಷೇತ್ರಗಳೊಳಗೆಲ್ಲ ಕಾಶೀನಗರವು ಮೆರೆಯುವಂತೆಯೂ, ಶಿವಗಣಗಳ ಮಂದಿರಗಳ ಮಧ್ಯದಲ್ಲೆಲ್ಲ ತಾನೇತಾನಾಗಿ ತೋರುತ್ತ ೩೭ ಕೋಟಿ ಯೋಜನದಗಲವುಳ್ಳದ್ದಾಗಿರುವುದು. ಆ ಅರಮನೆಯ ಸುತ್ತಲೂ ಪರಮಶಿವತತ್ತ್ವವೇ ೧೦ ಸಾವಿರ ಯೋಜನವಿಸ್ತಾರದ ನಿರ್ಮಲಸ್ಫಟಿಕವರ್ಣದ ಕೋಟೆಯಾಗಿ ಆವರಿಸಿರುವುದು. ಅದರಮೇಲೆ ನೂರು ಯೋಜನವಿಸ್ತಾರದ ರತ್ನಮಯವಾದ ಕೋಟೆದೆನೆಗಳಿರುವುವು. ಆ ಕೋಟೆಗೆ ಭಕ್ತಿ ಜ್ಞಾನ ವೈರಾಗ್ಯ ಮುಕ್ತಿಗಳೇ ನಾಲ್ಕು ಮಹಾದ್ವಾರಗಳಾಗಿರುವುವು. ಪೂರ್ವದಿಕ್ಕಿನ ಮಹಾದ್ವಾರದಮೇಲೆ ಋಗ್ವೇದವು ೧ ಲಕ್ಷ ಯೋಜನವಿಸ್ತಾರದಿಂದ ಸುವರ್ಣಮಯವಾದ ಗೋಪುರವಾಗಿ ರಂಜಿಸುತ್ತಿರುವುದು. ಅಲ್ಲಿ ನಂದೀಶ್ವರನು ಕಾದಿರುವನು. ದಕ್ಷಿಣದಿಕ್ಕಿನ ದ್ವಾರದಮೇಲೆ ಯಜುರ್ವೇದವು ೧ ಲಕ್ಷ ಯೋಜನವಿಸ್ತಾರದ ಗೋಪುರವಾಗಿ ಇಂದ್ರನೀಲರತ್ನಮಯವಾಗಿ ಶೋಭಿಸುವುದು. ಅಲ್ಲಿ ವೀರಭದ್ರೇಶ್ವರನ ಕಾವಲಿರುವುದು. ಪಶ್ಚಿಮದ್ವಾರದ ಮೇಲೆ ಸಾಮವೇದವು ೧ ಲಕ್ಷಯೋಜನವಿಸ್ತಾರದಿಂದ ಮುಕ್ತಾಮಯವಾದ ಗೋಪುರವಾಗಿ ಮೆರೆಯುತ್ತಿರುವುದು. ಅಲ್ಲಿ ಮಹಾಕಾಳನು ಕಾವಲುಗೊಂಡಿರುವನು. ಉತ್ತರದ್ವಾರದಮೇಲೆ ಅಥರ್ವಣವೇದವು ೧ ಲಕ್ಷ ಯೋಜನವಿಸ್ತಾರದಿಂದ ರತ್ನಮಯವಾದ ಗೋಪುರವಾಗಿ ತೋರುತ್ತಿರುವುದು. ಅಲ್ಲಿ ನೀಲಲೋಹಿತನು ರಕ್ಷಕನಾಗಿರುವನು. ಈ ದ್ವಾರಪಾಲಕರು ಕೈಯಲ್ಲಿ ವೇತ್ರವನ್ನು ಹಿಡಿದು ಶಿವನಪ್ಪಣೆಯಾದವರನ್ನು ಒಳಗೆ ಬಿಡುತ್ತಲೂ, ಇಲ್ಲದವರನ್ನು ತಡೆಯುತ್ತಲೂ ಕಾದು ನಿಂತಿರುವರು. ಇಂತಪ್ಪ ಅರಮನೆಯೊಳಗೆ ವೇದಾಂತವೇ ಅಂತಃಪುರವಾಗಿ ಕೋಟಿಯೋಜನದ ಅಳತೆಯಿಂದ ಒಪ್ಪುತ್ತಿರುವುದು. ಓಂಕಾರವೇ ಸಭಾಸ್ಥಲವಾಗಿ ರಂಜಿಸು

ತ್ತಿರುವುದು. ಆ ಮಹಾಸಭೆಯು ದಿವ್ಯತೇಜಸ್ಸಿನ ಮುಂದೆ ೧ ಸಾವಿರ ಕೋಟಿಸೂರ್ಯರ ಮಂಡಲಗಳು ಕೂಡ ಹಳೆಯ ಕಂಚಿನಕನ್ನಡಿಯಂತೆ ಮಾಸಲಾಗಿ ತೋರುವುವು. ಅದರ ಕಾಂತಿಯಿಂದ ವಿಷ್ಣುವಿನ ದೇಹದ ಕಪ್ಪುಬಣ್ಣವೆಲ್ಲವೂ ಹೊಂಬಣ್ಣವಾಗಿ ಮಾರ್ಪಟ್ಟಿರುವುದು. ಬ್ರಹ್ಮಾಂಡಗಳೆಲ್ಲವೂ ಮಹಾಕ್ಷೀರಸಮುದ್ರದಲ್ಲಿ ಪ್ರತಿಫಲಿಸಿರುವ ಕೋಳಿಯ ಮೊಟ್ಟೆಗಳಂತೆ ತೋರುತ್ತಿರುವುವು. ಇಂತಹ ಆಶ್ಚರ್ಯಕರವಾದ ಮಹತ್ತ್ವವುಳ್ಳ ಆ ಸಭೆಯ ಮಧ್ಯಭಾಗದಲ್ಲಿ ದೇವತಾಸಾರ್ವಭೌಮನಾದ ಮಹಾದೇವನ ಮುಕ್ತಿಯ ಗದ್ದುಗೆಯಾದ ದಿವ್ಯಸಿಂಹಾಸನವು ೧ ಲಕ್ಷ ಯೋಜನದಗಲವಾಗಿ ತೇಜೋಮಂಡಲದಂತೆ ವಿರಾಜಿಸುತ್ತಿರುವುದು. ಅದಕ್ಕೆ ಅಣಿಮಾದ್ಯಷ್ಟಸಿದ್ಧಿಗಳೇ ಎಂಟು ಪಾದಗಳಾಗಿರುವುವು. ಆ ಮಹಾಪೀಠದ ಮೇಲೆ ಮೃದುಳತವಾದ ಗದ್ದುಗೆಯು ಹಾಸಲ್ಪಟ್ಟಿರುವುದು. ಅದರ ಮೇಲೆ ಸರ್ವಮಂಗಳವಿಗ್ರಹನೂ ಚಂದ್ರಶೇಖರನೂ ಸೃಷ್ಟಿಸ್ಥಿತಿಪ್ರಳಯಕರ್ತನೂ ಬ್ರಹ್ಮವಿಷ್ಣ್ವಾದಿಹೃದಯಮಧ್ಯವಾಸಿಯೂ ಆದ ಪರಶಿವನು ಪಾರ್ವತೀಸಮೇತನಾಗಿ ಕೋಟಿಸೂರ್ಯತೇಜಸ್ಸಿನಿಂದ ಝಗಝಗಿಸುತ್ತ ಮೂರ್ತಿಗೊಂಡಿರುವನು. ಆ ದೇವದೇವೋತ್ತಮನ ಪೂರ್ವಭಾಗದ ತತ್ಪುರುಷಮುಖವು ಹೊಂಬಣ್ಣವಾಗಿಯೂ, ದಕ್ಷಿಣಭಾಗದ ಅಘೋರಮುಖವು ಇಂದ್ರನೀಲವರ್ಣವಾಗಿಯೂ, ಉತ್ತರಭಾಗದ ವಾಮದೇವಮುಖವು ರಕ್ತವರ್ಣವಾಗಿಯೂ, ಪಶ್ಚಿಮದ ಸದ್ಯೋಜಾತಮುಖವು ಮುಕ್ತಾಫಲದಂತೆ ಶುಭ್ರವರ್ಣವಾಗಿಯೂ, ಊರ್ಧ್ವಭಾಗದಲ್ಲಿರುವ ಈಶಾನವಕ್ತ್ರವು ಸ್ಫಟಿಕವರ್ಣವಾಗಿಯೂ ಶೋಭಿಸುತ್ತಿರಲು, ಆಯಾಮುಖಗಳ ಮುಂದೆ ಆಯಾಯ ಹೆಸರಿನ ಪಂಚಬ್ರಹ್ಮಪುರುಷರು ನಿಂತು ಸದ್ಯೋಜಾತಾದಿ ಆಯಾಯ ಮಂತ್ರಗಳಿಂದ ಸ್ತುತಿಸುತ್ತಿದ್ದರು. ಹೀಗೆ ೫ ಮುಖಗಳಿಂದಲೂ ೧೫ ಕಣ್ಣುಗಳಿಂದಲೂ, ೧೦ ಭುಜಗಳಿಂದಲೂ ಮೆರೆಯುತ್ತಿರುವ ಶಂಕರನು ಕಂಠದಲ್ಲಿ ವಿಷವನ್ನೂ, ಕೈಯಲ್ಲಿ ಶೂಲವನ್ನೂ, ಸರ್ಪಾಭರಣವನ್ನೂ, ಗಜಚರ್ಮದ ಹೊದ್ದಿಕೆಯನ್ನೂ, ವ್ಯಾಘ್ರಚರ್ಮದ ಉಡೆಯನ್ನೂ ರುಂಡಮಾಲೆಯನ್ನೂ ಧರಿಸಿ ಭಸ್ಮಲಿಪ್ತಾಂಗನಾಗಿ ಓಲಗಂಗೊಂಡಿದ್ದನು. ಆ ಮಹೇಶ್ವರನ ಎಡಗಡೆಯು ಅರ್ಧಪೀಠ

ದಲ್ಲಿ ಜಗಜ್ಜನನಿಯಾದ ಶಂಕರಿಯು ರತ್ನಮುಕ್ತಾಹಾರಗಳನ್ನೂ, ಕಟಕಕುಂಡಲನೂಪುರಕಾಂಚೀಪ್ರಮುಖಾಭರಣಗಳನ್ನೂ, ಪೀತಾಂಬರವನ್ನೂ ಧರಿಸಿ, ಹರಿದ್ರಾಕುಂಕುಮಶೋಭಿತೆಯಾಗಿ, ಮಂದಾರಕುಸುಮಮಾಲಿಕೆಯಂ ಮುಡಿದು, ಪ್ರಸನ್ನಕಟಾಕ್ಷದಿಂದಾಶ್ರಿತಜನರನ್ನನುಗ್ರಹಿಸುತ್ತ ಬಲಗಡೆಗೆ ತುಸು ಬಗ್ಗಿದ ಶಿರೋಭಾಗೆಯಾಗಿ, ಸರ್ವಮಾಂಗಲ್ಯಸೌಂದರ್ಯಸೌಕುಮಾರ್ಯಶೃಂಗಾರಸರ್ವಸ್ವದಂತೆ ರಾಜಿಸುತ್ತಿದ್ದಳು. ವಿದ್ಯಾಧರಕಿನ್ನರಕಿಂಪುರುಷಗರುಡಗಂಧರ್ವಾದಿದೇವನಿತಂಬಿನೀನಿಕುರುಂಬವು ಸಾಲುಸಾಲಾಗಿ ನಿಂತು ಮಹಾದೇವಿಯನ್ನೋಲೈಸುತ್ತಿದ್ದಿತು. ಲಕ್ಷ್ಮೀಸರಸ್ವತೀಶಚೀಮುಖಾದಿದೇವಾಂಗನಾಪ್ರಮುಖೆಯರು ಚಾಮರವ್ಯಜನಾದಿಗಳಿಂದುಪಚರಿಸುತ್ತ ಮಗ್ಗುಲಲ್ಲಿದ್ದರು. ಶಿವನ ಪೀಠದ ಎಡಗಡೆಯಲ್ಲಿ ಗರುಡಗಳನ್ನೇರಿ ಶಂಖಚಕ್ರಗಳನ್ನು ಹಿಡಿದು ಪೀತಾಂಬರವನ್ನು ಧರಿಸಿರುವ ನೀಲವರ್ಣದ ಕೋಟಿ ವಿಷ್ಣುಗಳೂ, ಬಲಗಡೆಯಲ್ಲಿ ಹಂಸವನ್ನೇರಿ ಕಮಂಡಲು ದಂಡಗಳನ್ನು ಹಿಡಿದು ನಾಲ್ಕು ಮುಖಗಳನ್ನು ಹೊಂದಿದ ರಕ್ತವರ್ಣದ ಕೋಟಿಬ್ರಹ್ಮರುಗಳೂ ಕುಳಿತಿದ್ದರು. ಆ ಬ್ರಹ್ಮರ ಬಲಕ್ಕೆ ಜಟಾಧಾರಿಗಳಾಗಿ ಶಾಂತಮೂರ್ತಿಗಳಾಗಿ ಭಸ್ಮಲಿಪ್ತಾಂಗರಾಗಿ ನಾರುಡೆಗಳನ್ನುಟ್ಟು ಜಪಮಾಲಿಕೆಯಂ ಹಿಡಿದು ಮಂತ್ರಪುರಶ್ಚರಣವನ್ನು ಮಾಡುತ್ತಿರುವ ಜ್ಞಾನಮಯರಾದ ಮುನಿಗಳಸ್ತೋಮವು ನಿರ್ಮಲವಾಗಿ ಮೂರ್ತಿಗೊಂಡಿದ್ದಿತು. ಪಂಚಮುಖ ದಶಭುಜ ಫಾಲನೇತ್ರ ಫಣಿಹಾರ ಮೊದಲಾದುವುಗಳಿಂದ ಶಿವಸಮಾನರೂಪವನ್ನು ಧರಿಸಿರುವ ರುದ್ರರ ಕೋಟಿಯು ಶಿವನಿದಿರಿಗೆ ಮೂರ್ತಿಗೊಂಡಿದ್ದಿತು. ನಂದಿ, ಭೃಂಗಿ, ವೀರಭದ್ರ, ಗಣೇಶ, ಷಣ್ಮುಖ, ನೀಲಲೋಹಿತ, ಮಹಾಕಾಳ, ರುಂಡಧರ, ಗಜಕರ್ಣ, ಘಂಟಾಕರ್ಣ, ಗೋಕರ್ಣ, ಶಂಕುಕರ್ಣ, ವಿರೂಪಾಕ್ಷ, ಗಗನಾಂಗ, ಧೂಮಾಂಗ, ಮೊದಲಾದ ಮಹಾಪ್ರಮಥರುಗಳು ಒಬ್ಬೊಬ್ಬರು ಒಂದೊಂದು ಪದ್ಮಸಂಖ್ಯಾಕವಾದ ತಮ್ಮ ಸೇನೆಯೊಡನೆ ಕೂಡಿ ಒಲೈಸುತ್ತಿದ್ದರು ಪರ್ವತಾಭರಣ, ವಿಕಟಾಂಗಭೃಂಗನ, ಚಂಡಕೀರ್ತಿ, ಕಂಕಾಳಧರ ಮೊದಲಾದ ಶೂರಭಟರು ಒಬ್ಬೊಬ್ಬರು ಇಪ್ಪತ್ತು ಪದ್ಮಸೇನೆಯೊಡನೆಯೂ, ಕಾಲಮರ್ದನ, ವಜ್ರಕಾಯ, ರುಂಡಾಭರಣ ಮೊದಲಾದ ಮಹಾ ಭಟರು

ಒಬ್ಬೊಬ್ಬರು ಅರವತ್ತು ಪದ್ಮಸೇನೆಯೊಡನೆಯೂ, ಸೋಮಪಾತನ, ಸೂರ್ಯಪಾತನ, ಅಂಡಾಭರಣ, ಧೂಮಕೇತು, ಸಹಸ್ರಕರ್ಣ, ರೇಣುಕ, ದಾರುಕ, ಮೊದಲಾದ ಶಿವಗಣಾಧೀಶರು ಒಬ್ಬೊಬ್ಬರು ನೂರು ಕೋಟಿ ಸೈನಿಕರೊಡನೆಯೂ, ನಕ್ಷತ್ರಕೃಂತನ, ಮಹಾಕೇಶ, ಶತಸಹಸ್ರಾಕ್ಷ, ಅಂಗಾರಭಕ್ಷಣ, ವಿಶ್ವಮಾಲಿ, ವಜ್ರದಂತ ಮೊದಲಾದ ಕ್ಷೇತ್ರಪಾಲಕರೊಬ್ಬೊಬ್ಬರು ಏಳುನೂರು ಪದ್ಮಸೇನೆಯೊಡನೆಯೂ, ದಂಡಧರ, ದಂಡಬಾಹು, ದಂಡನಾಥ, ಮದೋದ್ದಂಡ ಮೊದಲಾದ ಸೇನಾಪ್ರಮುಖರು ಒಬ್ಬೊಬ್ಬರು ಹತ್ತರ್ಬುದ ಸೇನೆಯೊಡನೆಯೂ ಕೂಡಿ ಶಿವನಾಜ್ಞೆಯನ್ನೇ ನಿರೀಕ್ಷಿಸಿಕೊಂಡು ಸೇವಿಸುತ್ತಿದ್ದರು. ವಾಮದೇವರು, ಜ್ಯೇಷ್ಠರು, ಶ್ರೇಷ್ಠರು, ಕಲವಿಕರಣರು, ಕಲರು, ಬಲರು, ಬಲಪ್ರಮಥರು, ಮನೋನ್ಮನರು, ಸರ್ವಭೂತದಮನರು ಮೊದಲಾದ ಅಸಂಖ್ಯರುದ್ರಗಣವು ತಮ್ಮ ತಮ್ಮ ಹೆಸರಿನ ಶಕ್ತಿಯರೊಡನೆಯೂ, ಅಪರಿಮಿತವಾದ ತಮ್ಮ ಗಣಸೇನೆಯೊಡನೆಯೂ ಕೂಡಿ ಆ ಸಭೆಯಲ್ಲಿ ಓಲೈಸುತ್ತಿದ್ದರು. ಅವರಲ್ಲದೆ ಅಷ್ಟವಸುಗಳು, ನವಗ್ರಹಗಳು, ಏಕಾದಶರುದ್ರರು, ಚತುರ್ದಶಮನುಗಳು, ತಂಡತಂಡವಾಗಿ ಅಸಂಖ್ಯಾತವಾದ ತಮ್ಮ ಸೇನೆಯೊಡನೆ ಕೂಡಿ ಬಂದು ಕಾದಿದ್ದರು. ಮತ್ತು ಅಷ್ಟದಿಕ್ಪಾಲಕರು ತಮ್ಮ ತಮ್ಮ ಕೋಟ್ಯನುಕೋಟಿ ಸೈನಿಕಸ್ತೋಮದಿಂದ ಕೂಡಿಯೂ, ಸುರನರೋರಗಸಿದ್ಧವಿದ್ಯಾಧರಗರುಡಗಂಧರ್ವಕಿನ್ನರಕಿಂಪುರುಷಗುಹ್ಯಕಪಿಶಾಚಾಪ್ಸರರುಗಳು ಕೋಟಿಗಟ್ಟಲೆಯಾದ ಗುಂಪನ್ನು ಕಟ್ಟಿ ತಮ್ಮತಮ್ಮ ಆಯುಧಗಳನ್ನು ಹಿಡಿದು ನಿಂತಿದ್ದರು. ಬೆಟ್ಟ, ಮರ ಮೃಗ, ಪಕ್ಷಿ ಮೊದಲಾದ ಚರಾಚರವಸ್ತುಗಳಲ್ಲಿ ಅಗ್ರಗಣ್ಯವಾದುವುಗಳೆಲ್ಲ ಕೋಟ್ಯನುಕೋಟಿಯಾಗಿ ಬಂದು ಸೇವಿಸುತ್ತಿದ್ದುವು. ಆ ಮಹಾಶಿವಸಭೆಯ ವೈಭವವನ್ನು ವರ್ಣಿಸುವುದಕ್ಕೆ ಸಾವಿರ ನಾಲಿಗೆಗಳುಳ್ಳ ಆದಿಶೇಷನಿಗೂ ಕೂಡ ಶಕ್ಯವಲ್ಲ; ಎಲೆ ಸಿದ್ಧರಾಮೇಶನೇ! ಜಗದೇಕಶರಣ್ಯನೂ, ಜಗದೇಕವಂದ್ಯನೂ, ದೇವದೇವೋತ್ತಮನೂ, ಅಖಿಲಾಂಡಕೋಟಿಬ್ರಹ್ಮಾಂಡನಾಯಕನೂ ತಾನೇ ಎಂಬುದನ್ನು ಈ ಮಹಾಸಭಾಧಿಪತ್ಯದಿಂದಲೇ ಜಗತ್ತಿಗೆಲ್ಲ ಬಿತ್ತರಿಸುತ್ತಿರುವ ಅನಂತಮಹಿಮಾಮೂರ್ತಿಯಾದ

ಶ್ರೀಪರಮೇಶ್ವರನು ಪ್ರಸನ್ನಮುಖಮಂಡಲನಾಗಿ ಕಟಾಕ್ಷದಿಂದ ಕರುಣಾರಸಪ್ರವಾಹವನ್ನು ಕೆದರುತ್ತ ಭಕ್ತವಾತ್ಸಲ್ಯವಂ ಪ್ರಕಟಸುತ್ತಿರಲು, ಸಭೆಯಲ್ಲಿದ್ದನರೆಲ್ಲರೂ ತಮ್ಮ ತಮ್ಮ ಊಳಿಗವನ್ನು ಮಾಡುತ್ತಿದ್ದರು. ಹೇಗೆಂದರೆ- ಓಂಕಾರಪ್ರಣವವೇ ಪರಶಿವನಿಗೆ ಪೀಠವಾಗಿದ್ದಿತು. ಜಗಜ್ಜನನಿಯೇ ಪಟ್ಟಮಹಿಷೆಯು, ಚಂದ್ರ ಆದಿಶೇಷರುಗಳೇ ಆಭರಣವು, ಭಸ್ಮವೇ ಸುಗಂಧವು, ಆನೆಯ ಚರ್ಮವೇ ವಸ್ತ್ರವು, ಮುಕ್ತಿಯೇ ಮೃಷ್ಟಾನ್ನಭೋಜನವು, ತತ್ತ್ವರಸಾಸ್ವಾದನವೇ ತಾಂಬೂಲಚರ್ವಣವು, ಕಿವಿಯಲ್ಲಿ ಕೇಳದುದೆಲ್ಲವೂ ಕಂಬಾಳಾಶ್ವತರಗಾನೋಪಚಾರವು ಆಗಿರಲಾಗಿ, ಈ ವಿಧವಾದ ಅಷ್ಟಭೋಗಭಾಗ್ಯದಿಂದ ಕೂಡಿ ಮೆರೆಯುತ್ತಿದ್ದನು. ಷಣ್ಮುಖನು ಯುವರಾಜಪಟ್ಟದ ಮಗನು, ವಿನಾಯಕನು ಶಿವಗಣದ ದಳವಾಯಿ, ವೀರಭದ್ರನು ದುಷ್ಟನಿಗ್ರಹಶಿಷ್ಟಪರಿಪಾಲನ ಮಾಡುವ ದಂಡಾಧಿಕಾರಿ, ಬ್ರಹ್ಮನು ಉತ್ಪತ್ತಿಕರ್ತನು, ಸೂರ್ಯನು ಜ್ಯೋತಿಷ್ಕನು ಆಗಿರಲು, ಶಿವನು ಪೂರ್ವೋಕ್ತವಾದ ರಾಜವೈಭವದಿಂದೊಪ್ಪಿದ್ದನು. ವಿಷ್ಣುವೇ ಮುಖ್ಯಾಮಾತ್ಯನಾಗಿ, ಬ್ರಹ್ಮಾಂಡಗಳೇ ದೇಶಗಳಾಗಿ, ಮೇರುಮಂದರಕೈಲಾಸಗಳೇ ಗಿರಿದುರ್ಗಗಳಾಗಿ, ಮಹಾಶಿವಧರ್ಮವೇ ಬೊಕ್ಕಸವಾಗಿ, ಶಿವಗಣಂಗಳೇ ಪರಿವಾರವಾಗಿ, ಶಿವಜ್ಞಾನವೇ ಬಲವಾಗಿ, ಕುಬೇರನೇ ಮಿತ್ರನಾಗಿ ಇರಲು, ದೇವಾಧಿರಾಜನು ಪೂರ್ವೋಕ್ತವಾದ ಸಪ್ತಾಂಗದಿಂದ ರಾಜಿಸುತ್ತಿದ್ದನು. ನಂದಿಮಹಾಕಾಳರು ಚಡೀಮರಿಗಳು, ವೇದಗಳು ಸ್ತುತಿಪಾಠಕರು, ರಂಭಾದಿಅಪ್ಸರಸ್ತ್ರೀಯರು ನರ್ತಕಿಯರು, ಭೃಂಗಿಯು ಹಾಸ್ಯಗಾರ, ಬೃಹಸ್ಪತಿಯು ಪುರೋಹಿತ, ಶಿವಭಕ್ತರೇ ನಂಟರು, ವಿಶ್ವಕರ್ಮನೇ ಶಿಲ್ಪಿಯು, ಕೃಪೆಯೇ ನಿಧಿ, ಚಿತ್ರಗುಪ್ತರೇ ಗಣಕರು (ಮುತ್ಸದ್ದಿಗಳು) ಜ್ಞಾನಿಗಳೇ ಸಂಧಿವಿಗ್ರಹಕಾರರು ಆಗಿ, ಊಳಿಗವನ್ನು ಮಾಡುತ್ತಿದ್ದರು. ಇಂದ್ರನು ಚಾಮರವನ್ನು ಹಾಕುವನು, ಅಗ್ನಿಯು ಅಡಿಗೆಯವನು, ಯಮನು ಪಾಪ ಪುಣ್ಯ ವಿಚಾರಕನು, ನಿಋತಿಯು ಹಾವುಗೆಯನ್ನು ಹಿಡಿವವನು, ವರುಣನು ನೀರ್ಗಿಂಡಿಯವನು, ವಾಯುವು ಬೀಸಣಿಗೆಯವನು, ಕುಬೇರನು ತಾಂಬೂಲದವನು, ಈಶಾನನು ಗಂಧದ್ರವ್ಯವನ್ನೊ

ಪ್ಪಿಸುವವನು ಆಗಿ ಸೇವಿಸುತ್ತಿದ್ದರು. ವರ್ಷ ಋತು ಮಾಸ ನಕ್ಷತ್ರ ತಿಥಿ ಚಂದ್ರಮೋಘಗಳು ಜಗತ್ತಿಗೆ ಆಯಾಯ ಕಾಲೋಚಿತವಾಗಿ, ಮಳೆ ಬೆಳೆಗಳನ್ನುಂಟುಮಾಡಿ ಸುಖಪಡಿಸುವ ಪ್ರಜೆಗಳು, ಹದಿನಾಲ್ಕು ಲೋಕಗಳಿಗೂ ಅಧಿಪತಿಯಾದ ಮಹಾದೇವನಿಗೆ ದಿಗ್ಗಜಗಳ ಸ್ತೋಮವೂ ಉಚ್ಚೈಃಶ್ರವಸ್ಸುಗಳ ತಿಂತಿಣಿಯೂ, ಪುಷ್ಪವಿಮಾನಾರೂಢರಾದ ಸುರಭಟರ ಗುಂಪೂ, ಸುರನರೋರಗಕಿನ್ನರಾದಿಗಳ ಸಮೂಹವೂ, ಚತುರಂಗಸೈನ್ಯವಾಗಿದ್ದುವು. ಮೇರುಪರ್ವತವು ಧನುಸ್ಸಾಗಿಯೂ, ತ್ರಿಶೂಲವೇ ಆಯುಧವಾಗಿಯೂ, ವ್ಯಾಘ್ರಾಜಿನವೇ ವೀರಕಾಸೆಯಾಗಿಯೂ ಇದ್ದುವು. ಸಪ್ತಸಮುದ್ರಗಳು ಶಿವನ ಉಗ್ರಾಣದ ಮನೆಯು, ಸಪ್ತದ್ವೀಪಗಳೇ ಶಿವನ ಕುದುರೆಗಳನ್ನು ಸುತ್ತಿಸುವ ಬೈಲು, ಸ್ವಾದೂದಕಸಮುದ್ರವು ಹರನ ಕ್ರೀಡಾಸರೋವರವು, ರೋಹಣಾಚಲವು ರತ್ನವನ್ನು ತುಂಬಿದ ಬೊಕ್ಕಸವು, ಕಾಮಧೇನುಸಮೂಹವು ಶಿವನ ಕರೆಯುವ ಹಟ್ಟಿಯ ದನಗಳು, ಆಗಿದ್ದುವು. ಮನ್ಮಥನೆಂಬ ದುಷ್ಟಶತ್ರುವು ಅಷ್ಟಮದಗಳು, ಸಪ್ತವ್ಯಸನಗಳು, ಅರಿಷಡ್ವರ್ಗ, ಪಂಚೇಂದ್ರಿಯಗಳು ಕರಣಚತುಷ್ಟಯ ಇವುಗಳೆಂಬ ಕಳ್ಳಬೆಳ್ಳಕಾಕಪೋಕರನ್ನು ಕಟ್ಟಿಕೊಂಡು ಲೋಕಕ್ಕೆಲ್ಲ ಹಿಂಸಕನಾಗಿರುತ್ತಿರಲು, ಆ ಭ್ರಷ್ಟನನ್ನು ಗೆದ್ದು ಶಿವತತ್ತ್ವನಿಷ್ಠೆಯನ್ನು ಜಗತ್ತಿನಲ್ಲೆಲ್ಲ ಸ್ಥಾಪಿಸುವುದಕ್ಕಾಗಿ ಪರಶಿವನು ರಾಜ್ಯಭಾರ ಮಾಡುತ್ತಿರುವಂತೆ ತೋರುತ್ತಿದ್ದನು. ಪರಶಿವನು ಪೂರ್ವೋಕ್ತವಾದ ಬ್ರಹ್ಮಾಂಡ ಸಾರ್ವಭೌಮಪದವಿಯಿಂದೊಪ್ಪುತ್ತ, ಜಗತ್ತಿನ ಸಚರಾಚರವಸ್ತುವರ್ಗಗಳನ್ನೆಲ್ಲ ಅಲ್ಲಲ್ಲೇ ಪರಿಪಾಲಿಸುವುದಕ್ಕೆ ಬೇರೆ ಬೇರೆ ಅರಸರನ್ನು ಗೊತ್ತುಮಾಡಿ, ಆ ನಾಯಕರೆಲ್ಲರಿಂದಲೂ ತಾನು ಸೇವಿಸಿಕೊಳ್ಳುತ್ತ ಪರಮಸುಖಮಯನಾಗಿಒಪ್ಪಿದ್ದನೆಂಬಲ್ಲಿಗೆ ೨ನೇ ಅಧ್ಯಾಯವು ಸಂಪೂರ್ಣವು.

---

## ೩ ನೇ ಅಧ್ಯಾಯವು.

---

### ದಕ್ಷಯಾಗವು.

ಎಲೆ ಸಿದ್ಧರಾಮೇಶನೆ ಕೇಳು, ದಕ್ಷಬ್ರಹ್ಮನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ೬೦ ಮಂದಿ ಹೆಣ್ಣುಮಕ್ಕಳನ್ನೂ ಅವರ ಗಂಡಂದಿರನ್ನೂ ನೋಡಿಬರಬೇಕೆಂದು ಯೋಚಿಸಿ, ಅತ್ರಿ, ಭೃಗು, ಧರ್ಮ ಮೊದಲಾದ ತನ್ನ ಅಳಿಯಂದಿರ ಪಟ್ಟಣಗಳಿಗೆ ಹೊರಟನು. ಅವರುಗಳು ತಮ್ಮ ಮಾವನು ಬರುವನೆಂಬ ಸುದ್ದಿಯನ್ನು ಕೇಳಿ, ಬಹು ಸಂತೋಷದಿಂದ ತಮ್ಮತಮ್ಮ ಪಟ್ಟಣವನ್ನೆಲ್ಲ ಗುಡಿತೋರಣಮೊದಲಾದುವುಗಳಿಂದಲಂಕರಿಸಿ, ಕಲಶಕನ್ನಡಿಗಳನ್ನು ಹಿಡಿದ ಮುತ್ತೈದೆಯರೊಡಗೂಡಿ ಬಂದು ಇದಿರ್ಗೊಂಡು ಬಹು ಸಂಭ್ರಮದಿಂದ ಮನೆಗೆ ಕರೆದುಕೊಂಡು ಹೋಗಿ ಉಚಿತಾಸನದಲ್ಲಿ ಕುಳ್ಳಿರಿಸಿ, ಅತ್ಯಂತ ಭಕ್ತಿಯಿಂದ ಅರ್ಘ್ಯಪಾದ್ಯಾಚಮನಗಳನ್ನಿತ್ತು ಸತ್ಕರಿಸಿದರು. ಹೆಣ್ಣುಮಕ್ಕಳು ತಮ್ಮ ತಂದೆಯು ಬಹುದಿನಕ್ಕೆ ಬಂದನೆಂಬ ಆನಂದದಿಂದ ಉಬ್ಬಿ ಸಂತೋಷಾಶ್ರುಗಳನ್ನು ಕಣ್ಣಿನಲ್ಲಿ ತಂದು ಪಿತೃವಿನ ಬಳಿಗೆ ಬಂದು ಪಾದಕ್ಕೆ ನಮಸ್ಕರಿಸಿದರು. ದಕ್ಷನು ಅವರಿಗೆ ಆಶೀರ್ವದಿಸಿ ವಾತ್ಸಲ್ಯದಿಂದ ಎತ್ತಿ ತಬ್ಬಿ, ಅವರಿಗಾಗಿ ತಂದಿದ್ದ ವಸ್ತ್ರಾಭರಣಾದಿಗಳನ್ನು ಕೊಟ್ಟು ಕೆಲಕೆಲ ದಿನ ಅವರ ಮನೆಯಲ್ಲಿದ್ದು ಔತನಉಡುಗೊರೆಗಳನ್ನು ಮಾಡಿಸಿಕೊಂಡು, ಸಂತೋಷಪಟ್ಟು, ಬಳಿಕ ಈ “ಅಳಿಯಂದಿರ ಮನೆಯಲ್ಲೆಲ್ಲ ಸತ್ಕಾರಗೊಂಡದ್ದಾಯಿತು ಇನ್ನೊಬ್ಬ ಮಗಳ (ಶಿವನ ಹೆಂಡಿತಿ ದಾಕ್ಷಾಯಣಿಯ) ಮನೆಯಿರುವುದು; ಅಲ್ಲಿಗೂ ಹೋದರೆ ಇವೆಲ್ಲಕ್ಕಿಂತಲೂ ಅತಿಶಯವಾದ ಮರ್ಯಾದೆಯು ನಡೆಯಬಹುದು”ಎಂದು ಯೋಚಿಸಿ, ಅಲ್ಲಿಂದ ಹೊರಟು ಕೈಲಾಸದ ಕಡೆಗೆ ತೆರಳಿದನು. ಸಕಲ ವಿಧವಾದ ಪುಣ್ಯದ ಬೆಳಸಿನ ಕೊಟಾರವೋ ವೇದಾಗಮಪುರಾಣಾರ್ಥಗಳ ಮಂದಿರವೋ, ಶಿವಯೋಗಾನಂದಸಮುದ್ರವೋ, ಸರ್ವಮುನಿಶ್ರೇಷ್ಠರ ತಪಃಫಲದ ಆವಾಸಭೂಮಿಯೋ, ಸಕಲ ಗ್ರಹನಕ್ಷತ್ರಾದಿಗಳ ತೇಜೋಮಂದಿರವೋ, ಸಕಲ ನಿಷ್ಕಲವಾದ ಪರತತ್ತ್ವದ ರಾಜಗೃಹವೋ ಎಂಬಂತಿರುವ ಶಿವಲೋಕವು ದಕ್ಷನ ಕಣ್ಣಿ

ಗೆ ಕಾಣಿಸಿತು. ಇಂದ್ರಾದಿದಿಕ್ಪಾಲಕರ ಮತ್ತು ಅನಂತಬ್ರಹ್ಮವಿಷ್ಣ್ವಾ
ದಿಗಳ ವಾಹನಗಳಾದ ಬಿಳಿಯಾನೆ ತಗರು ಕೋಣ ಮೊದಲಾದುವೂ
ಹಂಸ ಗರುಡಗಳೂ ಲೆಕ್ಕವಿಲ್ಲದಷ್ಟು ಸಾಲುಸಾಲಾಗಿ ಪಟ್ಟಣದ ಹೊರಗೆ
ಕಟ್ಟಿರುವುದನ್ನು ನೋಡಿ ಅಳಿಯನ ಅಪರಿಮಿತೈಶ್ವರ್ಯವನ್ನು ಕುರಿತು
ಬೆರಗಾದನು. ಆ ಪಟ್ಟಣದ ಕೋಟೆಬಾಗಿಲಿಂದ ಹೋಗಿಬರುತ್ತಿರುವವ
ರಲ್ಲಿ ಎತ್ತ ನೋಡಿದರೂ ಐದು ಮೊಗದವರು ಹತ್ತು ತೋಳಿನವರು ಹಣೆಗ
ಣ್ಣಿನವರು ಸರ್ಪಾಭರಣರು ಚಂದ್ರಶೇಖರರುಗಳು ಅನಂತವಾಗಿ ಕಾ
ಣಿಸುತ್ತಿದ್ದರು. ಇವರೆಲ್ಲರನ್ನೂ ನೋಡಿ ಆಶ್ಚರ್ಯಪಡುತ್ತ, ಪುರದ್ವಾ
ರದ ಬಳಿಗೆ ಬಂದು ತನ್ನ ವಿಮಾನದಿಂದಿಳಿದನು. ಎಷ್ಟೋ ಮಂದಿ ಮ
ನುಮುನಿಗಳು ದ್ವಾರಪ್ರವೇಶಕ್ಕವಕಾಶವಿಲ್ಲದೆ ಕಾದು ನಿಂತಿದ್ದರು. ದ್ವಾ
ರಪಾಲಕರು ಈತನನ್ನು ಕಂಡು ಶಿವನ ಮಾವನೆಂದರಿತು ತಡೆಯದೆ ಬಿ
ಟ್ಟುಬಿಟ್ಟರು. ಒಂದಾದಮೇಲೊಂದರಂತೆ ಬಾಗಿಲುಗಳನ್ನೆಲ್ಲ ಕಳೆದು ಬ
ರಲು, ಇದಿರಿಗೆ ಶಿವನ ಸಭಾಮಂಟಪವು ಕಾಣಿಸಿತು. ವೇದಾಗಮೋಪನಿ
ಷತ್ತುಗಳ ಘೋಷವೂ ವಾದ್ಯದ ಮೊರೆತವೂ ಸ್ತುತಿಪಾಠಕರಗಂಭೀ
ರಧ್ವನಿಯೂ ಮುನಿಗಳ ಜಯಜಯಕಾರವೂ ಕೂಡಿ ಸಭೆಯು ಮಹಾ
ನಾದಮಯವಾದುದೆಂಬುದನ್ನು ನಿದರ್ಶನಪಡಿಸುತ್ತಿದ್ದಿತು. ವಿಷ್ಣುಬ್ರ
ಹ್ಮೇಂದ್ರಾದಿಗಳ ಮಧ್ಯದಲ್ಲಿ ಉನ್ನತಾಸನದಮೇಲೆ ಪತ್ನೀಸಮೇತನಾಗಿ
ಕುಳಿತು ಸಕಲ ದೇವತಾನಿಕುರುಂಬದಿಂದ ಸೇವೆಗೊಳ್ಳುತ್ತಲಿರುವ ಪರಮ
ಶಿವನನ್ನು ದಕ್ಷಬ್ರಹ್ಮನು ಕಂಡನು. ಆ ಮಹಾಶಿವಸಭೆಯು ಐದುನೂ
ರು ಲಕ್ಷಯೋಜನದ ವೈಶಾಲ್ಯವುಳ್ಳದಾಗಿದ್ದರೂ, ಒಂದಂಗುಲದಷ್ಟಾ
ದರೂ ಬಿಡುವಿಲ್ಲದೆ ಸುರನರೋರಗಯಕ್ಷಕಿನ್ನರಕಿಂಪುರುಷಮನುಮುನಿ
ವಿದ್ಯಾಧರಾದಿಗಳಿಂದ ದಟ್ಟವಾಗಿದ್ದಿತು. ಆ ಸಭೆಯಲ್ಲಿ ನುಗ್ಗುವುದಕ್ಕೆ ಸ್ಥ
ಲವಿಲ್ಲದೆ ದಕ್ಷನು ದೂರದ ಒಂದು ಮೂಲೆಯಲ್ಲೇ ನಿಲ್ಲಬೇಕಾಯಿತು.
ಹಾಡುವ ತುಂಬುರನಾರದರಿಂದಲೂ, ಕುಣಿಯುವ ಭೃಂಗೀಶನಿಂದಲೂ,
ಸಭೆಯವರನ್ನು ಎಚ್ಚರಿಸುವ ನಂದಿ ಮಹಾಕಾಳರಿಂದಲೂ, ಚಾಮರವ
ನ್ನು ಬೀಸುವ ದೇವನಾರೀರತ್ನಗಳಿಂದಲೂ, ಸ್ತುತಿಸುವ ಮುನಿಗಳಿಂ
ದಲೂ, ಕೈಕಟ್ಟಿ ಓಲೈಸುವ ಹರಿಬ್ರಹ್ಮರಿಂದಲೂ, ಸೇವೆಗೊಂಡು ಮೆರೆ

ಯುತ್ತಿರುವ ಜಗದೇಕಾರಾಧ್ಯನ ಮಹಾವೈಭವವನ್ನು ನೋಡಿ ನೋಡಿ ದಕ್ಷನು ಬೆರಗಾಗಿ ತಲೆದೂಗಿದನು. ಮತ್ತು ಅಷ್ಟೊಂದು ವಿಭವದಲ್ಲಿರುವ ತನ್ನ ಮಗಳೂ ಅಳಿಯನೂ ಕೂಡ ಇಂಥಹ ದೊಡ್ಡಸಭೆಯಲ್ಲಿಗೆ ತಾನು ಬಂದಿದ್ದರೂ ತನ್ನನ್ನು ಸ್ವಲ್ಪವಾದರೂ ಮರ್ಯಾದಿಸದೆ ಅಲಕ್ಷ್ಯದಿಂದ ಕುಳಿತಿದ್ದುದನ್ನು ಕಂಡು ಕೋಪಾವಿಷ್ಟನೂ ಆದನು. "ಇಷ್ಟೊಂದು ಜನದ ಮುಂದೆ ನನ್ನನ್ನು ಅಮರ್ಯಾದೆಗೊಳಿಸಿದ ಈ ದುರಹಂಕಾರಿ ಶಿವನನ್ನೂ ಇವನ ಪತ್ನಿಯನ್ನೂ ನನ್ನ ಅಳಿಯನು ಮಗಳು ಎಂದು ಇನ್ನು ಪರಿಭಾವಿಸಬಹುದೆ? ಇಂಥ ಸುತೆಯು ನನ್ನ ಹೊಟ್ಟೆಯಲ್ಲಿ ಜನಿಸಬಹುದೆ? ಐಶ್ವರ್ಯಮದವು ಈ ದಂಪತಿಗಳನ್ನು ಕಣ್ಣಾಣದಂತೆ ಮಾಡಿರುವುದು; ಇವರ ಬಾಂಧವ್ಯವು ನನಗೆ ಸಾಕು; ಇನ್ನು ಇವರ ದುಷ್ಟಸಂಪತ್ತಿಗೆ ಕೊನೆಗಾಣಿಸುವುದೇ ನನಗೆ ಕರ್ತವ್ಯವು; ಅದಕ್ಕಾಗಿಯೇ ಈಗ ತಡ ಮಾಡದೆ ಬಂದು ಯಾಗವನ್ನು ಮಾಡುವುದೇ ಯೋಗ್ಯವಾದಉಪಾಯವು" ಎಂದು ಯೋಚಿಸಿ, ಮನಸ್ಸಿಗೆ ತೋಚಿದಂತೆಲ್ಲ ಶಿವನನ್ನು ನಿಂದಿಸುತ್ತ, ಥಟ್ಟನೆ ಕೈಲಾಸದಿಂದ ಹಿಂತಿರುಗಿ ತನ್ನ ಪಟ್ಟಣವನ್ನು ಸೇರಿದನು. ತನ್ನ ಅಂತರಂಗಕ್ಕೆ ಸೇರಿದ ಮಂತ್ರಾಲೋಚಕರನ್ನು ಕೂಡಲೇ ಕರಿಸಿದನು. "ನೋಡಿದಿರಾ! ಆ ಯಾಚಕನು ನನಗೆ ಮಾಡಿದ ಮಾಟವನ್ನು" ಎಂದು ಅಳಿಯನಾದ ಶಿವನ ಸಭೆಯಲ್ಲಿ ತನಗೆ ಆದ ಅಪಮಾನವನ್ನು ದುಗುಡದಿಂದ ಅವರೊಡನೆ ಹೇಳಿದನು. ಮತ್ತು "ಅಯೋಗ್ಯನಾದ ಗೊರವನಿಗೆ ಮಗಳನ್ನು ಕೊಟ್ಟು ತಾನು ಮಾಡಿದ ಅವಿವೇಕಕಾರ್ಯಕ್ಕೆ ತಕ್ಕ ಫಲವಾಯಿತು; ಆದರೇನು? ಅವನು ತೋರಿಸಿದ ಅಹಂಕಾರಕ್ಕೆ ಪ್ರತಿಕ್ರಿಯೆಯನ್ನು ಮಾಡಿ ಅವನ ಸೊಕ್ಕನ್ನು ಮುರಿಯದೆ ಬಿಡುವೆನೆ? ಇರಲಿ." ಎಂದು ಹೇಳುತ್ತ, ಅತ್ತಿತ್ತ ತಿರುಗಿ ಕೆಂಗಣ್ಣನ್ನು ದುರುದುರನೆ ಬಿಟ್ಟು ತೂಗಾಡುತ್ತ, "ಅಕಟಕಟಾ! ಇಂಥ ಅಪಮಾನವನ್ನು ತುಂಬಿದ ಸಭೆಯಲ್ಲಿ ತಮಗೆ ಮಾಡಬಹುದೆ?" ಎಂದು ಮಂತ್ರಿಗಳು ಪಶ್ಚಾತ್ತಾಪಪಡಲು ದಕ್ಷನು ಮತ್ತಷ್ಟು ಉದ್ವಿಗ್ನನಾಗಿ ರಭಸದಿಂದೆದ್ದು, ತನ್ನತಂದೆಯಾದ ಬ್ರಹ್ಮನಬಳಿಗೆ ಹೋದನು. ದೂರದಲ್ಲೇ ದೀರ್ಘದಂಡವಾಗಿನಮಸ್ಕರಿಸಿ, ಜನಕನೇ! ಬೂದಿಬಡುಕ

ನಾದ ಜಡೆದಲೆಯ ಗೊರವನಿಗೆ ನನ್ನ ಮಗಳನ್ನು ನೀನು ಕೊಡಿಸಿಬಿಟ್ಟು
ದರಿಂದ ನನಗಾವ ತಿರಸ್ಕಾರವನ್ನು ಕೇಳಿವೆಯಾ? ಅಳಿಯನೂ ಮಗಳೂ
ಸುಖದಿಂದ ಬಾಳುವುದನ್ನು ನೋಡಿ ಬರಬೇಕೆಂದು ನಾನು ಅವನಲ್ಲಿಗೆ
ಹೋದರೆ, ಜಾಢ್ಯದಿಂದ ಕೋಟವನ್ನು ಮಾಡಿ ಕುಳಿತುಕೊಂಡಿದ್ದ ಅವನು
ನನ್ನನ್ನು ಕಂಡು ಎದ್ದು ಮರ್ಯಾದಿಸದಿದ್ದರೆ ಹೋಗಲಿ; "ಹೀಗೆ ಕುಳಿತು
ಕೊ" ಎಂದಾದರೂ ಕರೆಯಬಾರದೆ? ಮಗಳನ್ನು ಕೊಟ್ಟವರು ಅಳಿಯ
ನಿಂದ ಇಂಥ ಅವಮಾನ ಪಡೆವುದನ್ನು ಹಿಂದೆ ಎಲ್ಲಿಯಾದರೂ ನೀವು ಕೇ
ಳಿರುವಿರಾ,? ಎಂದು ಕಣ್ಣೀರ್ಗರೆಯುತ್ತ ಹೇಳಿಕೊಂಡು, ನಿಟ್ಟುಸು
ರು ಬಿಟ್ಟುದಲ್ಲದೆ, ತನ್ನನ್ನು ಅವನು ಹೇಗೆ ತಿರಸ್ಕರಿಸಿದನೋ
ಅದಕ್ಕೆ ತಕ್ಕಂತೆಯೇ ನಾನೂ ಅವನಿಗೆ ಮುಯ್ಯಾಮಾಡದಿದ್ದರೆ ಈ ಬಾಳಿ
ನಿಂದ ಫಲವೇನು? ನನಗೆ ಸೃಷ್ಟಿಕರ್ತೃತ್ವವು ತಾನೇ ಏತಕ್ಕೆ?
ಕಾಡಿಗೆ ಹೋಗಿ ಸೇರಿ ತಪಸ್ಸನ್ನು ಮಾಡುತ್ತ ಕುಳಿತುಕೊಳ್ಳುವುದೇ
ಮೇಲು; ಅದಕ್ಕಾಗಿ ನನಗೆ ಅಪ್ಪಣೆಯನ್ನು ಕೊಡು, ಎಂದು ಕೈಮುಗಿ
ದು ಬೇಡುತ್ತ ನಿಂತಿದ್ದನು ಬ್ರಹ್ಮನಾದರೋ— "ಅಯ್ಯಾ! ಶಿವನಿಗೆ
ಪ್ರತೀಕಾರವನ್ನು ಮಾಡುವುದೆಂದರೆ ನನಗೂ ನಿನಗೂ ಅದು ಸಾ
ಧ್ಯವೆ? ಸುಲಭವಾಗಿ ನುಂಗುವ ಕೈತುತ್ತೇ ಅದು? ಈ ಸಂಗತಿಯ
ನ್ನೆಲ್ಲ ವಿಷ್ಣುವಿಗೆ ಹೇಳಿ ಅವನುತ್ತರವನ್ನು ಕೇಳಬೇಕು" ಎಂದು ದ
ಕ್ಷನೊಡನೆ ಕೂಡಿ ಬ್ರಹ್ಮನು ನಾರಾಯಣನ ಬಳಿಗೆ ಹೋದನು. ಇಬ್ಬ
ರೂ ಕೆಂತು ನಮಸ್ಕರಿಸಿದರು. ಶಿವನಿಂದ ದಕ್ಷನಿಗೆ ಆದ ಅವಮಾನವ
ನ್ನೆಲ್ಲ ಬ್ರಹ್ಮನು ತಿಳಿಸಿದುದಲ್ಲದೆ, ಅಶ್ವಮೇಧಯಾಗವನ್ನು ಮಾಡಿ, ಅ
ಲ್ಲಿಗೆ ಶಿವನನ್ನು ಕರೆಯದೆ ಅವನಿಗೆ ಅಗ್ರಹವಿರ್ಭಾಗವನ್ನು ಕೊಡದೆ,
ನಿಮಗೆ ಪುರೋಭಾಗವನ್ನು ಕೊಟ್ಟು, ಆ ಯಜ್ಞಸಮಯದಲ್ಲಿ ಸಕಲ
ದೇವತೆಗಳ ಮಧ್ಯದೊಳಗೆ "ಶಿವನು ಬಹಿಷ್ಕೃತನು" ಎಂದು ಸಾರಿ
ರುದ್ರನಿಗೆ ಅವಮಾನಪಡಿಸಬೇಕೆಂದು ಯೋಚಿಸಿ, ಈ ದಕ್ಷನನ್ನು ನಿ
ಮ್ಮ ಬಳಿಗೆ ಕರೆತಂದಿರುವೆನು; ಇದರ ವಿಷಯದಲ್ಲಿ ನಿಮ್ಮಭಿಪ್ರಾಯವೇ
ನು? ಎಂದು ಕೇಳಿದನು. ನಾರಾಯಣನಾದರೋ- ಶಿವಶಿವಾ! ಸಕಲ
ಯಜ್ಞಾದಿಕರ್ಮಗಳಿಗೆಲ್ಲ ಶಿವನೇ ಅಧಿಪತಿ; ಅಂಥವನನ್ನು ಬಿಟ್ಟು ಯಾಗ

ದಲ್ಲಿ ನನಗೆ ಅಗ್ರಪೂಜೆಯನ್ನು ಕೊಡಬೇಕೆಂದು ಯೋಚಿಸುವುದು ನ್ಯಾಯವಲ್ಲ; ಆತನೇ ಜಗದೇಕಾರಾಧ್ಯ; ನಮಗೂ ಆತನೇ ಯಜಮಾನ; ಎಂದು ನುಡಿಯಲು, ಬ್ರಹ್ಮನು– ತಾವು ಹಾಗೆ ಹೇಳಕೂಡದು, ನಿಮ್ಮನ್ನು ಮರೆಹೊಕ್ಕವರನ್ನು ಕೈಬಿಡದೆ ಉದ್ಧರಿಸಬೇಕು ಎಂದು ಮೊದಲಾಗಿ ಹೇಳಿ ಒಡಂಬಡಿಸಿ, ಕೊನೆಗೆ "ಇನ್ನೇನು ಮಾಡುವುದು? ಶಿವನು ಇದನ್ನು ಕೇಳಿದರೆ ಕೋಪಿಸಿಕೊಳ್ಳದೆ ಬಿಡುವುದಿಲ್ಲ, ಆದದ್ದಾಗಲಿ, ಯಜ್ಞಕಾರ್ಯವನ್ನಾರಂಭಿಸಿರಿ, ನಾನೂ ಬರುತ್ತೇನೆ" ಎಂದು ವಿಷ್ಣು ಉತ್ತರ ಕೊಡಲು, ದಕ್ಷನೂ ಬ್ರಹ್ಮನೂ ಹೊರಟುಬಂದರು. ಮುಂದಾಗಿ ದಕ್ಷನು ಹೋಗಿ ತನ್ನ ಪಟ್ಟಣದಲ್ಲಿ ಯಾಗದ ಸುದ್ದಿಯನ್ನು ಸಾರಿಸಿ, ಹಿಮಾಲಯದ ಗಂಗಾದ್ವಾರದ ಹತ್ತಿರ ಯಜ್ಞಶಾಲೆಯನ್ನು ವಿರಚಿಸಿದನು. ಬ್ರಹ್ಮನು ಚತುರಂಗಸೈನ್ಯಸಮೇತನಾಗಿ ಅಲ್ಲಿಗೆ ಬಂದನು. ಸಕಲ ಮನುಮುನಿಸುರೋರಗಾದಿಗಳಿಗೆಲ್ಲ ಸುದ್ದಿಯನ್ನು ಕಳಿಸಿ ಬರಮಾಡಿದರು. ದೇಶದಮೇಲೆ ತುರಗವನ್ನು ಕಳಿಸಿದರು. ಋತ್ವಿಜರೇ ಮೊದಲಾದವರನ್ನು ಕರಿಸಿದರು. ಮೇಲಣ ರಕ್ಷಣೆಗೆ ವಿಷ್ಣುವನ್ನು ನಿಯಮಿಸಿದರು. ಬ್ರಹ್ಮತ್ವಕ್ಕೆ ಚತುರ್ಮುಖನೇ ನಿಂತನು. ದಕ್ಷನು ಮುಖ್ಯದೀಕ್ಷಿತನಾದನು. ಚರುಪುರೋಡಾಶಗಳು, ದರ್ಭೆ ಎಳ್ಳು ಬತ್ತ, ತುಪ್ಪ, ಜೇನು, ಅಕ್ಕಿ, ಸ್ರುಕ್, ಸ್ರುವ, ಕಲಶ, ಯೂಪ, ಮೊದಲಾದ ಪರಿಕರಗಳೆಲ್ಲವೂ ಪರ್ವತೋಪಮಾನವಾಗಿ ಬಂದು ನೆರೆದುವು. ದೇವಶ್ರೇಷ್ಠರು ವೇದಮಂತ್ರಗಳನ್ನುದ್ಘೋಷಿಸುತ್ತಿದ್ದರು. ಅಗ್ನಿತ್ರಯಗಳ ಹೊಗೆಯು ಆಕಾಶಮಂಡಲಕ್ಕೇರಿತು. ಮಹಾಸಂಭ್ರಮದಿಂದ ಯಾಗಕಾರ್ಯವು ನಡೆಯುತ್ತಿರುವಲ್ಲಿ, ಬಿನ್ನಹಗೊಂಡಿದ್ದ ದಧೀಚಿಮಹರ್ಷಿಯು ಯಾಗಮಂಟಪಕ್ಕೆ ಬಂದನು. ನಿಂತಹಾಗೆಯೇ ಯಾರುಯಾರು ಸಭೆಗೆ ಬಂದಿರುವರೆಂಬುದನ್ನು ನೋಡಿದನು. ಎಲ್ಲರೂ ಇದ್ದರು. ಮಹಾದೇವನು ಮಾತ್ರ ಇರಲಿಲ್ಲ. ಋಷಿಯ ಮನಃಕ್ಷೋಭೆಗೊಂಡಿತು. ದೀಕ್ಷಿತನ ಮುಂಗಡೆಗೆ ಋಷಿಯು ಬಂದು, ಏನಯ್ಯಾ! ಪರಮೇಶ್ವರ ನೇತಕ್ಕೆ ಬರಲಿಲ್ಲ? ಬ್ರಹ್ಮಾದಿಪಿಶಾಚಾಂತವಾದವರೆಲ್ಲರೂ ಯಾವಮಹಾದೇವನ ಆಜ್ಞಾನುಯಾಯಿಗಳಾಗಿರುವರೋ ಸಕಲ ಕರ್ಮಗಳಿಗೂ ಯಾವನು ಆ

ಗ್ರಪೂಜ್ಯನೋ, ಅಂಥ ಪಾರ್ವತೀಪತಿಯು ಇಲ್ಲಿಗೆ ಅದೇಕೆ ಬರಲಿಲ್ಲ? ಅವ ನನ್ನು ಳಿವಯಜ್ಞವು ಸಾಂಗವಾಗುವುದಿಲ್ಲವೆಂಬುದನ್ನು ನೀನುಕಾಣೆಯಾ? ಅದನ್ನು ವೇದಪುರುಷರಿಂದಾದರೂಕೇಳಿ ತಿಳಿದುಕೊ'' ಎಂದುನುಡಿದನು. ಆಗ ಚತುರ್ವೇದಗಳೂಕೂಡ ಸಾಕಾರವಾಗಿ ಬಂದು ನಿಂತು,-"ಯಾಗಕ್ಕೆ ಶಿವನೇ ಅಧಿಪತಿಯು, ಶಿವನಿಲ್ಲದಿದ್ದರೆ ಅದು ದುಷ್ಟಯಜ್ಞವೆನಿಸಿಕೊಳ್ಳು ವುದು, ಅದಕ್ಕೆ ಹಾನಿಯು ತಪ್ಪದು'' ಎಂದು ಹೇಳಿ ಬಯಲಾದುವು. ದಕ್ಷನಾದರೋ-ಪತ್ನೀಸಹಿತನಾದ ಆ ಗೊರವನೊಬ್ಬನನ್ನು ನಾವುಕರೆದಿಲ್ಲ; ಉಳಿದ ವಿಷ್ಣು ಬ್ರಹ್ಮಾದಿ ಸಕಲ ದೇವತೆಗಳು ಮನುಮುನಿಗಳು ಕಿನ್ನ ರ ಕಿಂಪುರುಷರು ಮೊದಲಾದವರೆಲ್ಲ ಬಂದಿರುವರು. ಆ ಶಿವನು ಬಂದ ಲ್ಲದೆ ಯಜ್ಞವು ಮುಗಿಯಲಾರದೆ? ಸಾಕ್ಷಾತ್ ಭಗವಂತನಾದ ನಾರಾಯ ಣನೇ ಅಗ್ರಹವಿಸ್ಸಿಗೆ ಅರ್ಹನಾಗಿ ಇಲ್ಲಿ ಇರುತ್ತಿರುವುದಿಲ್ಲವೆ? ಇನ್ನೇ ನಾಗಬೇಕು? ಯಾವ ಯಜ್ಞದಲ್ಲೂ ಶಿವನಿಗೆ ಅಗ್ರಹವಿಸ್ಸು ಕೊಡಲ್ಪ ಡುವುದಿಲ್ಲ; ಅವನು ತಾಮಸನು; ಅವನು ಸಂಹಾರಕಾರಣನು; ತಲೆ ಬುರುಡೆಯನ್ನು ಹಿಡಿದು ನಗ್ನಾಂಗಿಯಾಗಿರುವ ವಿಕಾರಿ; ಅದುಕಾರಣ ಅ ವನು ಪೂಜ್ಯನಲ್ಲ. ಸರ್ವವಿಧದಿಂದಲೂ ಸಾತ್ವಿಕನಾದ ಈ ನಾರಾಯಣ ನೇ ಲೋಕರಕ್ಷಕನು; ಅಗ್ರಪೂಜೆಗೆ ಅರ್ಹನು'' ಎಂದು ಶಿವನನ್ನು ತಿರ ಸ್ಕರಿಸಿದನು. ಆ ಕೂಡಲೆ ಋಷಿಗೆ ಕೋಪವೇರಿತು. ಕೆಂಗಣ್ಣನ್ನು ಬಿಟ್ಟು, ಯಾಗಶಾಲೆಯಲ್ಲಿ ಕುಳಿತಿದ್ದ ಎಲ್ಲ ಋಷಿಗಳನ್ನೂ ದೇವತೆಗಳ ನ್ನೂ ನೋಡಿದನು. ಮತ್ತು ಸೈಯೆತ್ತಿ-"ಎಲ್ಲಿ ಪೂಜ್ಯರಾದವರ ಪೂಜೆ ಯು ತಪ್ಪಿಹೋಗಿ ಅಯೋಗ್ಯರಿಗೆ ಪೂಜೆಯಾಗುವುದೋ, ಉತ್ತಮರಿಗೆ ತಿರಸ್ಕಾರವೂ, ಅಧಮರಿಗೆ ಪುರಸ್ಕಾರವೂ ಎಲ್ಲಿ ನಡೆಯುವುದೋ, ಆ ಸ್ಥ ಲಕ್ಕೆ ತಕ್ಕ ಶಿಕ್ಷೆಯನ್ನು ದೈವವು ಉಂಟುಮಾಡುವುದು. ಈ ಯಾಗವು ಶಿವನನ್ನು ಬಿಟ್ಟು ಆಚರಿಸಲ್ಪಡುವುದು. ಅದುಕಾರಣ ಇದು ಶಿವದ್ವೇ ಷಯುಕ್ತವಾದದ್ದು. ಇದಕ್ಕೆ ಸಹಾಯಕರಾಗಿ ಬಂದಿರುವವರೆಲ್ಲರೂ ಶಿವ ದ್ವೇಷಿಗಳೇ ಆದರು. ಯಾವಾಗ ಶಿವನನ್ನು ಇವರೆಲ್ಲರೂ ತಿರಸ್ಕರಿಸಿದ ರೋ ಅದರಿಂದಲೇ ಶಿವನಿಗೆ ಅಗ್ರಭಾಗವನ್ನು ಕೊಡಬೇಕೆಂದು ವಿಧಿಸುವ ವೇದವನ್ನೂ ದ್ವೇಷಿಸಿದಂತೆಯೇ ಆಯಿತು. ಅದುಕಾರಣ, ಶಿವರಹಿತ

ವಾದ ಈ ಯಾಗವು ಹಾಳಾಗಲಿ; ಇದಕ್ಕೆ ಸಹಾಯಕರಾಗಿ ಬಂದಿರುವ ವರಿಗೆಲ್ಲ ಅಜ್ಞಾನವಾವರಿಸಲಿ; ಎಲ್ಲರೂ ಪರಿಭವಗೊಳ್ಳಲಿ ; ವೇದಬಾಹ್ಯರಾಗಿ ಕಲಿಯುಗದಲ್ಲಿ ಹುಟ್ಟಿ, ಶಿವನನ್ನು ದೂಷಿಸಿ ನರಕಗಾಮಿಗಳಾಗಲಿ" ಎಂದು ಶಪಿಸಿ, ಥಟ್ಟನೆ ಯಾಗಶಾಲೆಯನ್ನು ಬಿಟ್ಟು ಹೊರಟನು. ಅನೇಕ ಋಷಿಸ್ತೋಮವು ಎದ್ದು ಅವನೊಡನೆಯೇ ಹೊರಟುಹೋಯಿತು. ಅವರೆಲ್ಲ ಹೋದರೆ ಹೋಗಲಿ ಯೆಂದು ನಿಂದಿಸಿ, ದಕ್ಷನು ಯಜ್ಞಕಾರ್ಯವನ್ನು ಮುಂದೆ ಸಾಗಿಸುತ್ತಿದ್ದನು. ವಿಷ್ಣ್ವಾದಿಗಳೆಲ್ಲರೂ ತಮ್ಮ ತಮ್ಮ ನಿಯುಕ್ತಕಾರ್ಯವನ್ನು ನೆರವೇರಿಸುತ್ತಿದ್ದರು. ನಾರದನು ಇದೆಲ್ಲವನ್ನೂ ನೋಡಿ ಶಿವನಿಗೆ ಬಿನ್ನೈಸಬೇಕೆಂದು ಕೈಲಾಸಕ್ಕೆ ಬಂದನು. ಪಾರ್ವತೀಸಮೇತನಾಗಿ ಕುಳಿತಿರುವ ಪರಶಿವನಿಗೆ ನಮಸ್ಕರಿಸಿ, ದಕ್ಷನ ಕಪಟಯಾಗದ ಆದ್ಯಂತಸಂಗತಿಯನ್ನೂ ಬಿನ್ನೈಸಿದನು. ಶಿವನು ಎಲ್ಲವನ್ನೂ ಕೇಳುತ್ತ ಹುಸಿನಗೆನಗುತ್ತಿದ್ದನು. ತಂದೆಯ ದುಷ್ಟಸಂಕಲ್ಪವನ್ನು ಪಾರ್ವತಿಯು ಕೇಳಿ, ಮನದಲ್ಲಿ ನೊಂದು, ಏನನ್ನಾದರೂ ಮಾಡಿ ಇದರಿಂದ ಮುಂದೆ ಬರುವ ತಂದೆಯ ವಿಪತ್ತನ್ನು ಪರಿಹರಿಸಬೇಕೆಂದು ಯೋಚಿಸಿ, ಪೀಠದಿಂದೆದ್ದು ಶಿವನ ಪಾದಕ್ಕೆ ನಮಸ್ಕರಿಸಿ, ಯಾಗಶಾಲೆಗೆ ಹೋಗಿ ತಂದೆಗೆ ಹಿತವಾದವನ್ನು ಹೇಳಿ, ಅವನ ದುರ್ಬುದ್ಧಿಯನ್ನು ಬಿಡಿಸಿ, ಜ್ಞಾನೋದಯವನ್ನು ಮಾಡಿ ಬರುತ್ತೇನೆಂತಲೂ, ಅದಕ್ಕೆ ಅಪ್ಪಣೆಕೊಡಬೇಕೆಂತಲೂ ಬೇಡಿದಳು. ಶಂಕರನು— "ಸತಿಯೆ ! ಕರೆಯದವನ ಬಳಿಗೆ ಹೋಗಬಹುದೆ? ನಿನ್ನ ಮಾತನ್ನು ಆ ಮೂರ್ಖನು ಕೇಳುವನೆ ? ಅಂತಹ ಸುಮತಿಯೇ ಅವನು ? ಆ ದುರುಳನ ಬಳಿಗೆ ಹೋಗುವುದು ನಿನಗೆ ತಕ್ಕುದಲ್ಲ, ಹೋಗಿ ಅವಮಾನಪಡಿಸಿಕೊಂಡು ಬರಬಾರದು, ಬೇಡ ಬೇಡ; ನಮ್ಮ ಮಾತನ್ನು ಕೇಳು" ಎಂದು ನುಡಿದನು. ಆದರೂ ದಾಕ್ಷಾಯಣಿಯು ಮತ್ತೆ ಮಣಿದು,—ತಂದೆಯ ಮನೆಗೆ ಮಗಳು ಹೋದರೆ ಅಪಮಾನವಾಗುವುದೆ ? ಎಂದಿಗೂ ಇಲ್ಲ, ಹೇಗಾದರೂ ಮಾಡಿ ತಂದೆಯ ಮೂಢಬುದ್ಧಿಯನ್ನು ಬಿಡಿಸಿ ಬರುವೆನು ಎಂದು ಬಹು ವಿಧವಾಗಿ ಬೇಡಿದಳು. ಕೊನೆಗೆ ಶಿವನು—ಹಾಗಾದರೆ ಮುಂದೆ ಆದದ್ದಾಗಲಿ; ನಾವೇನು ಮಾಡುವುದು? ಹೋಗು

ಎಂದು ಅಪ್ಪಣೆಯಿತ್ತು, ನಂದಿ ಮೊದಲಾದ ಅಮರಗಣಂಗಳನ್ನು ಜತೆಯಲ್ಲಿ ಕಳಿಸಿಕೊಟ್ಟನು. ಶಂಕರಿಯು ಬೇಗಬೇಗನೆ ಯಾಗಶಾಲೆಗೆ ಬರುತ್ತಿದ್ದಳು. ಒಬ್ಬ ಗಣವರನು ಮುಂದಾಗಿ ಯಾಗಶಾಲೆಗೆ ನಡೆದು ವಿಷ್ಣುಬ್ರಹ್ಮಾದಿಗಳ ಮಧ್ಯದಲ್ಲಿ ಯಜ್ಞದೀಕ್ಷೆಯನ್ನು ಹೊಂದಿ ಕುಳಿತಿದ್ದ ದಕ್ಷನ ಮುಂಗಡೆಗೆ ಹೋಗಿ, ದೇವಾಧಿದೇವನಾದ ಪರಶಿವನ ಪತ್ನಿಯು ನಿನ್ನ ಯಾಗವನ್ನು ನೋಡುವುದಕ್ಕಾಗಿ ದಯಮಾಡಿಸುತ್ತಿರುವಳು, ಎಂದು ನುಡಿದನು. ದಕ್ಷನು ಕೇಳದವನಂತೆ ಗರ್ವದಿಂದ ಸುಮ್ಮನಿದ್ದನು. ಮತ್ತು ಆ ಗಣವರನು—ಅಯ್ಯೋ ಮರುಳೇ ! ಇದೇಕೆ ಸುಮ್ಮನಿರುವೆ ? ನಾನು ಹೇಳಿದ ಮಾತು ಕೇಳಿಸಲಿಲ್ಲವೆ ? ಜಗದೀಶನ ಪತ್ನಿಯು ನಿನ್ನ ಪುಣ್ಯದ ಫಲವೇ ಆಕಾರವನ್ನು ಧರಿಸಿಬಂದಂತೆ ನಿನ್ನ ಮನೆಗೆ ಬರುತ್ತಿರುವಲ್ಲಿ ಇದಿರ್ಗೊಳ್ಳದೆ, ಅಮೃತವನ್ನೊದೆದು ಹೆಂಡವನ್ನು ಪರಿಗ್ರಹಿಸುವ ನೀಚರಂತೆ ನೀನು ನಡೆದುಕೊಳ್ಳಬಹುದೆ ? ಏಳು, ಬೇಗನೆ ಮಾರ್ಗಗಳನ್ನಲಂಕರಿಸು, ಎಂದು ಹೇಳಲು, ದಕ್ಷನು--ಕೋಪದಿಂದ ಹುಬ್ಬುಗಂಟಿಕ್ಕಿ, "ಯಾರೊ ಇವನು ? ಕತ್ತನ್ನು ಹಿಡಿದು ನೂಕಿಬಿಡಿ" ಎಂದು ಗರ್ಜಿಸಿ ನುಡಿದನು. ಅಷ್ಟರಲ್ಲಿ ಸಪರಿವಾರಳಾದ ಭವಾನಿಯೇ ಯಾಗಶಾಲೆಗೆ ಬಂದಳು. ಯಜ್ಞಕುಂಡದ ಬಳಿಯಲ್ಲಿ ಕುಳಿತಿದ್ದ ತಂದೆಯ ಬಳಿಗೆ ಹೋಗಿ, ವಿನಯದಿಂದ ತಲೆವಾಗಿ, "ಅಯ್ಯಾ ! ಸಕಲವೇದಾಗಮಶಾಸ್ತ್ರಾರ್ಥಗಳನ್ನೆಲ್ಲ ಅರಿತೂ ಅರಿತು ಪ್ರಾಜ್ಞನಾದ ನಿನಗೆ ನಾನು ಹೇಳುವುದೇನಿದೆ ? ನೀನು ಅಜ್ಞನಂತೆ ಈ ಕಾರ್ಯವನ್ನಾಚರಿಸಬಹುದೆ ? ಪರಶಿವನನ್ನು ಬಿಟ್ಟು ಯಜ್ಞವನ್ನಾಚರಿಸಿದರೆ ಅದು ಸಾಂಗವಾಗುವುದೆ? ಇದರಿಂದ ನಿನಗೆ ಶ್ರೇಯಸ್ಸಾದೀತೆ ? ಬೇಡ ಬೇಡ, ಈ ಪ್ರಯತ್ನವನ್ನು ನಿಲ್ಲಿಸು, ವಿಶ್ವಾಸದಿಂದ ನುಡಿಯುವ ನನ್ನ ಮಾತನ್ನು ಲಾಲಿಸು" ಎಂದು ಮಧುರೋಕ್ತಿಗಳಿಂದ ಬೋಧಿಸಿದಳು. ದಕ್ಷನಾದರೊ— "ಓಹೋ ! ಗಂಡನ ಗೊಡ್ಡುಬೆದರಿಕೆಯನ್ನು ತೋರಿಸುವುದಕ್ಕೆ ಇಲ್ಲಿಗೆ ಬಂದೆಯೊ ? ನಿನ್ನ ಗಂಡನೂ ನೀನೂ ಬರದಿದ್ದರೆ ನಮ್ಮ ಯಜ್ಞವು ನಡೆಯದೆ ನಿಂತುಹೋಗುವುದೊ ? ಅವನೊಬ್ಬನಿಲ್ಲದಿದ್ದರೆ ಜಗತ್ತೇ ನಮಗಿಲ್ಲವೆ ? ಇಲ್ಲಿ ಕುಳಿತಿರುವವರೆಲ್ಲ ಯಾರೆಂದು ನೋಡು; ಈ

ವಿಷ್ಣು ಈ ಬ್ರಹ್ಮ ಈ ದಿಕ್ಪಾಲಕರು ಈ ಗರುಡಗಂಧರ್ವರು, ಈ ಮುನಿಗಳು, ಈ ಸೂರ್ಯಚಂದ್ರರು ಮೊದಲಾದವರೆಲ್ಲ ನಮಗೆ ಸಹಾಯಕರಾಗಿ ನಿಂತಿರುವಾಗ, ಚೇದ್ರ, ಅತ್ರಿ, ಕಶ್ಯಪ ಮೊದಲಾದ ಇಂಥ ಘನವಂತರೆಲ್ಲ ನನಗೆ ಅಳಿಯಂದಿರಾಗಿರುವಾಗ ನನಗೇನು ಕಡಮೆ ? ಯಾರ ಭೀತಿಯು ನನಗೇನು ? ಸ್ಮಶಾನವನ್ನು ಕಾಯುವ ಮೂಳೆಯ ಮಾಲೆಯ ಆ ಬಡಗೊರವನು ನನಗೆ ಸಮಾನನೆ ? ಯಾವ ಮಹಾದೊಡ್ಡವಿಷಯವನ್ನು ನನ್ನೊಡನೆ ಹೇಳುವುದಕ್ಕೆ ಬಂದೆ ! ಬಿಡು; ನೀನೂ ನಿನ್ನ ಗಂಡನೂ ಮಾಡುವುದನ್ನು ನೋಡಿಕೊಳ್ಳುತ್ತೇನೆ, ನಡೆ ನಡೆ, ಎಂದು ಗದರಿ ನುಡಿದು ತಿರಸ್ಕರಿಸಿಬಿಟ್ಟನು. ಈ ಶಿವನಿಂದೆಯನ್ನು ಕೇಳಿದಕೂಡಲೇ ಯಾಗಶಾಲೆಯಲ್ಲಿದ್ದವರಲ್ಲಿ ಕೆಲವರು "ಶಿವಶಿವಾ" ಎಂದು ಕಿವಿ ಮುಚ್ಚಿಕೊಂಡರು. ಕೆಲವರು ಶಿವನಿಂದೆಯನ್ನು ಕೇಳಬಾರದೆಂದು ಎದ್ದು ತಮ್ಮ ತಮ್ಮ ಮನೆಗೆ ಹೊರಟುಹೋದರು. ಕೆಲವರು ಇದು ಸರಿಯಲ್ಲವೆಂದು ದಕ್ಷನಿಗೆ ಬುದ್ಧಿ ಹೇಳಿ, ಅವನು ಕೇಳದೆ ಹೋಗಲು ಜರೆಯುತ್ತ ನಡೆದರು. ಹೀಗೆ ಯಾಗಶಾಲೆಯಲ್ಲಿದ್ದ ಎಷ್ಟೋ ಜನರು ಕಳೆದುಕೊಂಡರು. ದಕ್ಷನಾದರೋ– ಯಾರು ಹೋದರೆ ತಾನೇಳಗುವುದೇನು ? ಎಂದುಕೊಂಡು ತನ್ನ ಕೆಲಸದಲ್ಲಿ ತಾನು ತೊಡಗಿದನು. ರುದ್ರಾಣಿಯಾದರೋ ಪ್ರಾಣಕಾಂತನಿಂದೆಯನ್ನು ಕೇಳಿ ಕಿವಿ ಮುಚ್ಚಿ, ಶಿವನು ನುಡಿದ ಭಾಷೆಯು ನಿಜವಾಯ್ತೆಂದು ಯೋಚಿಸಿ, ತಂದೆಯಿಂದ ತಿರಸ್ಕಾರವನ್ನು ಹೊಂದಿ ಶಿವನಿಗೆ ಮತ್ತೆ ತನ್ನ ಮುಖವನ್ನು ತೋರಿಸಬೇಕೆಲ್ಲ! ಎಂದು ಲಜ್ಜಿಸಿ, ಇಂಥ ಶಿವದೂಷಕನ ಸಂಬಂಧವನ್ನು ಪಡೆದಿದ್ದ ತನ್ನ ದೇಹವನ್ನೇ ಇನ್ನು ಧರಿಸಿರುವುದು ಸರಿಯಲ್ಲವೆಂದು ಚಿಂತಿಸಿ, ಯೋಗಾಗ್ನಿಯಲ್ಲಿ ದೇಹವನ್ನು ವಿಸರ್ಜಿಸಿದಳು. ಮತ್ತು ಹಿಮವಂತನ ಪತ್ನಿಯಾದ ಮೇನಕಿಗೆ ಕೊಟ್ಟಿದ್ದ ವರದ ಪಾಲನೆಗಾಗಿ ಆಕೆಯ ಗರ್ಭವನ್ನು ಪ್ರವೇಶಿಸಿ ಪಿಂಡವಾಗಿ ಬೆಳೆದಳು ಎಂಬಲ್ಲಿಗೆ ಮೂರನೇ ಅಧ್ಯಾಯವು ಮುಗಿದುದು.



# ೪ ನೇ ಅಧ್ಯಾಯವು

---

## ವೀರಭದ್ರವಿಜಯವು.

ದಾಕ್ಷಾಯಣಿಯು ಶರೀರವನ್ನು ಬಿಟ್ಟುದನ್ನು ನಂದೀಶನು ಕಂಡು ಕೋಪವೇರಿ, ಪರಶಿವನಿಗೆ ಈ ಸುದ್ದಿಯನ್ನು ತಿಳಿಸಿ ಮುಂದಣ ಕಾರ್ಯವನ್ನು ಮಾಡಬೇಕೆಂದು, ಯಾಗಶಾಲೆಯಿಂದ ಕಡುಬೇಗನೆ ಕೈಲಾಸಕ್ಕೆ ಬಂದು, ಪರಮೇಶನಿಗೆ ನಮಸ್ಕರಿಸಿ, "ಜೀಯಾ! ತಮ್ಮ ಅರ್ಧಾಂಗಿಯಾದ ಜಗನ್ಮಾತೆಯು ದಕ್ಷಬ್ರಹ್ಮನಿಂದ ಪತಿದೂಷಣೆಯನ್ನು ಕೇಳಿ ಸೈರಿಸಲಾರದೆ ತನ್ನ ಕೋಪಾಗ್ನಿಗೆ ದೇಹವನ್ನು ಸಮರ್ಪಿಸಿಬಿಟ್ಟಳು" ಎಂದು ಬಿನ್ನೈಸಿದನು. ಕೇಳಿದ ಕೂಡಲೇ ಪರಶಿವನ ಕೋಪಾಗ್ನಿಯು ವೇಲಾತೀತವಾಯಿತು. ಪ್ರಳಯಕಾಲದಲ್ಲಿ ಮಹಾಪರ್ವತಗಳನ್ನು ಸುಡುತ್ತಿರುವ ಬೆಂಕಿಗೆ ಬೇಸಗೆಯೂ ಬಿರುಗಾಳಿಯೂ ಸಹಾಯಕವಾದರೆ ಅದನ್ನು ಆರಿಸುವುದಕ್ಕೆ ಯಾರಿಂದಾದೀತು? ರುದ್ರನು ಮೊದಲೇ ವಿಷಗ್ರೀವ; ಅದರಮೇಲೆ ಉಗ್ರ, ಇದರಮೇಲೂ ಕಿಡಿಗಣ್ಣ, ಮತ್ತು ಸಹ್ರಾರಕಾರಣಮೂರ್ತಿ; ಇಂಥ ಸ್ವಾಮಿಯು ತನ್ನ ಮೆಚ್ಚಿನ ಹೆಂಡತಿಯು ದೇಹತ್ಯಾಗ ಮಾಡಿದಳೆಂಬ ಸುದ್ದಿಯನ್ನೂ ಅದರಮೇಲೂ ಪತಿದೂಷಣೆಯನ್ನು ಕೇಳಲಾರದೆ ಹಾಗಾದಳೆಂಬುದನ್ನೂ ಕಿವಿಯಿಂದ ಕೇಳಿದ ಬಳಿಕ ಸೈರಿಸುವುದುಂಟೆ? ಕೋಪಾಗ್ನಿಯಿಂದ ಆದ್ಯಂತವಾಗಿ ಪರಶಿವನ ದೇಹದಿಂದ ಮಹಾಜ್ವಾಲೆಯು ಹೊರಟಿತು. ಶಾಂತಿರಸವು ಬಣಗಿಹೋಯಿತು. ಕಣ್ಣುಗಳಿಂದ ಕಿಡಿಯು ಸುರಿಯುತ್ತಿದ್ದಿತು. ಬೆಮರು ಮೂಡಿತು. ಹಣೆಗಣ್ಣಿನಿಂದ ಜ್ವಾಲೆಯು ಹೊರಚೆಲ್ಲಿತು. ಕಣ್ಣಾಲಿಗಳು ಚಪಲವಾದುವು. ಮೀಸೆಗಳು ಕೆದರಿದುವು. ಶ್ವಾಸವು ಬಿಸಿಯಾಯಿತು. ಮುಖವು ಕೆಂಪಾಯಿತು. ರುಂಡಮಾಲೆಯು ಕಿರಿಚಿದುವು. ಆಭರಣದ ಸರ್ಪಗಳು ವಿಷವನ್ನು ಕಾರಿದುವು. ಜಟಾಪಟಲವು ಬಿಚ್ಚಿ ಕೆದರಿತು. ಇವೆಲ್ಲವೂ ಜಗತ್ತಿನ ಲಯಕ್ಕೆ ಸೂಚಕವಾಗಿದ್ದುವು. ಅಂತರಿಕ್ಷದಲ್ಲಿದ್ದ ನಕ್ಷತ್ರಗಳು ಪಳಪಳನೆ ಉದುರಿಕೊಂಡುವು. ಬೆಟ್ಟಗಳು ಛಟಛಟಲೆಂದುಸೀಳುಬಿಟ್ಟುವು. ಸಮುದ್ರಗಳು ತಳಮಳನೆ ಕುದಿದುವು. ಭೂಮಿಯು ಧಗಧಗನೆ ಉರಿ

ದಿತು. ದಿಗ್ಗಜಗಳ ಮತ್ತು ಆದಿಶೇಷನ ತಲೆಯೂ ಹೆಡೆಯೂ ಒಡೆದು ಮುತ್ತುಗಳೂ ರತ್ನಗಳೂ ಸಿಡಿದಾಡಿದುವು. ಬ್ರಹ್ಮಾಂಡಮಂಡಲವನ್ನೆಲ್ಲ ಪರಶಿವನ ಕೋಪಾಗ್ನಿಯು ಆವರಿಸಿ ಸುಡುತ್ತಿದ್ದಿತು. ಯಾವ ಮಹಾದೇವನೊಬ್ಬನು ಒಲಿದರೆ ಜಗತ್ತೇ ಉದ್ಧಾರಗೊಳ್ಳುವುದೋ, ಆ ದೇವನು ಮುಳಿದರೆ ಲೋಕವೆಲ್ಲ ನಾಶಗೊಳ್ಳುವುದರಲ್ಲಾಶ್ಚರ್ಯವೇನು? ಕಾದ ಹಂಚು ಒಡೆದಂತೆ ಬ್ರಹ್ಮಾಂಡವು ಬಿರಿದುಹೋಯಿತು. ತನ್ನ ಪ್ರಾಣಪ್ರಿಯೆಯು ದೇಹವನ್ನು ಬಿಟ್ಟ ಅಗ್ನಿಯಿಂದಲೇ ಜಗತ್ತನ್ನೆಲ್ಲ ಸುಡಬೇಕೆಂದು ಶಿವನು ಯೋಚಿಸಿರುವನೋ ಎಂದು ಲೋಕವೆಲ್ಲ ತಲ್ಲಣಿಸುತ್ತಿದ್ದಿತು. ಆ ಮಹಾದೇವನ ಮಹಾಕೋಪಾಗ್ನಿಯಿಂದೊಗೆದ ಭಯಂಕರವಾದ ಹೊಗೆಯೇ ಮಹಾಪುರುಷರೂಪವನ್ನು ಧರಿಸಿದಂತೆ ಕಾಳವರ್ಣವಾದ ಪ್ರಚಂಡಮೂರ್ತಿಯೊಂದು ಶಿವನ ಶ್ವಾಸೋಚ್ಛ್ವಾಸದಿಂದ ಉಚ್ಛ್ವಸಿಸಿದಂತೆ ಉದಿಸಿನಿಂತಿತು. ನಕ್ಷತ್ರಮಾಲೆಯನ್ನು ತಳೆದಿರುವ ಮೇಘಜಾಲದಂತೆ ತೋರುತ್ತಿದ್ದ ಆ ಮೂರ್ತಿಗೆ ಒಂದು ಸಹಸ್ರ ಮುಖಗಳೂ ಎರಡು ಸಾವಿರ ತೋಳುಗಳೂ ನೂರು ಸಾವಿರ ಕಣ್ಣುಗಳೂ ಭೀಕರವಾದ ಕೋರೆದಾಡೆಗಳೂ ವಿರಾಜಿಸುತ್ತಿದ್ದುವು. ಆ ಮಹಾವಿರಾಡ್ರೂಪನಿಗೆ ಬ್ರಹ್ಮಾಂಡದ ಉಪರಿಭಾಗವೇ ಶಿರಸ್ಸಿನಂತೆಯೂ ಸೂರ್ಯಮಂಡಲವೇ ಎದೆಯಮೇಲಣ ಪದಕದಂತೆಯೂ ನಕ್ಷತ್ರಪಙ್ಕ್ತಿಯೇ ಕಂಠಸರದಂತೆಯೂ ತೋರುತ್ತಿದ್ದುವು. ಆ ಮಹಾಮೂರ್ತಿಯು ಕೋಟಸಿಡಿಲಿನಂತೆ ಆರ್ಭಟಿಸಿ ನಿಂತು ಅತ್ತಿತ್ತ ಅಲೆದಾಡಿದನು. ಪಾದವಿನ್ಯಾಸಕ್ಕೆ ಜಗತ್ತೆಲ್ಲ ತೂಗಾಡಿತು. ಸರ್ಪಮಾಲೆ ರುಂಡಮಾಲೆಗಳನ್ನು ಧರಿಸಿ, ಹಸ್ತಗಳಲ್ಲಿ ಹಲಗೆ ಕತ್ತಿ ತೋಮರ ಕುಂತ ಮುಸಲ ಚಕ್ರ ಮುದ್ಗರ ಧನುರ್ಬಾಣ ಪ್ರಾಸ ಪಟ್ಟಸ ಕುಂತ ಕುಠಾರ ಮೊದಲಾದ ಆಯುಧಗಳನ್ನು ಹಿಡಿದು, ಆದಿಶೇಷನನ್ನು ವೀರಗಾಸೆಯಾಗಿ ಕಟ್ಟಿ, ಸುರನರೋರಗರಾಕ್ಷಸಾದಿಗಳಲ್ಲಿ ಯಾರು ಪ್ರತಿಭಟಿಸಿದರೂ ಸೀಳಿ ತೋರಣಗಟ್ಟುವ ಬಿರುದಿನ ಪೆಂಡೆಯನ್ನು ಪಾದದಲ್ಲಿ ಕಟ್ಟಿ, ಶೂರಾಗ್ರೇಸರನಾದ ಆ ಘೋರಮೂರ್ತಿಯು ಪರಶಿವನ ಪಾದಕ್ಕೆ ನಮಸ್ಕರಿಸಿ, ಕೈಮುಗಿದು ನಿಂತು, "ಸ್ವಾಮೀ! ಅಪ್ಪಣೆಯನ್ನು ಕೊಡು, ಭೂಮಿಯನ್ನು ಸೀಳಲೆ? ಬೆಟ್ಟ

ಗಳನ್ನು ಕೀಳಲಿ ? ಸೂರ್ಯನನ್ನು ತುಳಿದುಹಾಕಲಿ ? ಸಮುದ್ರಗಳನ್ನು ಮುಚ್ಚಿಬಿಡಲಿ ? ಬ್ರಹ್ಮಾಂಡವನ್ನು ಹೋಳುಮಾಡಲಿ ? ಹೇಳು; ಇದಿರಾಗುವವರು ಯಾರಿದ್ದರೂ ಸೀಳಿ ತಂದೊಪ್ಪಿಸುತ್ತೇನೆ. ಬ್ರಹ್ಮನ ಮೂಳೆಯನ್ನಾದರೂ ಮುರಿದು ತರುತ್ತೇನೆ. ಬ್ರಹ್ಮಾಂಡವನ್ನೆಲ್ಲ ಪುಡಿ ಮಾಡಿ ತಂದೊಪ್ಪಿಸುತ್ತೇನೆ, ವಿಷ್ಣುವಿನ ಪ್ರಾಣವನ್ನಾದರೂ ತೆಗೆದುಕೊಳ್ಳುತ್ತೇನೆ, ಇಂದ್ರಾದಿದಿಕ್ಪಾಲಕರ ಸಂಪತ್ತನ್ನಾದರೂ ಸುಟ್ಟು ಬರುತ್ತೇನೆ, ಪಾತಾಳಲೋಕದವರನ್ನೆಲ್ಲ ಕಾಲಿನಿಂದ ಹೊಸಗಿಬರುತ್ತೇನೆ. ದಿಗ್ಗಜಗಳ ಕೊಂಬುಗಳನ್ನೂ ಕಿತ್ತು ತರುತ್ತೇನೆ, ಆದಿಶೇಷನ ಎದೆಯನ್ನೂ ಸೀಳುತ್ತೇನೆ, ಉತ್ತರ ಕೊಡು.'' ಈರೇಳುಲೋಕಗಳಲ್ಲಿ ಮಲೆತವರು ಯಾರಿದ್ದರೂ ಉಸುರು, ಕ್ಷಣಕಾಲದಲ್ಲಿ ಎದೆ ಮೆಟ್ಟಿ ತುಳಿದು ಪ್ರಾಣವನ್ನು ತೆಗೆದುಕೊಳ್ಳುತ್ತೇನೆ. ಬೆಸನಕೊಡು, ಕೊಡು '' ಎಂದು ಪ್ರಾರ್ಥಿಸುತ್ತಿರುವ ಮಗನ ಶೌರ್ಯಾಟೋಪವನ್ನು ಪರಶಿವನುನೋಡಿ, ಹುಸಿನಗೆ ನಕ್ಕು, " ಎಲೆ ಸುತನೇ! ನೀನು ಜಗತ್ತನ್ನೆಲ್ಲ ಗೆದ್ದುಬರುವ ವೀರತ್ವವುಳ್ಳವನಾದ ಕಾರಣ ವೀರನಾಗಿಯೂ, ಈ ನಿನ್ನ ಶರೀರವು ಭದ್ರ (ಮಂಗಳ) ಮಯವಾಗಿರುವುದರಿಂದ ಭದ್ರನಾಗಿಯೂ ಇರುತ್ತೀಯೆ, ಅದುಕಾರಣ ನೀನು 'ವೀರಭದ್ರನು' ಎಂದು ಶಿವನು ಹೆಸರು ಕರೆದು, ಬಳಿಕ—ಎಲೆ ಮಗನೇ! ದಕ್ಷನೆಂಬುವನು ನಮ್ಮನ್ನು ಒಲ್ಲೆನ್ನುತ್ತಿದ್ದ ವಿಷ್ಣುಬ್ರಹ್ಮೇಂದ್ರಾದಿಗಳನ್ನೆಲ್ಲ ಕಟ್ಟಿಕೊಂಡು ಯಜ್ಞವನ್ನು ಮಾಡುತ್ತಿರುವನು; ನನ್ನ ಪತ್ನಿಯು ಅಲ್ಲಿಗೆ ಹೋಗಿ ಅವನಿಂದ ಪರಿಭಾಷಣೆಯನ್ನು ಕೇಳಿ ದೇಹವನ್ನು ತ್ಯಜಿಸಿದಳು; ನೀನು ಈಗಳೇ ಅಲ್ಲಿಗೆ ಹೋಗಿ, ಯಜ್ಞದಲ್ಲಿ ಅಗ್ರಭಾಗವನ್ನು ನಮಗೆ ಕೊಟ್ಟುಬಿಡುವಂತೆ ಅವನಿಗೆ ಮೊದಲು ಬುದ್ಧಿ ಹೇಳು; ಅವನ್ನು ಕೇಳದಿದ್ದರೆ ಯಾಗವನ್ನು ಹಾಳ್ಮಾಡಿ, ಅಲ್ಲಿದ್ದವರೆಲ್ಲರನ್ನೂ ಸೆರೆ ಕಟ್ಟಿ ತೆಗೆದುಕೊಂಡು ಬಾ '' ಎಂದು ನೇಮಿಸಿ ಕಳಿಸಿಕೊಟ್ಟನು. ಆಗ ವೀರಭದ್ರೇಶ್ವರನು ಕೋಟಿಸಿಡಿಲಿನಂತೆ ಆರ್ಭಟಿಸಿ ಶೌರ್ಯದಿಂದ ಹೂಂಕರಿಸಿದನು. ಆ ಶಬ್ದದೊಡನೆಯೇ ಮಹಾಭದ್ರಕಾಳೀಶಕ್ತಿಯು ಉದಿಸಿ ನಿಂತಳು. ಮತ್ತು ತನ್ನ ಸಂಕಲ್ಪಮಾತ್ರದಿಂದಲೇ ಸಮಾನರೂಪದ ಅಸಂಖ್ಯಾತಕೋಟಿಚತುರಂಗಸೈನ್ಯವನ್ನು ಸೃಜಿಸಿ, ಎಲ್ಲರನ್ನೂ ಒಡನೆ

ಕರೆದುಕೊಂಡು ಭದ್ರಕಾಳಿಯೊಡನೆ ತಾನು ವೃಷಭವನ್ನೇರಿ ದಕ್ಷಾಧ್ವರದ ಕಡೆಗೆ ನಡೆದನು. ಈ ಮಹಾಸೇನೆಯು ಛತ್ರಚಾಮರಧ್ವಜಪತಾಕವಾದ್ಯ ವೈಭವಾದಿಗಳಿಂದ ಕೂಡಿ ನಡೆಯುತ್ತಿರಲು, ಅದರ ಭಾರವನ್ನು ಹೊರ ಲಾರದೆ ದಿಗ್ಗಜಗಳು ತಲೆಯನ್ನು ಕುಗ್ಗಿದುವು. ದಾರಿ ನಡೆದು ಹೋ ಗುತ್ತಿರುವಲ್ಲಿ ವೀರಭದ್ರೇಶನು ಒಬ್ಬ ಗಣನಾಯಕನನ್ನು ಕರೆದು "ನೀ ನು ದಕ್ಷನ ಯಾಗಶಾಲೆಗೆ ಹೋಗಿ, ನಾವು ಬರುತ್ತಾರೆಂಬುದನ್ನು ತಿಳಿಸ ದೆ, ಯಜ್ಞದ ಅಗ್ರಹವಿರ್ಭಾಗವನ್ನು ಶಿವನಿಗೆ ಸಮರ್ಪಿಸೆಂದು ಅವ ನಿಗೆ ಹೇಳು; ಅದಕ್ಕೇನು ಉತ್ತರ ಬರುವುದೋ ಅದನ್ನು ನಮಗೆ ತಿಳಿ ಸು" ಎಂದು ಹೇಳಿಕಳಿಸಿದನು. ಆತನು ಆಯುಧಧಾರಿಯಾಗಿ ವಾ ಯುವೇಗದಿಂದ ಬಂದು ಜನಸ್ತೋಮವನ್ನು ದಾರಿ ಬಿಡಿಸಿಕೊಂಡು ನು ಗ್ಗಿ ದಕ್ಷನ ಮುಂದೆ ನಿಂತು "ಅಯ್ಯಾ ದಕ್ಷನೇ! ನಿನ್ನ ನಡತೆಯು ಸಿ ಹ್ಮನನ್ನು ಕೆಣಕಿ ದನಗಳನ್ನು ಮರೆಹೊಕ್ಕು ಬಾಳುವೆನೆಂದು ಯೋಚಿ ಸಿದ ದಡ್ಡನ ಸ್ಥಿತಿಯಾಗಿದೆ; ಯಾರನ್ನು ಮೆಚ್ಚಿಸಿಕೊಳ್ಳುವುದಕ್ಕಾ ಗಿ ನೀವು ಯಜ್ಞವನ್ನಾಚರಿಸುತ್ತಿರುವಿರಿ? ಈ ವಿಷ್ಣುಬ್ರಹ್ಮಾದಿಗಳೆ ಲ್ಲರೂ ಯಾರಿಂದ ಹುಟ್ಟಿದರು? ನೀವು ಆಜ್ಯಾಹುತಿಯನ್ನು ಕೊಡುವು ದಕ್ಕೆ ಯಾವ ವೇದಮಂತ್ರಗಳನ್ನು ಉಪಯೋಗಿಸುವಿರೋ ಆ ವೇದಗ ಳು ಯಾರನ್ನು ಸ್ತುತಿಸುವುವು? ಇನ್ನೆಲ್ಲ ನೀವು ಅಹಂಕಾರದಿಂದ ಮರೆತುಬಿಟ್ಟು ಕೆಟ್ಟುಹೋದಿರಿ; ಕ್ಷಾಮ ಬರಲಾಗಿ ಕುದುರೆಯು ಮರಿ ಕತ್ತೆಯಾದಂತೆ ನಿಮ್ಮವಸ್ಥೆಯಾಯಿತು." ಎಂದನು. ಇದನ್ನು ಕೇಳಿ ಸಭಿಕರೆಲ್ಲರೂ ಕಿಡಿಕಿಡಿಯಾದರು. ದಕ್ಷನು ಕೆಂಗಣ್ಣನ್ನು ಬಿಟ್ಟು ದು ರುದುರನೆ ಗಣನಾಯಕನನ್ನು ನೋಡಿ "ಎಲೋ! ನೀನಾರು? ಏಕೆ ಬೊಗಳುತ್ತೀಯೆ? ನಿನ್ನನ್ನು ಇಲ್ಲಿಗೆ ಬರಹೇಳಿದವರಾರು? ಈ ಮಂ ತ್ರದ ಸುದ್ದಿಯು ನಿನಗೇಕೆ? ಬಂದ ಕಾರ್ಯವೇನು?" ಎಂದು ನುಡಿದ ನು. ಗಣನಾಯಕನ ವೈರಕ್ತವು ಕಾವೇರಿತು. ಸಭಿಕರನ್ನೆಲ್ಲ ಕ್ಷಣ ಕಾಲದಲ್ಲಿ ಧೂಳೀಪಟಲವನ್ನು ಮಾಡಿಬಿಡಲೆ? ಎಂದು ಮನಸ್ಸಿನಲ್ಲಿ ಸ್ಫುರಿ ಸಿತು. ಆದರೆ ತನ್ನ ಯಜಮಾನನು ಮಾಡಿದ್ದ ಅಪ್ಪಣೆಯನ್ನು ನೆನೆದು ಶಾಂತನಾಗಿ, ದಕ್ಷನನ್ನು ಕುರಿತು—"ನಾನು ಯಾರೆಂಬುವನ್ನು ಕಾಣೆಯಾ?

ನಿಮ್ಮ ಮತ್ಸ್ಯಾವತಾರದ ಮೂರ್ತಿಯ ಸೊಕ್ಕನ್ನು ಮುರಿದ, ಬ್ರಹ್ಮನ ಶಿರವನ್ನು ತರಿದ, ಜಗದೇಕಾರಾಧ್ಯನಾದ ಫಾಲಾಕ್ಷನ ದೂತನು. ನಮ್ಮೊಡೆಯನ ಅಪ್ಪಣೆಯಮೇರೆ ಈ ಯಜ್ಞದಲ್ಲಿ ಆತನ ಅಗ್ರಹವಿರ್ಭಾಗದ ಸ್ವಾಮ್ಯವನ್ನು ಕೇಳಿ ತೆಗೆದುಕೊಂಡುಹೋಗುವುದಕ್ಕಾಗಿ ಬಂದಿರುವೆನು; ಅದನ್ನು ಕೊಡದಿದ್ದರೆ ಜೊಗಳುವ ನಾಯಿ ನರಿಗಳಿಗೆ ನಿಮ್ಮದೇಹದ ಮಾಂಸದೌತಣವಾಗುವುದು ಎಂಬುದನ್ನು ನಿಮಗೆ ಎಚ್ಚರಿಸುವುದಕ್ಕಾಗಿ ನಾನು ಬಂದೆನಲ್ಲದೆ ಜೊಗಳತಕ್ಕವನಲ್ಲ" ಎಂದು ನುಡಿದನು. ದಕ್ಷನಾದರೊ—"ಎಲ್ಲಿಯ ರುದ್ರ ? ಭಾಗವನ್ನು ಕೊಡುವುದೆಂದರೇನು ? ಈ ಬಾಯ್ಬಡಿಕನನ್ನು ಕತ್ತ ಹಿಡಿದು ನೂಕಿಬಿಡಿ" ಎಂದನು. ಬಳಿಯಲ್ಲಿದ್ದ ದೂತನು ಕೊರಲಿಗೆ ಕೈಯನ್ನು ಹಾಕುವುದಕ್ಕೆ ಬರಲು, ಗಣನಾಯಕನು ಕೈಕತ್ತಿಯಿಂದ ಅವನ ಕೈಯನ್ನೇ ಕತ್ತರಿಸಿಬಿಟ್ಟನು. ಅದನ್ನು ಕಂಡು ಸಭಿಕರೆಲ್ಲರೂ ಮೊರೆದೆದ್ದರು. ಗಣವರನು ಅವರೆಲ್ಲರನ್ನೂ ಲಕ್ಷಿಸದೆ ನುಗ್ಗಿ ಈಚೆಗೆ ಬಂದು, ವೀರಭದ್ರೇಶನನ್ನು ಕಂಡು ಕೈಜೋಡಿಸಿ, ನಡೆದ ಸಂಗತಿಯನ್ನೆಲ್ಲ ಬಿನ್ನವಿಸಿದನು. ಕೇಳುವಕೂಡಲೇ ವೀರಭದ್ರೇಶನು ರೋಷಾವೇಶದಿಂದ ಭೂಮಿಯನ್ನು ದಝಾಡಿಸಿ ಒದೆದು, ಕೈಯಲ್ಲಿನ ಸಿಂಜನಿಯನ್ನು ಮಿಡಿದನು. ಅದರ ಧ್ವನಿಗೆ ಜಗತ್ತೆಲ್ಲ ತಲ್ಲಣಿಸಿತು. ಸೂರ್ಯಚಂದ್ರಾದಿಗಳು ಅಡಗಿ ಹೋದರು. ವಿಷ್ಣುಬ್ರಹ್ಮಾದಿಗಳು ನಡುಗಿದರು. ಯಜ್ಞಶಾಲೆಯಲ್ಲಿ ದುಶ್ಶಕುನಗಳು ನಡೆದುವು. ಎಲ್ಲರೂ ಕಂಡು ಚಕಿತರಾದರು. (ಪಾಪಾಚರಣೆಯು ಯಾರಿಗೆ ತಾನೇ ಕೇಡನ್ನು ತರುವುದಿಲ್ಲ ?) ಬಳಿಕ ವೀರೇಶನಪ್ಪಣೆಯಮೇರೆ ಮಹಾಸೇನೆಯು ವಾದ್ಯವನ್ನು ನೊಳಗಿಸುತ್ತ ಬಂದು ಯಾಗಶಾಲೆಯನ್ನು ಮುತ್ತಿತು. ಅಲ್ಲಿ ರಕ್ಷಕರಾಗಿ ನಿಂತಿದ್ದ ದಕ್ಷನ ಕಡೆಯ ಚತುರಂಗಸೈನ್ಯಕ್ಕೂ ಇವರಿಗೂ ಮೊದಲು ಯುದ್ಧವಾರಂಭಿಸಿತು. ಓಹೋ! ಯಾಗಶಾಲೆಗೆ ಕಿಚ್ಚನ್ನಿಕ್ಕುವುದಕ್ಕೆ ಕಳ್ಳರು ಬಂದಿರುವರು, ಹಿಡಯಿರಿ ಹೊಡೆಯಿರಿ ತಿವಿಯಿರಿ ಎಂದು ಕೂಗಿ ಹೊಡೆಯಲುಪಕ್ರಮಿಸಿದರು. ಆಯುಧಗಳು ಖಣಿಖಣಿಲನೆ ಶಬ್ದಗೊಳ್ಳುತ್ತಿದ್ದುವು. ರುಂಡಗಳು ಕಿರೀಟಸಹಿತವಾಗಿ ಹಾರಾಡುತ್ತಿದ್ದುವು. ಹಸ್ತ್ಯಶ್ವರಥಾದಿಗಳು ತುಂಡುತುಂ

ಡಾಗಿ ಉರುಳುತ್ತಿದ್ದುವು. ಈ ಮಹಾರಣಸಂಕುಲವನ್ನು ಒಳಗಿದ್ದ ಮನುಮುನಿಸುರಸ್ತೋಮವು ಕೇಳಿ, ಕೆಟ್ಟೆವೆಂದು ಚಿಂತಿಸಿ, ಮೋರೆಯನ್ನು ಸೊರಗಿಸಿ, ಬಾಯೊಣಗಿ ಗಜಬಜೆಸಿತು. ಯಜ್ಞವೆಲ್ಲ ಭಗ್ನವಾಗಿ ಹೋಯಿತು. ಈ ಉತ್ಪಾತವನ್ನು ವಿಷ್ಣುವು ಕಂಡು, ಓಡಿಹೋಗುತ್ತಿದ್ದ ದೇವತಾಸ್ತೋಮವನ್ನು ತಡೆದು, "ಹೆದರಿಕೊಳ್ಳುವುದೇತಕ್ಕೆ? ಬಂದದ್ದು ಬರಲಿ; ನಾನು ನೋಡಿಕೊಳ್ಳುತ್ತೇನೆ." ಎಂದು ಧೈರ್ಯಕೊಟ್ಟು, ಹುರಿ ಮಾಡಿದನು. ವಿಷ್ಣುಬ್ರಹ್ಮರೂ ಸಕಲ ದಿಕ್ಪಾಲಕರೂ ಕಿನ್ನರಕಿಂಪುರುಷವಿದ್ಯಾಧರರುಗಳೂ ತಮ್ಮ ತಮ್ಮ ಚತುರಂಗ ಸೇನಾಸಮೇತರಾಗಿ ಯುದ್ಧಕ್ಕೆ ನಿಂತರು. ಉಭಯಮಹಾಸೇನೆಗಳೂ ರೋಷೋದ್ರೇಕದಿಂದ ಸಂಧಿಸಿ ಕಾದಾಡಲುಪಕ್ರಮಿಸಿದುವು. ಆನೆಗೆ ಆನೆ, ಕುದುರೆಗೆ ಕುದುರೆ, ರಥಕ್ಕೆ ರಥ, ಕಾಲಾಳಿಗೆ ಕಾಲಾಳು, ದಳಪತಿಗಳಿಗೆ ದಳಪತಿಗಳು, ಇದಿರಾಗಿ ಕ್ಷಣಕಾಲ ಸಮನಾಗಿ ಯುದ್ಧ ಮಾಡಿದರು. ಎರಡು ಕಡೆಯಲ್ಲೂ ವೀರನಾದಗಳೂ, ಮೂದಲೆಯ ಮಾತುಗಳೂ, ಉತ್ಸಾಹವಾದ್ಯಗಳೂ ಮೊಳಗುತ್ತಿದ್ದುವು. ರಕ್ತಪ್ರವಾಹವು ಮಾಂಸದೊಟ್ಟಲನ್ನು ಕೊಚ್ಚಿ ಹರಿಯುತ್ತಿದ್ದಿತು. ಭೂತಬೇತಾಳಪೈಶಾಚ ಶಾಕಿನಿ ಡಾಕಿನಿಯರು ಮಾಂಸವನ್ನು ತಿಂದು ರಕ್ತವನ್ನು ಹೀರಿ ತೇಗಿ, ಮೂಳೆಯ ಸರವನ್ನು ಹಾಕಿ, ಕೈಯಲ್ಲಿ ರುಂಡವನ್ನು ಹಿಡಿದು ತಲೆಗೆ ಕರುಳನ್ನು ಸುತ್ತಿ, ಮೈಗೆ ಚರ್ಮವನ್ನುಟ್ಟು, ಕೋರೆದಾಡೆಗಳನ್ನು ಕಿರಿದು ಕುಣಿದಾಡುತ್ತಿದ್ದುವು. ವೀರೇಶನ ಮಹಾಗರ್ಜನೆಯು ಕ್ಷಣಕ್ಷಣಕ್ಕೆ ತನ್ನ ಸೇನೆಯ ಶೌರ್ಯವನ್ನು ಉಕ್ಕಿಸುತ್ತಲಿದ್ದಿತು. ರುದ್ರಗಣದ ಹೊಡೆತದಿಂದ ಗಗನತಟದಲ್ಲಿ ರುಂಡಮುಂಡಗಳ ಹಾರಾಟವು ಹೆಚ್ಚಿತು. ಬರಬರುತ್ತ ರುದ್ರಸೇನೆಯ ಹೊಡೆತವು ಪ್ರತಿಪಕ್ಷದವರಿಗೆ ದುಸ್ಸಹವಾಯಿತು. ಕಿಚ್ಚನ್ನು ಕಂಡ ಇರುವೆಗಳಂತೆ ದೇವತೆಗಳುಮುಖವನ್ನು ಹಿಂದಿರುಗಿಸಿದರು. ಕೆಲವರು ದಿಕ್ಕುಗೆಟ್ಟು ಓಡಿದರು. ಕೆಲವರು ಗಡಗಡನೆ ಕೈಕಾಲ್ನಡುಗಿ ಶರಣಾಗತರಾದರು. ಕೆಲವರು ಹುಲ್ಲನ್ನು ಕಚ್ಚಿ ಹಲ್ಲನ್ನು ಕಿರಿದು ಪ್ರಾಣದಾನವನ್ನು ಬೇಡಿದರು. ಮತ್ತೆ ಕೆಲವರು ಕೈಕಾಲ್ಮುರಿದು ರಕ್ತವನ್ನು ಸುರಿಸಿ ಕುಂಟುತ್ತ ತಪ್ಪರಿಸುತ್ತ

ಬ್ರಹ್ಮನಬಳಿಗೆ ಹೋಗಿ, ಓ! ಯೆಂದು ಕೂಗಿಕೊಂಡು ಬಿದ್ದು ಅತ್ತು, ತಮಗಾದ ಪರಿಭವವನ್ನೆಲ್ಲ ಹೇಳಿಕೊಂಡು, ಅಯ್ಯೋ! ನಮಗೇನು ವಿಪತ್ತನ್ನು ತಂದಿರಿ? ಇದೆಲ್ಲಿಯ ಹಾಳುಯಾಗ! ಅವನೇನು ಪ್ರಳಯಕಾಲದ ರುದ್ರನೋ! ಕರಿಯ ಮೋಡದ ತಾತನೊ! ಭೂತನಾಥನೋ! ಶಿವನೇ ಬಲ್ಲ. ಅವನಿದಿರಿಗೆ ನಿಂತು ಉಳಿದುಬರುವವರಾರು? ಇನ್ನು ನಮಗೆ ಗತಿಯೇನು? ಎಂದು ನೊರೆಯಿಟ್ಟರು. ಬ್ರಹ್ಮನು– ಇದೇನು ಮಹಾ ಸುದ್ದಿಯೆಂದು ತತ್ತರಿಸುವಿರಿ? ಬಿಡಿ; ಎಂದು ತಿರಸ್ಕರಿಸಿ, ರೋಷದಿಂದ ಹುಂಕರಿಸಿ ಹಂಸವನ್ನೇರಿ ತನ್ನ ಮುಖ್ಯಸೇನೆಯೊಡನೆ ತಾನೇ ವೀರಭದ್ರನಮೇಲೆ ಯುದ್ಧಕ್ಕೆ ಸಾಗಿದನು. ಇವನ ಸೈನಿಕರು ಮುರಿದುಬಿದ್ದೋಡುತ್ತಿದ್ದ ಕಿನ್ನರ ಯಕ್ಷ ವಿದ್ಯಾಧರ ಗಂಧರ್ವಾದಿಗಳನ್ನೆಲ್ಲ ಜರೆದು ಹುರಿಮಾಡಿ ಒಟ್ಟುಗೂಡಿಸಿ ರುದ್ರಗಣಸೈನ್ಯದ ಮೇಲೆ ಬಿದ್ದರು. ಆದರೇನು! ಹಾವುಗಳ ಗುಂಪು ಗರುಡನಮೇಲೆ ಬಿದ್ದರೆ ಅದು ಅಂಜುವುದೆ? ತರಗೆಲೆಗಳು ಅಗ್ನಿಯನ್ನು ಮುತ್ತಿ ಆರಿಸಬಲ್ಲವೆ? ಕುರಿಗಳ ಹಿಂಡು ಹುಲಿಯನ್ನು ಕೆಣಕಿ ಬದುಕಿಬರುವವೆ? ಅದರಂತೆಯೇ ಕ್ಷಣಕಾಲದಲ್ಲಿ ಬ್ರಹ್ಮನ ಸೇನೆಯು ರುದ್ರಗಣದ ಹತಿಯಿಂದ ಲಯವಾಗುತ್ತ ಬಂದಿತು. ಆ ರುದ್ರರು ರೌದ್ರಾವೇಶದಿಂದ ಚುಚ್ಚುತ್ತ, ಕೊಚ್ಚುತ್ತ, ಇರಿಯುತ್ತ, ತರಿಯುತ್ತ, ಕಡಿಯುತ್ತ, ಬಡಿಯುತ್ತ ಬರುತ್ತಿರುವಲ್ಲಿ, ಬ್ರಹ್ಮನ ಪಾಳೆಯವು ಒಂದುಕಡೆಯಿಂದ ಕುಯ್ಲಾಗುತ್ತ ಬಂದ ಗದ್ದೆಯಂತೆ ಬಯಲಾಯಿತು. ಇದರಿಂದ ಚತುರ್ಮುಖನು ಅತ್ಯಂತ ರುಷ್ಟನಾಗಿ ಆರ್ಭಟಿಸಿ, ತಾನೇ ವೀರೇಶನ ಸೇನೆಗೆ ಮುಂದಾದನು. ಇದೋ ಜಗತ್ಕರ್ತನು ಬಂದ! ಇದೋ ಪರವಾದಿಭೀಕರ ಬಂದ! ಎಂದು ಕೂಗುವಂತೆ ಕಹಳೆಗಳು ಕೂಗಿದುವು. "ಇದುವರೆಗೂ ದೇವತಾಸೇನೆಯನ್ನು ಸದೆಬಡಿದ ರುದ್ರಸೇನೆಯ ನಾಯಕನು ಎಲ್ಲಿರುವನು? ತೋರಿಸಿ, ಅವನು ಪರಾಕ್ರಮವನ್ನು ನನ್ನೆದುರಿಗೆ ಬಿಚ್ಚಿ ಬದುಕಲಿ" ಎಂದು ಹೇಳುತ್ತ, ಬಾಣದ ಮಳೆಯನ್ನು ರುದ್ರನಮೇಲೆ ಕರೆದನು. ಅವನ ಶೌರ್ಯಕ್ಕಿದಿರಾಗದೆ ಗಣಸೇನೆಯು ಇಬ್ಭಾಗವಾಯಿತು. ಇದನ್ನು ಕಂಡು ವೀರೇಶನು ತಾನೇ ಬ್ರಹ್ಮನ ಮುಂದೆ ಬಂದು ನಿಂತನು. ಮತ್ತು ಚತು

ರಾಸ್ಯನನ್ನು ಕುರಿತು— "ಎಲೆ ಬ್ರಹ್ಮನೇ! ನೀನು ಮಹಾನಿಪುಣ; ಶಿವನು ನಿನ್ನನ್ನು ಪರಮಭಕ್ತನೆಂದು ತಿಳಿದು ಕೃಪೆಯಿಂದ ಜಗತ್ಸೃಷ್ಟಿಯ ಯಜಮಾನಿಕೆಯನ್ನು ನಿನಗೆ ಕೊಟ್ಟನು; ಹೀಗಿರುವಲ್ಲಿ ಆ ಪೂರ್ವಾಪರವನ್ನು ಯೋಚಿಸಿಕೊಳ್ಳದೆ, ನಿನ್ನ ಮಗನ ಅಹಂಕಾರಕ್ಕೆ ನೀನೂ ಸಹಾಯಕನಾಗಿ ಲೋಕನಾಶಕಾರಣವಾದ ಈ ಯಜ್ಞಕಾರ್ಯದಲ್ಲಿ ಸೇರಬಹುದೆ? ಚಿಂತೆಯಿಲ್ಲ; ಈಗಳಾದರೂ ನಿನ್ನ ಅಜ್ಞಾನವನ್ನು ಬಿಟ್ಟು ಶರಣಾಗತನಾಗು, ಇಲ್ಲದಿದ್ದರೆ ಯುದ್ಧಕ್ಕೆ ನಿಲ್ಲು" ಎಂದನು. ಬ್ರಹ್ಮನು ಕೇಕೆ ಹಾಕಿ ನಕ್ಕು, "ಎಲೆ ಧೀರಾ! ಶಹಬಾಸ್; ಜಗತ್ಕರ್ತೃವಾದ ನನ್ನನ್ನು ಯುದ್ಧಕ್ಕೆ ಕರೆಯುವ ಎದೆಗೆಚ್ಚಿನ ಅಹಂಕಾರಿಯಾದ ನೀನಾರು? ನಮಗೆ ಬ್ರಹ್ಮತ್ವವನ್ನು ಕೊಟ್ಟವರಾರು? ಈ ಸುಳ್ಳನ್ನೆಲ್ಲ ಎಲ್ಲಿ ಕಲಿತೆ? ಯಾರ ಮುಂದೆ ಇದನ್ನೆಲ್ಲ ಹರಟುವೆ? ಬಾಯ್ಮುಚ್ಚು" ಎಂದು ಗರ್ಜಿಸಿ ನುಡಿದು, ಬಾಣಗಳ ಸಂದೋಹದಿಂದ ವಿರೇಶನನ್ನು ಮುಚ್ಚಿಬಿಟ್ಟನು. ಅದನ್ನು ಕಂಡು ವೀರೇಶನು ನಕ್ಕು ಪ್ರತಿ ಬಾಣದಿಂದ ಖಂಡಿಸಿ, ಎಲೊ ಬ್ರಹ್ಮನೆ, ಭಾಪು! ನಾವು ನಟ್ಟಸಸಿಯೆಂದು ತಿಳಿದು ಇದುವರೆಗೂ ನಿನ್ನಾಟವನ್ನು ಸೈರಿಸಿಕೊಂಡುಬಂದುದಕ್ಕೆ ನೀನು ನಮಗೇ ಬಾಣಪ್ರಯೋಗವನ್ನು ಮಾಡಿದೆ; ಒಳ್ಳೇದು; ನಿನ್ನ ಉಳಿದಿರುವ ನಾಲ್ಕು ತಲೆಗಳನ್ನೂ ಕಡಿದು ಶಿವನ ರುಂಡಮಾಲೆಗೆ ಸೇರಿಸುವುದಕ್ಕೆ ಕಳಿಸಿಕೊಡುತ್ತೇನೆ; ಇದೋ ಈ ಬಾಣದ ರುಚಿಯನ್ನು ನೋಡು; ಎಂದು ಕರ್ಣಾಂತವಾಗಿ ಸೆಳೆದ ಬಾಣವನ್ನು ಬ್ರಹ್ಮನ ಮೇಲೆ ಪ್ರಯೋಗಿಸಿದನು. ಅದು ಮಾರುಮಾರಿಗೆ ೧ ಕ್ಕೆ ಹತ್ತು ನೂರು ಸಾವಿರವಾಗಿ ಹೆಚ್ಚಿ, ರಥ ಸಾರಥಿ ಅಶ್ವಗಳನ್ನೆಲ್ಲ ಕೊಚ್ಚಿ ಬ್ರಹ್ಮನ ಸರ್ವಾಂಗದಲ್ಲೂ ಚುಚ್ಚಿ ಛೇದಿಸಿಕೊಂಡುಹೋಯಿತು. ಬ್ರಹ್ಮನು ಅದರಿಂದ ಗಾಯವನ್ನು ಪಡೆದ ಕಾಡಹಂದಿಯಂತೆ ಘುರುಘುರಿಸಿ, ಬೇರೊಂದು ರಥವನ್ನು ಹತ್ತಿ, ಭಲರೇ! ಮಂಥಗಾರ! ಈ ಏಟನ್ನು ನೋಡು ಎಂದು ತೀಕ್ಷ್ಣವಾದ ಅನಂತಬಾಣಗಳನ್ನು ತೆರವಿಲ್ಲದಂತೆ ವೀರಭದ್ರನಮೇಲೆ ಪ್ರಯೋಗಿಸಿದನು. ಅವಷ್ಟನ್ನೂ ವೀರೇಶನು ಕಡಿದು ಸಿಂಹನಾದ ಮಾಡಿ, ಮತ್ತೆ ನಿಶಿತಾಸ್ತ್ರಗಳನ್ನು ಬ್ರಹ್ಮನ ಮೇಲೆ ಬಿ

ಟ್ಟನು. ಅವು ಮತ್ತೆ ಬ್ರಹ್ಮನ ದೇಹದಿಂದ ರಕ್ತವನ್ನು ಕಾರಿಸಿದುವು. ಇದರಿಂದ ಬ್ರಹ್ಮನು ಕೋಪವೇರಿ ಬತ್ತಳಿಕೆಯಿಂದ ಬ್ರಹ್ಮಾಸ್ತ್ರವನ್ನು ತೆಗೆದು ಹೂಡಿ ಪ್ರಯೋಗಿಸಿದನು. ಅದು ಕಿಡಿಯನ್ನು ಕಾರುತ್ತ ಗಣಸೈನ್ಯವನ್ನೆಲ್ಲ ಸುಡುತ್ತ ತನ್ನ ಬಳಿಗೆ ಬರುವಷ್ಟರಲ್ಲಿ, ವೀರೇಶನು ರುದ್ರಾಸ್ತ್ರವನ್ನು ಬಿಟ್ಟು ಅದನ್ನು ತುಂಡು ಮಾಡಿ, ಬ್ರಹ್ಮನ ಸಾರಥಿರಥಾಶ್ವಾದಿಗಳನ್ನು ಹಾಳ್ಮಾಡಿ ಕಿರೀಟವನ್ನು ಹಾರಿಸಿ, ಹಣೆಯಲ್ಲಿ ಗಾಯ ಮಾಡಿ ಮೂರ್ಛೆಗೊಳಿಸಿದನು. ಮತ್ತೆ ಬೇರೆ ಬೇರೆ ಬಾಣಗಳಿಂದ ಇಂದ್ರನ ತೋಳ್ಗಳನ್ನು ಕತ್ತರಿಸಿ, ಅಗ್ನಿಯ ನಾಲಿಗೆಯನ್ನು ಏಳು ಭಾಗವಾಗಿ ಸೀಳಿ, ಪೂಷನೆಂಬ ಸೂರ್ಯನ ಹಲ್ಲುಗಳನ್ನು ಮುರಿದು, ಭಗನೆಂಬ ಸೂರ್ಯನ ಕಣ್ಣುಗಳನ್ನು ಕಳೆದು, ಚಂದ್ರನನ್ನು ಹೊಸಗಿ, ಉಳಿದ ಗ್ರಹಗಳಿಗೂ ದಿಕ್ಪಾಲಕರಿಗೂ ವಸುಗಳಿಗೂ ದೇಹದಲ್ಲಿ ಒಂದೊಂದು ಗುರ್ತನ್ನುಂಟುಮಾಡಿ, ಎಲ್ಲರನ್ನೂ ಸೆರೆ ಹಿಡಿದು, ಭೂತಗಳ ವಶಕ್ಕೆ ಕೊಟ್ಟನು. ಇದರಿಂದಲೂ ಪರಾಭವಗೊಂಡು ಉಳಿದ ದೇವತೆಗಳು ವಿಷ್ಣುವಿನ ಬಳಿಗೆ ಓಡಿಹೋಗಿ ತಮ್ಮವಸ್ಥೆಯನ್ನೆಲ್ಲ ಹೇಳಿಕೊಂಡು, "ಇನ್ನು ನಿನ್ನ ಕೈಲಾದರೆ ಯುದ್ಧಮಾಡಿ, ನಿನ್ನ ಮತ್ತು ನಮ್ಮ ಮಾನಪ್ರಾಣಗಳನ್ನುಳಿಸು, ಇಲ್ಲದಿದ್ದರೆ ತಲೆಯನ್ನು ತಪ್ಪಿಸಿಕೊಂಡು ಬಾಳುವುದಕ್ಕೆ ಸ್ಥಲವನ್ನು ತೋರಿಸು, ಈ ಹಾಳುಯಜ್ಞದ ಹವಿಸ್ಸಿನ ಆಸೆಗಾಗಿ ಬಂದುದೂ ಸಾಕು, ಈ ಪ್ರಾಣಭೀತಿಯೂ ಸಾಕು, ನಿಮ್ಮನ್ನು ನಂಬಿ ನಾವು ಬಂದುದಕ್ಕೆ ಇದೇ ಫಲ" ಎಂದು ದುಗುಡದಿಂದ ಬಿಕ್ಕಿಡಿಸುತ್ತ ಹೇಳಿಕೊಂಡರು. ಆಗ ಹರಿಯು— ಕ್ಷಣಮಾತ್ರದಲ್ಲಿ ಆ ಯಜ್ಞವೈರಿಯನ್ನು ಗೆದ್ದು ಬರುವೆನು, ನಿಮಗೇಕೆ ಇಷ್ಟು ಚಿಂತೆ? ಎಂದು ಧೈರ್ಯವನ್ನು ಹೇಳಿ ಸಮಾಧಾನಗೊಳಿಸಿ, ತಾನೇ ಯುದ್ಧಕ್ಕೆ ಸನ್ನದ್ಧನಾದನು. ಇಂದ್ರಾದಿದಿಕ್ಪಾಲಕರ ಪುತ್ರರೂ ಸೂರ್ಯಾದಿಗ್ರಹಗಳ ಮಕ್ಕಳುಗಳೂ ಕಳೆದುಳಿದ ಸೈನ್ಯವನ್ನು ಕಟ್ಟಿಕೊಂಡು ಹರಿಗೆ ಸಹಾಯಕರಾಗಿ ನಡೆದರು. ಎಂಬಲ್ಲಿಗೆ ೪ ನೇ ಅಧ್ಯಾಯವು ಸಂಪೂರ್ಣವು.

# ೫ನೇ ಅಧ್ಯಾಯವು.

## ದಕ್ಷಶಿರಶ್ಛೇದನವು.

ಎಲೆ ಸಿದ್ಧರಾಮೇಶನೇ ಕೇಳು, ವಿಷ್ಣುವು ಯುದ್ಧಸನ್ನದ್ಧನಾಗಿ ಹೊರಟಕೂಡಲೇ ಅವನ ಎಡತೋಳು ತೊಡೆ ಕಣ್ಣುಗಳು ಹಾರಿದುವು. ಹಾವು ಮೊಲ ಕಾಗೆಗಳು ದಾರಿಗೆ ಅಡ್ಡಲಾದುವು. ಆದರೂ ಹರಿಯು ದುರ್ಬುದ್ಧಿಯಿಂದ ಅದನ್ನು ಲಕ್ಷ್ಯ ಮಾಡದೆ ನಡೆಗೊಂಡನು. ಮುಂಗಡೆಯಲ್ಲಿ ವೀರಭದ್ರೇಶನ ಬಾಣಸ್ತೋಮದಿಂದ ತುಂಬಿದ ಯುದ್ಧಾಂಗಣವನ್ನೂ, ಹತವಾಗಿರುವ ದೇವಸ್ತೋಮವನ್ನೂ, ಹೆಣಗಳನ್ನು ನೆಟ್ಟ ಕೈಕಾಲ್ಗಳ ತುಂಡುಗಳನ್ನು ಪಿಡಿದು ರಕ್ತವನ್ನು ಕುಡಿದು ಕುಣಿದಾಡುತ್ತಿರುವ ಭೂತಬೇತಾಳಪಿಶಾಚಾದಿಗಳನ್ನೂ ನೋಡಿ ಕೋಪವೇರಿದನು. "ಇದುವರೆಗೂ ದೇವತಾಸ್ತೋಮವನ್ನೆಲ್ಲ ಪರಾಜಯಗೊಳಿಸಿದ ವೀರನಾರೋ ಆತನನ್ನು ಮುಂಗಡೆಗೆ ಬರಹೇಳಿ, ಪುಡಿಯಾಳುಗಳು ತಲೆಯುಳುಹಿಕೊಳ್ಳಿರಿ" ಎಂದು ವಿಷ್ಣುವು ಗರ್ಜಿಸಿ ನುಡಿಯುತ್ತ, ತೀಕ್ಷ್ಣವಾದ ಬಾಣಾವಳಿಗಳನ್ನು ಹೂಡಿ ಕರ್ಣಾಂತವಾಗಿ ಸೆಳೆದು ವೀರಭದ್ರೇಶನ ಸೇನೆಯ ಮೇಲೆ ಪ್ರಯೋಗಿಸುತ್ತ ಬಂದನು. ಆ ಏಟಿನಿಂದ ಪ್ರತಿಪಕ್ಷ ಸೇನೆಯಲ್ಲಿ ಆನೆ ಕುದುರೆ ಕಾಲಾಳು ರಥಗಳೆಲ್ಲ ನುಚ್ಚುನೂರಾಗಿ ಕಳೆದುಳಿದವರು ಪ್ರಾಣಭೀತಿಯಿಂದ ವೀರಭದ್ರೇಶನ ಮರೆಹೊಕ್ಕು ಗೋಳಿಟ್ಟರು. ಅವನ್ನು ನೋಡಿ ವೀರೇಶನು ಪ್ರಳಯಕಾಲದ ರುದ್ರನಂತೆ ಕೆರಳಿ, "ನನ್ನ ಸೇನೆಗೆ ಇಷ್ಟು ಭೀತಿಯನ್ನುಂಟುಮಾಡಿದ ಆ ಕಡುಗಲಿ ಯಾರು? ಅವನನ್ನೀಗಳೇ ಸೀಳುವೆನು" ಎಂದು ಹೇಳಿ, ಕಿಡಿಕಿಡಿಯಾಗಿ ರಥವನ್ನು ಮುಂಗಡೆಗೆ ಸರಿಸಿದನು. ಇದೋ ಅಷ್ಟದಿಕ್ಪಾಲಭೈರವನು ಬಂದನು. ಇದೋ ಬ್ರಹ್ಮಾಂತಕನು ಬಂದನು! ಎಂದು ಮೊದಲಾಗಿ ಕೂಗಿದಂತೆ ಕಹಳೆಗಳು ಭೋರ್ಗರೆದುವು. ಆಗ ವೀರೇಶನು ಹರಿಯು ಮುಂಗಡೆಗೆ ಬಂದು, ಭಲಾ ಭಲಾ! ಧೀರನೇ! ಈ ಸೈನ್ಯವೆಲ್ಲೆಲ್ಲ ನೀನೊಬ್ಬನೇ ಶೂರನಾಗಿ ಕಾಣುತ್ತೀಯೆ! ನನ್ನ ಸೇನೆಯನ್ನು ಹಿಮ್ಮೆಟ್ಟುವಂತೆ ಮಾಡಿದ ನಿನ್ನ ಬಾಣಪ್ರಯೋಗಶಕ್ತಿಗೆ ನಾನು ಮೆಚ್ಚಿದೆನು, ನಿನ್ನ

ಹೆಸರೇನು? ಎಂದು ಕೇಳುತ್ತ ಬಾಣವರ್ಷವನ್ನು ವಿಷ್ಣುವಿನ ಮೇಲೆ ಕರೆದನು. ಹರಿಯು ನಸುನಗೆ ನಗುತ್ತ, "ವೀರನೇ! ನೀನು ನನ್ನಸಾಹಸವನ್ನು ಮೆಚ್ಚಿದರೆ ಫಲವೇನು? ನೀನು ಮಾನವನ್ನುಳುಹಿಕೊಳ್ಳಬೇಕಾದರೆ ಸೆರೆಯಲ್ಲಿಟ್ಟಿರುವ ನಮ್ಮ ದೇವ ಸೇನೆಯವರನ್ನು ಬಿಟ್ಟು ಶರಣಾಗತನಾಗು" ನಾನೇ ಲೋಕರಕ್ಷಕನಾದ ಅಚ್ಯುತನು, ಎಂದು ಹೇಳುತ್ತ ಪ್ರತಿಬಾಣಗಳಿಂದ ವೀರೇಶನ ಬಾಣಗಳನ್ನೆಲ್ಲ ಖಂಡಿಸಿದನು. ವೀರೇಶನಾದರೂ– ವಿಷ್ಣುವಿನ ಮಾತನ್ನು ಕೇಳಿ ನಕ್ಕು, ದೇವತೆಗಳನ್ನು ಬಿಡಿಸಿಕೊಳ್ಳುವ ಶಕ್ತಿಯು ನಿನಗಿದೆಯೆ? ನಿನ್ನ ದಶಾವತಾರಗಳಿಂದಲೇ ನಿನ್ನ ಅಚ್ಯುತತ್ವವು ಗೊತ್ತಾಗಿದೆಯಷ್ಟೆ! ಈಗ ಮೊದಲು ನಿನ್ನನ್ನು ನೀನು ಕಾಪಾಡಿಕೊಂಡರೆ ನಿನ್ನ ಲೋಕರಕ್ಷಕತ್ವವು ಗೊತ್ತಾಗುವುದು! ಯಾಗದಲ್ಲಿ ಪಶುಗಳನ್ನು ಒಪ್ಪಿಸಿಕೊಂಡ ಕೊಬ್ಬು ನಿನಗೆ ಹೆಚ್ಚಾಗಿರಬಹುದು! ಅದನ್ನೆಲ್ಲ ಕಕ್ಕಿಸುತ್ತೇನೆ" ಎಂದು ಹೇಳಿ, ಒಂಭತ್ತು ಬಾಣಗಳನ್ನು ಒಂದೇ ಆವೃತ್ತಿ ವಿಷ್ಣುವಿನ ಮೇಲೆ ಪ್ರಯೋಗಿಸಿ, ಮಹಾಗರ್ಜನೆಯನ್ನು ಮಾಡಿದನು. ಆ ಏಟನಿಂದ ಹರಿಯ ತೇರು ಗರಗರನೆ ತಿರುಗಿ ಆಕಾಶಕ್ಕೆ ಹಾರಿ ಸೂರ್ಯನಬೇಗೆಯಿಂದ ಬೆಂದು ಹುಡಿಯಾಗಿ ಭೂಮಿಗೆ ಬೀಳುವಷ್ಟರಲ್ಲಿ ಹರಿಯು ಥಟ್ಟನೆ ಹಾರಿ ಮತ್ತೊಂದು ರಥದಲ್ಲಿ ಕುಳಿತು ಇದಿರಾಗಿ ಪ್ರತಿಬಾಣಗಳನ್ನು ವೀರೇಶನಮೇಲೆ ಕರೆದನು. ಅದನ್ನು ಕಾಳೀವರನು ಕತ್ತರಿಸಿ, "ನಿನ್ನ ಪ್ರಾಣವನ್ನು ತೆಗೆಯಬಾರದೆಂದು ನಾನು ಸಾಧಾರಣ ಬಾಣಗಳನ್ನು ಪ್ರಯೋಗಿಸುತ್ತಿರುವಲ್ಲಿ ನೀನು ಅದನ್ನು ತಿಳಿದುಕೊಳ್ಳಲಾರದೆ ಮತ್ತೆ ಮತ್ತೆ ಕೈಮಾಡುತ್ತಿರುವೆ. ನೀನು ನನಗೆ ಸಮಾನನಾದ ಪ್ರತಿಭಟನೆ? ಎದೆಗೆಚ್ಚಿದ್ದರೆ ಈ ಏಟನ್ನು ತಾಳಿಕೊ" ಎಂದು ತೀಕ್ಷ್ಣವಾದ ಮಹಾಬಾಣಗಳೈದನ್ನು ತೆಗೆದು ಹರಿಯ ಮೇಲೆ ಪ್ರಯೋಗಿಸಿದನು. ಅವು ಹರಿಯ ರಥ ಧ್ವಜ ಪತಾಕೆ ಛತ್ರ ಚಾಮರ ಸಾರಥಿ ಅಶ್ವಗಳನ್ನೆಲ್ಲ ಸುಟ್ಟುಬಿಟ್ಟುವು. ಮತ್ತೆ ಒಂಭತ್ತು ಬಾಣಗಳನ್ನು ಹರಿಯಹಣೆಗೆ ಗುರಿ ಕಟ್ಟಿ ಹೊಡೆದನು. ಆ ಏಟನಿಂದ ವಿಷ್ಣುವು ಆಕಾಶಕ್ಕೆ ಹಾರಿ ನೀಲಗಿರಿಯಂತೆ ನೆಲದಮೇಲೆ ಬಿದ್ದುಕೊಂಡನು. ರಕ್ತವು ಮೂಗು ಬಾಯಿ ಹಣೆಗಳಿಂದ ಅವಿಚ್ಛಿನ್ನವಾಗಿ ಹರಿ

ಯಿತು. ಕೈಕಾಲೆಲ್ಲ ತಣ್ಣಗಾಗಿ ಪ್ರಾಣವು ನೆತ್ತಿಗೇರಿಕೊಂಡಿತು. ಅದನ್ನು ವೀರೇಶನು ಕಂಡು, ಓಹೋ! ತಂದೆಯ ಆಜ್ಞೆಯನ್ನು ಮೀರಿ ನಾನಿಷ್ಟು ಕೇಡನ್ನು ವಿಷ್ಣುವಿಗೆ ಉಂಟುಮಾಡಿದೆನಲ್ಲ! ಎಂದು ಪರಿತಪಿಸಿ, ಕೂಡಲೇ ಶೈತ್ಯೋಪಚಾರವನ್ನು ಮಾಡಿಸಿದನು. ವಿಷ್ಣುವು ಕಣ್ಣನ್ನು ಬಿಟ್ಟು ಎದ್ದು, ಮತ್ತೆ ಶೌರ್ಯಟೋಪಗೊಂಡು ನೂತನರಥವನ್ನೇರಿ, ಯುದ್ಧಕ್ಕೆ ಸಿದ್ಧನಾದನು. ಜಗದ್ರಕ್ಷಕಶಿಕ್ಷಕರೀರ್ವರೂ ಯುದ್ಧಕ್ಕೆ ನಿಂತುಕೊಳ್ಳಲು ಇನ್ನು ಲೋಕವು ಉಳಿಯುವುದು ಹೇಗೆಂದು ಮನುಮುನಿಗಳು ಯೋಚಿಸಿದರು. ಇವರ ಕಾಳಗದ ಚಾತುರ್ಯವನ್ನು ನೋಡುವುದಕ್ಕಾಗಿ ಶಿವನು ಪುಷ್ಪವಿಮಾನಾರೂಢನಾಗಿ ಆಕಾಶದಲ್ಲಿ ಬಂದು ನಿಂತನು. ಈರ್ವರೂ ಘೋರತರವಾಗಿ ಬಾಣಗಳಿಂದ ಎಚ್ಚಾಡುತ್ತಿದ್ದರು. ವೀರೇಶನು ಬೇಸತ್ತು ಅತ್ಯಂತ ರೋಷದಿಂದ ಹರಿಯನ್ನು ಬಾಣಗಳಿಂದ ಹೊಡೆದು ಮೂರ್ಛೆಗೊಳಿಸಿ ಭೂಮಿಯ ಮೇಲೆ ಕೆಡಹಿದನು. ಉಳಿದ ಸೇನೆಯನ್ನೆಲ್ಲ ಬಾಣಾಸಾರದಿಂದ ಕ್ಷಣಕಾಲದಲ್ಲಿ ಕೊಚ್ಚಿ ಮಲಗಿಸಿದನು. ರಣಾಂಗಣವೆಲ್ಲ ಶವಮಯವಾಯಿತು. ಅಷ್ಟರಲ್ಲಿ ಹರಿಯು ಮೂರ್ಛೆಯಿಂದೆಚ್ಚೆತ್ತು ಮತ್ತೆ ವೀರಭದ್ರನಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸತೊಡಗಿದನು. ಆತನ ವೈಷ್ಣವಾಸ್ತ್ರವನ್ನು ವೀರಭದ್ರನು ರುದ್ರಾಸ್ತ್ರದಿಂದ ಖಂಡಿಸಿದನು ಹರಿಯು ಅತ್ಯಂತ ರೋಷಾರಕ್ತನೇತ್ರನಾಗಿ ಸಿಂಹನಾದವನ್ನು ಮಾಡಿ ಚಕ್ರವನ್ನು ಪ್ರಯೋಗಿಸಿದನು. ಅದು ಜ್ವಾಲಾಮಂಡಲದಂತೆ ಕಿಡಿಯನ್ನು ಸುರಿಸುತ್ತ ಜಗದ್ಭೀಕರವಾಗಿ ಬರುತ್ತಿರಲು, ವೀರಭದ್ರೇಶನು ಅನುಪಮನಾದೊಂದು ಬಾಣದಿಂದ ಮಧ್ಯದಲ್ಲೇ ಕತ್ತರಿಸಿ, ಬೇರೊಂದು ಬಾಣವನ್ನು ಬಿಟ್ಟು ಹರಿಯ ರಥ ಬಾಣ ಧನುಸ್ಸುಗಳನ್ನೆಲ್ಲ ನಾಶಗೊಳಿಸಿದನು. ಆಗ ಹರಿಯು ಹಲ್ಲನ್ನು ಮುರಿದ ಹಾವಿನಂತೆಯೂ, ಸೊಂಡಿಲನ್ನು ಮುರಿದ ಆನೆಯಂತೆಯೂ, ಕಾಂತಿಯುಡುಗಿದ ಸೂರ್ಯನಂತೆಯೂ, ಕೊಂಬನ್ನು ಮುರಿದ ಕೋಣನಂತೆಯೂ, ಬರಿಗಯ್ಯಾಗಿನಿಂತು, ಮುಂದೇನು ಮಾಡಬೇಕೆಂಬುದನ್ನು ಕಾಣದೆ ಭಯವಿಹ್ವಲನಾಗಿ, ಜಯದ ಆಸೆಯನ್ನು ಬಿಟ್ಟು, ಪ್ರಾಣರಕ್ಷಣೆಗಾಗಿ ಜಿಂಕೆಯ ರೂಪನ್ನು ಧರಿಸಿ ಓಡುತ್ತಿದ್ದನು. ಈ ಕಾಪಟ್ಯವನ್ನು ವೀರಭದ್ರೇಶನು ತಿಳಿ

ದು ಒಂದು ಬಾಣವನ್ನು ಜಿಂಕೆಯಮೇಲೆ ಬಿಟ್ಟನು. ಆ ಏಟಿನಿಂದ ಅದು ಭೂಮಿಗುರುಳಿತು. ಆಗ ಕಾಳೀಪತಿಯು ಅದರ ಬಳಿಗೆ ಬಂದು ಕರುಣ ದಿಂದ ಅದರ ಮೈದಡವಿ, ಹೆದರಬೇಡವೆಂದು ಅಮೃತವಚನದಿಂದ ನುಡಿ ಯಲು, ಹರಿಯು ನಿಜರೂಪವನ್ನು ತಾಳಿ ನಿಂತು, ಭದ್ರೇಶನನ್ನು ಕುರಿ ತು– ಜಗದ್ರಕ್ಷಕ! ದಯಾಕರ! ಭಕ್ತಪಾಲಕ! ಜಯ ಜಯ! ಎಂದು ಮೊದಲಾಗಿ ಸ್ತುತಿಸಿ, ತಾನು ಪ್ರತಿಭಟಿಸಿ ಕೈ ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿದನು. ಆಗ ವೀರಭದ್ರೇಶನು ಕರುಣಾಕಟಾ ಕ್ಷಾಮೃತವನ್ನು ಹರಿಯಮೇಲೆ ಸೇಚಿಸಿ, ತಲೆದಡವಿ, ಅಯ್ಯಾ! ಯಾ ರಿಗೂ ಆಗಬೇಕಾದದ್ದು ಆಗಿಯೇ ಆಗುವುದು; ಇದರಲ್ಲಿ ನಿನ್ನ ತಪ್ಪೇ ನೂ ಇಲ್ಲ, ಎಂದು ಪ್ರತಿವಚನವನ್ನಿತ್ತು ಸಮಾಧಾನಪಡಿಸಲು, ಹರಿಯು ಭಯಭಕ್ತಿಯಿಂದ– "ನನ್ನ ಆಪತ್ಕಾಲದಲ್ಲಿ ಪ್ರಾಣರಕ್ಷಣೆಗೆ ರೂಪಾಂತ ರದಿಂದ ಸಹಾಯವಾಗಿದ್ದ ಈ ಜಿಂಕೆಯು ಲೋಕದಲ್ಲಿ ಯಾವುದಾದ ರೊಂದು ರೀತಿಯಿಂದ ಯಜ್ಞಾದಿಸತ್ಕರ್ಮನಿರತರಾದ ಜನಗಳ ಉಪಯೋ ಗಕ್ಕೆ ಬರುವಂತೆ ಅನುಗ್ರಹಿಸಬೇಕು" ಎಂದು ಬೇಡಿಕೊಂಡನು. ವೀ ರಭದ್ರೇಶನು "ಅದರ ಚರ್ಮವು ಕರ್ಮಾಚಾರಿಗಳಿಗೆ ಉಪಯುಕ್ತವಾಗಿ ರಲಿ" ಎಂದು ವರವಿತ್ತು, ಅದರ ಚರ್ಮವನ್ನು ಸುಲಿಸಿ ತನ್ನ ಬಿರು ದಿನ ವಾದ್ಯವಾದ ಕರಡಿಗೆ ಕಟ್ಟಿಸುವುದಕ್ಕಾಗಿ ಪರಿಗ್ರಹಿಸಿದನು. ಇತ್ತ ದಕ್ಷನ ದೂತರು ಒಣಗಿದ ನಾಲಿಗೆಯಿಂದಲೂ, ನಡುಗುತ್ತಿರುವ ಕಾಲ್ಗಳಿಂದಲೂ ಹೋಮಕುಂಡದ ಬಳಿಗೆ ಓಡಿ ಬಂದು, ದಕ್ಷಬ್ರಹ್ಮ ನಿಗೆ ಕೈಮುಗಿದು– ಜೀಯಾ! ನಿನ್ನ ದೀಕ್ಷೆಗೀಕ್ಷೆಯೆಲ್ಲ ಹಾಗಿರಲಿ, ವೀರಭದ್ರೇಶನೆಂಬುವನು ಪ್ರಳಯಕಾಲದ ರುದ್ರನಂತೆ ಬಂದು ದೇವ ಕುಲವನ್ನೆಲ್ಲ ಹೊರಗೆ ನಾಶಗೊಳಿಸಿದನು. ಹರಿಯು ಅವನಿಗೆ ಇದಿ ರಾಗಿ ನಿಂತು ಸೋತು ಶರಣಾಗತನಾದನು. ಇನ್ನು ನಿನ್ನ ರಕ್ಷಣೋ ಪಾಯವನ್ನು ನೀವು ನೋಡಿಕೊಳ್ಳಬೇಕು" ಎಂದು ಹೇಳಲು, ಜಿಂಕೆ ಯಮೇಲೆ ತುಪ್ಪವನ್ನೆರೆದಂತೆ ದಕ್ಷನ ಕೋಪಾಗ್ನಿಯು ಮಿಗಿಲಾಯಿತು. ಎಡಬಲದಲ್ಲಿರುವ ತನ್ನ ಮಂತ್ರಿಗಳನ್ನು ನೋಡಿ, "ನೋಡಿದಿರಾ! ಆ ಶಿವನ ಅಪಕಾರವನ್ನು? ಆತನೇ ಇವನನ್ನು ನಮ್ಮ ಯಜ್ಞವನ್ನು

ಕೆಡಿಸುವುದಕ್ಕಾಗಿ ಕಳಿಸಿರಬಹುದು ! ಇರಲಿ: ಅವನ ಸೊಕ್ಕಿಗೆ ಪ್ರತಿಕ್ರಿ
ಯೆಯನ್ನು ನಾನು ಮಾಡಿ ತೋರಿಸುತ್ತೇನೆ; ಇದುವರೆಗೆ ಯಾರು ಸ
ತ್ತಿದ್ದರೆ ತಾನೇ ಏನು ? ಮರಳಿ ಸೃಷ್ಟಿಸುವ ಶಕ್ತಿಯು ನನಗಿರುವಾ
ಗ ಕೊರತೆ ಯೇನು ? ಅತ್ತ ಗಮನಿಸದೆ ನಾನು ಯಜ್ಞದ ಕಾರ್ಯದಲ್ಲಿ
ಮನವಿಟ್ಟು ಕುಳಿತುಕೊಂಡುದರಿಂದ ಇಷ್ಟು ಅನರ್ಥವಾಯಿತು; ಚಿಂತೆ
ಯಿಲ್ಲ; ಈಗ ಆ ವೀರನ ಶೌರ್ಯವನ್ನು ನಾನು ವಿಚಾರಿಸಿಕೊಳ್ಳುತ್ತೇನೆ,
ನನ್ನ ಶಕ್ತಿಯನ್ನು ಅವರ ಯಜಮಾನನಿಗೆ ಹೋಗಿ ತಿಳಿಸಿಕೊಳ್ಳುವಂತೆ
ಮಾಡಿಕಳಿಸುವೆನು " ಎಂದು ಹೇಳುತ್ತ, ಮಂತ್ರತಂತ್ರಗಳನ್ನೆಲ್ಲ ತೋ
ರೆದು, ಯುದ್ಧಕ್ಕೆ ಅಣಿಯಾದನು. ಇವನ ಪ್ರಯತ್ನವು ಅಗ್ನಿಯ ಮೆ
ಲೆ ಬೂರುಗದ ಮರವು ಸೆಣಸುವುದಕ್ಕೆ ನಿಂತಂತೆಯೂ, ಹಿಮವು ಸೂ
ರ್ಯನಮೇಲೆ ಕಾಳಗಕ್ಕೆ ನಿಂತಂತೆಯೂ ಆಯಿತು. ದಕ್ಷನು ತನ್ನ ಸೃ
ಷ್ಟಿಸಾಮರ್ಥ್ಯದಿಂದ ಅಪರಿಮಿತವಾದ ಚತುರಂಗಸೈನ್ಯವನ್ನು ಆಗಳೇ
ಸೃಜಿಸಿದನು. ಸ್ಮರಣಮಾತ್ರದಿಂದ ಅಪರಿಮಿತಬಲರಾದ ರಾಕ್ಷಸರುಗಳ
ಕೋಟಿಯನ್ನು ಸಿದ್ಧಮಾಡಿದನು. ಅವರೆಲ್ಲರನ್ನೂ ವೀರಭದ್ರನಮೇಲೆ
ಬೀಳುವುದಕ್ಕೆ ಅಪ್ಪಣೆ ಕೊಟ್ಟು ಕಳಿಸಿದನು. ಅಷ್ಟರಲ್ಲಿ ವೀರೇಶನ
ಕಡೆಯ ಶಾಕಿನಿ ಡಾಕಿನಿ ಭೂತಬೇತಾಳಪೈಶಾಚಾದಿಗಳೆಲ್ಲರೂ ಯಾಗಶಾ
ಲೆಯನ್ನು ಮುರಿಯುತ್ತಲೂ, ಶವಗಳನ್ನು ನಗ್ಗುತ್ತಲೂ ಬೆಂಕಿಯನ್ನಿ
ಕ್ಕುತ್ತಲೂ ಬರುತ್ತಿದ್ದರು. ದಕ್ಷನ ಸೈನ್ಯವು ಅವರಮೇಲೆ ಬಿದ್ದು ಕಾ
ದಾಡಹತ್ತಿತು. ಉಭಯಸೇನೆಗೂ ಕ್ಷಣಕಾಲದಲ್ಲಿ ಘೋರಯುದ್ಧವಾ
ಯಿತು. ಆಯುಧಗಳ ಪ್ರಹಾರದಿಂದ ರಾಕ್ಷಸರುಗಳು ಕಡಿವಡೆದು ನೀಲ
ಗಿರಿಗಳಂತೆ ಬಿದ್ದುಕೊಂಡರು. ರಕ್ಕಸರ ಹೊಟ್ಟೆಗಳನ್ನು ಶಾಕಿನಿಡಾ
ಕಿನಿಯರು ಬಗಿದು ಕರುಳ್ಗಳನ್ನು ಚೆಲ್ಲಾಡಿದರು. ಶುಂಭ ನಿಶುಂಭ ಧೂ
ಮ್ರಾಕ್ಷ ಮೊದಲಾದ ಮಹಾವೀರರಾಕ್ಷಸರು ತಮ್ಮ ಸೇನೆಯಲ್ಲುಂಟಾದ
ಹಾನಿಯನ್ನು ಕಂಡು ರಕ್ತಾಕ್ಷರಾಗಿ ವೀರನ ಸೈನ್ಯದಮೇಲೆ ಗಿರಿಗಳನ್ನೂ
ಮರಗಳನ್ನೂ ಎಸೆದು ನುಗ್ಗು ಮಾಡುತ್ತ ತರುಬಿಕೊಂಡು ವೀರೇಶನ
ನ್ನು ಸುಧಿಸಿದರು. ಕಾಳೀವರನು ಇವರನ್ನು ಕಂಡು, ದಕ್ಷನ ಸಾಹ
ಸವನ್ನು ಮಗ್ಗುಲಲ್ಲಿರುವ ಹರಿಗೆ ತೋರಿಸಿ ನಸುನಕ್ಕು, ಧನುರ್ಬಾಣಗ

ಳನ್ನು ತೆಗೆದುಕೊಂಡು ಪ್ರತಿಯೊಬ್ಬ ರಾಕ್ಷಸೇಶ್ವರನಿಗೂ ಅವರವರಶೌರ್ಯಾನುಸಾರವಾಗಿ ಬಾಣಗಳನ್ನೆಣಿಸಿ ಪ್ರಯೋಗಿಸಿದನು. ಕ್ಷಣಾರ್ಧದಲ್ಲಿ ರಾಕ್ಷಸಸೈನ್ಯವು ಮುಬ್ಬುಹರಿದ ಆಕಾಶದಂತೆ ಬಯಲಾಯಿತು. ಓಡಿದವರು ಓಡಿದರು. ನೀರಿನಲ್ಲಿ ಮುಳುಗಿದವರು ಮುಳುಗಿದರು. ಪಶು ಪಕ್ಷಿ ಮೃಗಗಳ ರೂಪವನ್ನು ಧರಿಸಿ ಅವಿತುಕೊಂಡವರು ತಲೆತಪ್ಪಿಸಿಕೊಂಡರು. ಕೆಲವರು ಓಡಿಹೋಗಿ ದಕ್ಷನಿಗೆ ಈ ಸುದ್ದಿಯನ್ನು ತಿಳಿಸಿದರು. ಅಷ್ಟರಲ್ಲಿ ವೀರೇಶನು ಕೂಡ ಇನ್ನು ತಡ ಮಾಡಬಾರದೆಂದು ಯೋಚಿಸಿ, ಪತ್ನೀಸಮೇತನಾಗಿ ರಥದಿಂದಿಳಿದು ಕೈಕತ್ತಿಯನ್ನು ಝಳಪಿಸಿ, ಧೀಂಕಿಡುತ್ತ ಬೊಬ್ಬಿರಿದು ಯಾಗಮಂಟಪದೊಳಗೆ ನುಗ್ಗಿದನು. ಹಿಂದೆ ಮುಂದೆ ವಾದ್ಯಧ್ವನಿಗಳೂ ಸ್ತುತಿಪಾಠಕರ ಉದ್ಘೋಷವೂ ಮೊರೆಯುತ್ತಿದ್ದುವು. ಕೂಡಲೇ ವೀರೇಶನು ಬಾಗಿಲಲ್ಲಿ ನಿಂತಿದ್ದ ಭೈರವನಿಗೆ ತೇಜೋವಧೆಯನ್ನು ಮಾಡಿ, ಉಳಿದ ಕಾವಲುಗಾರರನ್ನು ನೆಲಕ್ಕೆ ಬೀಳುವಂತೆ ಬಡಿದು, ಚೌಡೇಶ್ವರಿಯ ಕಿವಿಯನ್ನು ಕಿತ್ತು, ಲಕ್ಷ್ಮಿಯ ಮುಂದಲೆಯನ್ನು ಕತ್ತರಿಸಿ, ಸರಸ್ವತಿಯ ಮೂಗನ್ನು ಕೊಯ್ದು, ಶಚೀದೇವಿಗೆ ಮುದ್ರೆಯನ್ನೊತ್ತಿ, ಸ್ವಾಹಾದೇವಿಯ ಮೊಲೆಯನ್ನು ಕಡಿದು, ಇದರಂತೆಯೇ ಉಳಿದ ದೇವಸ್ತ್ರೀಯರನ್ನೂ ಭಂಗಗೊಳಿಸಿದನು. ಅವನ ಸೇನೆಯು ಹೋಮಕುಂಡದ ಸುತ್ತಲೂ ಗೋಪೀಮಣ್ಣಿನ ತಿಲಕವನ್ನಿಟ್ಟುಕೊಳುತಿದ್ದ ವಿಪ್ರರ ಜುಟ್ಟುಗಳನ್ನು ಕಿತ್ತು ಕೆನ್ನೆಗೆ ಬಡಿದು ಒಬ್ಬನ ಜುಟ್ಟಿಗೆ ಮತ್ತೊಬ್ಬನ ಜುಟ್ಟನ್ನು ಸೇರಿಸಿ ಕಟ್ಟಿ ಓಡಿಸಿ, (ಮುನಿಸ್ತೋಮಕ್ಕೆ ಮಾತ್ರ ಯಾವಕೇಡನ್ನೂ ಮಾಡಕೂಡದೆಂದು ವೀರೇಶನು ಕಟ್ಟು ಮಾಡಿರಲು) ಅವರನ್ನು ಕೆಣಕದೆ ಬಿಟ್ಟು, ಯಾಗಶಾಲೆಯನ್ನೆಲ್ಲ ಕಿತ್ತು ಕುಣಿದಾಡಿ ಬೊಬ್ಬಿರಿಯಿತು. ಅಷ್ಟರಲ್ಲಿ ವೀರೇಶನು ದಕ್ಷನ ಮುಂದುಗಡೆಗೆ ಬಂದು ಕೈಕತ್ತಿಯ ಒಂದೇ ಏಟಿನಿಂದ ಅವನ ತಲೆಯನ್ನು ಹೋಮಕುಂಡಕ್ಕೆ ಹೋಗಿ ಬೀಳುವಂತೆ ಕತ್ತರಿಸಿ ಬೊಬ್ಬಿರಿದನು. ಆಕಾಶದಲ್ಲಿ ದೇವದುಂದುಭಿಯಾಯಿತು. ವೀರೇಶನ ಸೇನೆಯೆಲ್ಲ ಕೋಲಾಹಲವನ್ನು ಮಾಡಿತು. ದಕ್ಷನ ರಾಣಿವಾಸದವರು ಓ ಎಂದು ಗೋಳಿಟ್ಟರು. ಆಗ ದಕ್ಷನ ಪತ್ನಿಯರು ರೋದಿಸುತ್ತ ಬಂದು ವೀರೇ

ಕನ ಮತ್ತು ಭದ್ರಕಾಳಿಯ ಪಾದದ ಮೇಲೆ ಬಿದ್ದು, ತಮಗೆ ಮುತ್ತೈದೆತನವನ್ನು ಕೊಟ್ಟು ಕಾಪಾಡಬೇಕೆಂದು ಬೇಡಿಕೊಂಡರು. ಮಹಾಕಾಳಿಯು ಕರುಣಗೊಂಡು, ಶರಣಾಗತರನ್ನುದ್ಧರಿಸಬೇಕೆಂದು ಪತಿಗೆ ಬಿನ್ನವಿಸಿದಳು. ಮಗ್ಗುಲಲ್ಲಿ ಕೈಕಟ್ಟ ನಿಂತಿದ್ದ ಹರಿಯಜರು ಹಸಾದ ಹಸಾದವೆಂದು ನುಡಿಯುತ್ತಿದ್ದರು. ಇದರಿಂದ ವೀರಭದ್ರೇಶ್ವರನು ಶಾಂತನಾಗಿ ಬಳಿಯಲ್ಲಿ ಬಿದ್ದಿದ್ದ ಯಜ್ಞದ ತಗರಿನ ತಲೆಯನ್ನೆತ್ತಿ ದಕ್ಷನ ಮುಂಡದ ಮೇಲಿಟ್ಟು ಸವರಿದನು. ಕೂಡಲೇ ದಕ್ಷನ ದೇಹದಲ್ಲಿ ಪ್ರಾಣವು ಕೂಡಿತು. ಅಜಪುತ್ರ- (ಆಡಿನ ಮಗ= ಬ್ರಹ್ಮನ ಮಗ) ಎಂಬ ನಾಮವು ಸಾರ್ಥಕವಾದ ಹಾಗೆ ದಕ್ಷನು ತೋರಿದನು. ಥಟ್ಟನೆದ್ದು ವೀರೇಶನ ಪಾದಕ್ಕೆ ನಮಸ್ಕರಿಸಿ, ತನ್ನಪರಾಧವನ್ನು ಕ್ಷಮಿಸಬೇಕೆಂದು ಬೇಡಿದನು. ವೀರೇಶನು ಅಲ್ಲಿದ್ದವರೆಲ್ಲವನ್ನೂ ಕರೆದುಕೊಂಡು ಕೈಲಾಸಕ್ಕೆ ಬಂದನು. ಬಾಗಿಲಲ್ಲಿ ಎಲ್ಲರನ್ನೂ ನಿಲ್ಲಿಸಿ, ನಾರದನೊಡನೆ ವೀರೇಶನು ಶಿವನ ಬಳಿಗೆ ಹೋಗಿ, ನಮಸ್ಕರಿಸಿದನು. ಪರಶಿವನು ನಾರದನ ಮುಖದಿಂದ ನಡೆದ ಸಂಗತಿಯನ್ನೆಲ್ಲ ಕೇಳಿ ಸಂತುಷ್ಟನಾಗಿ ಪ್ರೇಮಪುತ್ರನನ್ನು ಕರೆದು ಆಲಿಂಗಿಸಿ, ಮೈದಡವಿ, ಬಾಗಿಲಲ್ಲಿ ನಿಂತಿದ್ದವರನ್ನೆಲ್ಲ ಕರಿಸಿದನು. ಅವರುಗಳು ಶಿವಪಾದವನ್ನು ಕಂಡು ಪರಮಾನಂದದಿಂದುಬ್ಬಿ ಭಯ ಭಕ್ತಿಯಿಂದ ನಮಸ್ಕರಿಸಿ ಸ್ತುತಿಸಿದರು. ಮತ್ತು ವಿರುದ್ಧವಾಗಿ ಆಚರಿಸಿದ ಯಜ್ಞಕಾರ್ಯದಲ್ಲಿ ಸೇರಿದ್ದ ತಮ್ಮ ತಪ್ಪನ್ನೆಲ್ಲ ಕ್ಷಮಿಸಬೇಕೆಂದು ಬೇಡಿದರು. ಶಿವನಾದರೋ- ಇನ್ನು ಮುಂದೆ ಇಂಥ ವಿರೋಧಕೃತ್ಯದಲ್ಲಿ ತೊಡಗಬೇಡಿರೆಂದು ಹೇಳಿ ಎಚ್ಚರಿಸಿ, ಎಲ್ಲರಿಗೂ ಅನುಗ್ರಹಿಸಿ ಕಳಿಸಿಕೊಟ್ಟು, ವೀರೇಶನ ಉಗ್ರತ್ವವನ್ನು ಶಾಂತಿಗೊಳಿಸಿ ಸುಖದಿಂದಿದ್ದನು. ಎಂಬಲ್ಲಿಗೆ ೫ ನೇ ಅಧ್ಯಾಯವು ಸಂಪೂರ್ಣವು.

---

## ೬ ನೇ ಅಧ್ಯಾಯವು.

### ನೃಸಿಂಹಹರಲೀಲೆ.

ಎಲೆ ಸಿದ್ಧರಾಮೇಶನೇ ಕೇಳು, ಬಳಿಕ ದೇವತೆಗಳು ಕೆಲವು ಕಾಲ ಸುಖದಿಂದಿರುತ್ತಿರಲು, ಅವರಿಗೆ ಮೃತ್ಯುಸ್ವರೂಪನಾದ ಮತ್ತೊಬ್ಬ ಹಿ

ರಣ್ಯಕಶಿಪುವೆಂಬ ಕ್ರೂರರಾಕ್ಷಸನು ಪ್ರಬಲಿಸಿ, ದೇವತೆಗಳನ್ನೆಲ್ಲ ತನ್ನ ಭುಜಪರಾಕ್ರಮದಿಂದ ಜೈಸಿ ಅಪ್ರತಿಹತನಾಗಿ ಜಗತ್ತಿಗೆ ಹಿಂಸೆಗೊಳಿಸುತ್ತಿದ್ದನು. ದೇವೇಂದ್ರನು ಅವನ ಹಾವಳಿಯನ್ನು ತಡೆಯಲಾರದೆ ಸಕಲ ಪರಿವಾರದೊಡನೆ ಈಶ್ವರನ ಬಳಿಗೆ ಓಡಿಬಂದು, "ಸ್ವಾಮಿ! ಹಿರಣ್ಯಕಶಿಪುವೆಂಬ ಮಹಾರಾಕ್ಷಸನು ಬ್ರಹ್ಮನನ್ನು ಕುರಿತು ತಪಸ್ಸನ್ನಾಚರಿಸಿ, ಸುರನರೋರಗರಾಕ್ಷಸಾದಿಗಳಿಂದಲೂ ಯಾವ ಆಯುಧಗಳಿಂದಲೂ, ಹಗಲು ರಾತ್ರಿಯಲ್ಲೂ ಮನೆಯ ಒಳಗೂ ಹೊರಗೂ ಮರಣವಾಗದಂತೆ ವರವನ್ನು ಪಡೆದುಕೊಂಡು, ಮರಣಭೀತಿಯಿಲ್ಲದೆ ನಮ್ಮೆಲ್ಲರಮೇಲೂ ಬಿದ್ದು ಜೈಸಿ, ದೇವತಾಂಗನೆಯರನ್ನೆಲ್ಲ ಸೆರೆ ಹಿಡಿದುಕೊಂಡು ಹೋಗಿರುವನು. ಈ ವಿಪತ್ತನ್ನು ಪರಿಹರಿಸಿ ಕಾಪಾಡಬೇಕು" ಎಂದು ಬಿನ್ನೈಸಿ, ದೀರ್ಘದಂಡವಾಗಿ ಸರ್ವರೂ ನಮಸ್ಕರಿಸಿದರು. ಆಗ ಶಿವನು ದಯೆಯಿಂದ ಸರ್ವರನ್ನೂ ಏಳಿಸಿ, ವಿಷ್ಣುವನ್ನು ಕುರಿತು— ನೀನು ಹೋಗಿ ಜಗತ್ಕಂಟಕನಾದ ಆ ನೀಚರಾಕ್ಷಸನ ಪ್ರಾಣವನ್ನು ತೆಗೆದುಕೊಂಡುಬಾರೆಂದು ಬೆಸಸಲು, ಆತನು "ಅಪ್ಪಣೆ" ಯೆಂದು ಹೇಳಿ ನಮಸ್ಕರಿಸಿ, ಹೊರಟನು. ಬ್ರಹ್ಮನಿಂದ ರಾಕ್ಷಸನಿಗೆ ದೊರೆತಿರುವ ವರದ ಸ್ವರೂಪವನ್ನೆಲ್ಲ ಯೋಚಿಸಿಕೊಂಡನು. ಆ ವರಕ್ಕೆ ಭಂಗಬಾರದಂತೆಯೂ, ಹಿರಣ್ಯಕಶಿಪುವಿನ ಮರಣವಾಗುವಂತೆಯೂ ಮಾಡುವುದಕ್ಕೆ ಉಪಾಯವೇನೆಂಬುದನ್ನು ಆಲೋಚಿಸಿಕೊಂಡನು. ಅಷ್ಟರಲ್ಲಿ ತನ್ನ ಕಾರ್ಯಸಾಧನೆಗೆ ಅನುಕೂಲಸಂಧಿ ದೊರೆಯುದನ್ನೂ ಕಂಡುಕೊಂಡನು. (ಎಂದರೆ— ಹಿರಣ್ಯಕಶಿಪುವಿಗೆ ಪ್ರಹ್ಲಾದನೆಂಬ ಮಗನಿದ್ದನು. ಅವನು ಪರಮವೈಷ್ಣವನು; ತಂದೆಯಾದರೊ ಪರಮಶೈವ, ಮಗನ ವಿಷ್ಣುಭಕ್ತಿಯು ತಂದೆಗೆ ಸೇರುತ್ತಿರಲಿಲ್ಲ, ವಿಷ್ಣುಭಕ್ತಿಯನ್ನು ತಪ್ಪಿಸಿ ಶಿವಭಕ್ತಿಯನ್ನುಂಟುಮಾಡಬೇಕೆಂದು ಮಗನಿಗೆ ಸಾಮದಾನದಂಡೋಪಾಯಗಳನ್ನೆಲ್ಲ ಉಪಯೋಗಿಸಿದರೂ ಫಲವಾಗಲಿಲ್ಲ. ಕೊನೆಗೆ ಮಗನು "ವಿಷ್ಣುವೇ ಸರ್ವವ್ಯಾಪಿ" ಯೆಂದು ಹೇಳುತ್ತಿರಲು, "ಹಾಗಾದರೆ ನಿನ್ನ ದೈವವು ಈ ಕಂಬದಲ್ಲೂ ಇರುವುದನ್ನು ತೋರಿಸು" ಎಂದು ತಂದೆಯು ನುಡಿದನು. ಮಗನು ಪ್ರಾರ್ಥಿಸಲು, ಭಕ್ತೇಷ್ಟದಾತೃತ್ವದಿಂದ ಇದೇಸಮಯವೆಂದರಿತು) ಹರಿ

ಯು ಕೇವಲ ಮನುಷ್ಯ ಅಥವಾ ಕೇವಲ ಮೃಗಾಕಾರನಾಗಿರದೆ ಎರಡೂ ಸೇರಿರುವ ನೃಸಿಹ್ಮರೂಪವನ್ನು ತಾಳಿ ಕಂಬವನ್ನು ಒಡೆದು ಈಚೆಗೆ ಬಂದು ಗರ್ಜಿಸಿ, ಹಿರಣ್ಯಕಶಿಪುವನ್ನು ಸೆಳೆದು, ತನ್ನ ತೊಡೆಯಮೇಲಿಟ್ಟುಕೊಂಡು, ಮನೆಯೊಳಗೂ ಹೊರಗೂ ನಿಲ್ಲದೆ, ಹೊಸ್ತಿಲಮೇಲೆ ಕುಳಿತು, ಹಗಲು ರಾತ್ರಿಯನ್ನು ಬಿಟ್ಟು, ಮಧ್ಯದ ಸಂಧ್ಯಾಕಾಲದಲ್ಲಿ, ಯಾವ ಆಯುಧವನ್ನೂ ಉಪಯೋಗಿಸದೆ ಕೈಯುಗುರುಗಳಿಂದಲೇ ಅವನ ಹೊಟ್ಟೆಯನ್ನು ಸೀಳಿ, ರಕ್ತವನ್ನು ಕುಡಿದು ಕೊಂದುಬಿಟ್ಟನು. ಭಕ್ತನಾದ ಪ್ರಹ್ಲಾದನನ್ನು ಉದ್ಧರಿಸಿದನು. ಲೋಕವು ನಿಷ್ಕಂಟಕವಾಯಿತು. ಭೃಗುಶಾಪದಂತೆ ಒಂದು ಜನ್ಮವನ್ನೆತ್ತಿ ಅದನ್ನೂ ನೆರವೇರಿಸಿದಂತಾಯಿತು. ದೇವತೆಗಳೆಲ್ಲರೂ ನಿರ್ವೈರಿಗಳಾದೆವೆಂದು ಸಂತೋಷಗೊಂಡರು. ಇತ್ತ ನೃಸಿಹ್ಮನು ದೈತ್ಯನ ರಕ್ತವನ್ನು ಮಿತಿಮೀರಿ ಪಾನಮಾಡಿದುದರಿಂದ ಅತ್ಯಂತ ಮತ್ತನಾಗಿ, ಹಿರಣ್ಯಕಶಿಪುವಿಗಿಂತಲೂ ಎಂಟುಭಾಗ ಹೆಚ್ಚಾಗಿ ಜಗತ್ತಿಗೆ ಹಿಂಸೆಗೊಡುತ್ತಿರಲು, ಈ ಸಂಕಟದಿಂದ ಬೇಸತ್ತ ದೇವತೆಗಳು ಮತ್ತೆ ಶಿವನಬಳಿಗೆ ಓಡಿಬಂದು ಅಡ್ಡಬಿದ್ದು, "ದೇವಾ! ಒಬ್ಬ ರಾಕ್ಷಸನ ಹಿಂಸೆಯನ್ನು ತಾಳಲಾರದೆ ತಮ್ಮ ಬಳಿಗೆ ಬಂದು ದೂರು ಹೇಳಿಕೊಳ್ಳಲಾಗಿ ತಾವು ವಿಷ್ಣುವನ್ನು ಕಳಿಸಿಕೊಟ್ಟದ್ದು, ಹಳೆಯ ರೋಗವನ್ನು ಪರಿಹರಿಸುವುದಕ್ಕಾಗಿ ಕೊಟ್ಟ ಔಷಧವು ಹೊಸದೊಂದು ರೋಗವನ್ನು ಹುಟ್ಟಿಸಿದಂತೆಯೂ, ಮೊದಲ ಗಂಡನು ಕೆಟ್ಟವನೆಂದು ಬಿಟ್ಟು ಮತ್ತೊಬ್ಬನನ್ನು ವರಿಸಲು, ಅವನು ಮಾತುಮಾತಿಗೆ ಪ್ರಹರಿಸುವ ಕಟುಕನಾದಂತೆಯೂ, ರಾಕ್ಷಸನ ಭಯವು ನಮಗೆ ತಪ್ಪಿದರೂ ಅವನಿಗಿಂತಲೂ ಮಿಗಿಲಾಗಿ ಹಿಂಸಿಸುವ ಸಿಹ್ಮಾಕೃತಿಯ ಭೂತವು ನಮ್ಮನ್ನು ಬಾಳಗೊಡಿಸದೆ ಇರುವುದು" ಎಂದು ಬಿನ್ನೈಸಿಕೊಂಡರು. ಶಿವನು ಕೇಳಿ ನಕ್ಕು, "ಹೆದರಬೇಡಿರಿ ಹೋಗಿರಿ, ನೃಸಿಹ್ಮನ ಬಾಧೆಯನ್ನು ತಪ್ಪಿಸುತ್ತೇವೆ" ಎಂದು ಸಮಾಧಾನಮಾಡಿ ಕಳಿಸಿ, ವೀರೇಶನನ್ನು ಕರೆದು "ನೀನು ನೃಸಿಹ್ಮನ ಬಳಿಗೆ ಹೋಗಿ ಒಳ್ಳೆಯ ಮಾತಿನಿಂದ ಬಾರೆಂದು ಕರೆದುಕೊಂಡು ಬಾ; ಅದರಂತೆ ನಡೆಯದಿದ್ದರೆ ಅವನನ್ನು ಕೊಂದು ತಲೆಯನ್ನೂ ಮೈತೊವಲನ್ನೂ ತೆಗೆದುಕೊಂಡು ಬಾರೆಂದು ಅಪ್ಪಣೆಮಾಡಿ

ಕಳಿಸಿಕೊಟ್ಟನು. ಕೂಡಲೇ ವೀರಭದ್ರೇಶನು ತನ್ನ ಸೇನೆಯೊಡನೆ ಕೂಡಿ ನೃಸಿಂಹನಿದ್ದಬಳಿಗೆ ಬಂದನು. ಮತ್ತು ಇದಿರಿಗೆ ನಿಂತು, ಅಯ್ಯಾ! ಲೋಕಕಂಟಕನನ್ನು ಶಿಕ್ಷಿಸುವುದಕ್ಕಾಗಿಬಂದ ನೀನು ಶಿವನಾಜ್ಞೆಯನ್ನು ನೆರವೇರಿಸಿಬಿಟ್ಟಬಳಿಕ ಹಿಂತಿರುಗಿ ಕೈಲಾಸಕ್ಕೆ ಬರುವುದನ್ನು ಮರೆತು, ಲೋಕಕ್ಕೆ ಮತ್ತಷ್ಟು ಹಿಂಸೆಗೊಳಿಸುತ್ತ ನಿಂತುಕೊಳ್ಳಬಹುದೆ? ಲೋಕರಕ್ಷಕ, ಸತ್ವಗುಣಶಾಲಿಯೆನಿಸಿಕೊಳ್ಳುವ ನೀನು ಹೀಗೆ ತಾಮಸಸ್ವಭಾವದಿಂದ ನಡೆದುಕೊಳ್ಳುತ್ತಿರುವುದನ್ನು ನೋಡಿ ಲೋಕವೆಲ್ಲ ಪರಿಹಾಸಮಾಡುವುದಿಲ್ಲವೆ? ಇದು ನಿನಗೆ ಸರಿಯಲ್ಲ. ಬಿಡು; ನಿನ್ನನ್ನು ಕರೆದುಕೊಂಡು ಬರುವುದಕ್ಕೆ ಪರಶಿವನಪ್ಪಣೆಯಾಗಿರುವುದು; ನಡೆ, ಎಂದು ನುಡಿದನು. ಇದನ್ನು ಕೇಳಿ ನೃಸಿಂಹನು ಘುಡುಘುಡಿಸಿ ಎದ್ದು, ಗರ್ಜಿಸಿ, "ಅವನಾರು ಪರಶಿವನೆಂಬುವನು? ನನ್ನನ್ನು ಕರೆಸುವುದಕ್ಕೆ ಅವನಿಗೆ ಅಂಥ ದೊಡ್ಡ ಅಧಿಕಾರವೇನು? ನನ್ನ ಬಳಿಗೆ ಬಂದು ಸಮನಾಗಿ ನಿಂತು ಮಾತನಾಡಿರುವುದಕ್ಕೆ ನೀನಾರು? ಯಮನಕಡೆಯವರು ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ಬಂದಿರಬಹುದು! ಅದು ಕಾರಣ ಪ್ರಾಣವನ್ನು ಕೊಟ್ಟುಹೋಗುವುದಕ್ಕೆ ನೀನು ಇಲ್ಲಿಗೆ ಬಂದಿರುವಂತಿದೆ. ನಮ್ಮ ಶೌರ್ಯವನ್ನು ಕೇಳಿಯೂ ಕೇಳಿ ನಮ್ಮಮುಂದೆ ಬಂದು ನಿಂತುಕೊಳ್ಳಬಹುದೆ?" ಎಂದು ಕೊಬ್ಬಿದ ಮಾತನ್ನಾಡಿದನು. ವೀರೇಶನು ನಕ್ಕು, ಕೋಪವನ್ನು ತಾಳಿ, "ಎಲೊ ವಿಷ್ಣುವೆ! ನಿನಗೆ ಜನ್ಮಾಂತರವುಂಟಾಗಿರುವುದರಿಂದ ಗುಣಾಂತರವೂ ಉಂಟಾಗಿದೆ. ಅದು ನಿನ್ನ ತಪ್ಪಲ್ಲ. ತಾಮಸಪ್ರಕೃತಿಯು ದೈತ್ಯನ ರಕ್ತವನ್ನು ಕುಡಿದುದರಿಂದ ಮದವೇರಿದ ನೀನೂ ತಾಮಸಾತ್ಮಕನಾಗಿ ಪೂರ್ವಸ್ಮರಣೆಯಿಲ್ಲದೆ ಬಾಯ್ಗೆಬಂದಂತೆ ಹರಟುತ್ತಿರುವೆ; ನಿನಗೆ ಜ್ಞಾನೋದಯವಾಗುವುದಕ್ಕಾಗಿ ಎಚ್ಚರಿಸುತ್ತೇನೆ ಕೇಳು "ಜಗತ್ತಿಗೆಲ್ಲ ಸೃಷ್ಟಿಕರ್ತನು ಬ್ರಹ್ಮನು; ನಿನ್ನ ಮೂಲಜನ್ಮದ ಕೆಲಸವು ರಕ್ಷಣಕಾರ್ಯ; ನೀನೇ ಹರಿ; ನಿನ್ನನ್ನು, ಈ ಜಗತ್ತನ್ನೂ, ಸೃಷ್ಟಿಸಿ, ಸಲಹಿ, ಕೊಲ್ಲುವುದಕ್ಕೆಲ್ಲ ಮುಖ್ಯಾಧಿಪತಿಯಾದವನು ರುದ್ರನು; ಆತನ ಮಗನೇ ನಾನು;" ಎಂದು ನುಡಿಯಲು, ನೃಸಿಂಹನು, ಅಹ ಹಾ! ಪರಮಾಶ್ಚರ್ಯ! ಇದೀಗ ಪರಮಕೌತುಕ!

ಬೂಸಿಬಡುಕ ಗೊರವ ಅರೆಗಂಡುಸು ಆವವನೊಬ್ಬನನ್ನು ಜಗತ್ತಿಗೇ
ದೊಡ್ಡವನೆಂದು ಹೇಳಿ ನಮ್ಮನ್ನು ಬೆದರಿಸುವುದಕ್ಕೆ ಬಂದಿರುವ ಈ ಎವೆ
ಗಾರನು ಅವನ ಮಗನಂತೆ! ನಮ್ಮನ್ನು ಕಡಿದುಕೊಂಡು ಹೋಗುತ್ತಾ
ನಂತೆ! ನೋಡಿದಿರಾ? ಎಂದು ತನ್ನ ಮಗ್ಗುಲಲ್ಲಿದ್ದವರೊಡನೆ ಪರಿಹಾಸ
ಮಾಡಿ ನುಡಿದು, ಕೈಹೊಯ್ದು ನಕ್ಕು, ವೀರೇಶನನ್ನು ಕುರಿತು—ಎಲಾ!
ಮಾತಿನಲ್ಲಿ ದೊಡ್ಡವನೆಂದು ನೀನು ಹೇಳಿಕೊಂಡರೆ ಫಲವೇನು? ಅದು
ಹಾಗಿರಲಿ; ಇದೋ ನೋಡು; ನಾವು ಜಗತ್ತನ್ನು ಉಳಿಸುವುದಕ್ಕೂ ಹಾ
ಳ್ಮಾಡುವುದಕ್ಕೂ ಹೊಸದಾಗಿ ಸೃಷ್ಟಿಸುವುದಕ್ಕೂ ಶಕ್ತರು; ಇಂದ್ರ
ಬ್ರಹ್ಮರುದ್ರಾದಿಗಳೆಲ್ಲರೂ ನಮ್ಮ ಆಜ್ಞಾಧೀನರಾಗಿ ಬಾಳುವರು; ಕೇ
ಳಿದವರಿಗೆ ಇಷ್ಟಾರ್ಥವನ್ನು ಕೊಡಬಲ್ಲೆವು; ನಮಗೆವಿರಾರಿದವರಾ
ರಿರುವರು? ಸಾಕು; ನಿನ್ನ ಹರಟೆಯನ್ನು ಮುಚ್ಚು; ಹೆಚ್ಚು ಮಾತನಾಡಿ
ಪ್ರಾಣವನ್ನು ಕಳೆದುಕೊಳ್ಳಬೇಡ; ಬಂದ ದಾರಿಯನ್ನು ಹಿಡಿದುಹೋಗು.
ಎಂದುನುಡಿದನು. ವೀರೇಶನು ಕೇಳಿ ಕಾಲಾಗ್ನಿಯಂತೆ ಕೆರಳಿದರೂ, ಶಿವನ
ಪ್ಪಣೆಯಂತೆ ಮತ್ತೊಂದುಬಾರಿಯೂ ಹಿತೋಪದೇಶವನ್ನು ಮಾಡಿ ನೋ
ಡಬೇಕೆಂದುಯೋಚಿಸಿ, ಶಾಂತನಾಗಿ, ಎಲೆ ನೃಸಿಂಹನೇ! ಕೇಳು; ನಿನ್ನ
ಮೂರ್ಖತನವನ್ನು ಬಿಡು; ಈ ಹುಚ್ಚುತನದಿಂದ ಫಲವಿಲ್ಲ; ನೀನು ಜಗ
ತ್ತನ್ನೆಲ್ಲ ಪಾಲಿಸುವವನೇನಲ್ಲ; ಆದರೆ ಹೀಗೆ ಶಿವನಪ್ಪಣೆಯನ್ನು ಮೀರಿ ನಡೆ
ಯುವುದು ನಿನಗೆ ಶ್ರೇಯಸ್ಕರವಲ್ಲ. ಶಿವನಾಜ್ಞೆಯಂತೆಯೇ ನೀನು ಮ
ತ್ಸ್ಯಕೂರ್ಮವರಾಹನೃಸಿಂಹಾದಿರೂಪಗಳನ್ನೆಲ್ಲ ಧರಿಸಿ, ಜಗತ್ಕಂಟಕತ್ವವ
ನ್ನು ಪರಿಹರಿಸಿದೆ; ಈಗ ಅದೆಲ್ಲವನ್ನೂ ಮರೆತು, ಲೋಕಕ್ಕೆ ನೀನೇ
ಕಂಟಕನಾಗಿ ದೇವತೆಗಳನ್ನೆಲ್ಲ ಗೋಳಿಡಿಸುತ್ತಲಿರುವೆ; ಇದು ನಿನಗೆ
ಯೋಗ್ಯವಲ್ಲ" ಎಂದು ನುಡಿದರೂ ಆ ವೀರೇಶನ ಶಾಂತಿವಚನಾಮೃ
ತದಿಂದ ನೃಸಿಂಹನ ಕಲ್ಲುಮನವು ನೆನೆಯಲಿಲ್ಲ. ಆದರೂ ವೀರೇಶನು—
ಅಯ್ಯಾ! ಬೇಡ; ಬೇಡ; ನನ್ನ ಮಾತನ್ನು ಕೇಳು, ಶಿವನು ನಿನಗೆ ಕೇಡ
ನ್ನು ಬಯಸುವುದಿಲ್ಲ; ಅಲ್ಲಿಗೆ ಬಂದು ಕಂಡು ಬಂದುಕೋ" ಎಂದು ವಿಧವಿಧ
ವಾಗಿ ಹೇಳುತ್ತಿದ್ದರೂ, ನೃಸಿಂಹನು ಕೇಳದೆ ಕೋಪಾವೇಶಗೊಂಡು, ಥ
ಟ್ಟನೆ ವೀರೇಶನ ಮೇಲೆ ಹಾರಿ ಅಪ್ಪಳಿಸಿದನು. ಆಗ ವೀರೇಶನಶಾಂತಿಯು

ಬರಿದಾಯಿತು. ರೋಷವು ಉಕ್ಕೇರಿತು. "ಇನ್ನು ನಮ್ಮಲ್ಲಿ ತಪ್ಪಿಲ್ಲ; ನೀವೆಲ್ಲರೂ ನೋಡಿರಿ" ಎಂದು ಸುರರಿಗೆ ಹೇಳಿ, ಪುಟನೆಗೆದು ಹಾರಿ, ಎಡಗಾಲಿನಿಂದ ನೃಸಿಹ್ಮನ ತಲೆಗೆ ಝಾಡಿಸಿ ಒದೆದನು. ಸಿಹ್ಮನು ಮೂರ್ಛೆಯೊಂದಿ ಭೂಮಿಗೆ ಬಿದ್ದು, ಚೇತರಿಸಿಕೊಂಡೆದ್ದು, ಗರ್ಜಿಸಿ, ಕೈಗಳನ್ನು ಎತ್ತಿ ವೀರೇಶನನ್ನು ಹಿಡಿವ ಬಗೆಯುವುದಕ್ಕಾಗಿ ರಭಸದಿಂದ ಬರುತ್ತಿರಲು, ಈ ನೃಸಿಹ್ಮಮದಕ್ಕೆ ಸರಿಯಾದ ಔಷಧವನ್ನು ಕೊಡುತ್ತೇನೆಂದು ಹೇಳಿ, ವೀರೇಶನು ಕೂಡಲೇ ಶರಭಾವತಾರವನ್ನು ಧರಿಸಿದನು. ಮೇರುಪರ್ವತಕ್ಕೆ ರೆಕ್ಕೆಗಳೂ ಎಂಟುಪಾದಗಳೂ ಮೂಡಿನಂತೆ ಕಾಣುತ್ತಿದ್ದ ಆ ಮಹಾಶರಭಮೂರ್ತ್ತಿಯು, ಆಕಾಶದಲ್ಲಿ ಹಾರಿದರೆ ರೆಕ್ಕೆಯ ಬಡಿತದ ಗಾಳಿಯಿಂದ ಸಮುದ್ರಗಳೆಲ್ಲ ಉಕ್ಕಾಡದೆ ಇರುವುವೆ? ಗಿರಿಗಳು ಹಾರಾಡದೆ ಹೋಗುವುವೆ! ಸೂರ್ಯಚಂದ್ರನಕ್ಷತ್ರಮಂಡಲಗಳು ಚೆಲ್ಲಾಡದೆ ಉಳಿಯುವುವೆ? ಎಂದು ಲೋಕವೆಲ್ಲವೂ ಯೋಚಿಸಿಕೊಳ್ಳುತ್ತಿರಲು, ತನ್ನ ಕೊಕ್ಕಿನಿಂದ ನೃಸಿಹ್ಮನ ಕತ್ತನ್ನು ಕಚ್ಚಿ ಅಂತರಿಕ್ಷಕ್ಕೆ ಭರ್ರನೆಹಾರಿತು. ನೃಸಿಹ್ಮನು ತಪ್ಪಿಸಿಕೊಳ್ಳುವುದಕ್ಕಾಗಿ ಒಮ್ಮೊಮ್ಮೆ ಒದರಾಡುವನು, ಶರಭನು ಪಾದಗಳಿಂದಿರುಕಿ ಕುಸುರುವನು, ಸಿಹ್ಮನು ನಖಗಳಿಂದ ಪರಚುವನು, ಶರಭನು ಗಾಳಿಗಿರಗನಂತೆ ಸುತ್ತಾಡಿಸುವನು. ಸಿಹ್ಮನು ತಲೆಯನ್ನು ತಿರುಹಿ ಕಡಿಯುವುದಕ್ಕೆ ಬಾಯ್ದೆಗೆವನು, ಶರಭನು ರೆಕ್ಕೆಗಳಿಂದ ಝಾಡಿಸಿ ಮೂರ್ಛೆಗೊಳಿಸುವನು. ಹೀಗೆ ಆಕಾಶದಲ್ಲೇ ಪರಸ್ಪರ ಕಾದಾಡುತ್ತಿರಲು, ನೃಸಿಹ್ಮನ ಶಕ್ತಿಯು ಕುಗ್ಗಿ ನಿಶ್ಶೇಷನಾಗುತ್ತ ಬಂದನು. ವೀರೇಶನಾದರೂ — ಎಲೆ ಹರಿಯೆ! ನಿನ್ನ ಜಗತ್ಕರ್ತೃತ್ವವೆಲ್ಲಿ? ಈಗ ತೋರಿಸು! ಶಿವನ ಬಳಿಗೆ ಬರುವುದಿಲ್ಲವೆಂದು ಸೊಲ್ಲುತ್ತಿದ್ದ ನಿನ್ನ ನಾಲಿಗೆ ಯೆಲ್ಲಿ? ಶಿವನನ್ನು ಜರಿಯುತ್ತಿದ್ದ ನಿನ್ನ ಪೌರುಷವೆಲ್ಲಿ? ಪರಿಹಾಸವಚನವನ್ನಾಡುತ್ತಿದ್ದ ನಿನ್ನ ಕೊಬ್ಬೇನಾಯಿತು? ಈಗಲಾದರೂ ಬುದ್ಧಿಬಂದಿತೊ? ಎಂದು ಮೂದಲಿಸುತ್ತಿರಲು, ನೃಸಿಹ್ಮನ ದೇಹದಿಂದೆಲ್ಲ ರಕ್ತವು ಮೋಡದಿಂದ ಮಳೆ ಸುರಿಯುವಂತೆ ಸುರಿಯುತ್ತಿದ್ದಿತು. ಆದರೂ ವೀರೇಶನು ಬಿಡದೆ ಲೀಲೆಯಿಂದ ಸಿಹ್ಮನನ್ನು ಕಚ್ಚಿ ಬೆಟ್ಟಗಳ ಮೇಲಕ್ಕೆ ಎಸೆಯುತ್ತಲೂ, ಅಲ್ಲಿಂದ ಬೀಸಿ ಭೂಮಿಗೆ

ಅಪ್ಪಳಿಸುತ್ತಲೂ, ಬಾಲವನ್ನು ಕಚ್ಚಿ ದರದರನೆ ನೆಲದಮೇಲೆ ಎಳೆಯು ತ್ತಲೂ ಅಂತ್ಯಾವಸ್ಥೆಗೀಳಿಸಿದನು. ಕಡೆಗೆ ನೃಸಿಹ್ಮನು ಕೊರಗಿ ಸುರುಗಿ ಪ್ರಾಣವನ್ನು ಬಿಟ್ಟನು. ದೇವತೆಗಳು ಹೂಮಳೆಗಳನ್ನು ಸುರಿದರು. ದೇವದುಂದುಭಿಯು ಮೊಳಗಿತು. ಲೋಕವೆಲ್ಲ ಹರ್ಷಗೊಂಡಿತು. ಶಿವ ನಪ್ಪಣೆಯಮೇರೆ ವೀರೇಶನು ಅವರ ತಲೆಯನ್ನು ಕೊಯ್ದು ಹಿಡಿದು, ಚ ರ್ಮವನ್ನು ಸುಲಿದು ಪರಶಿವನ ಬಳಿಗೆ ತೆಗೆದುಕೊಂಡು ಬಂದು ಒಪ್ಪಿಸಿ ನಮಸ್ಕರಿಸಿದನು. ಶಿವನು ನೋಡಿ ಸಂತೋಷಪಟ್ಟು ಮಗನನ್ನು ಆಶೀ ರ್ವದಿಸಿ ತಬ್ಬಿ ಮುದ್ದಾಡಿ, ಆ ನೃಸಿಹ್ಮನ ಮುಖಕ್ಕೆ ಕೀರ್ತಿಮುಖವೆಂ ದು ಹೆಸರನ್ನು ಕೊಟ್ಟು ತನ್ನ ಪೀಠದ ಒರಗಿನ ಮೇಲ್ಗಡೆಯಲ್ಲಿ ಅಲಂ ಕರಿಸಿ, ಚರ್ಮವನ್ನು ಹಾಸಿ ಆಸನವನ್ನು ಮಾಡಿ ಕುಳಿತು, ದೇವತೆಗಳಿ ಗೆಲ್ಲ ಅಪ್ಪಣೆ ಕೊಟ್ಟು ಕಳಿಸಿ, ಸುಖಮಯನಾಗಿದ್ದನೆಂಬಲ್ಲಿಗೆ ಆರನೆ ಅ ಧ್ಯಾಯವು ಸಂಪೂರ್ಣವು.

---

## ೭ ನೇ ಅಧ್ಯಾಯವು.

### ಪಾರ್ವತೀತಪಶ್ಚರಣವು.

ಎಲೆ ಸಿದ್ಧರಾಮೇಶನೆ! ಪೂರ್ವದಲ್ಲಿ ಹಿಮವಂತನ ಪತ್ನಿಯಾದ ಮೇನಕಿಯು ಶಂಕರಿಯನ್ನು ಕುರಿತು ಕಠಿಣವಾದ ತಪಸ್ಸನ್ನಾಚರಿಸಿದ ಳು. ಶಿವೆಯು ಮೆಚ್ಚಿ ಪ್ರತ್ಯಕ್ಷಳಾಗಿ, ನಿನ್ನಿಷ್ಟವೇನೆಂದು ಕೇಳಲು, “ನೀನು ಮಗಳಾಗಿ ನನ್ನ ಹೊಟ್ಟೆಯಿಂದ ಜನಿಸಬೇಕು” ಎಂದು ಬೇಡಿ ದಳು. ಭವಾನಿಯು ಹಾಗೆಯೇ ಆಗಲೆಂದೊಪ್ಪಿ ವರವನ್ನು ಕೊಟ್ಟಿದ್ದಳು. ಇತ್ತ ದಕ್ಷಯಾಗದಲ್ಲಿ ದಕ್ಷನ ಸಂಬಂಧದ ತನ್ನ ದೇಹವನ್ನು ಯೋಗಾ ಗ್ನಿಗೆ ಆಹುತಿಮಾಡಿ ವಿಸರ್ಜಿಸಿದ ಬಳಿಕ, ಮೇನಕಿಗೆ ಮುಂಚೆ ಕೊಟ್ಟಿ ದ್ದ ವರದ ಪರಿಪಾಲನಾರ್ಥವಾಗಿ ಆಕೆಯ ಗರ್ಭವನ್ನು ಪ್ರವೇಶಿಸಿ ಪಿಂಡ ವಾಗಿ ಬೆಳೆದಳು. ನವಮಾಸವು ತುಂಬಿದ ಬಳಿಕ ಶುಭಮಾಸ ಶುಭ ತಿಥಿ ಶುಭನಕ್ಷತ್ರ ಶುಭಲಗ್ನದಲ್ಲಿ ಮೇನಕಿಯು ಲಿಂಗಧಾರಿಣಿಯಾದ ಸುಕುಮಾ ರಿಯನ್ನು ಹಡೆದಳು. ಜನನವಾದ ವಾರ್ತೆಯನ್ನು ಗಿರಿರಾಜನು ಕೇಳಿ ಬಂದು ಶಿಶುವನ್ನು ನೋಡಿ ಸಂತೋಷಪಟ್ಟು ತಮ್ಮ ಕುಲಗುರುವಿನಿಂದ

ದೀಕ್ಷೆ ಮಾಡಿಸಿ, ಉಮೆ ಯೆಂದು ನಾಮಕರಣವನ್ನು ಮಾಡಿದನು. ಈ
ಗಿರಿಜಾತೆಯು ನಗರಾಜನ ಮನೆಯಲ್ಲಿ ಶಿವನ ಪುಣ್ಯವೇ ಸಾಕಾರವಾಗಿ ವೃ
ದ್ಧಿಗೊಳ್ಳುತ್ತಿರುವಂತೆಯೂ, ಶಂಕರನ ಮೋಹನಮಂತ್ರಶಕ್ತಿಯೇ ಬೆ
ಳೆಯುತ್ತಿರುವಂತೆಯೂ, ಶಿವನ ಸೌಖ್ಯಸಾರವೇ ಹೆಣ್ಣಿನ ರೂಪದಿಂದ
ಅಭಿವೃದ್ಧವಾಗುತ್ತಿರುವಂತೆಯೂ, ಸೌಂದರ್ಯತೇಜೋವೈಭವದಿಂದ ಬೆ
ಳೆಯುತ್ತಿದ್ದಳು. ಬಾಲ್ಯವನ್ನು ಕಳೆದು ಯೌವನಾವಿರ್ಭಾವಗೊಂಡ ಪಾ
ರ್ವತಿಯ ಕಪೋಲಗಳಲ್ಲಿ ಕೆಂಪು ಮೂಡಿತು. ಕೆಂಕುಳಲ್ಲಿ ಪದ್ಮವಾಸನೆ
ಯ ಬೆವರು ಹುಟ್ಟಿತು. ಮುಖದಲ್ಲಿ ಲಾವಣ್ಯವೀಚಿಯು ತೇಲಾಡ
ಹತ್ತಿತು. ದೀರ್ಘವಾದ ನಯನಗಳು ತುದಿಯಲ್ಲಿ ಕೆಂಪನ್ನು ತಾಳಿದುವು.
ನಡುವು ಸಣ್ಣನಾಯಿತು. ತೊಡೆಗಳು ನುಣುಪಾದುವು. ಮಾತಿನಲ್ಲಿ
ಸೊಗಸು ಹೆಚ್ಚಿತು. ನಡಗೆಯು ಮಂದವಾಯಿತು. ನಗೆಯಲ್ಲಿ ನಾಚಿ
ಕೆಯು ಬೆರೆಸಿತು. ಎದೆಗಳು ಉಬ್ಬೇರಿದುವು. ಪ್ರತಿಯೊಂದು ಅಂಗ
ವೂ ಸಲ್ಲಕ್ಷಣಕ್ಕೆ ತಕ್ಕಂತೆ ದುಂಡಾಗಿ ಮಿರುಗುತ್ತಿರಲು, ಅಗಜಾತೆಯು
ಶೃಂಗಾರದ ಗಣಿಯಾಗಿಯೂ, ಲಾವಣ್ಯದ ಹೊಳೆಯಾಗಿಯೂ, ಸೌಂದ
ರ್ಯದ ನಿಧಿಯಾಗಿಯೂ, ಮಾಂಗಲ್ಯದ ಮನೆಯಾಗಿಯೂ, ನೋಂಪಿನ ಬೀ
ಡಾಗಿಯೂ, ಮೆರೆಯುತ್ತಿದ್ದಳು. ಆಗಳೊಂದಾನೊಂದು ದಿವಸ ನಾರದ
ಮಹರ್ಷಿಯು ವೀಣೆಯನ್ನು ಬಾಜಿಸುತ್ತ ಆಕಾಶಮಾರ್ಗದಿಂದಿಳಿದು ನಗ
ರಾಜನರಮನೆಗೆ ಬಂದನು. ಅರಸನು ಋಷಿಯನ್ನು ಕಂಡು ನಮಸ್ಕರಿ
ಸಿ, ಅಂತಃಪುರಕ್ಕೆ ಕರೆದುಕೊಂಡುಹೋಗುತ್ತಿರಲು, ಇದಿರಾಗಿ ಪಾರ್ವತಿ
ಯು ಬಂದಳು. ನಾರದನು ಕಂಡು ಥಟ್ಟನೆ ದೇವಿಯ ಪಾದಾರವಿಂದಕ್ಕೆ
ನಮಸ್ಕರಿಸಿದನು. ಪರ್ವತರಾಜನಾದರೋ ಇದೇನಾಶ್ಚರ್ಯವೆಂದು ಬೆರಗಾ
ಗಿ, ವಂದ್ಯರಾದ ತಾವು ನನ್ನ ಮಗಳಿಗೆ ನಮಸ್ಕರಿಸುವುದೆಂದರೇನು ?
ಎಂದು ಕೇಳಿದನು. ಅದಕ್ಕೆ ನಾರದರ್ಷಿಯು— "ಗಿರಿರಾಜನೆ! ದೇವ
ಗಂಗೆಯು ಆಕಾಶದಿಂದಿಳಿದುಬಂದಮಾತ್ರದಿಂದಲೇ ಅದಕ್ಕೆ ಆಕಾಶವು ತಾ
ಯಿಯಾಯಿತೆ? ಕಲ್ಪವೃಕ್ಷವು ಹುಟ್ಟಿರುವ ಮಾತ್ರದಿಂದಲೇ ಅದಕ್ಕೆ
ನಂದನವನವು ಜನನಿಯಾಗುವುದೇ? ಅದರಂತೆಯೇ ಜಗದಂಬಿಕೆಯು
ಕಾರ್ಯಕಾರಣಸಂಬಂಧದಿಂದ ನಿಮ್ಮ ಮನೆಯಲ್ಲಿ ನೆಲಸಿದ್ದ ಮಾತ್ರದಿಂದಲೇ

ನಿಮಗೆ ಮಗಳಾಗಿ ಹೋದಳೆ? ಶಿವಪತ್ನಿಯು ದಕ್ಷಯಾಗದಲ್ಲಿ ದೇಹವನ್ನು ಬಿಟ್ಟ ಬಳಿಕ ನಿನ್ನ ಪತ್ನಿಗೆ ಕೊಟ್ಟಿದ್ದ ವರವನ್ನು ಪರಿಪಾಲಿಸುವುದಕ್ಕಾಗಿ ಆಕೆಯ ಗರ್ಭವನ್ನು ಪ್ರವೇಶಿಸಿದ್ದಳು; ದೇವಿಯ ವಿಯೋಗದಿಂದ ಪರಶಿವನು ಹೇಮಕೂಟಪರ್ವತದೊಳಗೆ ತುಂಗಭದ್ರಾ ತೀರದಲ್ಲಿ ಆತ್ಮಾರಾಮನಾಗಿ ತಪಸ್ಸಿನಲ್ಲಿ ಕುಳಿತಿರುವನು; ನೀನು ಈ ತಾಯಿಯನ್ನು ಸಾಮಾನ್ಯಳೆಂದು ತಿಳಿಯಬೇಡ; ಈಕೆಯ ಸಂಬಂಧದಿಂದ ನಿಮ್ಮ ವಂಶವೆಲ್ಲ ಪಾವನವಾಯಿತು. ನೀವು ಸತಿಪತಿಗಳು ಕೃತಾರ್ಥರಾದಿರಿ. ಶಿವನ ಬಳಿಗೆ ಈ ಮಹಾದೇವಿಯನ್ನು ಕಳಿಸಿಕೊಡಿ'' ಎಂದು ಪೂರ್ವಸಂಬಂಧವನ್ನೆಲ್ಲ ತಿಳುಹಿಸಿ ಮರ್ಯಾದೆಯಿಂದ ಬೀಳ್ಕೊಂಡು ಹೊರಟು ಹೋದನು. ಸತಿಪತಿಗಳು ಪಾರ್ವತಿಯನ್ನು ಪರಾಶಕ್ತಿಯ ಪರಾವತಾರವೆಂದು ತಿಳಿದು, ಭಯಭಕ್ತಿಯಿಂದಾದರಿಸಿ, ಆಕೆಯ ಇಷ್ಟಾನುಸಾರವಾಗಿ ತಪೋವನಕ್ಕೆ ಕಳಿಸಿಕೊಟ್ಟರು. ಗಿರಿಜೆಯು ತಾಯಿಯ ಪಾದಕ್ಕೆ ನಮಸ್ಕರಿಸಿ ತಂದೆಯೊಡನೆ ಪುಷ್ಪವಿಮಾನಾರೂಢಳಾಗಿ ಸಖಿಯರೊಡನೆ ಹೇಮಕೂಟಪರ್ವತಕ್ಕೆ ಬಂದಳು. ಆ ಪರ್ವತವು ನಾನಾತರುಲತಾನಿಕುರುಂಬದಿಂದ ನಿಬಿಡವಾಗಿ, ಶಾಂತಗಳಾದ ಹುಲಿ ಕರಡಿ ಕಾಡ್ಗೋಣ ಕಪಿ ಕಡವೆ ಕಾಡಾನೆ ಮೊದಲಾದ ಮೃಗಗಳಿಂದಲೂ, ಗಿಳಿ ನವಿಲು, ಹಂಸೆ, ಕೋಗಿಲೆ ಚಕ್ರ ಚಕೋರ ಗೌಜಿಗ ಮೊದಲಾದ ಪಕ್ಷಿಗಳ ಸಮೂಹದಿಂದಲೂ ಕೂಡಿ ಮನೋಹರವಾಗಿದ್ದಿತು. ಆ ಬೆಟ್ಟದಮೇಲೆ ಕವಿದು ಚಿಗುರೇರಿ ಕೆಂಪಾದ ಮರಗಳೇ ಜಡೆಗಳಂತೆಯೂ, ಸೂರ್ಯ ಚಂದ್ರಕಾಂತಶಿಲೆಗಳೇ ಕಣ್ಣುಗಳಂತೆಯೂ, ಕಾಳ್ಗಿಚ್ಚೇ ಫಾಲನೇತ್ರದಂತೆಯೂ, ಕಂಠಪ್ರದೇಶದಲ್ಲಿರುವ ಕಗ್ಗಲ್ಲೇ ಕತ್ತಿನ ವಿಷದಂತೆಯೂ, ಮುಚ್ಚಿಕೊಂಡಿರುವ ಹಿಮವೇ ತೊಡೆವ ವಿಭೂತಿಯಂತೆಯೂ, ದೊಡ್ಡದೊಡ್ಡ ಗುಂಡುಗಳ ಸಾಲೇ ರುಂಡಮಾಲೆಯಂತೆಯೂ ಇರುತ್ತಿರಲು, ಹೇಮಕೂಟವು ಸಮಾನರೂಪದಿಂದ ಶಿವನಹಾಗೆ ಕಾಣುತ್ತಿದ್ದಿತು. ಇವರ ಸೌಂದರ್ಯವನ್ನು ದೂರದಿಂದಲೂ ನೋಡುತ್ತಾ ತಾಳುಬೆಟ್ಟಕ್ಕೆ ಬರಲು, ನಾನಾಜಲಚರಗಳಿಂದಲೂ ತೆರೆ ನೊರೆಗಳಿಂದಲೂ ಕೂಡಿ ಮಂಗಳಮಯವಾಗಿ ಹರಿಯುತ್ತಿರುವ ತುಂಗಭದ್ರಾನದಿಯು ಕಾಣಿಸಿತು. ಅದರಲ್ಲಿರುವ ದೊಡ್ಡದೊಡ್ಡ ನೊರೆಗಳ ಗು

ಡ್ಡಿಯೇ ಕೈಯ ಕಲಶದಂತೆಯೂ, ದುಂಡಾದ ಬಿಳಿದಾವರೆಹೂವುಗಳು ದರ್ಪಣಗಳಂತೆಯೂ, ನೀರಿನ ಹನಿಗಳು ಮುತ್ತಿನ ಅಕ್ಷತೆಯಂತೆಯೂ, ನೀರಿನ ಮೊರೆತವೇ ವಾದ್ಯಧ್ವನಿಯಂತೆಯೂ, ಜಲಚರಗಳೇ ಪರಿಜನರಂತೆಯೂ, ಸುಳಿಗಳೇ ಆರತಿಯ ತಟ್ಟೆಗಳಂತೆಯೂ, ಕಾಣ್ಬರುತ್ತಿರಲು, ಶಿವನ ಪಟ್ಟದರಾಣಿಯು ತಾನಿರುವ ಬೆಟ್ಟಕ್ಕೆ ಬರುತ್ತಿರುವಳೆಂಬುದನ್ನು ಕೇಳಿ ಸಂತೋಷದಿಂದ ಸಕಲ ಮಂಗಲದ್ರವ್ಯಗಳೊಡನೆ ನದೀನಾರಿಯು ಇದಿರ್ಗೊಳ್ಳುವುದಕ್ಕೆ ಸಿದ್ಧಳಾಗಿರುವಂತೆ ತೋರುತ್ತಿದ್ದಳು. ಆ ನದಿಯ ಇಕ್ಕೆಲದಲ್ಲೂ ಫಲಭಾರದಿಂದ ಹಲಸು ನಿಂಬೆ ಮಾವು ನೇರಿಲು ದಾಳಿಂಬೆ ಖರ್ಜೂರ ಕಿತ್ತಳೆ ಬಾಳೆ ತೆಂಗು ಅಡಕೆ ಬೇಲ ಹತ್ತಿ ಮೊದಲಾದ ಮರಗಳು ಬಾಗಿ ನಿಂತಿರಲು, ತುಂಗಭದ್ರೆಯು ಪಾರ್ವತಿಯ ಪಾದಕ್ಕೆ ವಿವಿಧ ಫಲಾವಳಿಗಳನ್ನರ್ಪಿಸಿ ದೀರ್ಘದಂಡವಾಗಿ ನಮಸ್ಕರಿಸುವಂತೆ ತೋರುತ್ತಿದ್ದಳು. ಆ ನದಿಯ ಸೊಗಸನ್ನು ನೋಡಿ ಮುಂದಕ್ಕೆ ಹೋಗಲು, ಶಿವನು ನೆಲಸಿರುವ ಮಹಾಮಹಿಮಾಶ್ರಯವಾದ ಪಂಪಾಕ್ಷೇತ್ರವು ಕಾಣಿಸಿತು. ಅಲ್ಲಿ ವಿಮಾನವನ್ನು ನಿಲ್ಲಿಸಿ ಇಳಿದರು. ಪರ್ವತರಾಜನು ಮುಂದಾಗಿ ಹೋಗಿ, ಶಿವನು ಕುಳಿತಿದ್ದ ಆಶ್ರಮದ ಹೊರಬಾಗಿಲಲ್ಲಿ ಕಾದಿದ್ದ ನಂದೀಶ್ವರನನ್ನು ಕಂಡು ಪಾದಕ್ಕೆ ನಮಸ್ಕರಿಸಿ, ತನ್ನ ಆಗಮನದ ಉದ್ದೇಶವನ್ನು ಬಿನ್ನೈಸಿ, ಆತನಪ್ಪಣೆಯನ್ನು ಪಡೆದು, ಬಳಿಕ ಮಗಳನ್ನು ಕುರಿತು— ತಾಯೀ! ಇದುವರೆಗೆ ನಿನ್ನ ಪವಿತ್ರವಾದಾಶ್ರಯದಿಂದ ನಾವು ಸುಖಿಸಿದೆವು. ನಮ್ಮ ವಂಶವು ಉದ್ಧಾರವಾಯಿತು. ನಿನ್ನ ಪತಿಯು ಯೋಗಿಯಾಗಿ ಈ ಗುಹಾಂತರದಲ್ಲಿರುವನು. ಆತನನ್ನೊಲಿಸಿಕೊಂಡು ನಿನ್ನಿಷ್ಟಾರ್ಥವನ್ನು ಸಾಧಿಸಿಕೊಳ್ಳುವುದಕ್ಕಾಗಿ ನೀನು ಹೇಗೆ ನಡೆದುಕೊಳ್ಳಬೇಕೋ ಅದನ್ನು ತಿಳಿದು ನಡೆದುಕೊಳ್ಳೆಂದು ಹೇಳಿ, ಜಯೆ ವಿಜಯೆ ಎಂಬ ಇಬ್ಬರು ಸಖಿಯರನ್ನು ಜತೆಗೆ ಬಿಟ್ಟು, ತಾನು ಅಪ್ಪಣೆಯನ್ನು ಪಡೆದು ಪುರಾಭಿಮುಖನಾಗಿ ಹಿಂತಿರುಗಿದನು. ಪಾರ್ವತಿಯು ಪಂಪಾಕ್ಷೇತ್ರದ ಮಹಾಋಷ್ಯಾಶ್ರಮದ ಚೆಂದವನ್ನೆಲ್ಲ ನೋಡಿ ಹರ್ಷಗೊಂಡಳು. ಎತ್ತ ನೋಡಿದರೂ ಹೋಮಕುಂಡದಿಂದ ಆಕಾಶಕ್ಕೇಳುವ ಹೊಗೆ, ಎಲ್ಲಿ ನೋಡಿದರೂ ವೇದಮಂತ್ರಘೋಷ, ಎತ್ತ ತಿರುಗಿದರೂ ಪೂಜೋಪಕರ

ಣಗಳನ್ನಣಿಮಾಡುವ ಋಷಿಕುಮಾರಿಯರು, ರುದ್ರಾಕ್ಷಗಳನ್ನು ಪೋಣಿಸುವ ತರುಣರು, ನಾರುಡೆಗಳನ್ನು ತೊಳೆಯುವ ಅಂಗನೆಯರು, ದರ್ಭಾಸನಗಳನ್ನು ಸಿದ್ಧಮಾಡುವ ವೃದ್ಧರುಗಳು, ಹೂವುಗಳನ್ನೆತ್ತುತ್ತಿರುವ ಬಾಲಿಕೆಯರು, ಕಣ್ಣಿಗೆ ಕಾಣಿಸುತ್ತಿದ್ದರು. ಅಲ್ಲಿರುವ ಕಪಿಗಳು ಋಷಿಗಳಾಶ್ರಮಕ್ಕೆ ನಾನಾವಿಧಫಲಗಳನ್ನೂ ದರ್ಭೆಗಳನ್ನೂ ಸಮಿತ್ತುಗಳನ್ನೂ ತೆಗೆದುಕೊಂಡು ಹೋಗಿ ಒಪ್ಪಿಸಿ, ವೃದ್ಧರ ಪಾದಗಳನ್ನೊತ್ತಿ ಸೇವಿಸಿ, ಮುನಿಗಳಪ್ಪಣೆಯಂತೆ ನಡೆದುಕೊಳ್ಳುತ್ತಿದ್ದುವು. ಅಲ್ಲಿ ಗಾಳಿಯು ಬಿರುಸಾಗಿ ಬೀಸುತ್ತಿರಲಿಲ್ಲ, ತುಂಬಿಯು ಹೂವುಗಳನ್ನು ತುಳಿದು ಕೆಂದಿಸುತ್ತಿರಲಿಲ್ಲ, ಸೂರ್ಯನು ಬಿಸಿಲನ್ನು ತೀಕ್ಷ್ಣವಾಗಿ ಚೆಲ್ಲುತ್ತಿರಲಿಲ್ಲ, ಕಾಳ್ಕಿಚ್ಚು ಹೊತ್ತಿ ಬೇಯಲು ಧೈರ್ಯಗೊಳ್ಳುತ್ತಿರಲಿಲ್ಲ, ಮೋಡಗಳು ಬಿರುಮಳೆಯನ್ನು ಹೊಯ್ಯುತ್ತಿರಲಿಲ್ಲ; ಸಣ್ಣಿಲಿಗಳು ಬೆಕ್ಕುಗಳೂ ಹಾವುಗಳು ಕೀರಗಳು ಒಂದುಕಡೆ ಕೂಡಿ ಆಟವಾಡುತ್ತಿರುವುವು. ತೋಳ ನರಿ ಮೊಲಗಳು ಒಂದು ಕಡೆಯೂ, ಆನೆ ಸಿಂಹಗಳು ಬೇರೊಂದು ಕಡೆಯೂ, ಹುಲ್ಲೆ ಹುಲಿಗಳು ಮಗದೊಂದು ಸ್ಥಲದಲ್ಲೂ, ಶರಭ ಭೇರುಂಡಗಳು ಇನ್ನೊಂದು ಬಳಿಯಲ್ಲಿಯೂ ಜಾತಿ ವೈರವನ್ನು ಬಿಟ್ಟು ಪರಸ್ಪರ ವಿನೋದಗಳಿಂದ ಕಾಲಹರಣ ಮಾಡುತ್ತಿರುವುವು. ಆ ಪುಣ್ಯಾಶ್ರಮದ ಪ್ರಭಾವವು ಹೇಗಿರಬಹುದು! ಇಂತಪ್ಪ ಋಷ್ಯಾಶ್ರಮವನ್ನು ನಗಜಾತೆಯು ನೋಡಿ ಭಕ್ತಿಸ್ನಿಗ್ಧಮನಸ್ಕಳಾಗಿ ಮುಂದರಿದು, ನಿಶ್ಶಬ್ದವಾಗಿರುವ ಪರಶಿವಾಶ್ರಮವನ್ನು ಹೊಕ್ಕು, ತೇಜೋಮೂರ್ತಿಯಾಗಿ ಅಂತರ್ದೃಷ್ಟಿಯಿಂದ ಕರ್ಪೂರದ ರಾಶಿಯಂತೆ ಕುಳಿತಿದ್ದ ಮಹಾದೇವನನ್ನು ಕಂಡಳು. ಆನಂದಾತಿರೇಕದಿಂದ ದೇಹದಲ್ಲಿ ರೋಮಾಂಚವಾಗಿ ನಯನದಲ್ಲಿ ಬಾಷ್ಪಗಳು ತುಂಬಿದುವು. ದೂರದಲ್ಲೇ ದೀರ್ಘದಂಡನಮಸ್ಕಾರ ಮಾಡಿ, ಭಯಭಕ್ತಿಯಿಂದ ಸ್ತುತಿಸಿ, ಸಮೀಪಕ್ಕೆ ಬಂದು, ಏಕಾಗ್ರಚಿತ್ತದಿಂದ ಪೂಜಿಸತೊಡಗಿದಳು. ಪ್ರತಿದಿನವೂ ಉಷಃಕಾಲಕ್ಕೆ ತುಂಗಭದ್ರಾನದಿಯಲ್ಲಿ ಸ್ನಾನ ಮಾಡಿ, ನಾರುಮಡಿಯನ್ನುಟ್ಟು, ಹಣೆಗೆ ಶುಭ್ರವಾದ ಭಸಿತವನ್ನು ಧರಿಸಿ, ಕಂಠದಲ್ಲಿ ರುದ್ರಾಕ್ಷಮಾಲೆಯನ್ನು ತಾಳಿ, ಆಗತಾನೇ ಅರಳಿದ ಹೂವುಗಳನ್ನೂ ಚಿಗುರಾದ ಬಿಲ್ವವನ್ನೂ ಆರಿಸಿ ಎ

ತ್ತಿ ತಂದು ಸರಗಳನ್ನು ಮಾಡಿ, ಶಿವನ ಪಾದಾದಿಸರ್ವಾಂಗಕ್ಕೂ ಅಲಂಕ
ರಿಸಿ, ನಮಿಸಿ, ಸ್ತುತಿಸುತ್ತಿರ್ದಳು. ಇತ್ತ ಲೋಕದಲ್ಲಿ ತಾರಕಾಸುರ
ನೆಂಬ ಖೂಳರಾಕ್ಷಸನೊಬ್ಬನು ಬ್ರಹ್ಮನ ವರದಿಂದ ಪ್ರಬಲಿಸಿ, ಸ್ವರ್ಗ
ಮರ್ತ್ಯ ಪಾತಾಳಗಳನ್ನೆಲ್ಲ ಜೈಸಿ, ಇಂದ್ರಾದಿದಿಕ್ಪಾಲಕರನ್ನೆಲ್ಲ ಬಡಿ
ದೋಡಿಸಿ, ಅವರ ದುರ್ಗಗಳನ್ನೆಲ್ಲ ತನ್ನ ತಾಬ್ಯವನ್ನಾಗಿ ಮಾಡಿಕೊಂಡ
ನು. ದೇವತೆಗಳೆಲ್ಲರೂ ವೇಷಾಂತರವನ್ನು ಧರಿಸಿ, ತಮ್ಮ ತಮ್ಮ ಹೆಂಡ
ತಿಯರೊಡಗೂಡಿ ಮೇರುಪರ್ವತದ ಗುಹೆಗಳೊಳಗೆ ಅಡಗಿಕೊಂಡು ಕಾ
ಲಯಾಪನೆ ಮಾಡುತ್ತಿದ್ದು, ಬ್ರಹ್ಮನ ಬಳಿಗೆ ಹೋಗಿ, ದೈನ್ಯದಿಂದ-
"ಸೃಷ್ಟಿಕರ್ತನೇ! ನಿನ್ನ ವರದಿಂದ ಹೆಚ್ಚಿಕೊಂಡಿರುವ ತಾರಕಾಸುರ
ನು ನಮ್ಮೆಲ್ಲರನ್ನೂ ಯುದ್ಧದಲ್ಲಿ ಸೋಲಿಸಿ, ನಮ್ಮ ಸಂಪತ್ತನ್ನೆಲ್ಲ ಕಿತ್ತು
ಕೊಂಡು ಓಡಿಸಿಬಿಟ್ಟನು. ಇದನ್ನು ಮಹಾವಿಷ್ಣುವಿನೊಡನೆ ನಾವು ತಿ
ಳಿಸಿಕೊಳ್ಳಲು, ಆತನು ಆರೇಳು ಸಾವಿರ ವರ್ಷಗಳವರೆಗೆ ತಾರಕನೊಡನೆ
ಕಾದು ಗೆಲ್ಲಲಾರದೆ, ಕೊನೆಗೆ ಚಕ್ರವನ್ನು ಪ್ರಯೋಗಿಸಿ, ಅದನ್ನೂ ಮು
ರಿಸಿಕೊಂಡು ಓಡಿಹೋಗಿ ಕ್ಷೀರಸಮುದ್ರದಲ್ಲಿ ಅವಿತುಕೊಂಡನು. ನಮ
ಗೆ ಇನ್ನು ಗತಿಯೇನೆಂದು ಯೋಚಿಸಿ, ಭಯದಿಂದ ನಿಮ್ಮ ಬಳಿಗೆ ಓಡಿ
ಬಂದಿರುವೆವು" ಎಂದು ಬಿನ್ನೈಸಿದರು. ಬ್ರಹ್ಮನು ಕೇಳಿ, ದೇವತೆಗಳ
ನ್ನು ಕಾಲೋಚಿತವಚನಗಳಿಂದ ಸಮಾಧಾನಗೊಳಿಸಿ,- "ಎಲೆ ದೇವತೆ
ಗಳಿರಾ! ಆ ತಾರಕನು ಸಾಮಾನ್ಯನಲ್ಲ, ಹಿಂದೆ ಅವನು ಅತ್ಯಂತ ನಿ
ಷ್ಠೆಯಿಂದ ಘೋರತಪಸ್ಸಿಗೆ ಕುಳಿತನು, ಅವನ ಉಗ್ರತ್ವವನ್ನು ಅ
ಷ್ಟಿಷ್ಟೆಂದು ಹೇಳುವುದಕ್ಕಾಗುತ್ತಿರಲಿಲ್ಲ, ಆ ತಪೋಜ್ವಾಲೆಯಿಂದ
ಗಿರಿ ವನ ದುರ್ಗಗಳೆಲ್ಲ ಹೊತ್ತಿಕೊಂಡುವು, ಕೊನೆಗೆ ಆ ಉರಿಯು ಜ
ಗತ್ತನ್ನೆಲ್ಲ ಆವರಿಸಿತು, ಆಗ ನಾನು ಶಿವನ ಬಳಿಗೆ ಹೋಗಿ, ಇದೇನು ಮ
ಹಾವಿಪತ್ತು ಸಂಭವಿಸಿತೆಂದು ಕೇಳಲು,- ಇದು ತಾರಕನ ತಪೋಜ್ವಾಲೆ
ಯೆಂತಲೂ, ಅವನ ಬಳಿಗೆ ನೀನು ಹೋಗಿ ಅವನು ಕೇಳಿದ ವರವನ್ನು
ಕೊಟ್ಟು ತಪಸ್ಸನ್ನು ಬಿಡಿಸಿಬಾರೆಂತಲೂ ಶಿವನು ನನಗೆ ಆಜ್ಞಾಪಿಸಿ
ದನು. ಅದರಂತೆಯೇ ನಾನು ತಾರಕಾಸುರನ ಬಳಿಗೆ ಹೋಗಿ, "ತಪ
ಸ್ಸನ್ನು ಬಿಡು, ನಿನ್ನಿಷ್ಟಾರ್ಥವನ್ನು ಕೇಳು" ಎಂದು ಹೇಳಲು, ಅವ

ನು ಕಣ್ಣನ್ನು ಬಿಟ್ಟು, ನನ್ನನ್ನು ಸ್ತುತಿಸಿ, "ನಾನು ಎಂದಿಗೂ ಸಾಯದೆ ಇರುವಂತೆ ವರವನ್ನು ಕೊಡು" ಎಂದು ಪ್ರಾರ್ಥಿಸಿದನು. ನಾನಾದರೊ- "ಇದೇನಯ್ಯಾ! ಜಾತಸ್ಯಮರಣಂಧ್ರುವಂ ಎಂಬ ಪ್ರಮಾಣವಿರುವಂತೆ ಹುಟ್ಟಿದವನು ಸತ್ತೇತೀರಬೇಕು; ಹೀಗಿರುವಲ್ಲಿ ಇಂತಹ ಅಸಾಧ್ಯವಾದ ವರವನ್ನು ಬೇಡಬಹುದೆ? ಇದನ್ನು ಬಿಟ್ಟು ಬೇರೆ ಯಾವುದಾದರೊಂದು ವರವನ್ನು ಬೇಡು" ಎಂದು ನುಡಿದೆನು. ಅದಕ್ಕವನು- "ಹಾಗಾದರೆ ಶಿವನ ವೀರ್ಯವನ್ನು ವಿಷ್ಣುಬ್ರಹ್ಮೇಂದ್ರಾದಿಗಳು ಧರಿಸಿ ಅದರಿಂದ ಹುಟ್ಟಿದ ೭ ದಿನದ ಕುಂದನಿಂದ ಮಾತ್ರ ನನ್ನ ಮರಣವಾಗಲಿ, ಇತರರಿಂದಾಗದಂತೆ ವರವನ್ನು ಕೊಡು" ಎಂದು ಬೇಡಿದನು. ಹಾಗೆಯೇ ಆಗಲೆಂದು ವರವಿತ್ತೆನು. ಆದುದರಿಂದ ತಾರಕನು ಇದುವರೆಗೂ ಯಾರಿಂದಲೂ ಮರಣಗೊಳ್ಳದೆ ಕಂಟಕನಾಗಿರುವನು. ಶಿವನ ವೀರ್ಯೋತ್ಪನ್ನನಾದ ಕುಮಾರನಾದರೆ ಅವನನ್ನು ಕೊಲ್ಲುವನು. ಪರಶಿವನು ಹೇಮಕೂಟಪರ್ವತದಲ್ಲಿ ತಪಸ್ಸಿನೊಳಗಿರುವನು. ಪಾರ್ವತಿಯು ಆತನ ಸೇವೆಯನ್ನು ಮಾಡುತ್ತಿರುವಳು. ಮಹಾದೇವನು ಪಾರ್ವತಿಯೊಡನೆ ಕೂಡಿದಲ್ಲದೆ ನಮ್ಮ ಇಷ್ಟಾರ್ಥಸಿದ್ಧಿಯಾಗುವಹಾಗಿಲ್ಲ; ಇದಕ್ಕುಪಾಯವೇನೆಂಬುದನ್ನು ವಿಷ್ಣುವಿನಿಂದ ತಿಳಿಯುವ; ನಡೆಯಿರಿ" ಯೆಂದು ಬ್ರಹ್ಮನು ಎಲ್ಲರನ್ನೂ ಕರೆದುಕೊಂಡು ಕ್ಷೀರಸಮುದ್ರದಲ್ಲಿರುವ ವಿಷ್ಣುವಿನ ಬಳಿಗೆ ಹೋದನು. ಎಲ್ಲರನ್ನೂ ಕಂಡು ಆಗಮನಕಾರಣವೇನೆಂದು ಹರಿಯು ಕೇಳಲು, ಬ್ರಹ್ಮನು- ತಾರಕನ ಹಾವಳಿಯನ್ನೂ, ಅವನ ನಾಶಕ್ಕೆ ಶಿವಕುಮಾರನ ಆವಶ್ಯಕತೆಯನ್ನೂ, ಪ್ರಕೃತದಲ್ಲಿ ಶಿವನು ತಪಸ್ಸಿನಲ್ಲಿರುವುದನ್ನೂ, ಆತನ ತಪೋಭಂಗದಿಂದ ತಮ್ಮ ಕಾರ್ಯ ಸಿದ್ಧಿಯಾಗಬೇಕಾಗಿರುವುದನ್ನೂ ತಿಳಿಸಿ, ಇದಕ್ಕೆ ತಕ್ಕ ಉಪಾಯವನ್ನು ಹೇಳಬೇಕೆಂದು ಕೇಳಿಕೊಂಡನು. ವಿಷ್ಣುವು ಹಾಗೆಯೇ ಯೋಚಿಸಿ, ಶಿವನ ತಪಸ್ಸನ್ನು ಕೆಡಿಸಿ ಅವನ ಮನಸ್ಸನ್ನು ದೇವಿಯಲ್ಲಿ ಮೋಹಗೊಳ್ಳುವಂತೆ ಮಾಡಬೇಕಾದರೆ, ಜಗನ್ಮೋಹಕನಾದ ತನ್ನ ಮಗ ಮನ್ಮಥನಿಂದಲ್ಲದೆ ಇತರರಿಂದ ಸಾಧ್ಯವಲ್ಲವೆಂದು ಯೋಚಿಸಿ, ಅದನ್ನು ಎಲ್ಲರೊಡನೆಯೂ ಹೇಳಿ, ಅದೇ ಉಪಾಯವು ತಕ್ಕುದೆಂದು ಸರ್ವರೂ ನಿರ್ಧರಿಸಲು, ಮನ್ಮಥನನ್ನು ಬರಮಾಡಿ

ದನು. ಆತನು ಬಂದು ಹರಿಬ್ರಹ್ಮರಿಗೆ ನಮಸ್ಕರಿಸಿ, ತನ್ನನ್ನು ಬರಮಾಡಿನ ಕಾರಣವೇನೆಂದು ಬೆಸಗೊಂಡನು. ಹರಿಯು– ಹೇಮಕೂಟಪರ್ವತದಲ್ಲಿ ತಪೋನಿರತನಾಗಿ ಕುಳಿತಿರುವ ಶಿವನನ್ನು ಬಹಿರ್ಮುಖಗೊಳಿಸಿ, ಪಾರ್ವತಿಯಲ್ಲನುರಕ್ತನಾಗುವಂತೆ ನೀನು ಮಾಡಿಬರಬೇಕೆಂದು ಅಪ್ಪಣೆಕೊಟ್ಟನು. ಅದನ್ನು ಕೇಳಿದ ಕೂಡಲೇ ಮನ್ಮಥನಿಗೆ ಕಿವಿಯಲ್ಲಿ ಬಾಣವನ್ನು ಪ್ರಯೋಗಿಸಿದಂತಾಯಿತು. ಭಯದಿಂದ ಬೆರಗಾಗಿ, "ದೇವಾ! ಬೆಂಕಿಯಮೇಲೆ ತರಗೆಲೆಯನ್ನಟ್ಟದಂತೆ ನನ್ನನ್ನು ಶಿವನಮೇಲೆ ಬಾಣಪ್ರಯೋಗವನ್ನು ಮಾಡುವುದಕ್ಕಾಗಿ ಹೋಗೆಂದು ನೀವು ಬೆಸಸಿ ಕಳುಹಬಹುದೆ? ನಾನು ಶಿವನನ್ನು ಕೆಣಕಿ ಉರಿದು ಹೋಗದೆ ಬದುಕುವುದುಂಟೆ?" ಎಂದು ದೈನ್ಯದಿಂದ ಕೇಳಿಕೊಂಡನು. ಆದರೂ ಹರಿಬ್ರಹ್ಮಾದಿಗಳು ಜಗನ್ನಾಶವಾಗುತ್ತಿರುವ ಸ್ಥಿತಿಯನ್ನೂ, ಅದರ ಉಳಿವು ನಿನ್ನಿಂದಲೇ ಆಗಬೇಕಾಗಿರುವುದೆಂಬುದನ್ನೂ, ಇಂಥ ಮಹಾಕಾರ್ಯಕ್ಕಾಗಿ ನಿನ್ನೊಬ್ಬನ ಪ್ರಾಣವನ್ನು ಕೊಡುವುದು ಅತ್ಯಂತ ಕೀರ್ತಿಪ್ರತಿಷ್ಠೆಗೆ ಕಾರಣವಾಗುವುದೆಂಬುದನ್ನೂ, ಬಹುವಿಧವಾಗಿ ಮನ್ಮಥನಿಗೆ ಹೇಳಿ ಒಡಂಬಡಿಸಿದರು. ಮದನನು ತಥಾಸ್ತು ಎಂದು ನಮಸ್ಕರಿಸಿ, ಅಪ್ಪಣೆ ಪಡೆದು ಹೊರಟನು. ವಿಷ್ಣುವು ಸರ್ವದೇವತೆಗಳಿಗೂ ಧೈರ್ಯವನ್ನು ಹೇಳಿ ಕಳಿಸಿಕೊಟ್ಟನು ಎಂಬಲ್ಲಿಗೆ ೭ ನೇ ಅಧ್ಯಾಯವು ಸಂಪೂರ್ಣವು.

## ೮ ನೇ ಅಧ್ಯಾಯವು

### ಕಾಮದಹನವು.

ಎಲೆ ಸಿದ್ಧರಾಮೇಶನೆ! ಬಳಿಕ ಮನ್ಮಥನು ತನ್ನ ಪಟ್ಟಣಕ್ಕೆ ಬಂದು, ಮಿತ್ರನಾದ ಮಂದಮಾರುತನನ್ನು ಸಮೀಪಕ್ಕೆ ಕರೆದು, ಸಖನೆ! ಈಗ ನಾವು ಶಿವನ ಮೇಲೆ ಯುದ್ಧಕ್ಕೆ ಹೋಗಬೇಕಾಗಿದೆ; ಸೇನಾಪತಿಯಾದ ವಸಂತನನ್ನು ಸಕಲ ಸೈನ್ಯದೊಡನೆ ಕೂಡಿ ಬರಬೇಕೆಂದು ತಿಳಿಸು, ಎಂಬದಾಗಿ ಬೆಸಸಿ ಕಳಿಸಿದನು. ಅದರಂತೆಯೇ ಅವನು ಹೋಗಿ ತಿಳಿಸಲು, ವಸಂತನು ಸರ್ವಸೇನೆಯೊಡನೆ ಸನ್ನದ್ಧನಾಗಿ ಹೊರಟನು. ಮಾವಿನ ಮರಗಳು ಚಿಗುರೇರಿದುವು. ಮಲ್ಲಿಗೆಯು ಮೊಗ್ಗೇರಿತು.

ಸಂಪಗೆಯು ಸೊಂಪೇರಿತು. ಬಕುಳವು ಮುಕುಳಿತವಾಯಿತು. ಪಾದರಿಯು ಹೂವೇರಿತು. ಅದರ್ಗಂಚೆಯು ಸುವಾಸನೆಯನ್ನು ಬೀರಿತು. ಅಶೋಕೆಯು ಚಿಗುರ್ಗವಿದಿತು. ತಾವರೆಗಳಲು ಅರಲೇರಿದುವು. ಇವುಗಳ ವೈಭವದಿಂದ ವಸಂತನು ಬಂದು ತನ್ನ ದೊರೆಗೆ ನಮಸ್ಕರಿಸಿ ಸರ್ವವೂ ಸಿದ್ಧವಾಗಿದೆ ಯೆಂದು ಬಿನ್ನೈಸಿ ನಿಂತುಕೊಳ್ಳಲು, ಮದನರಾಜನು ಹೇಮಕೂಟದಲ್ಲಿ ತಪಸ್ಸಿನಲ್ಲಿರುವ ಶಿವನನ್ನು ಸೋಲಿಸುವುದಕ್ಕಾಗಿ ನಾವು ಅಲ್ಲಿಗೆ ಪ್ರಯಾಣ ಮಾಡಬೇಕಾಗಿದೆಯಾದುದರಿಂದ ನಿನ್ನನ್ನು ಕರತರಿಸಿದೆನು ಎಂದು ಹೇಳಿ, ತಾನೂ ಹೊರಡಲನುವಾದನು. ಹಣೆಗೆ ಪುಷ್ಪಧೂಳಿಯ ತಿಲಕವನ್ನಿಟ್ಟು, ಕೊರಲಿಗೆ ಪರಿಮಳದ ಹೂವಿನ ಸರವನ್ನು ಧರಿಸಿ, ತಾವರೆ ನೂಲಿನಲ್ಲಿ ನೇಡ ಕಾಸೆಯನ್ನು ಬಿಗಿದು ಕಟ್ಟಿ, ಮಾವಿನ ಚಿಗುರಿನ ಕೊಡೆಯನ್ನು ಹಿಡಿದು, ಕೆಂಪು ಗಣಗಿಲೆಯ ಗೊಂಡೆಯನ್ನು ಮೇಲೆ ಸಿಕ್ಕಿಸಿ, ಕೆಳಗೆ ಮೊಲ್ಲೆಯ ಮುಗ್ಗೆಂಬ ಸಣ್ಣಗೆಜ್ಜೆಗಳನ್ನು ಕಟ್ಟಿರುವ ಕಬ್ಬಿನ ಬಿಲ್ಲನ್ನು ಹಿಡಿದು, ಅದಕ್ಕೆ ತುಂಬಿಗಳಿಂದ ಕೂಡಿದ ಮುಡಿವಾಳವನ್ನು ಸಿಂಜಿನಿಯಾಗಿ ಕಟ್ಟಿ, ತಾವರೆ, ಅಶೋಕೆ, ಮಾವು, ಮಲ್ಲಿಗೆ, ಕನ್ನೈದಿಲೆ, ಎಂಬ ಪಂಚಬಾಣಗಳನ್ನು ಬತ್ತಳಿಕೆಯಲ್ಲಿ ತುಂಬಿ ಹೂವಿನ ಸರಗಳಿಂದಲೂ ತಾಳೆಯ ಎಸಳುಗಳಿಂದಲೂ ಅಲಂಕರಿಸಿರುವ ಪುಷ್ಪರಥವನ್ನು ಪತ್ನಿಯಾದ ರತಿಯೊಡನೆ ಕೂಡಿ ಹತ್ತಿದನು. ಪಾರ್ಶ್ವಗಳಲ್ಲಿ ಸುಂದರಿಯರು ನಿಂತು ತಾವರೆಯ ಛತ್ರವನ್ನು ಹಿಡಿದು ಹೊಂಬಾಳೆಯ ಚಾಮರವನ್ನು ಬೀಸುತ್ತಿದ್ದರು. ಆ ಮದನರಾಜನ ಸುತ್ತಲೂ ಚಿಗುರಿದ ಮಾವಿನ ಮರಗಳೆಂಬ ಆನೆಗಳೂ, ಗಿಳಿಗಳೆಂಬ ಕುದುರೆಗಳೂ, ಚಕ್ರವಾಕಪಕ್ಷಿಗಳೆಂಬ ರಥಗಳೂ, ಸ್ತ್ರೀ ಸಮೂಹವೆಂಬ ಕಾಲಾಳುಗಳೂ, ಚಂದ್ರನೆಂಬ ಮಂತ್ರಿಯೂ, ವಸಂತನೆಂಬ ದಳವಾಯಿಯೂ, ಭ್ರಮರಧ್ವನಿ ಯೆಂಬ ಭೇರೀಶಬ್ದವೂ, ಕೋಕಿಲಸ್ವರವೆಂಬ ಕಹಳಾಧ್ವನಿಯೂ, ಚಾಳಂಕಪಕ್ಷಿಯ ಕೂಗೆಂಬ ಸ್ತುತಿಪಾಠಕರ ಧ್ವನಿಯೂ ಬಳಸಿ ಬರುತ್ತಿದ್ದುವು. ಮೇಲೆ ಕುಳಿತು ಕೂಗುವ ಕೋಗಿಲೆಯ ಶಬ್ದವು ಗರ್ಜನೆಯಂತೆಯೂ, ಮೇಲೆ ಮುಚ್ಚಿರುವ ಕೆಂಪಾದ ಚಿಗುರು ಹಣೆಯಮೇಲಿಕ್ಕಿದ ಚಂದ್ರದ ಪುಡಿಯಂತೆಯೂ, ಭ್ರ

ಮರಗಳು ಹಾರಾಡಿ ಮುತ್ತಿರುವ ಪುಷ್ಪ ಮಕರಂದವೇ ಮದೋದಕದಂತೆಯೂ, ಮಂದಮಾರುತದಿಂದ ಹಿಂದೆ ಮುಂದೆ ತೂಗಾಡುವ ನೀಟಾದ ಎಳೆಗೊಂಬೆಯೇ ಸುಂಡಿಲಂತೆಯೂ, ಹೂವಿನ ಗೊಂಚಲುಗಳೇ ಕೊಂಬಿನಂತೆಯೂ, ಮೇಲೆ ನೆಟ್ಟಗೆ ನಿಗುರಿ ನಿಂತ ಚಿಂದು ಕೊನೆಯೇ ಧ್ವಜದಂತೆಯೂ ಕಾಣುತ್ತಿರುವ ಮಾವಿನ ಮರಗಳೆಂಬ ಆನೆಗಳು ಮದನರಾಜನ ಪಕ್ಕದಲ್ಲಿ ಹೊರಟವು. ಕೊರಲಿನಲ್ಲಿರುವ ಕಪ್ಪುಗೆರೆಯೇ ವಾಘೆ (ಲಗಾಮು) ಯಾಗಿಯೂ, ರೆಕ್ಕೆಗಳೇ ಮರಕತರತ್ನದಿಂದ ಕೆತ್ತಿದ ಪಕ್ಷರಕ್ಷೆ(ಕೋಗೀರು)ಯಾಗಿಯೂ, ಮಧುರವಾದ ಅವುಗಳ ಧ್ವನಿಯೇ ಕೆನೆಪಶಬ್ದವೂ, ನಡಗೆಯ ಸೊಗಸೇ ೫ ಬಗೆಯ ಗಮನವಾಗಿಯೂ, ಇರುತ್ತಿರುವ ಗಿಳಿಗಳ ಗುಂಪೆಂಬ ಕುದುರೆಗಳು ಭೂಮಿಯಮೇಲೂ ಆಕಾಶದಮೇಲೂ ಬರುತ್ತಲಿದ್ದವು. ಸತಿಪತಿಗಳಾದ ತಮ್ಮಿಬ್ಬರ ದೇಹಗಳೇ ಎರಡು ಗಾಲಿಗಳು, ಎರಡರ ಮನಸ್ಸೂ ಒಂದಾಗಿ ಸೇರಿರುವುದೇ ಅಚ್ಚು, ಧ್ವನಿಯೇ ಚೀತ್ಕಾರವು, ಗಾಳಿಯಿಂದ ಮೇಲಕ್ಕೆ ಹಾರಿರುವ ಗರಿಯೇ ಮೇಲಣ ಧ್ವಜವಾಗಿರಲು, ಚಕ್ರವಾಕಗಳೆಂಬ ರಥಗಳು ಮನ್ಮಥರಾಜನ ಪಕ್ಕಗಳಲ್ಲಿ ನಡೆಗುಂಡುವು. ಬಗ್ಗಿದ ಹುಬ್ಬುಗಳೇ ಬಿಲ್ಲಾಗಿಯೂ, ಕಡೆಗಣ್ಣೋಟವೇ ಬಾಣವಾಗಿಯೂ, ತೋಳುಗಳೇ ದಂಡಾಯುಧವಾಗಿಯೂ ತೀಕ್ಷ್ಣವಾದ ಉಗುರುಗಳೇ ಬಾಕುವಾಗಿಯೂ, ಕಸ್ತೂರಿಯ ಬೊಟ್ಟೇ ಗುರಾಣಿಯಾಗಿಯೂ, ರೋಮರಾಜಿಯೇ ಕತ್ತಿಯಾಗಿಯೂ, ಕಾಣುತ್ತಿರುವ ಸ್ತ್ರೀಯರೆಂಬ ಕಾಲಾಳ್ಗಳು ಕಾಮರಾಜನ ಪುಷ್ಪರಥದ ಒತ್ತಿನಲ್ಲಿ ಬರುತ್ತಿದ್ದರು. ಎಲ್ಲರಿಗೂ ಮುಂಗಡೆಯಲ್ಲಿ ಸುಳಿಗಾಳಿಯು ಹೋಗುತ್ತಿದ್ದನು. ವಸಂತನ ಆಜ್ಞೆಯ ಮೇರೆ ಸೇನೆಯೆಲ್ಲವೂ ನಡೆಯುತ್ತಿದ್ದಿತು. ಸಕಲ ಪಕ್ಷಿಗಳ ಕಲಕಲವು ದಿಙ್ಮಂಡಲವನ್ನೆಲ್ಲ ವ್ಯಾಪಿಸಿತು. ಧೂಳಿಯು ಆಕಾಶಮಂಡಲದಲ್ಲಿ ಮಬ್ಬುಗವಿಸಿತು. ಇದೋ ಮದನರಾಜನ ಮದದಾನೆಗಳು ಬರುತ್ತಿರುವವು! ದಾರಿ ಬಿಡಿರಿ, ಇದೋ ಕಾಮರಾಜನ ಜಯಖಡ್ಗವು ಬರುತ್ತಿದೆ! ಇದೋ ಅಂಗಜನ ಕಠಾರಿಯು ಬರುತ್ತಿದೆ! ಎಂದು ಋಷಿಜನಕ್ಕೆ ಎಚ್ಚರಿಕೆಯನ್ನು ಹೇಳುವಂತೆ ಮುಂಗಡೆಯಲ್ಲಿ ಕೋಗಿಲೆಗಳೆಂಬ ಕಹಳೆಗಳು ಕೂಗು

ತ್ತಿದ್ದುವು. ಮನ್ಮಥನ ಆಗಮನಧ್ವನಿಯನ್ನು ಕೇಳಿ ಹುತ್ತುಗಳಲ್ಲೂ ನೆಲದಲ್ಲೂ ಮೊಳೆಗಳಲ್ಲೂ ಅಡಗಿದ್ದ ಶರೀರದ ತಪಸ್ವಿಗಳೆಲ್ಲರೂ ಭಯದಿಂದ ವಿಹ್ವಲರಾಗಿ ಗೋಳಿಡುತ್ತ ಗಡಗಡನೆ ನಡುಗಿದರು. ಬೆವರಿನಿಂದ ಹಣೆಯ ವಿಭೂತಿಯು ಕರಗಿ ತೊಟ್ಟಿಕ್ಕುತ್ತಲೂ, ಜಡೆಗಳು ಬಿಚ್ಚಿ ನೆಲದಲ್ಲಿ ಎಳೆಯುತ್ತಲೂ, ಕೊರಲಲ್ಲಿ ಶಿವನಾಮೋಚ್ಚರಣೆಯು ಗದ್ಗದಿಸುತ್ತಲೂ ಇರುವ ಋಷಿಗಳು ಯೋಗದಂಡಕಮಂಡಲುಜಪಮಾಲೆ ಮೊದಲಾದುವುಗಳನ್ನು ಅಲ್ಲಲ್ಲೇ ಮರೆತು ಎದ್ದು, ಇದೋ ಮನ್ಮಥನು ಬಂದನು! ಏಳಿರಿ! ಏಳಿರಿ! ಎಂದು ಕೂಗಿಕೊಳ್ಳುತ್ತ, ಬುದ್ಧಿಗೆಟ್ಟು, ಕೈಕಾಲ್ಗಳು ನಡುಗುತ್ತಿರಲು, ಹಿಂತಿರುಗಿ ತಿರುಗಿ ನೋಡುತ್ತಿದ್ದರು. ಮದನನು ದಾರಿಯಲ್ಲಿ ತನ್ನ ಮೇಲೆ ಮುಳಿದು ಜಿತೇಂದ್ರಿಯರೆಂದು ಹೆಮ್ಮೆಗೊಳ್ಳುತ್ತಿದ್ದವರನ್ನು ಮೋಹಪಾಶದಿಂದ ಕಟ್ಟಿ ಸೆರೆಯಿಡುತ್ತಲೂ, ಶರಣಾಗತರಾಗಿ ಕಾಣಿಕೆಗಳನ್ನು ಕೊಟ್ಟ ತಪಸ್ವಿಗಳನ್ನು ಹಿಂಸಿಸದೆ ಬಿಟ್ಟುಬಿಡುತ್ತಲೂ, ಶಿವನು ಕುಳಿತಿದ್ದ ಆಶ್ರಮದ ಕಡೆಗೆ ಸಾಗಿದನು. ಪಂಪಾಕ್ಷೇತ್ರದ ಪುಣ್ಯಭೂಮಿಯನ್ನು ಮೆಟ್ಟಿದ ಕೂಡಲೇ ಕಾಮರಾಜನ ಪಟ್ಟದಾನೆಯು ಮುಗ್ಗರಿಸಿತು. ನರಿಗಳು ಅಡ್ಡಲಾಗಿ ಬಂದು ಕೂಗಿದುವು. ಮೊಲವು ಸೇನೆಯ ಮಧ್ಯದಲ್ಲಿ ನುಗ್ಗಿ ಓಡಿಹೋಯ್ತು. ಆನೆ ಕುದುರೆಗಳ ಕಣ್ಣಿನಿಂದ ನೀರು ಸುರಿದಿತು. ಹೀಗೆ ಕಾಮನ ಸೇನೆಯಲ್ಲಿ ಅಶುಭಸೂಚಕವಾದ ಉತ್ಪಾತಗಳು ಕಾಣಿಸಿಕೊಂಡುವು. ಇದನ್ನು ಕಂಡ ವಸಂತನು ತನ್ನ ರಾಜನೊಡನೆ ಮುಂದೆ ಬರುವ ಕೇಡನ್ನು ಸೂಚಿಸಿ ಹಿಂತಿರುಗುವುದೇ ಶ್ರೇಯಸ್ಕರವೆಂದು ತಿಳಿಸಿದನು. ಕಾಮನಾದರೋ– ದೇವತೆಗಳಿಗೆ ನಂಬುಗೆಯನ್ನು ಕೊಟ್ಟು ಬಂದ ಬಳಿಕ ಹಿಂತಿರುಗಿ ಹೋಗುವುದು ಸರಿಯಲ್ಲ; ಆದುದಾಗಲಿ, ಹೋಗುವುದೇ ಸರಿಯೆಂದು ನುಡಿದನು. ಸೇನೆಯು ಮುಂದೆ ಸಾಗುತ್ತಿರುವಲ್ಲಿ ಹೇಮಕೂಟದ ಮಹಾದ್ವಾರವನ್ನೂ ಅಲ್ಲಿ ಕಾಪಿರುವ ನಂದೀಶನನ್ನೂ ಕಣ್ಣಿನಲ್ಲಿ ಕಂಡರು. ಸೇನೆಯು ಅಲ್ಲೇ ನಿಂತಿತು. ಮದನನು ನಂದೀಶನನ್ನು ಮೀರಿ ಒಳಗೆ ನುಗ್ಗುವುದಕ್ಕೆ ಧೈರ್ಯವಿಲ್ಲದೆ ಮುಂದೆ ಗತಿಯೇನೆಂದು ಯೋಚಿಸುತ್ತ ನಿಂತುಕೊಂಡನು. ಸ್ವಲ್ಪ ಕಾಲಾನಂತರ ಹೂವನ್ನು ಎತ್ತಿ ತೆರುವು

ದಕ್ಕಾಗಿ ಹೊರಗೆ ಹೋಗಿದ್ದ ಪಾರ್ವತೀದೇವಿಯು ಕೈಯಲ್ಲಿ ಹೂಕರಡಿ ಗೆಯನ್ನು ಹಿಡಿದು ಸಖಿಯರೊಡನೆ ಬರುತ್ತಿರಲು, ಮದನನು ಕಂಡನು. ಓಡಿ ಹೋಗಿ ಪಾದಕ್ಕೆ ನಮಸ್ಕರಿಸಿದನು. ನೀನಾರೆಂದು ಪಾರ್ವತಿಯು ಕೇಳಲು, ತಾನು ಮನ್ಮಥನೆಂತಲೂ, ನಂದೀಶನನ್ನು ಕಂಡು ಶಿವನ ಬಳಿಗೆ ಹೋಗಲು ಧೈರ್ಯವಿಲ್ಲದೆ ನಿಂತಿರುವೆನೆಂತಲೂ, ಬಿನ್ನವಿಸಿದನು. ಈಕಾರ್ಯವು ತನಗೆ ಪ್ರಯೋಜಕವಾದುದೆಂದು ಪಾರ್ವತಿಯು ಮನಸ್ಸಿನಲ್ಲಿ ಭಾವಿಸಿಕೊಂಡು, "ಒಳ್ಳೇದು ನನ್ನ ಪುಷ್ಪವಿಮಾನದ ಮರೆಯಲ್ಲಿ ಅವಿತುಕೊಂಡು ನೀನು ಒಳಗೆಬಾ, ದೇವತೆಗಳ ಮಾತಿಗಾಗಿ ಬಂದವನಾದುದರಿಂದ ಅದನ್ನು ಹೇಗಾದರೂ ಮಾಡಿ ನೀನು ನೆರವೇರಿಸಲೇ ಬೇಕು; ಒಂದು ವೇಳೆ ಈಪ್ರಯತ್ನದಲ್ಲಿ ನಿನಗೆ ಅಪಾಯವುಂಟಾಗುವಂತಿದ್ದರೂ ಅದಕ್ಕಾಗಿ ಚಿಂತಿಸಬೇಡ, ನನ್ನನ್ನು ನಂಬಿ ಬಾ" ಎಂದು ಹೇಳಿ ಸಮಾಧಾನಪಡಿಸಿ, ಧೈರ್ಯಗೊಟ್ಟು, ಒಳಗೆ ಕರೆದುಕೊಂಡು ಹೋದಳು. ಕಾಮನು ದೂರದಲ್ಲೇ ಶಿವನನ್ನು ಕಂಡು ನಡುಗಿಹೋದನು ಪಾರ್ವತಿಯು ಪರಶಿವನ ಪಾದಪೂಜೆಯಲ್ಲಿ ತೊಡಗಿದಳು. ಆ ದೇವಿಯ ಮರೆಯಲ್ಲಿ ಮನ್ಮಥನು ನಿಂತು, ತನ್ನ ಬಿಲ್ಲಿನಲ್ಲಿ ಉನ್ಮದನ, ಮದನ, ಮೋಹನ, ವಶೀಕರಣ, ಸಂತಪನ, ಎಂಬ ಮಹಾಪಂಚಬಾಣಗಳನ್ನು ಒಂದೊಂದಾಗಿ ಜೋಡಿಸಿ ಪ್ರಯೋಗಿಸಿದನು. ಅದು ಶಿವನನ್ನು ನೋಂಕಲು ಸಮರ್ಥವಾಗಲಿಲ್ಲ. ಆಗ ಕಾಮನು ೫ ಬಾಣಗಳನ್ನೂ ಒಂದೇ ಆವೃತ್ತಿ ಜೋಡಿಸಿ ಕರ್ಣಾಂತವಾಗಿ ಸೆಳೆದು ಮಹಾಗರ್ಜನೆಯನ್ನು ಮಾಡಿ ದಕ್ಷಿಣಾಮೂರ್ತಿಯಮೇಲೆ ಪ್ರಯೋಗಿಸಿದನು. ಅವುಗಳ ಏಟಿನಿಂದ ಶಿವನು ಬಹಿರ್ಮುಖನಾದನು. ತನ್ನ ಅಂತಶ್ಚಿತ್ತವನ್ನು ಕೆಡಿಸಿದವನಾರೆಂದು ಕೋಪಗೊಂಡು ಕಣ್ದೆರೆದನು. ಕೋಟಿಸಿಡಿಲಿನ ತೇಜಸ್ಸಿನಂತೆ ಹೊಳೆದು ಹೊರಸೂಸಿದ ಅಗ್ನಿನೇತ್ರದ ಜ್ವಾಲೆಯು ಇದಿರಿನಲ್ಲಿದ್ದ ಮನ್ಮಥನಮೇಲೆ ಭುಗಿಲು ಭುಗಿಲೆಂದು ಪ್ರಸರಿಸಿದ ಕೂಡಲೇ ಕಾಳ್ಕಿಚ್ಚಿಗೆ ಸಿಕ್ಕಿದ ತರಗೆಲೆಯಂತೆ ಕಾಮನು ಪುರುಪುರನೆ ಸುಟ್ಟು ಬೂದಿಯಾದನು. ಶಿವನು ಆ ಬೂದಿಯನ್ನೆಲ್ಲ ತೆಗೆದು ದೇಹಕ್ಕೆ ತೊಡೆದುಕೊಂಡನು. ಮಗ್ಗುಲಲ್ಲಿ ನಿಂತಿದ್ದ ಪಾರ್ವತಿಯನ್ನು ನೋಡಿದರೂ ಮಾತನಾಡಿಸದೆ ಬಯಲಾದನು. ಹೊರ

ಗೆ ನಿಂತಿದ್ದ ರತಿಯು ತನ್ನ ಪತಿಯು ಶಿವನ ಕೋಪಾಗ್ನಿಯಿಂದ ಸುಟ್ಟು ಹೋದನೆಂಬ ವಾರ್ತೆಯನ್ನು ಕೇಳಿ ಬಾಯ್ಬಿಡಿದುಕೊಳ್ಳುತ್ತ ಗೋಳಿಟ್ಟು ಒಳಗೆ ಬಂದು, ತನ್ನ ಗಂಡನು ಸುಟ್ಟುಹೋದಸ್ಥಲದಲ್ಲಿ ಬಿದ್ದು ಹೊರಳಾಡುತ್ತಿದ್ದಳು.– "ಅಯ್ಯೋ! ನನ್ನ ಕಾಮಧೇನುವನ್ನು ಹೊಡೆದುಹಾಕಿದರೇ! ನನ್ನ ಕಲ್ಪವೃಕ್ಷವನ್ನು ಕಡಿದುಹಾಕಿದರೇ! ನನ್ನ ಸೌಂದರ್ಯ ರಸದ ಕೆರೆಯನ್ನು ಒಡೆದುಹಾಕಿದರೇ! ನನ್ನ ಮುಕ್ತಾಫಲವನ್ನು ಬೆಂಕಿಯಲ್ಲಿ ಸುಟ್ಟುಹಾಕಿದರೇ! ನನ್ನ ಶೃಂಗಾರದ ಬಳ್ಳಿಯನ್ನು ಕುಡಿಗಡಿದು ಹಾಳ್ಮಾಡಿದರೇ! ಅಯ್ಯೋ! ನನಗಿನ್ನು ಗತಿಯಾರು? ದುರ್ಬೋಧೆಯನ್ನು ಮಾಡಿ ನನ್ನ ಗಂಡನನ್ನು ಕಳಿಸಿ ಸುಡಿಸಿದ ದೇವತೆಗಳಿಗೆ ಈ ನನ್ನ ಹೊಟ್ಟೆಯ ಕಿಚ್ಚು ಹೋಗಿ ತಟ್ಟಬಾರದೆ? ಅಯ್ಯೋ! ನನ್ನ ಪ್ರಾಣಕಾಂತನೇ! ನನ್ನ ಸೊಬಗಿನ ಮನೆಯೇ! ನನ್ನ ವಿಲಾಸದ ನಿಧಿಯೇ! ನನ್ನ ಚಿನ್ನವೆ! ನನ್ನ ರನ್ನವೆ! ನನ್ನ ಸೌಭಾಗ್ಯದ ಗಣಿಯೆ! ನಿನ್ನನ್ನಗಲಿ ನಾನಿನ್ನು ಬದುಕಬಹುದೆ? ಅಯ್ಯೋ! ನಿನ್ನ ಸುಕುಮಾರಶರೀರವು ಕಿಚ್ಚಿಗೀಡಾಗಬಹುದೆ? ನಿನ್ನ ಪುಷ್ಪಬಾಣವನ್ನೂ, ಗಿಳಿಗುದುರೆಯನ್ನೂ ಎಲ್ಲಿ ಕಳಿಸಿದೆ? ಚಂದ್ರನನ್ನು ಏನು ಮಾಡಿದೆ? ತಂಗಾಳಿಗೂ ವಸಂತನಿಗೂ ಯಾವ ಕೆಲಸವನ್ನು ನೇಮಿಸಿದೆ? ನಿನ್ನ ಪಕ್ಷಿಸೇನೆಗೆಲ್ಲ ಏನೆಂದು ಸಮಾಧಾನಪಡಿಸಿದೆ?" ಎಂದು ಮೊದಲಾಗಿ ಹಂಬಲಿಸುತ್ತಿದ್ದಳು. ಇದನ್ನು ನೋಡಿ ಕಾಮನ ಚತುರಂಗಸೈನ್ಯವೂ ಕಣ್ಣೀರ್ಗರೆದಿತು. ರತಿಯು ಅತ್ತು ಅತ್ತು ಮೂರ್ಛೆಗೊಂಡು ಚೇತರಿಸಿಕೊಂಡೆದ್ದು ತಲೆಗೆದರಿ ಕೈ ಚಾಚಿ, ಅಯ್ಯೋ ದೇವತೆಗಳಿರಾ! ನನ್ನ ಗಂಡನ ಪ್ರಾಣವನ್ನು ನೀಗಿಸಿದ ನೀವು ಬದುಕಿಸಬಾರದೆ? ಲೋಕರಕ್ಷಕನಾದ ಎಲೆ ಮಾವನೇ (ವಿಷ್ಣುವೇ) ನಿನ್ನ ಸುತನಾದ ನನ್ನ ಪ್ರಿಯನನ್ನು ಉದ್ಧರಿಸಬಾರದೆ? ನಿನ್ನ ಸೊಸೆಯಾದ ನನ್ನ ವೈಧವ್ಯದುಃಖವನ್ನು ಹೋಗಲಾಡಿಸಿ ಕಾಪಾಡದಿದ್ದರೆ ನಿನಗೆ ಲೋಕರಕ್ಷಕನೆಂಬ ಹೆಸರೇತಕ್ಕೆ? ಅಯ್ಯೋ! ಪಾರ್ವತಿಯೆ! ಜಗನ್ಮಾತೆಯೆ! ನಿನ್ನ ನಂಬುಗೆಯ ಮೇಲೆ ಒಳಗೆಬಂದು ಪ್ರಾಣವನ್ನು ಕಳೆದುಕೊಂಡ ನನ್ನ ಗಂಡನನ್ನು ನೀನಾದರೂ ಬದುಕಿಸಬಾರದೆ?" ಎಂದು ಒರಲಿದಳು. ಪಾರ್ವತಿಯು ರತಿ

ಯು ಮಹಾಶೋಕವನ್ನು ನೋಡಿ ಕರಗಿಹೋದಳು. ಈ ಪಶ್ಚಾತ್ತಾಪದ ಜತೆಗೆ ಆ ದೇವಿಯ ಮನಸ್ಸಿನಲ್ಲಿ ಇನ್ನೂ ಬೇರೆ ಬೇರೆ ಚಿಂತೆಗಳು ಕಾಲಿಕ್ಕಿದುವು. ತಾನು ತಾಯ್ತಂದೆಗಳನ್ನು ಬಿಟ್ಟು ಬಂದುದು ೧, ಮನ್ಮಥನಿಗೆ ನಂಬುಗೆ ಕೊಟ್ಟು ಕರೆದುಕೊಂಡುಹೋದುದು ೨, ಶಿವನು ತನ್ನನ್ನು ನೋಡಿದರೂ ಮಾತನಾಡಿಸದುದು ೩, ರತಿಯ ಗೋಳನ್ನು ನೋಡುವ ಸಂಕಟವು ೪, ಇದರಮೇಲೆ ರತಿಯು ಗಂಡನನ್ನು ಕರೆದುಕೊಂಡು ಹೋಗಿ ಸುಡಿಸಿಬಿಟ್ಟಳೆಂಬ ಲೋಕಾಪವಾದವು ೫, ಮತ್ತೂ ಈನಡುಗಾಡಿನಲ್ಲಿ ಈ ಯೌವನ ದಶೆಯೊಳಗೆ ವಾಸಮಾಡಿಕೊಂಡಿರಬೇಕಾದದ್ದು ೬, ಶಿವನು ಆ ಸ್ಥಲವನ್ನೇ ಬಿಟ್ಟು ಹೊರಟುಹೋಗಿ ತನ್ನ ಸಂಕಲ್ಪಕ್ಕೆ ಭಂಗವನ್ನುಂಟುಮಾಡಿದುದು ೭, ಹೀಗೆ ಈ ಏಳರಂಟಕ್ಕೆ ನಾನು ಗುರಿಯಾದೆನಲ್ಲ ಎಂದು ಮರುಗಿದಳು. ಬಳಿಕ ಮಹಾಕರುಣದಿಂದ ರತಿಯನ್ನು ಕರೆದು ತಲೆ ಸವರಿ, ಅಮ್ಮಾ! ನಿನ್ನ ಗಂಡನನ್ನು ನಾವು ಕರೆದುಕೊಂಡು ಬಂದುದೇನೋ ನಿಜ, ಅದಕ್ಕಾಗಿ ನಾನು ತಪಸ್ಸನ್ನಾದರೂ ಮಾಡಿ ಶಿವನನ್ನು ಮೆಚ್ಚಿಸಿ, ನಿನ್ನ ಗಂಡನನ್ನು ನಿನ್ನಲ್ಲಿಗೆ ಕಳಿಸಿಕೊಡುತ್ತೇನೆ, ಶೋಕಿಸಬೇಡ, ಎಂದು ಹೇಳಿ, ಸಮಾಧಾನಪಡಿಸಿ ಕಳುಹಿಸಿ, ಮುಂದೆ ಶಿವನನ್ನು ಒಲಿಸಿಕೊಳ್ಳುವ ಮಾರ್ಗವೇನೆಂಬುದನ್ನು ಯೋಚಿಸತೊಡಗಿದಳು. ಎಂಬಲ್ಲಿಗೆ ಎಂಟನೇ ಅಧ್ಯಾಯವು ಸಂಪೂರ್ಣವು.

---

## ೯ ನೇ ಅಧ್ಯಾಯವು.

### ಗಿರಿಜಾವಿವಾಹ ಪ್ರಯತ್ನವು.

ಎಲೆ ಸಿದ್ಧರಾಮೇಶನೆ! ಕೇಳು, ಬಳಿಕ ಪಾರ್ವತಿಯು ಪಂಪಾಕ್ಷೇತ್ರದೊಳಗೆಲ್ಲ ತನ್ನ ತಪಸ್ಸಿಗೆ ಅನುಕೂಲವಾದ ಸ್ಥಲವಾವುದೆಂಬುದನ್ನು ಹುಡುಕುತ್ತ ದಟ್ಟವಾದ ನೆಳಲಿನ ಮರಗಳ ಬುಡದಲ್ಲಿ ನಿಂತು ಶಿವನು ತನ್ನಲ್ಲಿ ತೋರಿಸಿದ ಔದಾಸೀನ್ಯವನ್ನು ನೆನೆದು ವ್ಯಸನಪಡುತ್ತ, ತನ್ನ ಸಖಿಯರಾದ ಜಯೆ ವಿಜಯೆಯರನ್ನು ಕುರಿತು—'ಪರಶಿವನಿದ್ದ ಬಳಿಗೆ ನಾನೇ ಹೋಗಿ ಸೇವೆ ಮಾಡಿಕೊಂಡಿದ್ದರೂ ನನ್ನನ್ನು ಮಾತನಾಡಿಸದೆ ತಿರಸ್ಕರಿಸಿ, ಹೊರಟುಹೋದನು, ಇರಲಿ; ಇನ್ನು ಆತನೇ ನನ್ನನ್ನು ಹು

ಡುಕಿಕೊಂಡು ಬರುವಂತೆ ಮಾಡುತ್ತೇನೆ, ನೋಡಿರಿ;" ಎಂದು ಧೈರ್ಯದಿಂದ ನುಡಿದು, ಉಚಿತವಾದ ಸ್ಥಲವೊಂದರಲ್ಲಿ ಪದ್ಮಾಸನಾಸೀನೆಯಾಗಿ ಕುಳಿತು, ಶಿವಾಯತ್ತಚಿತ್ತದಿಂದ ತಪೋಮಗ್ನಳಾದಳು. ಕಡುಬೇಸಗೆಯಲ್ಲಿ ಪರ್ವತಶಿಖರಾಗ್ರದ ಮೇಲೆ ಕುಳಿತು ಸೂರ್ಯಾತಪಕ್ಕೆ ಕಂದದೆಯೂ, ಮಳೆಗಾಲದಲ್ಲಿ ಆಲದಮರದ ಕೆಳಗೆ ಕುಳಿತು ಮಳೆಯ ಸುರಿವಿಕೆಗೆ ಅಂಜದೆಯೂ, ಹಿಮಗಾಲದಲ್ಲಿ ಸರೋವರದ ದಡದಮೇಲೆ ಕುಳಿತು ಚಳಿಗೆ ಸೆಡೆಯದೆಯೂ, ನಿಶ್ಚಲತಪಸ್ಸಿನಲ್ಲಿರುತಿದ್ದಳು. ಕೆಲವು ಕಾಲ ಕ್ಷೀರವನ್ನೂ, ಕೆಲವುಕಾಲ ಗೆಡ್ಡೆಗೆಣಸುಗಳನ್ನೂ, ಕೆಲವುಕಾಲ ತರಗೆಲೆಗಳನ್ನೂ, ಬಳಿಕ ನೀರನ್ನೂ, ವಾಯುವನ್ನೂ ಆಹಾರವಾಗಿ ತೆಗೆದುಕೊಳ್ಳುತ್ತಿದ್ದು, ಕಡೆಗೆ ಆಹಾರದ ಹಂಬಲನ್ನೇ ಬಿಟ್ಟು, ಶಿವಪಾದಧ್ಯಾನಾಮೃತವನ್ನೇ ಸವಿಯುತ್ತಲಿದ್ದಳು. ಸಂಪೂರ್ಣವಾಗಿ ಆಹಾರವನ್ನೇ ತ್ಯಜಿಸಿದ್ದರೂ ಮಹಾದೇವಿಯ ಮುಖದಲ್ಲೂ ದೇಹದಲ್ಲೂ ಕಾಂತಿಯು ಲೇಶಮಾತ್ರವೂ ಕುಗ್ಗಲಿಲ್ಲ, ಸೊಬಗು ಸೊರಗಲಿಲ್ಲ, ಸೌಂದರ್ಯವು ಸುಗ್ಗಲಿಲ್ಲ; ತಪೋಜ್ವಾಲೆಯ ತೇಜಸ್ಸು ದೇಹವನ್ನೆಲ್ಲ ಆವರಿಸಿ, ಮತ್ತಷ್ಟು ಶೋಭಾಯಮಾನವಾಗಿ ಮಾಡಿತು. ದೇವದಾನವಕಿನ್ನರಕಿಂಪುರುಷಾದಿಗಳೆಲ್ಲರೂ ಪಾರ್ವತಿಯ ತಪೋತಿಶಯವನ್ನು ಕಂಡು ಆಶ್ಚರ್ಯಪಟ್ಟು, ಭಕ್ತಿಯಿಂದ ಆಕಾಶದಲ್ಲೇ ನಮಸ್ಕರಿಸುತ್ತಿದ್ದರು. ದೇವಿಯ ಮಹಾತಪೋಜ್ವಾಲೆಯು ಆ ವನಾಂತವನ್ನೆಲ್ಲ ವ್ಯಾಪಿಸಿ, ಸೂರ್ಯಮಂಡಲದವರೆಗೂ ಹಬ್ಬಿತು. ಈ ಜ್ವಾಲೆಯಿಂದ ಜಗತ್ತೆಲ್ಲ ತತ್ತರಿಸಿತು. ಶಿವನು ಪಾರ್ವತಿಯ ಉಗ್ರತಪಶ್ಚರಣವನ್ನು ತಿಳಿದು, ಮಹಾಯತೀಶ್ವರನ ರೂಪವನ್ನು ಧರಿಸಿ, ಆಕೆಯು ಕುಳಿತಿರುವ ಪರ್ಣಶಾಲೆಯ ಬಳಿಗೆ ಬಂದನು. ಸಖಿಯರು ಥಟ್ಟನೆದ್ದು ಯತೀಶನಿಗೆ ನಮಸ್ಕರಿಸಿ, ಉಚಿತಾಸನದಲ್ಲಿ ಕುಳ್ಳಿರಿಸಿ, ಅರ್ಘ್ಯಪಾದ್ಯಾಚಮನಗಳನ್ನು ಕೊಟ್ಟು, ಗೆಡ್ಡೆಗೆಣಸು ಹಣ್ಣುಗಳನ್ನು ಮುಂದಿರಿಸಿ, ಭಕ್ತಿಯಿಂದ ಕೈಮುಗಿದು, "ಇವುಗಳನ್ನು ಸೇವಿಸಿ, ಬಹುದೂರದಿಂದ ಬಳಲಿ ಬಂದಿರುವ ದಣಿವನ್ನು ಪರಿಹರಿಸಿಕೊಳ್ಳಿರಿ" ಎಂದು ಬಿನ್ನೈಸಿದರು. ಕಪಟಯತಿಯಾದರೋ— ನಾವು ಹಣ್ಣನ್ನು ತಿನ್ನುತ್ತೇವೆ, ಅದುಹಾಗಿರಲಿ; ಈ ಸುಂದರಿಯು ಅ

ರಣ್ಯದಲ್ಲಿ ಕುಳಿತು ಇಷ್ಟು ಘೋರತಪಸ್ಸನ್ನಾಚರಿಸುವುದಕ್ಕೆ ಕಾರಣ ವೇನು? ಎಂದು ಕೇಳಿದನು. ಸಖಿಯರಾದವರೊ— ವಾರಿಕಾರನಾಗಿ ಬಂದ ನೀನು ಸತ್ಕಾರವನ್ನು ಕೈಕೊಂಡು ನಿನ್ನ ಮನೆ ಹೋಗುವುದನ್ನು ಬಿಟ್ಟು, ಈಕೆಯ ವಿಚಾರವನ್ನೆಲ್ಲ ಕೇಳುವುದಕ್ಕೆ ಕಾರಣವೇನು? ಎಂದರು. ಯತಿಯು— ಕೇಳಿದಮಾತ್ರದಿಂದಲೇ ಆದ ನಷ್ಟವೇನು? ಅಯ್ಯೋ! ಇಂತಹ ತುಂಬಿದ ಯೌವನದಲ್ಲಿ ಈ ಸೌಂದರ್ಯವತಿಯು ಕಠಿಣ ತಪಸ್ಸನ್ನು ಮಾಡುತ್ತಿದ್ದರೆ ಮರುಗಿ ಇದನ್ನು ಬಿಡಿಸುವವರು ಯಾರೂ ಇಲ್ಲದೆಹೋದರೆ? ಎಂದನು. ಯಾರೂ ಆಡದೆ ಇದ್ದ ಈ ಮಾತು ಪಾರ್ವತಿಯ ಕಿವಿಯನ್ನು ಸೋಂಕಿದಕೂಡಲೇ ಕಣ್ಣನ್ನು ತೆರೆದಳು. ಆಗ ಯತಿಯು ದೇವಿಯನ್ನು ಕುರಿತು— ಯುವತಿಯೆ! ಗಂಧಕೇಸರಿಗಳನ್ನು ಅನುಲೇಪಿಸಿಕೊಳ್ಳಬೇಕಾದ ನಿನ್ನ ಶರೀರದಲ್ಲಿ ಈ ಭಸ್ಮಲೇಪವನ್ನೂ, ಪಟ್ಟೆಪೀತಾಂಬರಗಳನ್ನು ಉಡಬೇಕಾದ ನಿನ್ನ ನಡುವಿನಲ್ಲಿ ಈ ನಾರುಮಡಿಯನ್ನೂ, ಧರಿಸಿಕೊಳ್ಳಬಹುದೆ? ಮೊಲ್ಲೆಮಲ್ಲಿಗೆ ಮಂದಾರಮೊದಲಾದ ಹೂವುಗಳನ್ನು ಮುಡಿಯಲು ಯೋಗ್ಯವಾದ ಕೇಶಪಾಶವನ್ನು ಜಡೆಗಟ್ಟಿಸಿಕೊಳ್ಳಬಹುದೆ? ಕಾಮಸುಖವನ್ನು ಪಡೆಯುವ ಈ ಯೌವನಕಾಲದಲ್ಲಿ ಈ ತಪೋದುಃಖವನ್ನು ಆಶಿಸಬಹುದೆ? ಯಾರನ್ನೊಲಿಸುವುದಕ್ಕಾಗಿ ಇದನ್ನಾಚರಿಸುತ್ತಿರುವೆ? ಎಂದನು. ಪಾರ್ವತಿಯು— ಎಲೆ ಯತಿಯೆ! ಲೋಕೇಶ್ವರನಾದ ಪರಮಶಿವನನ್ನು ಮೆಚ್ಚಿಸಿಕೊಳ್ಳುವುದಕ್ಕಾಗಿ ನಾನೀತಪಸ್ಸನ್ನು ಮಾಡುತ್ತಿರುವೆನು, ಎಂದಳು. ಅದನ್ನು ಕೇಳಿ ಯತಿಯು ಕೇಕೆಹಾಕಿ ನಕ್ಕು, ಓಹೋ! ನೀನು ತಿರುಕನನ್ನು! ಕಾಮಧ್ವಂಸಿಯನ್ನು! ವಿಷಕಂಠನನ್ನು! ಚರ್ಮಾಂಬರನನ್ನು! ಸ್ಮಶಾನವಾಸಿಯನ್ನು! ಮೋಹಿಸಿ ತಪಸ್ಸನ್ನು ಮಾಡುವೆಯಾ? ಬಲುಚೆನ್ನಾಯಿತು! ಎಂದು ನಿಂದಿಸಿ ನುಡಿಯಲು, ಪಾರ್ವತಿಯು ಕೆರಳಿ, “ಛೀ! ನೀಚನೆ! ಶಿವದೂಷಣೆಯನ್ನು ಮಾಡುವುದಕ್ಕೆ ಬಂದೆಯಾ? ತೊಲಗು” ಎಂದು ಗರ್ಜಿಸಿ ತಿರಸ್ಕರಿಸಿದಳು. ಶಿವನು ಪಾರ್ವತಿಯ ದೃಢಮನಸ್ಸಿಗೆ ಮೆಚ್ಚಿ, ನಿಜರೂಪದಿಂದ ಪ್ರತ್ಯಕ್ಷನಾದನು. ಚಂದ್ರರೇಖೆಯನ್ನು ಧರಿಸಿದ ಜಡೆಮುಡಿಯೂ, ಸರ್ಪಕುಂಡಲ ಹಾರ ಕಟಕಗಳೂ, ನಗೆಮೊಗವೂ,

ಶೂಲ ಡಮರುಗ ವರಾಭಯಹಸ್ತಗಳೂ, ಮುಕ್ಕಣ್ಣೂ, ಕೆಂದುಟಿ ಸುಲಿ ಪಲ್ಲುಗಳೂ, ಕಂಠವಿಷವೂ, ವ್ಯಾಘ್ರಗಜಚರ್ಮವಸನವೂ, ತನ್ನಲ್ಲಿ ಒಪ್ಪಿರಲು, ಕರುಣಾಮಯನಾದ ಮಹಾದೇವನು ಮಹಾತೇಜೋವಿಲಸಿತನಾಗಿ ನಗೆಗಣ್ಣಿನಿಂದ ಪಾರ್ವತಿಯನ್ನು ನೋಡಿದನು. ಗಿರಿಜೆಯು ಥಟ್ಟನೆದ್ದು ದೀರ್ಘದಂಡನಾಗಿ ನಮಸ್ಕರಿಸಿ, ಎದ್ದು ಕೈಮುಗಿದು ನಿಂತು, ಜಯಜಯ ಮಹಾದೇವ! ಜಯಜಯ ಜಗನ್ನಾಥ! ಜಯಜಯ ಕೃಪಾಪೂರ, ಜಯಜಯ ಶುಭಾಕಾರ! ಜಯಭಕ್ತಮಂದಾರ! ಜಯ ಪುಣ್ಯಮಯಚರಣ! ಎಂದು ಮೊದಲಾಗಿ ಸ್ತುತಿಸಿ, ಬಡವನಿಗೆ ಭಾಗ್ಯವೂ, ಕುರುಡನಿಗೆ ಕಣ್ಣೂ, ಹೆಳವನಿಗೆ ಕಾಲೂ ಬಂದಂತೆ ತನಗೆ ಶಿವದರ್ಶನವಾಗಲು ಹಿಗ್ಗಿ, ಮತ್ತೆ ಮತ್ತೆ ಮಣಿದಳು. ಶಿವನಾದರೊ ಅತ್ಯಂತ ಕೃಪೆಗೊಂಡು, ತನ್ನ ದಿವ್ಯಹಸ್ತದಿಂದ ಪಾರ್ವತಿಯ ಶಿರವನ್ನು ಹಿಡಿದೆತ್ತಿ, ಎಲಾ ಜಗನ್ಮಾತೆಯೆ! ನಿನ್ನ ಮನೋನಿಶ್ಚಯವನ್ನು ಪರೀಕ್ಷಿಸುವುದಕ್ಕಾಗಿಯೇ ನಾವು ಇಷ್ಟು ದಿವಸ ತಡಮಾಡಿದೆವು; ಇನ್ನು ಮುಂದೆ ನಿನ್ನಿಷ್ಟಪ್ರಕಾರ ನನ್ನ ಶರೀರದಲ್ಲಿ ಅರ್ಧಭಾಗವನ್ನೇ ನಿನ್ನದಾಗಿ ಮಾಡಿಕೊಂಡು ಒಡವೆರೆದು ಬಾಳುತ್ತ ಜಗತ್ತನ್ನು ರಕ್ಷಿಸಿಕೊಂಡಿರು; ಎಂದು ವರವನ್ನೀಯಲು, ಪಾರ್ವತಿಯು ಕೃತಜ್ಞತೆಯಿಂದ ನಮಸ್ಕರಿಸಿ, "ಸ್ವಾಮಿಾ! ಮತ್ತೊಂದು ನನ್ನ ಪ್ರಾರ್ಥನೆಯಿರುವುದು— ಮನ್ಮಥನು ನನಗಾಗಿ ತನ್ನ ಶರೀರವನ್ನು ನಿಮಗೆ ಅರ್ಪಿಸಿದನು; ಅಂತಹ ಪರೋಪಕಾರದ ಪುಣ್ಯವಾದರೂ ಈಗ ಅವನನ್ನು ಕಾಯಬಾರದೆ! ಅದುಕಾರಣ ತಾವು ಮೊದಲು ಆ ಮನ್ಮಥನ ಪ್ರಾಣದಾನವನ್ನು ಮಾಡಿ ಬಳಿಕ ನನ್ನನ್ನು ರಕ್ಷಿಸುವುದಕ್ಕಾಗಿ ವಿಷ್ಣುಬ್ರಹ್ಮೇಂದ್ರಾದಿದೇವತೆಗಳೊಡನೆ ನೀವು ಕೂಡಿ, ಗಿರೀಶನ ಅರಮನೆಗೆ ಬಂದು, ಮಹೋತ್ಸವದಿಂದ ನನ್ನ ಪಾಣಿಗ್ರಹಣ ಮಾಡಬೇಕು" ಎಂದು ಪ್ರಾರ್ಥಿಸಿದಳು. ಶಿವನಾದರೊ— ದೇವಿಯೆ! ಸರ್ವೇಶ್ವರನಾಜ್ಞೆಯು ಲೋಕದಲ್ಲಿ ಹುಸಿಯಾಗಬಾರದು. ಅದನ್ನು ಶಾಶ್ವತಗೊಳಿಸಬೇಕು. ಹಾಗಲ್ಲದೆ ವಿರೋಧಾಚರಣವನ್ನು ಮಾಡಿದವರು ಅಗ್ನಿಗೆ ಆಹುತಿಯೇ ಆಗಬೇಕು. ಹೀಗಿರುವಲ್ಲಿ ವಿರೋಧಾಚರಣೆಯಿಂದ ಸುಟ್ಟುಹೋದ ಮನ್ಮಥನನ್ನು ಮತ್ತೆ ಉಳಿಸಬಹುದೆ?

ಆದರೂ ನಿನ್ನ ಪ್ರಾರ್ಥನೆಯನ್ನು ನೆರವೇರಿಸದೆಇರುವುದಕ್ಕಿಲ್ಲವಾದುದರಿಂದಲೂ, ನನ್ನ ಆಜ್ಞೆಯು ಕೆಡದಂತೆ ಮಾಡಬೇಕಾಗಿರುವುದರಿಂದಲೂ ಮನ್ಮಥನು ರತಿ ವಿಷಯದಲ್ಲಿ ಮಾತ್ರ ಸಶರೀರನಾಗಿರುವಂತೆಯೂ, ಉಳಿದ ಜಗತ್ಸಾಮಾನ್ಯಕ್ಕೂ ಅನಂಗನಾಗಿ ಮನೋಭವನಾಗುವಂತೆಯೂ ವರವನ್ನು ಕೊಟ್ಟಿರುವೆನು; ಮತ್ತು ನಿನ್ನಿಷ್ಟದಂತೆ ಗಿರಿರಾಜನರಮನೆಯಲ್ಲಿ ವಿವಾಹವಾಗುವೆನು; ಎಂದು ವರವಿತ್ತು, ಕೈಲಾಸಕ್ಕೆ ನಡೆದನು. ಇದೆಲ್ಲವನ್ನೂ ಕಂಡು ಜಯೆ ವಿಜಯೆಯರು ಪರಮಾನಂದಗೊಂಡರು. ರತಿಯು ಪತಿಯನ್ನು ಕಂಡು ಹಿಗ್ಗಿ ಪಾರ್ವತಿಯ ಪಾದಕ್ಕೆ ನಮಸ್ಕರಿಸಿ, ಬೀಳ್ಕೊಂಡಳು. ನಡೆದ ಸುದ್ದಿಯು ಪರ್ವತರಾಜನಿಗೆ ಮುಟ್ಟಲು, ಸತಿಪತಿಗಳು ಸಂತೋಷಸಮುದ್ರದಲ್ಲಿ ಮುಳುಗಿ, ಪಟ್ಟಣವನ್ನೆಲ್ಲ ಅಲಂಕರಿಸುವಂತೆ ಅಪ್ಪಣೆ ಮಾಡಿ, ಮಗಳನ್ನು ಇದಿರ್ಗೊಂಡು ಕರೆತರುವುದಕ್ಕಾಗಿ ಕಲಶಕನ್ನಡಿಗಳಿಂದಲೂ ವಾದ್ಯವೈಭವದಿಂದಲೂ ದಂಪತಿಗಳು ಹೊರಟು, ಊರಹೊರಗೆ ಬಂದ ಜಗದಂಬಿಕೆಯನ್ನು ಕಂಡು ಪಾದಕ್ಕೆ ಮಣಿದು, ಪ್ರೀತಿಯಾಗಿ ನಮಸ್ಕರಿಸಿ ದೇವಿಯನ್ನು ತೆಗೆದೆತ್ತಿ ತಬ್ಬಿ ಮುದ್ದಾಡಿ, ಹರ್ಷಗೊಂಡರು. ಮತ್ತು "ಎಲೆ ತಾಯೆ! ತಪಸ್ಸಿನಲ್ಲಿ ಎಷ್ಟು ಬಳಲಿದೆ! ಶಿವನನ್ನು ತಪಸ್ಸಿನಿಂದ ಮೆಚ್ಚಿಸುವುದು ಸಾಮಾನ್ಯವೆ? ಹರಿಬ್ರಹ್ಮಾದಿಗಳಿಗೂ ಕೂಡ ಸುಲಭಗೋಚರನಲ್ಲದ ಮಹಾದೇವನನ್ನು ನಮ್ಮ ಮನೆಗೆ ಬರುವಂತೆ ಮಾಡಿ ನಮ್ಮ ವಂಶವನ್ನೆಲ್ಲ ಪಾವನಗೊಳಿಸಿದೆ! ನಿನ್ನ ದೆಸೆಯಿಂದ ನಾವು ಕೃತಾರ್ಥರಾದೆವು." ಎಂದು ನೊದಲಾಗಿ ನುಡಿಯುತ್ತ, ಮನೆಗೆ ಕರೆದುಕೊಂಡುಹೋದರು. ಬಾಗಿಲಲ್ಲಿ ಆರತಿಗಳನ್ನು ಬೆಳಗಿ ಪಾದವನ್ನು ತೊಳೆದು ಬಳಹೊಗಿಸಿ, ಪೀತಾಂಬರವನ್ನುಡಿಸಿ, ರತ್ನಾಭರಣಮಾಲ್ಯಾದಿಗಳಿಂದಲಂಕರಿಸಿ, ಷಡ್ರಸಾನ್ನಭೋಜನವನ್ನು ಮಾಡಿಸಿ, ಗಿರಿರಾಜಮೇನಕೆಯರು ಪಾರ್ವತಿಯಲ್ಲಿ ಪುತ್ರೀಭಾವವನ್ನು ಬಿಟ್ಟು ಪರಶಕ್ತಿ ಯೆಂಬ ಭಾವದಿಂದ ಭಕ್ತಿಯುತರಾಗಿ ಉಪಚರಿಸುತ್ತಿದ್ದರು. ಅತ್ತ ಪರಶಿವನು ಕೈಲಾಸದಲ್ಲಿ ತನ್ನ ಬಳಿಗೆ ಸಪ್ತಮಹರ್ಷಿಗಳನ್ನು ಬರಮಾಡಿಕೊಂಡು, ಗಿರಿರಾಜನ ಕುವರಿಯನ್ನು ತಾನು ಮದುವೆಯಾಗಬೇಕೆಂದು ಸಂಕಲ್ಪಿಸಿರುವೆನೆಂತಲೂ, ಅದಕ್ಕಾಗಿ ನೀವುಗಳು ಅಲ್ಲಿಗೆ ಹೋ

ಗಿ ಹೆಣ್ಣನ್ನು ಕೇಳಿ ಬನ್ನಿರೆಂತಲೂ ಹೇಳಿಕಳಿಸಿದನು. ಅವರು ಹಾಗೆಯೇ ಆಗಲೆಂದೊಪ್ಪಿ, ಸಂತೋಷದಿಂದ ಗಿರಿರಾಜನ ಬಳಿಗೆ ಬಂದರು. ಆತನು ಮಹರ್ಷಿಗಳನ್ನು ಉಚಿತರೀತಿಯಿಂದ ಸತ್ಕರಿಸಿ, ಬಂದ ಕಾರ್ಯವೇನೆಂದು ಬೆಸಗೊಂಡನು. "ಸಕಲ ಜಗದೀಶ್ವರನಾದ ಮಹಾದೇವನಿಗೆ ಜಗನ್ಮಾತೆಯಾದ ನಿನ್ನ ಕುಮಾರಿಯನ್ನು ತಂದು ಮದುವೆ ಮಾಡಿಕೊಳ್ಳಲು ಕೇಳುವುದಕ್ಕಾಗಿ ಬಂದಿರುವೆವು; ನಿನ್ನ ಮಗಳ ತಪಸ್ಸಿಗೆ ಶಿವನು ಮೆಚ್ಚಿ ಪ್ರತ್ಯಕ್ಷನಾಗಿ ಆಕೆಯ ಪ್ರಾರ್ಥನೆಯ ಮೇರೆ ಸಕಲ ದೇವಗಣದೊಡನೆ ನಿನ್ನ ಮನೆಗೆ ಬಂದು ಮದುವೆಯಾಗುತ್ತೇನೆಂದು ವರವನ್ನು ಕೊಟ್ಟಿರುವನು; ಅದುಕಾರಣವೇ ನಿನ್ನಿಷ್ಟವನ್ನು ತಿಳಿದುಬರುವುದಕ್ಕಾಗಿ ನಮ್ಮನ್ನು ಕಳಿಸಿಕೊಟ್ಟಿರುವನು" ಎಂದು ಋಷಿಗಳು ಹೇಳಿದರು. ಗಿರಿರಾಜನಾದರೊ— ಆ ತಾಯಿಯ ಮನೋನಿಶ್ಚಯವನ್ನು ನಾವು ತಡೆಯುವುದುಂಟೆ? ಅವಶ್ಯಕವಾಗಿ ಹಾಗೆಯೇ ಆಗಲಿ, ನಾನು ಕೊಡಲು ಒಪ್ಪಿದೆನು, ಇದಕ್ಕೆ ತಪ್ಪತಕ್ಕವನಲ್ಲ; ಎಂದು ಉತ್ತರ ಕೊಟ್ಟನು. ಮತ್ತು ತನ್ನ ನೆಂಟರನ್ನೆಲ್ಲ ಬರಮಾಡಿ, ವಂಶೋದ್ಧಾರಿಣಿಯನ್ನು ಶಿವನಿಗೆ ಕೊಡುವ ಮಹಾಭಾಗ್ಯವು ತಮಗೆ ದೊರೆದ ಆನಂದವಾರ್ತೆಯನ್ನು ತಿಳಿಸಿದನು. ಅವರೆಲ್ಲರೂ ಸಂತೋಷದಿಂದ ತಲೆದೂಗಿ ಅನುಮತಿಯನ್ನು ಕೊಟ್ಟರು. ಋಷಿಗಳು ತಂದಿದ್ದ ವಸ್ತ್ರಾಭರಣಗಳನ್ನು ಕೊಟ್ಟು ವೀಳೆಯ ಪ್ರಸ್ತವನ್ನು ಜರಗಿಸಿ, ನಿಶ್ಚಯತಾಂಬೂಲವನ್ನು ತೆಗೆದುಕೊಂಡು ಮರ್ಯಾದಿತರಾಗಿ ಹೊರಟರು. ಅತ್ತ ಪರ್ವತರಾಜನು ಅತ್ಯಂತ ಸಂತೋಷದಿಂದ ವಿಶ್ವಕರ್ಮನೆಂಬ ದೇವಶಿಲ್ಪಿಯನ್ನು ವಿವಾಹಮಂಟಪವನ್ನು ಚಿತ್ರವಿಚಿತ್ರವಾಗಿ ನಿರ್ಮಿಸುವುದಕ್ಕೆ ಆಜ್ಞಾಪಿಸಿದನು. ಅವನಾದರೊ ಇದು ಮಹಾದೇವನ ಮದುವೆ; ಸಾಮಾನ್ಯವಾದ ಸುರಗಿರರ ಮದುವೆಯಲ್ಲ, ಅದುಕಾರಣ ಆ ದೇವನ ಘನತೆಗೆ ತಕ್ಕಂತೆ ಮಂಟಪವನ್ನು ರಚಿಸಬೇಕು ಎಂದು ಯೋಚಿಸಿ, ವಜ್ರವೈಡೂರ್ಯಗೋಮೇಧಿಕಾದಿ ರತ್ನಗಳನ್ನು ಅಪರಿಮಿತವಾಗಿ ತರಿಸಿ, ಸ್ವರ್ಣರಜತಾದಿಗಳ ಮೇಲೆ ಕೆತ್ತಿ ಥಳಥಳಿಸುವ ಕಂಬಗಳು ಬೋದಿಗೆಗಳು ತೊಲೆಗಳನ್ನು ಮಾಡಿ ನೆಲಕ್ಕೆಲ್ಲ ಇಂದ್ರನೀಲರತ್ನಗಳನ್ನು ನೆಟ್ಟು, ವೈಡೂರ್ಯದ ವಿವಾಹಜಗತಿ

ಯನ್ನು ರಚಿಸಿ, ಮುತ್ತಿನ ಕುಚ್ಚುಗಳಿಂದಲೂ, ಚಿನ್ನದ ಕಲಶಗಳಿಂದಲೂ ರತ್ನದ ಜಾಲರಿಗಳಿಂದಲೂ, ಪದ್ಮರಾಗದ ಗೋಡೆಗಳಿಂದಲೂ, ರನ್ನ ಚಿನ್ನದ ಗೊಂಬೆಗಳಿಂದಲೂ, ಪುಷ್ಯರಾಗದ ಆನೆಗಳ ಸಾಲಿನಿಂದಲೂ, ವಿಚಿತ್ರತರದ ಸಿಂಹಶಾರ್ದೂಲಗಳಿಂದಲೂ, ನಾನಾಬಣ್ಣದ ರತ್ನಗಳಿಂದಲೂ ಅಪೂರ್ವತರವಾಗಿ ಅಲಂಕರಿಸಿದನು. ಅಲ್ಲಲ್ಲಿಗೆ ರತ್ನದರ್ಪಣಗಳನ್ನಿಟ್ಟು ಪಟ್ಟೆಯವಸ್ತ್ರದ ಮೇಲ್ಗಟ್ಟಿಗೆ ಹೂವಿನ ಮಾಲೆಗಳನ್ನು ಕಟ್ಟಿ, ಕಂಬಗಳ ಮೇಲೆ ಹವಳದ ಬಳ್ಳಿಯನ್ನು ಬಿಟ್ಟು, ರತ್ನದ ಪುಷ್ಪಗುಚ್ಛವನ್ನು ನೇತುಗಟ್ಟಿದನು. ನೆಲಕ್ಕೆ ಸಾರಿಸಿರುವ ಕಸ್ತೂರಿಯೂ, ಮೂಲೆಮೂಲೆಯಲ್ಲಿ ಬಟ್ಟಿರುವ ಧೂಪದ ಧೂಮವೂ ಮಂಟಪವನ್ನು ಪರಿಮಳಕೋಶವನ್ನಾಗಿ ಮಾಡಿದ್ದುವು. ಅದರ ಸುತ್ತಲೂ ಶಿವನ ಪರಿವಾರದ ಬಿಡಾರಕ್ಕಾಗಿ ಸ್ವರ್ಣರಜತದ ಉಪ್ಪರಿಗೆಗಳನ್ನೂ, ವಿಹಾರಸರೋವರಗಳನ್ನೂ ಉದ್ಯಾನವನಗಳನ್ನೂ ಅತಿಮನೋಹರವಾಗಿ ವಿರಚಿಸಿದನು. ಬಳಿಕ ಪಟ್ಟಣದ ಪ್ರತಿಯೊಂದು ಬೀದಿಯೂ ಗುಡಿಗಳಿಂದಲೂ ತೋರಣಗಳಿಂದಲೂ ಧ್ವಜಪತಾಕೆಗಳಿಂದಲೂ, ಸಾರಣೆ ರಂಗವಲ್ಲಿಗಳಿಂದಲೂ, ಅಲಂಕೃತವಾಯಿತು. ಎಲ್ಲವೂ ಸಿದ್ಧವಾದುದನ್ನು ವಿಶ್ವಕರ್ಮನು ಗಿರಿರಾಜನಿಗೆ ಬಿನ್ನೈಸಿ ಪರಶಿವನಿಗಾಗಿ ತಾನು ಮಾಡಿರುವ ಬಡಭಕ್ತಿಯ ಕೆಲಸವನ್ನು ಪರಾಂಬರಿಸಬೇಕೆಂದು ಬೇಡಿದನು. ಆತನು ಮಗಳನ್ನೂ ಪತ್ನಿಯನ್ನೂ ಕರೆದುಕೊಂಡುಬಂದು ಎಲ್ಲವನ್ನೂ ತೋರಿಸಿ, ಸಂತೋಷಪಟ್ಟು, ಅನಂತವಾದ ಉಡುಗೊರೆಗಳನ್ನು ಶಿಲ್ಪಿಗೆ ಕೊಟ್ಟು ಕಳಿಸಿದನು. ಇತ್ತ ರಾಜನು ಸುತೆಯನ್ನು ಕುರಿತು— ತಾಯಿ! ನಿನ್ನ ಪತಿಗೂ ಆತನ ಕಡೆಯವರಿಗೂ ಘನತೆಗೆ ತಕ್ಕಂತೆ ಮಂಟಪ ರಚನೆಯೇನೋ ಆಯಿತು. ಆದರೆ ಅಲ್ಲಿಂದ ಬಂದವರನ್ನೆಲ್ಲ ಕೊರತೆಯಿಲ್ಲದಂತೆ ಉಪಚರಿಸುವ ಸಾಮರ್ಥ್ಯವು ನನಗಿಲ್ಲವಲ್ಲ! ಎಂದು ಕೊರಗಿದನು. ಅದಕ್ಕೆ ದೇವಿಯು ನಕ್ಕು, ಆ ವಿಷಯದಲ್ಲಿ ನಾನಿರುವೆನು ನೀನು ಹೆದರಬೇಡವೆಂದು ಧೈರ್ಯ ಕೊಟ್ಟು, ಆ ವಿವಾಹಮಂಟಪದಲ್ಲಿ ಕಲ್ಪವೃಕ್ಷ ಕಾಮಧೇನು ಚಿಂತಾಮಣಿ ಮೊದಲಾದ ವಸ್ತುಗಳನ್ನೆಲ್ಲ ಸದಾ ಕಾದುಇರುವಂತೆ ಆಜ್ಞೆ ಮಾಡಿದಳು. ಆ ಮಹಾದೇವಿಯ ಸ್ಮರಣಮಾತ್ರದಿಂದಲೇ ಸಕಲ ವಸ್ತುಪರಿಕರವೂ ಗುಡ್ಡಗುಡ್ಡ

ಯ ಸ್ತನದ್ವಯವನ್ನು ನೋಡಿದ ಒಬ್ಬ ಸಖಿಯು ಮತ್ತೊರ್ಬಳನ್ನು ಕುರಿತು– ಎಂದಿಗೂ ಅರಲದಿರುವ ತಾವರೆ ಮೊಗ್ಗು ಎಲ್ಲಾದರೂ ಇರುವುದೆ? ಎಂದು ಕೇಳಲು, ಆಕೆಯು– ದೇವಿಯ ಮುಖವನ್ನೂ ಕಂಠಹಾರವನ್ನೂ ನೋಡಿ, ಚಂದ್ರಮಂಡಲವೂ ನಕ್ಷತ್ರಗಳೂ ಸಮೀಪದಲ್ಲಿರುವಾಗ ತಾವರೆಯು ಅರಲುವುದೆಲ್ಲಿ ಬಂದಿತು? ಎಂದು ಸಮಾಧಾನವನ್ನು ಹೇಳಿದಳು. ಚಂದ್ರಮಂಡಲದಲ್ಲಿರುವ ಅಮೃತಸಾರವನ್ನು ಆಕರ್ಷಿಸಿ ತೆಗೆದುಕೊಂಡು ಹೋಗಿ ತನ್ನ ಶಿಷ್ಯರಾದ ರಾಕ್ಷಸರಿಗೆ ಕೊಟ್ಟು ಕುಡಿಸಿ ಅವರನ್ನೂ ಸಾವಿಲ್ಲದವರನ್ನಾಗಿ ಮಾಡಬೇಕೆಂದು ಶುಕ್ರನು (ಚುಕ್ಕಿಯು) ಯೋಚಿಸಿ ಬಂದು ಚಂದ್ರಮಂಡಲದ ಮಧ್ಯದಲ್ಲಿ ಸೇರಿಕೊಂಡಿರುವನೋ ಎಂಬಂತೆ ದೇವಿಯ ಮುಖಮಂಡಲದ ಮಧ್ಯದಲ್ಲಿರುವ ಮುತ್ತಿನ ಮೂಗುತಿಯು ತೋರುತ್ತಿದ್ದಿತು. ಆ ದೇವಿಯ ಪ್ರತಿಯೊಂದು ಕಣ್ಣನ್ನೂ ಅದು ನೈದಿಲೆ, ಇದು ತಾವರೆ, ಇದು ನನ್ನದು, ತನ್ನದು, ಎಂದು ಪರಸ್ಪರ ಸ್ಪರ್ಧೆಯಿಂದ ಪ್ರೀತಿಸುವುದಕ್ಕಾಗಿ ಸೂರ್ಯಚಂದ್ರಮಂಡಲಗಳೇ ಬಂದು, ಆ ಕಣ್ಣುಗಳ ಒತ್ತಿನಲ್ಲಿ ನಿಂತುಕೊಂಡಿರುವಂತೆ ದೀರ್ಘವಾದ ಲೋಚನದ ಪಕ್ಕದಲ್ಲಿರುವ ರನ್ನದೋಲೆಗಳು ಒಪ್ಪುತ್ತಿದ್ದುವು. ಪಾರ್ವತಿಯನ್ನು ನೋಡಿದ ಒಬ್ಬ ಸಖಿಯು– ನಾರೀಕುಲಕ್ಕೆಲ್ಲ ಭೂಷಣವಾದ ಈ ತಾಯಿಗೆ ಬೇರೆ ಭೂಷಣಗಳೇತಕ್ಕೆ? ಸಕಲ ದೇವಾಂಗನೆಯರಿಗೆ ಮಸ್ತಕದ ಮಣಿಯೇ ತಾನಾಗಿರುವ ಈ ದೇವಿಗೆ ಬೇರೆ ಶಿರೋಮಸ್ತಕದ ಮಣಿ ಯೇತಕ್ಕೆ? ಸತೀಕುಲಕ್ಕೆ ತಿಲಕವಾಗಿರುವ ಈ ಜಗದಂಬೆಗೆ ಬೇರೆ ತಿಲಕವೇತಕ್ಕೆ? ತಾನೇ ಕುಸುಮಕೋಮಲೆಯಾದ ಈ ನಮ್ಮಮ್ಮನಿಗೆ ಬೇರೆ ಹೂವಿನ ಮಾಲೆಯೇತಕ್ಕೆ? ಎಂದು ಇನ್ನೊಬ್ಬ ಸಖಿಯನ್ನು ಕೇಳಲು, ಆಕೆಯು– "ಶೃಂಗಾರಕ್ಕೆ ಮತ್ತೊಂದು ಶೃಂಗಾರವಿಲ್ಲದಿದ್ದರೂ ಮಂಗಳಾರ್ಥವಾಗಿ ಅಲಂಕರಿಸಿರುವೆವು" ಎಂದಳು. ಮತ್ತೊಬ್ಬಳು– ಸರ್ವಮಂಗಳೆಗೆ ಮಂಗಳವನ್ನು ಮಾಡುವುದೆಂದರೇನು? ಎಂದು ಕೇಳಲು, ಮಗದೊಬ್ಬಳು–ಲೋಕಾಚಾರನಿಯೋಗಕ್ಕಾಗಿ ಮಾಡಿರುವೆವು ಎಂದು ಹೇಳಿ ಸಮಾಧಾನಗೊಳಿಸಿದಳು. ಹೀಗೆ ಅಲಂಕಾರಪೂರಿತಳಾದ ಸರ್ವಮಂಗಳೆಯು ರಾಣಿವಾ

ಸದಲ್ಲಿ ಪರಶಿವನ ಮೋಹನದ ಖಣಿಯಾಗಿ ರಂಜಿಸಿರುತ್ತಿದ್ದಳು ಎಂಬಲ್ಲಿಗೆ ಒಂಭತ್ತನೇ ಅಧ್ಯಾಯವು ಸಂಪೂರ್ಣವು.

## ೧೦ ನೇ ಅಧ್ಯಾಯವು.

### ಗಿರಿಜಾಕಲ್ಯಾಣವು.

ಕಲ್ಯಾಣಮಂಟಪದಲ್ಲಿ ವಿವಾಹಾಂಗವಾದ ಪೂರ್ವಕಾರ್ಯಗಳೆಲ್ಲವೂ ಜರಗಿದನಂತರ, ಪುರೋಹಿತನಾದ ಬೃಹಸ್ಪತಿಯು ಶಿವನ ಬಳಿಗೆ ಹೋಗಿ, ಮುಹೂರ್ತವು ಸಮೀಪಿಸಿತು ದಯೆಮಾಡಿಸಬೇಕು ಎಂದು ಬಿನ್ನೈಸಲು, ಶಿವನು ಅಲಂಕೃತನಾಗಿ ಬಾಸಿಂಗವನ್ನು ಕಟ್ಟಿ, ವಿಷ್ಣುಬ್ರಹ್ಮರ ಹಸ್ತಾವಲಂಬನದಿಂದ ರತ್ನಖಚಿತವಾದ ಪಲ್ಲಕ್ಕಿಯನ್ನೇರಿ ಮಹಾವೈಭವದಿಂದ ಹೊರಟನು. ಹರಿಬ್ರಹ್ಮೇಂದ್ರಾದಿಗಳೆಲ್ಲರೂ ಪಲ್ಲಕ್ಕಿಯ ಎಡಬಲಗಳಲ್ಲಿ ಪಾದಚಾರಿಗಳಾಗಿ ಬರುತ್ತಿದ್ದರು. ಪಲ್ಲಕ್ಕಿಯ ಮೇಲೆ ಮುತ್ತಿನ ಛತ್ರವನ್ನು ಎತ್ತಿ ಹಿಡಿದಿದ್ದರು. ಪಾರ್ಶ್ವಗಳಲ್ಲಿ ಚಾಮರವನ್ನು ಬೀಸುತ್ತಿದ್ದರು. ವೇದಗಳು ಉದ್ಘೋಷಿಸುತ್ತಿದ್ದವು. ಸ್ತುತಿಪಾಠಕರು ಮುಂಗಡೆ ಕೈಯೆತ್ತಿ ಬಿರುದಾವಳಿಗಳನ್ನು ಹೊಗಳುತ್ತಿದ್ದರು. ಕಹಳಾದಿ ವಾದ್ಯಗಳು ಘೋರ್ಗರೆಯುತ್ತಿದ್ದುವು. ಇಂತಹ ಸಂಭ್ರಮದಿಂದ ಹೊರಟ ಶಿವನು ವಿವಾಹದ ಮಂಟಪದ ಬಾಗಿಲಲ್ಲಿ ಪಲ್ಲಕ್ಕಿಯಿಂದಿಳಿದನು. ಮುತ್ತೈದೆಯರು ಆರತಿಗಳನ್ನು ಬೆಳಗಿದರು. ರತ್ನಕಾಂತಿಯಿಂದ ಝಗಝಗಿಸುತ್ತಲೂ, ಪುಷ್ಪಪರಿಮಳದಿಂದಲೂ ಧೂಪಧೂಮದಿಂದಲೂ ಘುಮಘುಮಿಸುತ್ತಲೂ, ಇರುವ ವಿವಾಹಮಂಟಪವನ್ನು ಪರಶಿವನು ಪ್ರವೇಶಿಸಿದನು. ಗಿರಿರಾಜ ಮೇನಕಿಯರು ವಿಧ್ಯುಕ್ತವಾಗಿ ಪರಶಿವನನ್ನು ಅರ್ಘ್ಯಪಾದ್ಯಾಚಮನ ಮಧುಪರ್ಕಗಳಿಂದರ್ಚಿಸಿದರು. ಬಳಿಕ ಶಿವನು ಮಂಟಪದ ಮಧ್ಯಭಾಗದಲ್ಲಿ ಅತ್ಯಂತ ಮನೋಹರವಾಗಿ ನವರತ್ನಗಳಿಂದ ನಿರ್ಮಿಸಿದ್ದ ವಿವಾಹವೇದಿಕೆಯನ್ನು ಹತ್ತಿದನು. ಜಗತಿಯ ೧ ಪಕ್ಕದಲ್ಲಿ ಶಿವಗಣಂಗಳೂ ಸಪ್ತರ್ಷಿಗಳೂ ಹರಿಬ್ರಹ್ಮಾದಿಗಳೂ ನಿಂತುಕೊಂಡರು. ಸಭೆಯೆಲ್ಲವೂ ಸುರನರೋರಗಗರುಡ ಗಂಧರ್ವ ಕಿನ್ನರ ಕಿಂಪುರುಷಾದಿಗಳಿಂದ ಕಿಕ್ಕಿರಿದಿದ್ದಿತು. ರಂಭಾದ್ಯಪ್ಸರ

ಸ್ತ್ರೀಯರು ನರ್ತನವನ್ನು ಮಾಡುತ್ತಿದ್ದರು. ನಂಪಿವಾಕಾಳರೆಂಬ ಚಡೀವರಿಗಳು ಗದ್ದಲವನ್ನು ನಿಲ್ಲಿಸುತ್ತಿದ್ದರು. ಅಷ್ಟರಲ್ಲಿ ಅಲಂಕೃತೆಯಾಗಿರುವ ಸರ್ವಮಂಗಳೆಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ವಿವಾಹ ಮಂಟಪಕ್ಕೆ ಕರೆದುಕೊಂಡು ಬಂದರು. ಹೂಗಿಂಡಿಯವಳು, ಎಲೆಸಂಬಳಿಗೆಯವಳು, ಕಾಳಂಜಿಯವಳು, ಚಾಮರದವಳು, ಬೀಸಣಿಗೆಯವಳು ಮೊದಲಾದ ೬೪ ವಿಧದ ಊಳಿಗದ ಗೆಳತಿಯರು ಮನ್ಮಥನ ಮದದಾನೆಗಳ ಹಿಂಡಿನಂತೆ ಪಲ್ಲಕ್ಕಿಯೊಡನೆ ಬರುತ್ತಿದ್ದರು. ಅಂದಳದ ಪಕ್ಕಗಳಲ್ಲಿ ಲಕ್ಷ್ಮಿ ಸರಸ್ವತಿ ಶಚಿ ಸ್ವಾಹೆ ಮೊದಲಾದ ದೇವಾಂಗನಾಮಣಿಯರುಗಳೂ, ಸಪ್ತಮಾತೃಕೆಯರೂ, ಋಷಿಪತ್ನಿಯರೂ, ಗಣವಧೂಟಗಳೂ ತಂಡತಂಡವಾಗಿ ಬರುತ್ತಿದ್ದರು. ಈ ಪರಿವಾರದಿಂದಕೂಡಿ ವೈಭವದೊಡನೆಬಂದ ಪಾರ್ವತಿಯು ವಿವಾಹಮಂಟಪದ ಬಾಗಿಲಲ್ಲಿ ಲಕ್ಷ್ಮೀ ಸರಸ್ವತಿಯರ ಕರಾವಲಂಬನದಿಂದ ಅಂದಳವನ್ನಿಳಿದು, ಒಳಹೊಕ್ಕು ಮಧ್ಯದಲ್ಲಿ ರಂಜಿಸುತ್ತಿದ್ದ ವಿವಾಹವೇದಿಕೆಯನ್ನುಹತ್ತಿದಳು. ವಧೂವರರ ಮಧ್ಯದಲ್ಲಿ ಪಟ್ಟೆಯ ತೆರೆಯು ಹಿಡಿಯಲ್ಪಟ್ಟಿದ್ದಿತು. ಕೂಡಲೇ ಸರ್ವರೂ ಜಯಘೋಷವನ್ನು ಮಾಡಿದರು. ಸಕಲವಾದ್ಯಗಳೂ ಮೊಳಗಿದುವು. ಲಕ್ಷ್ಮೀ, ಸರಸ್ವತಿ, ಶಚಿ, ಅಹಲ್ಯೆ, ಲೋಪಾಮುದ್ರೆ, ಗಾಯತ್ರಿ ಸಾವಿತ್ರಿ, ಮೊದಲಾದ ದೇವ ಮುನಿ ಮಾನವಸ್ತ್ರೀಯರೆಲ್ಲ ಶೋಭನವನ್ನು ಹಾಡುತ್ತಿದ್ದರು. ಸುಮುಹೂರ್ತವು ಒದಗಲು ಬೃಹಸ್ಪತ್ಯಾಚಾರ್ಯನ ಪ್ರಾರ್ಥನೆಯಮೇರೆ ವಧೂವರರು ಮೆಟ್ಟುಕ್ಕಿಯ ಗೂಡೆಗಳನ್ನು ಮೆಟ್ಟಿದರು. ಪುರೋಹಿತನು ಮಂಗಳಾಷ್ಟಕವನ್ನು ಪಠಿಸಿ ವೇದಮಂತ್ರೋದ್ಘೋಷದೊಡನೆ ಸತಿಪತಿಯರ ತಲೆಯಮೇಲೆ ಪರಸ್ಪರ ಗುಡಜೀರಕಾರೋಪಣವನ್ನು ಮಾಡಿಸಿದನು. ಹರಿಬ್ರಹ್ಮಾದಿಗಳೆಲ್ಲರೂ ಜಯಘೋಷವನ್ನು ಮಾಡಿದರು. ಬಳಿಕ ತೆರೆಯು ತೆಗೆಯಲ್ಪಟ್ಟಿತು. ವಧೂವರರ ಹಸ್ತದಿಂದ ಮುತ್ತಿನ ಅಕ್ಷತೆಯ ಆರೋಪಣವನ್ನು ಪರಸ್ಪರವಾಗಿ ಮಾಡಿಸಿದರು. ಗಿರಿರಾಜನು ಪತ್ನೀಸಮೇತನಾಗಿ ನಿಂತು, ಶಿವನ ಬಲಗೈಯ ಮೇಲೆ ಪಾರ್ವತಿಯ ಫಲಯುಕ್ತವಾದ ಅಂಜಲಿಯನ್ನಿಡಿಸಿ, ಹಿರಣ್ಯಸಮೇತವಾಗಿಯೂ ಬಿಲ್ವದಳಯುಕ್ತವಾಗಿಯೂ ಮೋನಕಿ

ಯಿಂದ ಬಿಡಲ್ಪಟ್ಟ ಜಲಧಾರೆಯಿಂದ ಪರಶಿವನಿಗೆ ಸಾಲಂಕೃತಕನ್ಯಾದಾನವನ್ನು ದಕ್ಷಿಣಾಸಮೇತವಾಗಿ ಮಾಡಿದನು. ವಾದ್ಯಗಳು ಮೊಳಗುತ್ತಿದ್ದುವು. ಮನುಮುನಿಗಳು ಜಯಘೋಷವನ್ನು ಮಾಡುತ್ತಿದ್ದರು. ಗಣವರ್ಯರುಗಳು ಮಂಗಳಾಷ್ಟಕವನ್ನು ಪಠಿಸುತ್ತಿದ್ದರು. ಬಳಿಕ ಸತಿಪತಿಯರ ಕೊರಲಿನಲ್ಲಿ ಪರಸ್ಪರವಾಗಿ ಪುಷ್ಪಮಾಲೆಯು ಅರ್ಪಿಸಲ್ಪಟ್ಟಿತು. ಈರ್ವರೂ ರನ್ನದ ಹಸೆಮಣೆಯಮೇಲೆ ಕುಳಿತುಕೊಂಡರು. ಪರಶಿವನು ತನ್ನ ಅಭಯಹಸ್ತದಿಂದ ಸರ್ವಮಂಗಳೆಯ ಕಂಠದಲ್ಲಿ ಮಾಂಗಲ್ಯಧಾರಣೆಯನ್ನು ಮಾಡಿದನು. ಸಭಾಸದರೆಲ್ಲರೂ ಜಯಘೋಷದಿಂದ ದಂಪತಿಗಳ ಶಿರಸ್ಸಿನ ಮೇಲೆ ಮುತ್ತಿನಕ್ಷತೆಯನ್ನು ಸುರಿದರು. ದೇವನಾರಿಯರು ಶೋಭನವನ್ನು ಹಾಡಿದರು. ಬಳಿಕ ಸಭಾಸದರೆಲ್ಲರಿಗೂ ತಾಂಬೂಲಾದಿ ಮರ್ಯಾದೆಗಳು ಜರಗಿದುವು. ಮುನಿನಾರಿಯರು ಸತಿಪತಿಯರಿಗೆ ಆರತಿಯನ್ನು ಬೆಳಗಿದರು. ದಂಪತಿಗಳು ಕೈಹಿಡಿದು ಒಳಮನೆಯನ್ನು ಹೊಕ್ಕು ಬೂವವನ್ನು ಸವಿಯುವುದೇ ಮೊದಲಾದ ಕಾರ್ಯಗಳನ್ನು ಜರಗಿಸಿದರು. ಸಭಾಸದರೆಲ್ಲರೂ ಮೃಷ್ಟಾನ್ನಭೋಜನದಿಂದ ಪರಿತೃಪ್ತರಾದರು. ಪುಷ್ಪಗಂಧತಾಂಬೂಲಾದಿಗಳಿಂದ ಸಂತೋಷಗೊಂಡರು. ಅಂದಿನಿಂದ ಪ್ರತಿದಿನವೂ ಹಗಲು ಸಾಯಂಕಾಲಗಳಲ್ಲಿ ದಂಪತಿಗಳು ಹಸೆಯಲ್ಲಿ ಕುಳಿತಾಗ ನರ್ತನ ಗಾನೋತ್ಸವಗಳು ನಡೆಯುತ್ತಿದ್ದುವು. ದಂಪತಿಗಳಲ್ಲಿ ಹೂವಿನ ಚೆಂಡಾಟ ಉರುಟಣೆ ಮೊದಲಾದ ವಿನೋದಗಳು ಜರುಗುತ್ತಿದ್ದುವು. ನಾಲ್ಕನೆಯ ದಿನದ ರಾತ್ರಿಯಲ್ಲಿ ನಾಕವಲ್ಲಿಯ ಮಹೋತ್ಸವವು ಜರಗಿತು. ಬಳಿಕ ಗಿರಿರಾಜನು ನವರತ್ನಖಚಿತವಾದ ಪಲ್ಲಕ್ಕಿಯಲ್ಲಿ ಪಾರ್ವತೀಪರಮೇಶ್ವರರನ್ನು ಕುಳ್ಳಿರಿಸಿ, ಸಕಲ ಚತುರಂಗಸೈನ್ಯದಿಂದಲೂ, ಮಹಾದೇವತಾಸ್ತೋಮದಿಂದಲೂ, ವಾದ್ಯಘೋಷದಿಂದಲೂ ಕೂಡಿ ಉತ್ಸವಗೊಳಿಸಿದನು. ಎರಡುಸಾಲುಗಳ ಪಂಜುಗಳ ದೀಪಾವಳಿಯು ರಾತ್ರಿಯನ್ನು ಹಗಲಿನಂತೆ ಮಾಡಿದ್ದುವು. ಹರಿಬ್ರಹ್ಮರೂ ಇಂದ್ರಯಮಾದಿಗಳೂ, ಗಿರಿರಾಜನೂ ಸಪ್ತಮಹರ್ಷಿಗಳೂ ಪಲ್ಲಕ್ಕಿಯ ಸಮೀಪದಲ್ಲೇ ಕಾಲ್ನಡಗೆಯಲ್ಲಿ ಹೋಗುತ್ತಿದ್ದರು. ಅಪೂರ್ವತರವಾದ ಈ ಮಹೋತ್ಸವವನ್ನು ಪುರಜನರೆಲ್ಲರೂ ನೋಡಿ ಪರಮಾನಂದಗೊಂಡು

ಕೃತಾರ್ಥರಾದರು. ಅದರ ಮರುದಿವಸ ಅತ್ಯಂತ ಸಂಭ್ರಮದಿಂದ ಗಿರಿರಾಜನು ಬೀಗರ ಔತಣವನ್ನು ಮಾಡಿಸಿ ಸಂತೋಷಗೊಳಿಸಿದನು. ಎಲ್ಲರಿಗೂ ಗಂಧಮಾಲ್ಯಾದಿಗಳನ್ನಿತ್ತು ವಸ್ತ್ರಭೂಷಣಾದಿಯಾದ ಉಡುಗೊರೆಗಳನ್ನು ಯಥಾಶಕ್ತಿಯಾಗಿ ಕೊಟ್ಟನು. ಅನಂತರ ಕೋಟಿಯೋಜನದಗಲಕ್ಕೆ ನವರತ್ನಖಚಿತವಾಗಿ ಮಾಡಿಸಿದ್ದ ಕೊಳದಲ್ಲಿ ಕೇಸರಿ ಶ್ರೀಗಂಧ, ಕರ್ಪೂರ, ಕಸ್ತೂರಿ ಮೊದಲಾದ ಗಂಧದ್ರವ್ಯಗಳನ್ನು ಕೂಡಿಸಿ ಮಾಡಿದ ಓಕುಳಿಯ ನೀರನ್ನು ತುಂಬಿಸಿ, ವಸಂತೋತ್ಸವವನ್ನು ಮಾಡಿಸಿದನು. ಹರಿಬ್ರಹ್ಮಾದಿಗಳೆಲ್ಲರೂ ಮಧ್ಯಾಹ್ನದ ಭೋಜನವನ್ನು ತೀರಿಸಿಕೊಂಡು ಸ್ವರ್ಣರಜತದ ಕೈಬಂಡೆಗಳನ್ನು ಹಿಡಿದು ವಸಂತಮಂಟಪಕ್ಕೆ ಬಂದರು. ಶಂಕರೀಶಂಕರರು ಆರೋಗಣೆಗೊಂಡು ಹಸನ್ಮುಖರಾಗಿ ವಸಂತಮಂಟಪಕ್ಕೆ ಬಂದು, ಸಿದ್ಧಮಾಡಿದ್ದ ಸಿಂಹಾಸನದಲ್ಲಿ ಮೂರ್ತಿಗೊಂಡರು. ವಾದ್ಯಗಳು ಇಂಪಾಗಿ ಬಾರಿಸಲ್ಪಡುತ್ತಿದ್ದುವು. ಮೊದಲು ಪಾರ್ವತಿಯು ಶ್ರೀಗಂಧಜಲವನ್ನು ತುಂಬಿದ ಪೊಟ್ಟಣದಿಂದ ಶಿವನನ್ನು ಹೊಡೆದಳು. ಬಳಿಕ ಶಿವನು ಕಸ್ತೂರೀಜಲವನ್ನು ತುಂಬಿದ ಪೊಟ್ಟಣದಿಂದ ಪಾರ್ವತಿಯನ್ನು ಹೊಡೆದನು. ಮತ್ತೆ ಶಂಕರಿಯು ನಸುನಗುತ್ತ ಶಿವನಮೇಲೆ ಇಟ್ಟಳು. ಆಗ ಶಿವನು ಎಲ್ಲರಿಗೂ ವಸಂತಕ್ರೀಡೆಗೆ ಅಪ್ಪಣೆ ಕೊಟ್ಟನು. ಹರಿಬ್ರಹ್ಮರು, ದಿಕ್ಪಾಲಕರುಗಳು, ಅಷ್ಟವಸುಗಳು, ಮನುಮುನಿಗಳು, ವಿದ್ಯಾಧರ ಕಿನ್ನರರು ಮೊದಲಾದವರು ಸೇರಿ ಚಿನ್ನದ ಚೀರ್ಕೊಳವೆಗಳನ್ನೂ ಅಂಡೆಗಳನ್ನೂ ಹಿಡಿದು ನೀರಾಟಕ್ಕೆ ನಿಂತರು. ಲಕ್ಷ್ಮಿ ಸರಸ್ವತಿ, ಶಚಿ, ರೋಹಿಣಿ ಮೊದಲಾದ ದೇವಾಂಗನಾವರ್ಗೆಯರೂ, ರಂಭೆ ಊರ್ವಶಿ ತಿಲೋತ್ತಮೆ ಸುಕೇಶಿ ಮೊದಲಾದ ಅಪ್ಸರಸ್ತ್ರೀಯರೂ ಬಂದೊಂದು ಕಡೆ ಸೇರಿ ಆಟಕ್ಕೆ ನಿಂತರು. ಜೇನುಮೇಣದ ಚಂಡಿನೊಳಗೆ ಕೇಸರಿಯನೀರನ್ನು ತುಂಬಿ ಒಬ್ಬರ ಮುಖಕ್ಕೊಬ್ಬರು ರಭಸದಿಂದ ಹೊಡೆಯಲು, ಚೆಂಡು ಒಡೆದು ನೀರಿನ ಹನಿಯು ಚಿಬ್ಬನೆ ಸಿಡಿದು ಎಲ್ಲ ಕಡೆಗೂ ತುಂಬಿಕೊಳ್ಳುತ್ತಿರಲಾಗಿ, ನಾರಿಯರ ಮುಖನೆಂಬ ಕಮಲದಮೇಲೆ ಚಂಡೆಂಬ ಚಂದ್ರನು ಬಿದ್ದು ಮುಚ್ಚುಯುದ್ಧವನ್ನು ಮಾಡುತ್ತಿರಲಾಗಿ ಅವರೀರ್ವರ ಕೋಪಾಗ್ನಿಯು ಕಿಡಿಯು ಜಲಕಣದ ರೂಪವಾಗಿ ಹಾ

ರುತ್ತಿದೆಯೋ ಎಂಬಂತೆ ಕಾಣುತ್ತಿದ್ದಿತು. ಒಂದು ಕಡೆ ಲಕ್ಷ್ಮಿಯು ತನ್ನ ಗಂಡನ ಶರೀರದ ಮೇಲೆ ಕೇಸರಿಯ ಜಲವನ್ನೆರಚಲು ಆ ಶರೀರವು ಮಿಂಚಿನಿಂದ ಕೂಡಿದ ಮೇಘದಂತೆ ಕಾಣಿಸಿತು. ಹರಿಯು ಲಕ್ಷ್ಮಿಯ ಮೇಲೆ ಶ್ರೀಗಂಧವನ್ನು ಎರಚಲು ಪಾದರಸವನ್ನು ಲೇಪಿಸಿದ ಚಿನ್ನದ ಪುತ್ಥಳಿಯಂತೆ ಕಾಣಿಸಿದಳು. ಬ್ರಹ್ಮನು ಸರಸ್ವತಿಯ ಮೇಲೆ ಕಸ್ತೂರಿಯ ಜಲವನ್ನೆರಚಲು, ಆಕೆಯು ಚಂದ್ರಕಾಂತಶಿಲೆಯ ಪುತ್ಥಳಿಯ ಮೇಲೆ ಮಬ್ಬುಕವಿದಂತೆ ಕಾಣಿಸುತ್ತಿದ್ದಳು. ಸರಸತಿಯು ಪತಿಯ ಮೇಲೆ ಶ್ರೀಗಂಧದ ನೀರನ್ನೆರಚಲು, ಆತನು ಮೇರುಪರ್ವತದ ಮೇಲೆ ಹಿಮವು ಮುಸುಕಿರುವಂತೆ ಕಾಣುತ್ತಿದ್ದನು. ದೇವತೆಗಳು ಕೊಳಗಳಲ್ಲಿಳಿದು ಮೊಗೆಯುತ್ತಲೂ ಒಬ್ಬರನ್ನೊಬ್ಬರು ಚಂಡುಗಳಿಂದಲೂ ಚಿಮ್ಕೊಳವೆಯಿಂದಲೂ ಅಂಗೈಗಳಿಂದಲೂ ಅಭಿಷೇಕಗೊಳ್ಳುತ್ತಲೂ, ಬಾಸುಳೆಗಳಂತೆ ಗುರಿಕಟ್ಟಿ ಅಂಡೆಗಳಿಂದ ಹೊಡೆಯುತ್ತಲೂ, ಏಟನ್ನು ತಪ್ಪಿಸಿಕೊಂಡು ಮತ್ತೆ ತಿರುಗಿ ಇದಿರಾಳಿಗೆ ಹೊಡೆಯುತ್ತಲೂ, ಒಬ್ಬರನ್ನೊಬ್ಬರು ಹಂಗಿಸುತ್ತಲೂ, ಸಂತೋಷದಿಂದ ಕೇಕೆಹಾಕುತ್ತಲೂ, ಬೆನ್ನಟ್ಟಿ ಓಡಿಸಿಕೊಂಡು ಹೋಗಿ ತರೆಯ ಮೇಲೆ ಓಕುಳಿಯನ್ನು ಸುರಿಯುತ್ತಲೂ, ಮುಹೂರ್ತಕಾಲದೊಳಗಾಗಿ ಕೊಳವನ್ನು ಬರಿದುಮಾಡಿದರು. ನಾರಿಯರು ಓಕುಳಿಯಿಂದ ನಾಂದು ಜೋಲುಬಿದ್ದ ಕೇಶಪಾಶದಿಂದಲೂ, ದೇಹಕ್ಕೆ ಹತ್ತಿದ ಪೀತಾಂಬರಗಳಿಂದಲೂ, ಚಳಿಯಿಂದ ನಡುಗುತ್ತಿರುವ ಗಲ್ಲಗಳಿಂದಲೂ, ರೋಮ ನೆರೆದು ಕುಲುಕುತ್ತಿರುವ ಅಂಗಗಳಿಂದಲೂ, ಬಳ್ಕುವ ನಡುವಿನಿಂದಲೂ, ಸೆಟೆತ ಕೈಕಾಲ್ಗಳಿಂದಲೂ, ಬೆವರ್ತ ಮುಖದಿಂದಲೂ ಒಪ್ಪುತ್ತ, ನೋಟಗಾರರ ಕಣ್ಣಿಗೆ ಹೊಸಬಗೆಯ ಒಂದು ನೋಟವನ್ನುಂಟುಮಾಡಿದ್ದರು. ಬಳಿಕ ಎಲ್ಲರೂ ಬೇಳತ್ತಂ ಹೊರಟು ಅಣಿಯಾಗಿದ್ದ ಬಿಸಿನೀರನ್ನು ಮಿಂದು ಮೈಯೊರಸಿ, ಮಡಿಯ ವಸ್ತ್ರಗಳನ್ನುಟ್ಟು ಆಭರಣಗಳನ್ನು ತೊಟ್ಟು, ಕರ್ಪೂರತಾಂಬೂಲವನ್ನು ಸವಿದು ಶಿವನ ಒಡ್ಡೋಲಗಕ್ಕೆ ಬಂದರು. ಅಷ್ಟರೊಳಗೆ ಪಾರ್ವತೀ ಪರಮೇಶರೂ ಪರಿಮಳಸ್ನಾನಂಗೊಂಡು ವಸ್ತ್ರಭೂಷಣಾದಿಗಳಿಂದಲಂಕೃತರಾಗಿ ಭದ್ರಾಸನವನ್ನಲಂಕರಿಸಿದ್ದರು. ಸಭಿಕರ ಸೇವೆಯನ್ನು ಪರಿಗ್ರಹಿಸಿದ ಬಳಿಕ ಶಿವನು ಗಿರಿರಾಜನ ಅರಮ

ನೆಗೆ ಬಂದನು. ಮಾವನು ಅಳಿಯನಿಗೆ ಅನರ್ಘ್ಯವಾದ ವಸ್ತ್ರಾಭರಣಗಳನ್ನೂ ಗಜಾಶ್ವಾದಿಗಳನ್ನೂ ಕಾಣ್ಕೆಯಾಗಿ ಕೊಟ್ಟು, ತನ್ನ ಮಗಳಿಗೆ ಜಯೆ ವಿಜಯೆ ಮೊದಲಾದ ಆಪ್ತಸಖಿಯರ ಸಂಕುಲವನ್ನೂ, ಅಮೌಲ್ಯಪೀತಾಂಬರಭೂಷಣಗಳನ್ನೂ, ಅಪೂರ್ವತರಗೋಕುಲವನ್ನೂ ಬಳುವಳಿಯಾಗಿತ್ತನು. ಶಿವನು ತನ್ನ ಸಕಲಪರಿವಾರದೊಡನೆ ಯಥಾವಿಭವದಿಂದ ಕೈಲಾಸದ ಕಡೆಗೆ ತಿರುಗಿದನು. ಗಿರಿರಾಜಮೇನಕಿಯರು ಸಕಲವೈಭವದಿಂದ ಒಡನೆ ಕೆಲದೂರದವರೆಗೂ ಹೋಗಿ, ಅಲ್ಲಿ ನಿಂತರು. ಶಿವನು ಗಿರಿರಾಜಮೇನಕಿಯರನ್ನು ಉಚಿತವಚನಗಳಿಂದ ಮರ್ಯಾದಿಸಿ ಹಿಂದಕ್ಕೆ ಕಳಿಸಿಕೊಟ್ಟನು. ಆಗ ಅವರಿರ್ವರೂ ಪಾರ್ವತಿಯ ಪಾದಕ್ಕೆ ನಮಸ್ಕರಿಸಿ, "ತಾಯೆ! ನಿನ್ನನ್ನು ನಾವು ಪಡೆದ ಪುಣ್ಯದ ಫಲದಿಂದ ಪರಶಿವನು ಸಕಲ ಪರಿವಾರದೊಡನೆ ನಮ್ಮ ಮನೆಗೆ ಬಂದನು. ಎಲ್ಲರ ದರ್ಶನವೂ ಸೇವೆಯೂ ನಮಗೆ ಸುಲಭವಾಗಿ ದೊರೆಯಿತು. ಈ ನಿನ್ನ ಅನುಗ್ರಹವನ್ನು ನಾವು ಎಂದಿಗೂ ಮರೆಯಲಾರೆವು. ನೀನೂ ಕೂಡ ಮುಂದೆ ನಮ್ಮನ್ನು ಮರೆಯದೆ ಒಂದೇವಿಧವಾದ ಅಭಿಮಾನದಿಂದ ಕಾಪಾಡಬೇಕು" ಎಂದು ಹೇಳುತ್ತ ಕಣ್ಣೀರನ್ನು ತುಂಬಿದರು. ಪಾರ್ವತಿಯೂ ಕಣ್ಣೀರ್ಗರೆದು ಸಮಾಧಾನಪಡಿಸಿ ಕಳಿಸಿಕೊಟ್ಟಳು. ಶಿವಶಿವೆಯರು ವೃಷಭವನ್ನೇರಿ ಹೊರಟರು. ದುಂದುಭಿಯು ಮೊಳಗಿತು. ಸಕಲ ದೇವತೆಗಳೂ ತಂತಮ್ಮ ವಾಹನವನ್ನೇರಿದರು. ಇವರು ಬರುವ ಸಂತೋಷವಾರ್ತೆಯನ್ನು ಕೇಳಿ ಕೈಲಾಸಪುರವು ಅತ್ಯಂತ ಸಂಭ್ರಮದಿಂದ ಶೃಂಗರಿಸಲ್ಪಟ್ಟಿತು. ಪುರಜನರೆಲ್ಲರೂ ಸಾಲಾಗಿ ಕಿಕ್ಕಿರಿದು ನಿಂತು ಪಟ್ಟದರಾಣಿಯೊಡನೆ ಕೂಡಿ ಬಂದ ಮಹಾದೇವನನ್ನು ನೋಡಿ ಪರಮಾನಂದತುಂದಿಲರಾಗಿ, ದಾರಿಯುದ್ದಕ್ಕೂ ಆರತಿಗಳನ್ನು ಬೆಳಗಿ ಪುಷ್ಪವೃಷ್ಟಿಯನ್ನು ಕರೆದು, ಜಯಘೋಷವನ್ನು ಮಾಡುತ್ತಿದ್ದರು. ಶಿವನು ಅರಮನೆಯನ್ನು ಪ್ರವೇಶಿಸಿದನು. ಮಹಾಸಭೆಯಲ್ಲಿ ಅಲಂಕೃತವಾಗಿದ್ದ ಸಿಂಹಾಸನದಮೇಲೆ ಪತ್ನೀಸಮೇತನಾಗಿ ಮಂಡಿಸಿದನು. ಹರಿಬ್ರಹ್ಮಾದಿಗಳೆಲ್ಲರೂ ತಮ್ಮ ತಮ್ಮ ಉಚಿತಾಸನಗಳಲ್ಲಿ ಕುಳಿತರು. ಎಲ್ಲರಿಗೂ ಉಚಿತವಾದ ಉಡುಗೊರೆ ಹಾರ ತಾಂಬೂಲಗಳಿಂದ ಮರ್ಯಾದೆಗೊಳಿಸಿ ಅಪ್ಪಣೆಯಿತ್ತು ಕಳಿಸಿಕೊ

ಟ್ಟನು. ತಾನು ಪತ್ನಿಯೊಡನೆ ಪರಮವೈಭವದಿಂದ ಒಪ್ಪಿದ್ದನು. ಹೀಗೆ ಪರಶಿವನು ತನ್ನಲ್ಲಿ ಲೀನವಾದ ಆತ್ಮಶಕ್ತಿಯನ್ನೇ ಹೊರಗೆಡಹಿ ಸಾಕಾರಗೊಳಿಸಿ, ಜಗದ್ವ್ಯಾಪಾರಬೋಧನೆಯ ಮಹಾಕೃಪೆಯಿಂದ ಗಿರಿಜಾಕಲ್ಯಾಣಲೀಲೆಯನ್ನು ಪರಿಗ್ರಹಿಸಿದನೆಂದು ಚೆನ್ನಬಸವೇಶನು ಸಿದ್ಧರಾಮೇಶ್ವರನಿಗೆ ನಿರೂಪಿಸಿದನೆಂಬಲ್ಲಿಗೆ ಹತ್ತನೇ ಅಧ್ಯಾಯವು ಸಂಪೂರ್ಣವು.

## ೧೧ ನೇ ಅಧ್ಯಾಯವು

### ಕುಮಾರೋತ್ಪತ್ತಿಯು.

ಪಾರ್ವತೀಪರಮೇಶ್ವರರು ಕೈಲಾಸದಲ್ಲಿ ಸುಖದಿಂದಿರುತ್ತಿರುವಲ್ಲಿ– ಇತ್ತ ಇಂದ್ರಾದಿದೇವತೆಗಳು ತಾರಕಾಸುರನ ಹಾವಳಿಯನ್ನು ತಾಳಲಾರದೆ, ಮತ್ತೆ ಬ್ರಹ್ಮನ ಬಳಿಗೆ ಬಂದು, ದೂರು ಹೇಳಿಕೊಳ್ಳಲು, ಆತನು ಎಲ್ಲರನ್ನೂ ಕೂಡಿಕೊಂಡು ಹಾಗೆಯೇ ವಿಷ್ಣುವಿನಬಳಿಗೆ ಬಂದನು. ತಾರಕನ ವಧೆಗೆ ಉಪಾಯವನ್ನು ಎಲ್ಲರೂ ವಿಚಾರ ಮಾಡಿದರು ಹೇಗೆಂದರೆ– “ ಈಗ ಶಿವಶಿವೆಯರು ಸುಖದಿಂದ ಒಂದಾಗಿರುವರು. ಇಬ್ಬರ ಸಂಗದಿಂದಲೂ ಒಬ್ಬ ಸುತನು ಹುಟ್ಟಿದರೆ ಅವನು ಸಾಮಾನ್ಯಶೂರನಾಗುವುದಿಲ್ಲ; ಅವನಮುಂದೆ ನಾವೊಬ್ಬರೂ ನಿಲ್ಲಲಾರದಂತಾಗುವೆವು. ಆಗ ತಾರಕನಿಗಿಂತಲೂ ಹೆಚ್ಚಾದ ಉಪದ್ರವವು ಆತನಿಂದ ನಮಗೆ ತಟ್ಟಬಹುದು. ಅದುಕಾರಣ ಅವರಿಬ್ಬರ ಸಂಯೋಗದಿಂದ ಪುತ್ರನು ಹುಟ್ಟದಂತೆಯೂ, ಶಿವನ ವೀರ್ಯಕ್ಕೆಮಾತ್ರವೇ ಒಬ್ಬನು ಜನಿಸುವಂತೆಯೂ ಮಾಡಿ, ಅವನಿಂದ ತಾರಕನ ವಧೆಯನ್ನು ಮಾಡಿಸಬೇಕು ” ಎಂದು ಯೋಚಿಸಿದರು. ಅದಕ್ಕಾಗಿಯೇ ಹರಿಬ್ರಹ್ಮಾದಿಗಳು ಶಿವನನ್ನು ಕುರಿತು ತಪಸ್ಸನ್ನಾಚರಿಸಿದರು. ಶಿವನು ಪ್ರಸನ್ನನಾಗಿ ನಿಮ್ಮಿಷ್ಟಾರ್ಥವೇನೆಂದು ಕೇಳಲು, ಎಲ್ಲರೂ ಭಕ್ತಿಯಿಂದ ನಮಸ್ಕರಿಸಿ, “ ಪಾರ್ವತಿಯ ಹೊಟ್ಟೆಯಲ್ಲಿ ಪುತ್ರೋತ್ಪತ್ತಿಯಾಗದಂತೆಯೂ, ನಿಮ್ಮ ವೀರ್ಯದಿಂದ ಜನಿಸಿದ ಕುಮಾರನು ತಾರಕನನ್ನು ಸಹ್ಮರಿಸುವಂತೆಯೂ ವರವನ್ನು ಕೊಡಬೇಕು ” ಎಂದು ಪ್ರಾರ್ಥಿಸಿದರು. ಶಿವನು ಹಾಗೆಯೇ ಆಗಲಿ ಎಂದು ವರವಿತ್ತು ಕೈಲಾಸಕ್ಕೆ ತೆರಳಿದನು. ಪಾರ್ವತಿಯು ಶಂಕರನನ್ನು ಕುರಿತು– ನನ್ನನ್ನು ಬಿಟ್ಟು ಇದು

ವರೆಗೆ ಎಲ್ಲಿ ಹೋಗಿದ್ದಿರೆಂದು ಕೇಳಲು,— "ದೇವತೆಗಳು ತಪಸ್ಸನ್ನು ಮಾಡುತ್ತಿರಲಾಗಿ ಅಲ್ಲಿಗೆ ಹೋಗಿದ್ದೆನು, ಅವರು ಪಾರ್ವತಿಯು ಹೊಟ್ಟೆಯಲ್ಲಿ ಮಕ್ಕಳುದಿಸದಂತೆ ವರವನ್ನು ಕೊಡಬೇಕೆಂದು ಬೇಡಿದರು. ಅದನ್ನು ಕೊಟ್ಟು ಬಂದೆನು" ಎಂದು ನುಡಿದನು. ಪಾರ್ವತಿಯು—ಆಹಾ! ದೇವತೆಗಳು ಇಂಥ ವರವನ್ನು ಬೇಡಿದರೆ? ಎಂದು ಚಿಂತಿಸಿ, ಕೋಪದಿಂದ— ಆ ದೇವತೆಗಳೆಲ್ಲರಿಗೂ ಸಂತಾನವಿಲ್ಲದೆ ಹೋಗಲಿ ಎಂದು ಶಪಿಸಿದಳು. ಬಳಿಕ ಶಿವನು ಪಾರ್ವತಿಯ ಕೋಪವನ್ನು ಸಮಾಧಾನಪಡಿಸುವುದಕ್ಕಾಗಿ ನಾನಾವಿನೋದಗಳನ್ನಾಚರಿಸುತ್ತಿದ್ದನು. ಮತ್ತು ದೇವತೆಗಳಿಗೆ ಕೊಟ್ಟ ವರವನ್ನು ನೆರವೇರಿಸುವುದಕ್ಕಾಗಿ ಸಮಯವನ್ನು ನಿರೀಕ್ಷಿಸುತ್ತಿದ್ದನು. ಇತ್ತ ದೇವತೆಗಳು— "ಎಷ್ಟೋ ಕಾಲವಾದರೂ ಪರಶಿವನು ನಮಗೆ ಕೊಟ್ಟ ವರವನ್ನು ನೆರವೇರಿಸಲಿಲ್ಲ, ಮರೆತು ಪಾರ್ವತಿಯೊಡನೆ ಲೋಲನಾಗಿ ಕುಳಿತುಬಿಟ್ಟನು, ಈ ತಾರಕನ ಹಿಂಸೆಯಲ್ಲಿ ನಮಗೆ ಒಂದು ದಿನವು ಒಂದು ಯುಗದಂತೆ ಕಳೆಯುತ್ತಿರುವುದು. ಮತ್ತೊಂದು ಬಾರಿಯಾದರೂ ಶಿವನಿಗೆ ಜ್ಞಾಪಿಸಬೇಕು" ಎಂದು ಯೋಚಿಸಿ, ಶಿವನ ಬಳಿಗೆ ಅಗ್ನಿಯನ್ನು ಹೋಗಿಬಾರೆಂದು ಹೇಳಿದರು. ಅವನಾದರೋ—ನನ್ನ ಧನಿಗಾದ ಅವಸ್ಥೆಯನ್ನು ಕಂಡೂ ಕಂಡು ನೀವು ನನ್ನನ್ನು ಹೋಗಿಬಾರೆಂದು ಹೇಳಬಹುದೆ ? ನಾನು ಹೋಗಲಾರೆನೆಂದು ಹೇಳಿದನು. ಶಿವನ ಬಳಿಗೆ ಹೋಗುವುದಕ್ಕೆ ಹೆದರಿಕೊಳ್ಳುವುದೇಕೆ? ಆತನು ತಪ್ಪಿಲ್ಲದೆ ಯಾರನ್ನೂ ಶಿಕ್ಷಿಸುವುದಿಲ್ಲ, ನೀನು ನಮ್ಮಮೇಲೆ ಕರುಣವಿಟ್ಟು ಹೋಗಿಬರಬೇಕು, ಎಂದು ಹರಿಬ್ರಹ್ಮರು ಹೇಳಿದರೂ "ನನಗೆ ಭಯ" ವೆಂದು ಅಗ್ನಿಯು ನುಡಿಯುತ್ತಿದ್ದನು. ಕಡೆಗೆ ದೇವತೆಗಳು— "ಅಯ್ಯಾ! ನಿನಗಾದ ಸುಖದುಃಖಕ್ಕೆ ನಾವೂ ಭಾಗಿಗಳಾಗುತ್ತೇವೆ; ಯೋಚಿಸಬೇಡ, ಹೋಗು" ಎಂದು ನಂಬುಗೆಗೊಟ್ಟು ಕಳುಹಿದರು. ಆಗ ಅಗ್ನಿಯು ಪಾರಿವಾಳದ ಹಕ್ಕಿಯಾಗಿ ಹಾರಿ ಕೈಲಾಸಕ್ಕೆ ಬಂದು, ಶಿವಶಿವೆಯರು ಮಲಗುವ ಮನೆಯ ಕಿಟಕಿಯಲ್ಲಿ ತಲೆಯಿಕ್ಕಿ ನೋಡುತ್ತಿದ್ದನು. ಶಿವೆಯೊಡನೆ ಸುರತದಲ್ಲಿದ್ದ ಶಿವನು ಹಕ್ಕಿಯನ್ನು ಕಂಡು ಲಜ್ಜೆಗೊಂಡವನಂತೆ ಸುರತವನ್ನು ಬಿಟ್ಟು ಹಕ್ಕಿಯನ್ನು ಹಿಡಿದು, ಸ್ರವಿಸುತ್ತಿದ್ದ ತನ್ನ ವೀರ್ಯವನು ಅದರ ಬಾ

ಯಲ್ಲಿ ವಿಸರ್ಜಿಸಿದನು. ಅದನ್ನು ಅಗ್ನಿಯು ಧರಿಸಿಕೊಂಡಕೂಡಲೇ ಅಗ್ನಿಯೇ ಮುಖವಾಗುಳ್ಳ ಸಕಲ ದೇವತೆಗಳಲ್ಲೂ ಅದು ಪ್ರವೇಶಿಸಿ ಸರ್ವರಿಗೂ ಗರ್ಭವನ್ನುಂಟುಮಾಡಿತು. ಎಲ್ಲರ ಮುಖವೂ ಬಿಳಿದಾಯಿತು. ೧ ಸಾವಿರ ವರ್ಷವಾದರೂ ಅವರುಗಳ ಪುರುಷಗರ್ಭವು ಇಳಿಯಲಿಲ್ಲ. ಇದರ ಪರಿಹಾರವಾಗುವುದು ಹೇಗೆಂದು ಅಗ್ನಿಯನ್ನು ಅವರು ಕೇಳಲು, ಅವನ್ನು ಶಿವನಿಂದಲೇ ತಿಳಿಯಕೊಳ್ಳುತ್ತೇನೆಂದು ಹೇಳಿ, ಅಗ್ನಿಯು ತಪಸ್ಸಿನಲ್ಲಿ ಕುಳಿತನು. ಶಿವನು ಮೆಚ್ಚಿ ಇಷ್ಟವರವೇನೆಂದು ಕೇಳಲು, "ಶಿವನೇ! ನಿನ್ನ ವೀರ್ಯವನ್ನು ನಾನು ಧರಿಸಿದುದರಿಂದ ಸಕಲ ದೇವತೆಗಳಿಗೂ ಗರ್ಭವುಂಟಾಗಿರುವುದು; ಅದನ್ನು ದಯೆಯಿಂದ ನೀನು ಪರಿಹರಿಸಬೇಕು" ಎಂದು ಬೇಡಿದನು. ಅದಕ್ಕೆ ಶಿವನು— "ಮೇರುಪರ್ವತದ ಪಕ್ಕದಲ್ಲಿ ನೊದೆಹುಲ್ಲಿನ ವನದಲ್ಲಿರುವ ಗಂಗೆಯೊಳಗೆ ನಿನ್ನ ಗರ್ಭದಲ್ಲಿರುವ ವೀರ್ಯವನ್ನು ತೆಗೆದಿಡು" ಎಂದು ಹೇಳಿ ಅಂತರ್ಹಿತನಾದನು. ಶಿವನಪ್ಪಣೆಯಂತೆಯೇ ಅಗ್ನಿಯು ಶರವಣಕ್ಕೆ ಬಂದು ವೀರ್ಯವನ್ನು ತೆಗೆದು ಗಂಗೆಯಲ್ಲಿಟ್ಟನು. ದೇವತೆಗಳ ಗರ್ಭವೆಲ್ಲ ಹಾಗೆಯೇ ಕಾಣದಂತಾದುವು. ವೀರ್ಯವಾದರೋ ಕುದಿಯುತ್ತ ದಡವನ್ನು ಸೇರಿ ಮರುಗುತ್ತಿದ್ದಿತು. ಆಗ ಆರು ಮಂದಿ ಕೃತ್ತಿಕಾಸ್ತ್ರೀಯರು ನೀರಿಗಾಗಿ ಗಂಗಾತೀರಕ್ಕೆ ಬಂದರು. ಹೊಳೆಯುತ್ತಿರುವ ವೀರ್ಯವನ್ನು ಕಂಡು ಅದರಬಳಿಗೆ ಹೋದರು. ಪ್ರೀತಿಯಿಂದ ಕೆಳಕು ನೋಡುತ್ತಿರುವಲ್ಲಿ ವೀರ್ಯದಲ್ಲಿ ಸ್ವಲ್ಪ ಭಾಗವು ಹಾರಿದು ಸರ್ರನೆ ಅವರ ಶರೀರವನ್ನು ಹತ್ತಿ ಗರ್ಭದಲ್ಲಿ ಹೊಕ್ಕು ವೃದ್ಧಿಗೊಂಡಿತು. ಕೂಡಲೇ ಆ ಗರ್ಭದ ಭಾರವನ್ನು ಹೊರಲಾರದೆ ಕೃತ್ತಿಕಾಂಗನೆಯರು ಪ್ರತಿಯೊಬ್ಬರೂ ಅಲ್ಲೇ ಒಂದೊಂದಾಗಿ ಶಿಶುವನ್ನು ಹೆತ್ತು ಇಳಿಸಿ ಹೊರಟುಹೋದರು. ಗಂಗಾತೀರದಲ್ಲಿ ಉಳಿದಿದ್ದ ಇನ್ನಷ್ಟು ವೀರ್ಯವು ಆಕಾಶದವರೆಗೂ ಉಕ್ಕಿ ಮೇರುಪರ್ವತದ ಶಿಖರವನ್ನು ಸೀಳಿ ನೆಲವನ್ನು ಕೊರೆದು, ನೂರು ಯೋಜನದ ಆಳದ ೫ ಬಾವಿಗಳನ್ನು ಮಾಡಿ ಅವುಗಳೊಳಗೆ ಹೊಕ್ಕಿಕೊಂಡಿತು. ಚೊಕ್ಕವಾದ ಆ ಶಿವನ ವೀರ್ಯವು (ಪಾದರಸವು) ೫ ಬಾವಿಗಳಲ್ಲೂ ೫ ಬಣ್ಣವುಳ್ಳದ್ದಾಗಿರುವುದು. ಆ ಮಹಾಸಿದ್ಧರಸದ ಸ್ಪರ್ಶಮಾತ್ರದಿಂದಲೇ ಮೇರುಪರ್ವತದ

ಮರ ಬಳ್ಳಿ ಹಕ್ಕಿ ಮೃಗ ಮೊದಲಾದುವುಗಳೆಲ್ಲ ಸುವರ್ಣಮಯವಾದುವು. ಮನುಷ್ಯರೆಲ್ಲರೂ ಮರಣರಹಿತರಾದರು. ಆಕಾಶದಲ್ಲಿ ಶಿವನು ಪಾರ್ವತಿಯನ್ನು ಕುರಿತು— ನಿನಗೆ ಮಕ್ಕಳು ಹುಟ್ಟಿರುವರು, ನೋಡುವ ಬಾರೆಂದು ಹೇಳಿ, ಕರೆದುಕೊಂಡು ಗಂಗಾತೀರಕ್ಕೆ ಬಂದನು. ಅಳುತ್ತಿರುವ ಮಕ್ಕಳನ್ನು ಸತಿಪತಿಗಳಿಬ್ಬರೂ ಕಂಡು ನಲಿದಾಡಿದರು. ಪಾರ್ವತಿಯು ಅತಿ ಪ್ರೀತಿಯಿಂದ ಬಂದು ಒಂದೇ ಬಾರಿಗೆ ಆರು ಮಕ್ಕಳನ್ನೂ ಅಮರಿ ಸೇರಿಸಿ ಎತ್ತಿಕೊಂಡಳು. ಆ ಜೋಡಿಸಿದ ರಭಸಕ್ಕೆ ಆರು ಶರೀರಗಳೂ ಕೂಡಿ ಒಂದು ದೇಹವಾಯಿತು. ತಲೆಗಳು ಮಾತ್ರ ಬೇರೆ ಬೇರೆ ಆರಾಗಿದ್ದುವು. ಇಂತಹ ಶಿಶುವನ್ನು ತಾಯಿಯು ಮುಂಡಾಡುತ್ತಿರಲು, ಮೊಲೆಯಲ್ಲಿ ಹಾಲು ತುಂಬಿ ಹೊರಚಿಮ್ಮಿತು. ಆ ಸ್ತನ್ಯವನ್ನು ಕುಮಾರನಿಗೆ ಕುಡಿಸಿದಳು. ದೇವತೆಗಳೆಲ್ಲರೂ ಸಂತೋಷಗೊಂಡು ಅಂತರಿಕ್ಷದಲ್ಲಿ ಪುಷ್ಪವೃಷ್ಟಿಯನ್ನು ಕರೆದರು. ಭವಭವಾನಿಯರು ಮಗುವನ್ನು ಪುಷ್ಪವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ತೆರಳಿದರು. ಕುಮರನು ಪಾರ್ವತಿಯ ತೊಡೆಯಲ್ಲಿ ಮಲಗಿರುವಾಗಲೇ ಸೂರ್ಯಚಂದ್ರಮಂಡಲಗಳನ್ನು ಕಂಡು ಅವುಗಳನ್ನು ಮಿಣುಕುಹುಳುಗಳನ್ನು ಹಿಡಿವಂತೆ ಹಿಡಿಯಲು ಕೈಚಾಚುತ್ತಿದ್ದನು. ಗಿರಿಗಳನ್ನು ಕಿತ್ತು ಚೆಂಡಾಡುವುದಕ್ಕೆ ಉಜ್ಜುಗಿಸುತ್ತಿದ್ದನು. ಭೂಮ್ಯಾಕಾಶಗಳನ್ನು ತಾಟುಂಡೆಯಕಾಯನ್ನಾಡಿಸುವಂತೆ ಆಡಲು ಪ್ರಯತ್ನಿಸುವನು. ಇಂತಹ ಮಹಾಪರಾಕ್ರಮದ ಕಂದನನ್ನು ಪಾರ್ವತಿಯು ನೋಡಿ ಸಂತೋಷದಿಂದ ಉಬ್ಬುತ್ತಿದ್ದಳು. ಇತ್ತ ದೇವತೆಗಳು ಹರಿಬ್ರಹ್ಮರನ್ನು ಕರೆದುಕೊಂಡು ಕೈಲಾಸಕ್ಕೆ ಬಂದರು. ತಾರಕಾಸುರನ ಉಪಟಳವನ್ನು ಕುರಿತು ಮತ್ತೆ ಶಿವನೊಡನೆ ಮೊರೆಯಿಟ್ಟರು. ಪರಮೇಶನು— ಹೆದರಬೇಡಿರೆಂದು ಅವರಿಗೆ ಅಭಯವಿತ್ತು, ತನ್ನ ಕುಮಾರನಿಗೆ ಯುವರಾಜಪಟ್ಟವನ್ನು ಕಟ್ಟಿ, ದೇವತೆಗಳೆಲ್ಲರೂ ಅವನಿಗೆ ಕಾಣಿಕೆಯಿತ್ತು ಮನ್ನಿಸಬೇಕೆಂದು ಅಪ್ಪಣೆ ಮಾಡಲು, ಎಲ್ಲರೂ ಹಾಗೆಯೇ ಆಚರಿಸಿ ಷಣ್ಮುಖಸ್ವಾಮಿಯನ್ನು ಕೊಂಡಾಡಿದರು. ಶಿವನು ಕುಮಾರನನ್ನು ಕುರಿತು—"ಪುತ್ರನೇ! ಲೋಕಕಂಟಕನಾದ ತಾರಕನನ್ನು ಕೊಂದು ಜಯಶೀಲನಾಗಿ ಬಾ" ಎಂದು ಅಪ್ಪಣೆ

ಮಾಡಿ, ಹರಸಿ ಕಳಿಸಿದನು. ಕೂಡಲೇ ಧಳಧಳಂಧಳವೆಂದು ದೇವದುಂ
ದುಭಿಯ ಶಬ್ದವಾಯಿತು. ಆ ಧ್ವನಿಗೆ ಜಗತ್ತೆಲ್ಲ ನಡುಗಿತು. ಸಮು
ದ್ರದೊಳಗಿದ್ದ ಜಲಚರಗಳೆಲ್ಲ ಬೆದರಿ ಓಡಾಡಿದುವು. ಕುಮಾರನಪ್ಪಣೆಯ
ಮೇರೆ ಸಕಲ ದೇವತೆಗಳೂ ತಮ್ಮತಮ್ಮ ವಾಹನವನ್ನೇರಿ ಸೇನೆಯೊಡ
ನೆ ಯುದ್ಧಸನ್ನದ್ಧರಾದರು. ಷಣ್ಮುಖನು ನವಿಲನ್ನೇರಿ ಹರಿಬ್ರಹ್ಮರ
ಮಧ್ಯದಲ್ಲಿ ನಿಂತು ಹೊರಟನು. ಮುಂದೆ ಸ್ತುತಿಪಾಠಕರು ಕುಮಾರ
ದೇವನ ಶೌರ್ಯಾಡಂಬರವನ್ನು ಉದ್ಘೋಷಿಸುತ್ತಿದ್ದರು. ಸಕಲ ದೇವತೆ
ಗಳೂ ಜಯಜಯವೆಂದು ಕೈಯೆತ್ತಿ ಹೂಗಳೆದರು. ಕಹಳೆಗಳು ಭೋ
ರ್ಗರೆದುವು. ದಿಕ್ಪಾಲಕರು ಷಣ್ಮುಖನ ಸುತ್ತಲೂ ತಮ್ಮತಮ್ಮ ದಿಕ್ಕಿ
ನಲ್ಲಿ ನಿಂತು ಹೊರಟು, ಕೈಬೀಸಿ ಸೇನೆಯನ್ನು ನಡಿಸುತ್ತಿದ್ದರು. ಗ
ಣಾಧೀಶ್ವರರುಗಳು ಉಘೇ! ಯೆಂದು ಕೂಗಿಡುತ್ತಿದ್ದರು. ಎತ್ತನೋಡಿ
ದರೂ ಆನೆ ಕುದುರೆಗಳು, ಎಲ್ಲಿನೋಡಿದರೂ ಛತ್ರಚಾಮರಗಳು, ಹೇಗೆ
ತಿರುಗಿದರೂ ಮಣಿಕಿರೀಟಾವಳಿಗಳು, ಎಲ್ಲಿಯವರೆಗೆ ನೋಡಿದರೂ ಆ
ಯುಧಗಳ ಸಾಲುಗಳು ಕಣ್ಣಿಗೆ ಕಾಣಿಸುತ್ತಿದ್ದುವು. ಇಂದ್ರನು ಈ
ಮಹಾದೇವಸೇನೆಯನ್ನು ನೋಡಿ, ಇಷ್ಟೊಂದು ಸೇನೆಯೂ ಎಲ್ಲಿ ಅಡ
ಗಿದ್ದಿತು! ಎಂದು ಆಶ್ಚರ್ಯಪಟ್ಟು, ಇಂತಹ ಮಹಾಸೇನೆಯನ್ನು ಗೆಲ್ಲುವು
ದಕ್ಕೆ ಆ ನೀಚತಾರಕನಿಗೆ ಶಕ್ತಿಯಲ್ಲಿ ಬಂದಿತು? ಈದಿನ ತಮಗೇ ಜಯವಾ
ಗುವುದು ನಿಜವೆಂದು ನಿಶ್ಚೈಸಿ, ಸಂತೋಷದಿಂದ ತೆರಳಿದನು. ಅತ್ತ
ತಾರಕನ ಬಳಿಗೆ ಒಬ್ಬ ದೂತನು ಹೋಗಿ—ದೇವತೆಗಳು ಶಿವಕುಮಾರನಿಗೆ
ಸೈನ್ಯಾಧಿಪತಿಪಟ್ಟವನ್ನು ಕಟ್ಟಿ ನಿನ್ನ ಮೇಲೆ ಯುದ್ಧಕ್ಕೆ ಬರುತ್ತಿರುವ
ರು, ಎಂದು ಬಿನ್ನೈಸಿದನು. ಅದನ್ನು ಕೇಳಿ ತಾರಕನು ಕೋಪದಿಂದ ಕೆಂ
ಗಣ್ಣನ್ನು ಬಿಡುತ್ತ, ಕುಡಿಮೀಸೆಯು ಕುಣಿದಾಡುತ್ತಿರಲು ಕೈಕತ್ತಿಯ
ನ್ನು ಜಳಪಿಸಿ, ' ನನ್ನ ಸಕಲ ಸೇನೆಯೂ ಯುದ್ಧಕ್ಕೆ ಸಿದ್ಧವಾಗಲಿ,
ಎಂದು ನುಡಿದನು. ಕ್ಷಣಕಾಲದಲ್ಲಿ ಮಹಾಸಮುದ್ರದಂತೆ ಸೈನ್ಯವು ಅಣಿ
ಯಾಗಿ ನಿಲ್ಲಲು, ತಾನು ಕಾಂಚನಮಣಿರಥವನ್ನೇರಿ, ವಾದ್ಯಧ್ವನಿಯ
ಕೋಲಾಹಲದಿಂದ ಸಾಗಿಬಂದನು. ಅವನ ಒಡಹುಟ್ಟಿದ ಗಜಶಿರ, ಶಂ
ಖಕರ್ಣ, ಶತಮಾಯು, ವೃಷ, ಮಹಾನಾಭ, ದುಂದುಭಿ, ವಿರೂಪಾಕ್ಷ,

ಸ್ವಭರ್ಾನು, ಹಯಗ್ರೀವ ಮೊದಲಾದ ಮಹಾದೈತ್ಯರೆಲ್ಲರೂ ತಮ್ಮತಮ್ಮ ಸೇನೆಯೊಡನೆ ಪಕ್ಕಗಳಲ್ಲಿ ಬರುತ್ತಿದ್ದರು. ಸೇನೆಯ ಲೆಕ್ಕವನ್ನು ಮಾಡುವುದಕ್ಕೆ ಬ್ರಹ್ಮನಿಗೂ ಸಾಧ್ಯವೋ ಅಲ್ಲವೋ ಎಂದು ಊಹಿಸುವಷ್ಟು ರಾಕ್ಷಸಸೇನೆಯು ಮಹತ್ತರವಾಗಿದ್ದಿತು. ದೇವತೆಗಳು ಇದನ್ನು ಕಂಡು ಆಶ್ಚರ್ಯಪಟ್ಟರು. ಆಗ ತಾರಕನ ದಳಪತಿಯಾದ ವಜ್ರನಾಭನು ತಮ್ಮ ಸೇನೆಯಲ್ಲಿ ಪದ್ಮಾಕಾರವಾಗಿ ವ್ಯೂಹರಚನೆಯನ್ನು ಮಾಡಿದನು. ಸೇನೆಯಲ್ಲಿ ಪಟುಭಟರಾದವರನ್ನೆಲ್ಲ ದಳಗಳಸ್ಥಾನದಲ್ಲಿ ನಿಲ್ಲಿಸಿದನು. ತಾರಕನ ತಮ್ಮಂದಿರನ್ನೆಲ್ಲ ಮಧ್ಯದ ಕೇಸರಗಳ ಸ್ಥಾನದಲ್ಲಿ ನಿಲ್ಲಿಸಿದನು. ಅದರ ಮಧ್ಯದ ಕರ್ಣಿಕೆಯ ಬಳಿಯಲ್ಲಿ ಜಂಭನನ್ನು ನಿಲ್ಲಿಸಿದನು. ಈ ವ್ಯೂಹದ ಮುಂಗಡೆಯಲ್ಲಿ ಶುಂಭನೂ, ಹಿಂದುಗಡೆಯಲ್ಲಿ ಶಬಲನೂ, ಎಡಗಡೆಯಲ್ಲಿ ಕೇತುವೂ, ಬಲದಲ್ಲಿ ಶರಭನೂ ನಿಲ್ಲಿಸಲ್ಪಟ್ಟರು. ತಾರಕಾಸುರನು ಈ ಸೇನಾರಚನೆಯನ್ನು ನೋಡಿ ಸಂತೋಷಿಸಿ, ದಳವಾಯಿಗೂ ಸೇನಾಮುಖಂಡರಿಗೂ ವೀಳಯವನ್ನುಕೊಟ್ಟು ಉತ್ಸಾಹಿಸಿ, ತಾನು ಮೇಲ್ಗಾವಲಿನಲ್ಲಿ ನಿಂತುಕೊಂಡನು. ದೇವದಾನವಸೇನೆಗಳೆರಡೂ ಮುಂಗಡೆಯಲ್ಲಿ ಸಂಧಿಸಿದುವು. ಉಭಯಪಕ್ಷದ ವೀರರೂ ಮೂದಲಿಸಿ ಸಿಂಹನಾದವನ್ನು ಮಾಡಿ ಧನುಸ್ಸುಗಳನ್ನು ಧ್ವನಿ ಮಾಡಿ ಬಾಣವನ್ನು ಹೂಡಿ ಪ್ರಯೋಗಿಸುತ್ತ ಬಂದರು. ನಿಮಿಷನಿಮಿಷಕ್ಕೆ ಕೋಪವು ಉಕ್ಕೇರಲು, ಬಿಲ್ಲಿನವರು ಬಿಲ್ಲಿನವರೊಂದಿಗೂ, ಕತ್ತಿಯವರು ಖಡ್ಗದವರೊಡನೆಯೂ, ಭಲ್ಲೆಯವರು ಭರ್ಜಿಯವರೊಡನೆಯೂ, ಆನೆಯವರು ಆನೆಯವರಮೇಲೆಯೂ, ರಾವುತರು ರಾವುತರಮೇಲೂ, ರಥಿಕರು ರಥಿಕರಮೇಲೂ ಬಿದ್ದು ದೇಹಾಭಿಮಾನವನ್ನು ತೊರೆದು ಕಾದಾಡುತ್ತಿದ್ದರು. ಒಬ್ಬರಮೇಲೊಬ್ಬರು ಬಿದ್ದು ಮುಂದೆ ಸಾಗುತ್ತಲೂ, ಕೈಗೆ ಸಿಕ್ಕಿದವನ ಮುಂದಲೆಯನ್ನು ಹಿಡಿದು ಬಗ್ಗಿಸಿ, ಬಲಗೈಕತ್ತಿಯಿಂದ ತರಿಯುತ್ತಲೂ, ದೂರದಲ್ಲಿದ್ದ ಶತ್ರುವನ್ನು ಭಲ್ಲೆಯಿಂದ ಇರಿಯುತ್ತಲೂ, ಮಗ್ಗುಲಿಗೆ ಬಂದವನನ್ನು ಈಟಿಯಿಂದ ತಿವಿಯುತ್ತಲೂ, ಮೂದಲಿಸಿದವನನ್ನು ಮತ್ಸರಿಸಿ ಹಾರಿ ಒದೆದು ಕೆಡವಿ ಹೊಟ್ಟೆಯ ಬಗಿಯುತ್ತಲೂ, ತಲೆಗಳನ್ನೂ ಬಾಹುಗಳನ್ನೂ ಕಡಿದು ಹಾಡಿಸುತ್ತಲೂ, ಮುಂದೆ ಹೆಣಗಳನ್ನು ತುಳಿದು ವೀರಾವೇಶದಿಂದ ಮುಂ

ಡಿಯೂರಿ ಕುಳಿತು ಬಾಣಗಳನ್ನೆಸೆದು ಸಿಂಹನಾದವನ್ನು ಮಾಡುತ್ತಲೂ, ಆನೆಗಳ ಸುಂಡಿಲಿನಿಂದ ಪ್ರತಿಪಕ್ಷದ ಆನೆಯಮೇಲೆ ಕುಳಿತಿರುವ ಮಾವು ತನನ್ನು ಎಳೆಸಿ ಕೆಳಕ್ಕೆ ಕೆಡಹುತ್ತಲೂ, ಆನೆಗಳನ್ನು ಪ್ರತಿ ಸೇನೆಯಲ್ಲಿ ನುಗ್ಗಿಸಿ ಕೊಂಬಿಗೆ ಸಿಕ್ಕಿಸಿರುವ ಅಲಗುಗಳಿಂದ ಶತ್ರುಗಳನ್ನು ಇರಿಸು ತ್ತಲೂ, ರಾವುತರು ವಾಘೆಗಳನ್ನೆಳೆದು ಕುದುರೆಗಳನ್ನು ಚಿಮ್ಮಿಸಿ ಎರಡು ಕೈಗಳಿಂದಲೂ ಇಕ್ಕಡೆಗಳಲ್ಲಿ ಸಿಕ್ಕಿದ ಭಟರನ್ನು ತರಿಯುತ್ತಲೂ, ರಥಿ ಕರು ವರ್ಷಾಕಾಲದ ಮೇಘಗಳಂತೆ ಬಾಣವರ್ಷವನ್ನು ಕರೆದು ಪ್ರತಿಪ ಕ್ಷದ ರಥಸಾರಥಿಹಯಾದಿಗಳನ್ನು ನುಚ್ಚುನೂರುಮಾಡುತ್ತಲೂ ಮಹಾಭೀಕ ರವಾಗಿ ಕಾದಾಡುತ್ತಿದ್ದರು. ಮುಹೂರ್ತಕಾಲದೊಳಗಾಗಿ ಸೇನೆಯಮುಂ ಭಾಗವು ಎರಡು ಕಡೆಯಲ್ಲೂ ಬಯಲಾಗುತ್ತ ಬಂದಿತು. ಮಾಂಸರಾಶಿಗ ಳು, ಮೂಳೆಗಳ ಒಟ್ಟಲುಗಳು, ರಕ್ತದ ಕಾಲ್ವೆಗಳು, ಕಾಲು ತಲೆ ತೋಳು ತೊಡೆಗಳ ತುಂಡುಗಳೂ ರಣಾಂಗಣದಲ್ಲಿ ತುಂಬಿ ತುಳುಕುತ್ತಿ ದ್ದುವು. ಮುಂದಿನ ಸೈನ್ಯವು ನಷ್ಟವಾದುದನ್ನು ವಜ್ರನಾಭನು ನೋ ಡಿ, ರೋಷದಿಂದ ಮಹಾಗರ್ಜನೆಯನ್ನು ಮಾಡಿ, ದೈತ್ಯನಾಯಕರ ಸೇ ನೆಯೊಡನೆ ಕೂಡಿ ತಾನೇ ದೇವಸೇನೆಯಮೇಲೆ ಯುದ್ಧಕ್ಕೆ ಅನುವಾಗಿ ನಿಂತು "ಬಲಶಾಲಿಯಾದ ದೇವೇಂದ್ರನ ಪೌರುಷವನ್ನು ನೋಡುತ್ತೇ ನೆ, ಮುಂದಕ್ಕೆ ಬರಹೇಳು" ಎಂದು ನುಡಿಯುತ್ತ ರಥವನ್ನು ಮುಂಗಡೆಗೆ ಸಾಗಿಸಿದನು. ಎಂಬಲ್ಲಿಗೆ ಹನ್ನೊಂದನೇ ಅಧ್ಯಾಯವು ಸಂಪೂರ್ಣವು.

---

## ೧೨ ನೇ ಅಧ್ಯಾಯವು

### ಕುಮಾರ ತಾರಕಸೇನಾಯುದ್ಧವು.

ಎಲೆ ಸಿದ್ಧರಾಮೇಶನೇ ಕೇಳು, ಅತ್ತ ರಾಕ್ಷಸಸೇನೆಯಲ್ಲಿ ವಜ್ರ ನಾಭನು ಪ್ರಮುಖರಾಕ್ಷಸರೊಡನೆ ಕೂಡಿ ಇದಿರಾಗಲು, ಅದನ್ನು ಕಂಡು ಇತ್ತ ದೇವಸೇನೆಯಲ್ಲಿ ಇಂದ್ರಪ್ರಮುಖರಾದ ದೇವಶ್ರೇಷ್ಠರುಗಳೆಲ್ಲರೂ ಕೂಡಿ ಪ್ರತಿಭಟಿಸಿದರು. ಸಿದ್ಧ ಸಾಧ್ಯ ಯಕ್ಷ ವಸು ವಿದ್ಯಾಧರಕಿನ್ನರಾ ದಿಗಳ ಸೇನೆಯು ವಾದ್ಯಧ್ವನಿ ಮಾಡುತ್ತ ಕೋಲಾಹಲದಿಂದ ರಾಕ್ಷಸರ ಮೇಲೆ ಬಿದ್ದು ಬಾಣದ ಮಳೆಯನ್ನು ಕರೆದು, ಇರಿ ತಿವಿ ಕೊಲ್ಲು ತರಿ

ಬಗಿ ಎಂದು ಮೊದಲಾಗಿ ಕೂಗಿ ಪ್ರೋತ್ಸಾಹಿಸುತಲಿದ್ದಿತು. ಇದನ್ನು ವಜ್ರನಾಭನು ಕಂಡು– “ಓಹೊ! ಇವರು ದಿಕ್ಪಾಲಕರೊ? ಇವನೇ ಇಂದ್ರನೊ? ಈ ಬಾಣಾವಳಿಯನ್ನು ಕರೆಯುವವರು ಶೂರರೊ? ಚೆನ್ನಾಯಿತು! ಹುಲ್ಲೆಗಳು ಹುಲಿಯ ಕಾಡಿಗೆ ಯುದ್ಧ ಮಾಡುವುದಕ್ಕಾಗಿ ಬಂದಂತಾಯಿತು!” ಎನ್ನುತ್ತ, ತನ್ನ ಭುಜವನ್ನು ತಟ್ಟಿ ಆರ್ಭಟಿಸಿ, ಆಯುಧವನ್ನೆತ್ತಿದನು. ಆಗ ದೇವತೆಗಳು ತಮ್ಮ ಕಡೆಯವರನ್ನು ಕುರಿತು– “ಬೆದರಬೇಡಿರಿ, ಹಿಂದೆ ಬೆಂಬಲವಾಗಿ ಶಿವಪುತ್ರನಿದಾನೆ; ಮುಂದಿಟ್ಟ ಹೆಜ್ಜೆಯನ್ನು ಹಿಂದೆಗೆಯದಿರಿ, ರಾಕ್ಷಸರ ಪೌರುಷವನ್ನು ಲಕ್ಷ್ಯ ಮಾಡಬೇಡಿರಿ, ಹೊಡೆಯಿರಿ, ತಿವಿಯಿರಿ, ಬಗಿಯಿರಿ, ಹಿಡಿಯಿರಿ, ಬಡಿಯಿರಿ” ಎಂದು ಮೊದಲಾಗಿ ಹೇಳಿ ಉತ್ಸಾಹಗೊಳಿಸುತ್ತ, ರಾಕ್ಷಸರಮೇಲೆ ಬಿದ್ದು ಕತ್ತರಿಸುತ್ತ ಬಂದರು. ವಜ್ರನಾಭನು ದೇವತೆಗಳ ಸಾಹಸವನ್ನು ನೋಡಿ ರೋಷಾರುಣನೇತ್ರನಾಗಿ, ಧನುಸ್ಸಿನಿಂದ ಎಡೆಬಿಡದೆ ಬಾಣದ ಸಮೂಹವನ್ನು ಎಲ್ಲ ಕಡೆಗೂ ಪ್ರಯೋಗಿಸುತ್ತ, ಕ್ಷಣೆ ಕ್ಷಣೆ ಹೆಚ್ಚುತ್ತಿರುವ ವೀರಾವೇಶದಿಂದ ಆರ್ಭಟಿಸುತ್ತ, ಪ್ರಳಯಕಾಲದ ರುದ್ರನಂತೆ ಭೀಕರನಾಗಿ ಪ್ರತಿಭಟರನ್ನು ಕಡಿದು ಮಲಗಿಸುತ್ತ, ದೇವನಾಯಕರನ್ನು ಮೂದಲಿಸಿ, ಇಂದ್ರನನ್ನು ಹೊಡೆದು, ಅಗ್ನಿಯನ್ನು ಹಿಂದಕ್ಕೆ ಸರಿಸಿ, ಯಮನ ಸಾಹಸವನ್ನು ನಿಲ್ಲಿಸಿ, ನಿರ್ಋತಿಯ ಶರೀರವನ್ನು ಜರ್ಝರಗೊಳಿಸಿ, ವರುಣನನ್ನು ಗಾಯ ಮಾಡಿ, ವಾಯುವಿನ ದೇಹವನ್ನು ಸೀಳಿ, ಕುಬೇರನ ರಥವನ್ನು ಹಾಳ್ಮಾಡಿ, ಈಶಾನನ ಎದೆಯಲ್ಲಿ ಬಾಣವನ್ನು ನಟ್ಟು, ಉಳಿದ ಸಾಧಾರಣ ದೇವತೆಗಳಿಗೆಲ್ಲ ಕೈಕಾಲು ಮುರಿದು ಗಾಯ ಮಾಡಿ ರಕ್ತವನ್ನು ಕಾರಿಸಿ, ನಾನಾವಿಧವಾಗಿ ಭಂಗಿಸಿದನು. ಆಗ ದೇವತೆಗಳು ಮುಖವನ್ನು ಹಿಂದೆಗೆದು– ಅಯ್ಯೋ! ಸುಮ್ಮನೆ ಕುಮಾರನನ್ನು ನಂಬಿ ನಾವು ಇಲ್ಲಿಗೆ ಬಂದು ಮೃತ್ಯುವಿನ ಬಾಯ್ಗೆ ತುತ್ತಾಗುವಂತಾಯ್ತಲ್ಲ! ಎಂದು ಗೋಳಿಟ್ಟು ಓಡುತ್ತಿದ್ದರು. ವಿಷ್ಣುವು ಇವರನ್ನು ಕಂಡು ಛೀಗುಟ್ಟಿ, ತನ್ನ ವಾಹನವನ್ನು ವಜ್ರನಾಭನ ಮುಂದಕ್ಕೆ ಸರಿಸಿದನು. ಅವರೀರ್ವರಿಗೂ ಮಹಾಯುದ್ಧವು ಜರಗಿತು. ಯುದ್ಧಾಂಕಣವೆಲ್ಲ ಇವರುಗಳ ಬಾಣಗಳಿಂದ ತುಂಬಿಹೋಯಿತು. ಆಕಾಶವು ಇವರ

ಗರ್ಜನೆಯನ್ನು ಹಿಡಿಯಲಾರದಂತಾಯಿತು. ಗರುಡನ ಹಾರಾಟಕ್ಕೂ ರಾಕ್ಷಸನ ರಥದ ಗಾಲಿಗಳ ಓಡಾಟಕ್ಕೂ ಭೂಮಿಯು ಸಾಲದಂತಾಯಿತು. ಇಬ್ಬರೂ ಸಮಜೋಡಿಯಾಗಿ ಶಸ್ತ್ರಾಸ್ತ್ರ, ದಿವ್ಯಾಸ್ತ್ರ, ಮಂತ್ರಾಸ್ತ್ರಗಳನ್ನೆಲ್ಲ ಪ್ರಯೋಗಿಸುತ್ತ ಬಂದರು. ಒಬ್ಬನು ಸರ್ಪಾಸ್ತ್ರವನ್ನು ಬಿಟ್ಟರೆ ಮತ್ತೊಬ್ಬನು ಗರುಡಾಸ್ತ್ರವನ್ನು, ಒಬ್ಬನ ಅಗ್ನ್ಯಸ್ತ್ರಕ್ಕೆ ಮತ್ತೊಬ್ಬನು ಜಲಾಸ್ತ್ರವನ್ನು, ಒಬ್ಬನ ಪರ್ವತಾಸ್ತ್ರಕ್ಕೆ ಮತ್ತೊಬ್ಬನು ವಜ್ರಾಸ್ತ್ರವನ್ನು ಬಿಟ್ಟು, ಕತ್ತರಿಸುತ್ತ ಬಂದರು. ಆಗ ವಿಷ್ಣುವು ಬೇಸತ್ತು ಕೋಪದಿಂದ ಬೊಬ್ಬಿರಿದು, "ಎಲೆ ನೀಚನೆ! ನೀನೆಯೋ ತಾರಕನ ದಳಪತಿ ? ನನ್ನೊಡನೆ ಸಮನಾಗಿ ಕಾದಾಡುವುದಕ್ಕೆ ನೀನೆಷ್ಟರವನು ? ಇದುವರೆಗೆ ಸೆಣಸಿದ ನಿನ್ನ ಹೆಮ್ಮೆಯನ್ನು ಇನ್ನು ತೋರಿಸು" ಎಂದು ಮೂದಲಿಸಿ, ಮಹಾವೈಷ್ಣವಾಸ್ತ್ರವನ್ನು ಕರ್ಣಾಂತವಾಗಿ ಸೆಳೆದು ಅಬ್ಬರಿಸಿ ದೈತ್ಯನ ಮೇಲೆ ಬಿಟ್ಟನು. ಅದು ಕಿಡಿಯನ್ನು ಕಾರುತ್ತ ಹೋಗಿ ವಜ್ರನಾಭನ ಕತ್ತನ್ನು ಥಟ್ಟನೆ ಕತ್ತರಿಸಿ ರುಂಡವನ್ನು ಹಾರಿಸಿಕೊಂಡುಹೋಯಿತು. ಅವನ ಮುಂಡವು ಪೂರ್ವಸಂಸ್ಕಾರದಿಂದ ಅರ್ಧಯಾಮದವರೆಗೂ ಬಾಣಗಳನ್ನು ಪ್ರಯೋಗಿಸುತ್ತಿದ್ದಿತು ! ಆಗ ಅವನ ಕಡೆಯ ಸೇನೆಯು ಕೋಪವೇರಿ ಹರಿಯ ಮೇಲೆ ಬಿದ್ದಿತು. ವಿಷ್ಣುವು ಸಿಟ್ಟಿನಿಂದ ಬಾಣಗಳನ್ನು ಸುರಿಸಿ ರಾಕ್ಷಸರನ್ನೆಲ್ಲ ಉರುಳಿಸುತ್ತ ಬಂದನು. ಇದನ್ನು ಮಹಾನಾಭನು ಕಂಡು, "ಆಹಾ! ಮದದಾನೆಯು ಸುಂಡಿಲಿನಲ್ಲಿದ್ದ ಕಬ್ಬನ್ನು ಕಿತ್ತಂತೆ ನಮ್ಮ ಕಡೆಯ ವಜ್ರನಾಭನನ್ನು ಕೊಂದವನಾರು ? ಮುಂದೆ ಬಾ ! ನಿನ್ನ ಶೌರ್ಯವನ್ನು ನೋಡುತ್ತೇನೆ" ಎಂದು ಹೇಳುತ್ತ, ಹರಿಯ ಮುಂಗಡೆಗೆ ಬಂದು ಬಾಣವನ್ನು ತೊಟ್ಟನು. ವಿಷ್ಣುವಾದರೋ— "ಎಲೋ ನೀಚನೇ! ಆ ವಜ್ರನಾಭನು ತನ್ನ ಬಳಿಗೆ ನಿನ್ನನ್ನು ಕರೆದುಕೊಳ್ಳುವುದಕ್ಕಾಗಿ ಹೇಳಿಕಳುಹಿರಬಹುದು! ಅದರಿಂದಲೇ ನೀನು ನನಗಿದಿರಾಗಿರುವೆ; ಈಗಳೂ ದಯೆಯಿಟ್ಟು ಕ್ಷಮಿಸುತ್ತೇನೆ; ತಲೆಯನ್ನುಳುಹಿಕೊಂಡು ಸುಮ್ಮನೆ ಹೋಗು" ಎಂದು ಹೇಳಿ, ಐದು ಬಾಣಗಳನ್ನು ಬಿಟ್ಟು, ಅವನ ಬಾಣವನ್ನು ಖಂಡಿಸಿ, ಮತ್ತೆ ನಾಲ್ಕು ಬಾಣಗಳನ್ನೆಸೆದು ರಾಕ್ಷಸನ ರಥ ತುರಗ ಸಾರ

ಥಿ ಧ್ವಜಗಳನ್ನೆಲ್ಲ ಹಾಳುಮಾಡಿದನು. ಆಗ ಮಹಾನಾಭನು ಥಟ್ಟನೆ ಬೇರೊಂದು ರಥವನ್ನೇರಿ, "ಈಗ ನನ್ನ ಬಾಣಗಳನ್ನು ಕತ್ತರಿಸು ನೋಡುವ" ಎಂದು ಹೇಳಿ, ನಾಲ್ಕು ಬಾಣಗಳನ್ನು ಪ್ರಯೋಗಿಸಿ, ಹರಿಯ ತೋಳುಗಳಲ್ಲಿ ನಟ್ಟನು. ವಿಷ್ಣುವು ಅದರಿಂದ ನೊಂದು, ಅಯ್ಯೋ! ಎಂದು ಕೂಗಿದನು. ಆಗ ದಿಕ್ಪಾಲಕರೆಲ್ಲರೂ ರೋಷವೇರಿ ಮಹಾನಾಭನ ರಥದ ಸುತ್ತಲೂ ಮುತ್ತಿ ಬಾಣವನ್ನು ಕವಿದರು. ಅವನು ಮಹಾರೌದ್ರದಿಂದ ಇವರೆಲ್ಲರನ್ನೂ ಪರಿಭವಗೊಳಿಸಿ, ಮತ್ತೆ ವಿಷ್ಣುವಿನ ಮೇಲೆ ಏಳು ಬಾಣಗಳನ್ನು ಎಚ್ಚನು. ಅದರಿಂದ ದೇಹದಲ್ಲಿ ಗಾಯವಾಗಿ ರಕ್ತವು ಸುರಿಯುತ್ತಿತ್ತು. ಹರಿಯು ಈ ಅವಸ್ಥೆಯನ್ನು ನೋಡಿ, ಕಿನ್ನರ ಕಿಂಪುರುಷ ವಿದ್ಯಾಧರಾದಿದೇವತೆಗಳೆಲ್ಲವೂ ದಿಕ್ಕುದಿಕ್ಕಿಗೆ ತಲೆತಪ್ಪಿಸಿಕೊಂಡು ಓಡಿತು. ಓಡಲಾರದೆ ರಾಕ್ಷಸರ ಕೈಗೆ ಸಿಕ್ಕಿದವರು ಹಲ್ಕಿರಿದು ಪ್ರಾಣದಾನವನ್ನು ಬೇಡಿಕೊಂಡರು. ಆಗ ದಿಕ್ಪಾಲಕರೆಲ್ಲರೂ ಕುಮಾರಸ್ವಾಮಿಯ ಬಳಿಗೆ ಬಂದು ನಮಸ್ಕರಿಸಿ, ತಮ್ಮವಸ್ಥೆಯನ್ನು ಹೇಳಿಕೊಂಡು ನಮ್ಮನ್ನುದ್ಧರಿಸಬೇಕೆಂದು ಬೇಡಿದರು. ಕಾಲ್ಮುರಿದು, ಗಾಯವೇರಿ, ರಕ್ತ ಸುರಿದು, ತಲೆಯೊಡೆದು, ನಾನಾವಿಧವಾಗಿ ಭಂಗಗೊಂಡಿರುವ ದೇವತೆಗಳನ್ನೆಲ್ಲ ಷಣ್ಮುಖನು ಸಮಾಧಾನಮಾಡಿ, ಬೆನ್ನ ಹಿಂದಿಟ್ಟುಕೊಂಡು, ನವಿಲನ್ನೇರಿ ತಾನೇ ಯುದ್ಧಕ್ಕೆ ಸನ್ನದ್ಧನಾಗಿ ಹೊರಟನು. ಗರುಡರನ್ನು ಬಡಿ, ಯಕ್ಷರನ್ನು ಕಡಿ, ಗಂಧರ್ವರನ್ನು ಜಡಿ, ಕಿನ್ನರರನ್ನು ಹಿಡಿ, ಎಂದು ಮೊದಲಾಗಿ ಕೂಗಿಕೊಂಡು ಅಟ್ಟಿಬರುತ್ತಿರುವ ಮಹಾನಾಭನ ಸೈನ್ಯಕ್ಕೆ ಇದಿರಾದನು. ಹನ್ನೆರಡು ಕಣ್ಣುಗಳಿಂದಲೂ ಕಿಡಿಯನ್ನು ಸುರಿಸುತ್ತ ಪ್ರಳಯಕಾಲದ ರುದ್ರನಂತೆ ಭೀಕರನಾಗಿ ದೈತ್ಯ ಸೇನೆಯನ್ನು ದುರುದುರನೆ ನೋಡಿದನು. ಕೈಗೆ ಬಿಲ್ಲನ್ನು ತೆಗೆದುಕೊಂಡು, ಬಾಣವನ್ನು ಸಿಂಜಿನಿಯಲ್ಲಿ ಜೋಡಿಸಿ ಬಿಡಲಾರಂಭಿಸಿದನು. ಬಗ್ಗಿದ ಬಿಲ್ಲು ನಿಲ್ಲಲಿಲ್ಲ. ಸಿಂಜಿನಿಯ ಶಬ್ದವು ತಪ್ಪಲಿಲ್ಲ, ಬಾಣದ ಪುಂಖಾನುಪುಂಖಗಮನವು ವಿಚ್ಛಿತ್ತಿಗೊಳ್ಳಲಿಲ್ಲ, ಇದಿರಾಗಿ ಕುಮಾರನ ಬಳಿಗೆ ಬಂದು ಬಾಣವಾದರೂ ಬರಲಿಲ್ಲ, ಅವನ ಬಾಣಗಳ ಜೋಡಣೆಗೆ ಯುದ್ಧಾಂಗಣವು ಸಾಲಲಿಲ್ಲ; ಭೂಮ್ಯಂತರಿಕ್ಷಗಳೊಂದೂ ಕಾಣಲಿಲ್ಲ. ಕುಮಾರನು ಅನಾಮಾಗ ಬಾಣವನ್ನು

ಬತ್ತಳಿಕೆಯಿಂದ ತೆಗೆವನೋ ಯಾವಾಗ ತೊಡುವನೋ ಯಾವಾಗ ಬಿಡುವನೋ ಒಬ್ಬರಿಗೂ ಕಾಣದಂತೆ ಅಷ್ಟೊಂದು ಕರಲಾಘವದಿಂದ ಕ್ಷಣಕಾಲದಲ್ಲಿ ಬಾಣಲೋಕವನ್ನು ನಿರ್ಮಿಸಿದಂತೆ ಮಾಡಿಬಿಟ್ಟನು. ದೈತ್ಯರ ಸೇನೆಯೊಳಗೆ ಕುಮಾರನ ಬಾಣದೇಟಿನ ಬೆಸೆಯಿಂದ ಕಾಲಾಳ್ಗಳು ಕುದುರೆಗಳಮೇಲೂ, ಕುದುರೆಗಳು ಆನೆಗಳಮೇಲೂ, ಆನೆಗಳು ರಥಗಳ ಮೇಲೂ ಬಿದ್ದು, ಒಂದರಿಂದೊಂದು ತಾವು ತಾವೇ ಹತಿಗೊಳ್ಳುತ್ತಿದ್ದುವು. ಮಹಾನಾಭನ ದೇಹದ ರೋಮಕೂಪಗಳಲ್ಲೆಲ್ಲ ಬಾಣಗಳು ನಾಟಿಕೊಂಡುವು. ಅವನ ಕಿರೀಟ ಭುಜಕೀರ್ತಿ ಧನುಸ್ಸು ಬತ್ತಳಿಕೆಯೆಲ್ಲ ನುಚ್ಚು ನೂರಾದುವು. ರಥವು ಮುರಿದುಬಿದ್ದಿತು. ಸಾರಥಿಯೂ ಅಶ್ವಗಳೂ ಯಮಲೋಕಕ್ಕೆ ತರಳಿದುವು. ಆಗ ಮಹಾನಾಭನು—ಇವನು ಬಹು ಪರಾಕ್ರಮಶಾಲಿಯಾಗಿ ಕಾಣುತ್ತಾನೆ, ಇರಲಿ, ನೋಡಿಕೊಳ್ಳುತ್ತೇನೆ, ಎಂದು ಝುಗ್ಗನೆ ಭೂಮಿಗೆ ದುಮಿಕಿ, ಮೀಸೆಯನ್ನು ತಿರುಹಿ, ದೊಡ್ಡ ಕತ್ತಿಯನ್ನು ಹಿಡಿದು ಆರ್ಭಟಿಸಿ, ಕುಮಾರಸ್ವಾಮಿಯ ಬಳಿಗೆ ಬರಲನುವಾದನು. ಕರಿಯ ಮೋಡದಂತೆ ಸ್ಥೂಲಕೃಷ್ಣದೇಹಿಯಾಗಿ ಬರುತ್ತಿರುವ ರಾಕ್ಷಸನನ್ನು ಷಣ್ಮುಖನು ಕಂಡು ನಕ್ಕು, ತೀಕ್ಷ್ಣವಾದ ಮೊನೆಯ ಬಾಣಗಳೆರಡನ್ನು ಗುರಿಯಿಟ್ಟು ಪ್ರಯೋಗಿಸಲು, ಮಹಾನಾಭನ ತಲೆಯನ್ನು ಅವು ಹಾರಿಸಿಕೊಂಡು ಹೋದುವು. ಕೂಡಲೇ ದೇವತೆಗಳ ಸೇನೆಯಲ್ಲಿ ವಾದ್ಯಗಳು ಮೊಳಗಿದುವು. ಜಯಘೋಷವು ವಿಜೃಂಭಿಸಿತು. ರಾಕ್ಷಸನ ಸೇನೆಯಲ್ಲಿ ಹಾಹಾಕಾರವು ಹುಟ್ಟಿತು. ಉಳಿದ ಸೇನೆಯೆಲ್ಲವೂ ಕುಮಾರನ ಮೇಲೆ ಕವಿದಿತು. ಸೊಳ್ಳೆಗಳ ಬಳಗವನ್ನು ಹೊಸಗುವಂತೆ ನಿಮಿಷಮಾತ್ರದಲ್ಲಿ ಅವರನ್ನೆಲ್ಲ ಭೂಮಿಗುರುಳಿಸುತ್ತ ಬಂದನು. ಬಳಿಕ ಗಜಶಿರ, ಸ್ವರ್ಭಾನು, ಶಬಲ, ವಾಮನ ಮೊದಲಾದ ಮಹಾಮಹಾ ದೈತ್ಯರೆಲ್ಲ ಆರ್ಭಟಿಸಿ ಎದ್ದು, ತಮ್ಮ ತಮ್ಮ ಸೇನೆಯೊಡನೆ ಕೂಡಿ ಬಂದು, ಓಹೋ! ನಿಲ್ಲಿಸು ನಿಲ್ಲಿಸು, ಎಂದು ಮೂದಲಿಸುತ್ತ ಕುಮಾರನ ಬಳಿಗೆ ಬಂದು ಸುತ್ತಲೂ ಬಳಸಿಕೊಂಡರು. ಎಂಟು ದಿಕ್ಕಿನಿಂದಲೂ ಬಾಣದ ಜಟ್ಟಿಲನ್ನು ಸುರಿಸುತ್ತ ಬಂದರು. ಕಣ್ಣಿಗೆ ಕಾಣಿಸುವ ದೂರದವರೆಗೂ ರಾಕ್ಷಸರೇ ಕಾಣುತ್ತಿದ್ದರು. ಅವರಲ್ಲಿದ್ದ ಪ್ರ

ಮುಖ್ಯ ರಾಕ್ಷಸರೇ ಮೂವತ್ತು ಪದ್ಮಗಳಾಗಿರುವಾಗ ಅವರ ಚತುರಂಗ ಸೈನ್ಯದ ಲೆಕ್ಕವನ್ನು ಇನ್ನು ಮಾಡುವವರಾರು ? ಇಂತಹ ಮಹಾ ಸೇನೆಯೆಲ್ಲವೂ ಒಂದೇಬಾರಿಗೆ ಆರ್ಭಟಿಸುತ್ತ, ನಾನಾ ಆಯುಧಗಳನ್ನು ಪ್ರಯೋಗಿಸುತ್ತ ಬಂದವು. ಆದರೇನು? ಕೋಟ್ಯನುಕೋಟಿ ಇರುವೆಗಳು ಒಂದು ಕೆಂಡವನ್ನು ಮುತ್ತಿ ಕೆಡಿಸಬಲ್ಲವೆ? ಈ ಸೇನಾ ಜಲಧಿಯನ್ನು ಕಂಡು ಕುಮಾರನ ಎದೆಗೆಚ್ಚು ಸ್ವಲ್ಪವೂ ಕದಲಲಿಲ್ಲ. ನೋಡಿ ನೋಡಿದಂತೆ ಅವನ ಶೌರ್ಯವೂ ಧೈರ್ಯವೂ ಸಾಹಸವೂ ಹೆಚ್ಚುಹೆಚ್ಚುತ್ತ ಬಂದುವು. ಮರಳಿ ಬಾಣಗಳನ್ನು ಸುರಿಸುವುದಕ್ಕೆ ಆರಂಭಿಸಿದನು. ಬಿರುಗಾಳಿಯಿಂದ ತೂರಿಹೋಗುವ ಹೊಟ್ಟನಂತೆ ಒಂದೊಂದು ಬಾರಿಗೆ ಲಕ್ಷೋಪಲಕ್ಷ ಸೇನೆಯು ಕೊಚ್ಚಿಹೋಗುತ್ತಿದ್ದಿತು. ರಾಕ್ಷಸರು ಬಿಟ್ಟ ಬಾಣಗಳನ್ನು ಕುಮಾರನು ಕೊಚ್ಚಿಕೊಚ್ಚಿ ಕೆಡಹಲಾಗಿ, ಅವುಗಳು ಮಧ್ಯದಲ್ಲಿ ಬೆಟ್ಟಬೆಟ್ಟಗಳಂತೆ ಬೆಳೆದು ಅಡ್ಡಗಟ್ಟೆಯಾಗುತ್ತಿದ್ದವು. ಕಡೆಕಡೆಗೆ ಕಂದಸ್ವಾಮಿಯ ಬಾಣಗಳು ರಾಕ್ಷಸರನ್ನೆಲ್ಲ ಆವರಿಸಿ ಪಂಜರದಲ್ಲಿ ಸಿಕ್ಕಿಸಿಕೊಂಡಂತೆ ಮಾಡಿದುವು. ರಾಕ್ಷಸರ ರಥಗಳು ಆನೆಗಳು ಕುದುರೆಗಳು ಕಾಲಾಳ್ಗಳು ಛತ್ರಗಳು ಚಾಮರಗಳು ಧ್ವಜಗಳು ಪತಾಕೆಗಳು ವಾದ್ಯಗಳು ಕಿರೀಟಗಳು ಬಾಹುಪೂರಗಳು ಬತ್ತಳಿಕೆಗಳು ಕತ್ತಿಗಳು ಗದೆಗಳು ಭಲ್ಲೆಗಳು ಕಡಿಕುಂಡಾಗಿ ರಣಾಂಗಣದಲ್ಲೆಲ್ಲ ಗುಡ್ಡೆಗುಡ್ಡೆಯಾಗಿ ಬಿದ್ದುವು. ರಕ್ತವು ಮಡುಗಟ್ಟಿ ಹರಿಯಹತ್ತಿತು. ಅದರೊಳಗೆ ತಲೆಬುರುಡೆಗಳು, ದೇಹದ ಖಂಡಗಳು, ತೋಳ್ತೊಡೆಗಳು, ತೇಲಿತೇಲಿ ಹೋಗುತ್ತಿದ್ದುವು. ಭೂತ ಬೇತಾಳ ಪೈಶಾಚಾದಿಗಳು ಮಾಂಸವನ್ನು ತಿಂದು ರಕ್ತವನ್ನು ಕುಡಿದು ಕುಣಿದಾಡುತ್ತಿದ್ದುವು. ರಕ್ಕಸರು ಭೀಕರವಾಗಿ ರೋದಿಸುತ್ತ ದಿಕ್ಕುದಿಕ್ಕಿಗೆ ಓಡಿದರು. ಪ್ರಮುಖದೈತ್ಯರಲ್ಲಿ ಶಂಖಕರ್ಣನ ತಲೆಯೋ ಹಾರಿಹೋಯಿತು. ಶಬಲನು ಎರಡು ತುಂಡಾದನು. ಶರಭನು ಮುಂದೆ ಬರುವ ತಾರಕನ ವಾಸಕ್ಕೆ ಯಮಲೋಕದಲ್ಲಿ ಅನುಕೂಲವಾಗಿ ಅರಮನೆಯನ್ನು ಕಟ್ಟಿಸುವುದಕ್ಕೆ ಹೋದವನಂತೆ ದೇಹವಳಿದು ಹೋದನು. ಹೀಗೆ ಎಲ್ಲರಿಗೂ ಕುಮಾರನು ಭಂಗವನ್ನುಂಟುಮಾಡಿದನು. ತಾರಕನ ಒಡಹುಟ್ಟಿದ ರಾಕ್ಷಸರೆ

ಲ್ಲ ಸತ್ತರು; ಸೇನಾನಾಯಕರೆಲ್ಲ ಮಡಿದರು; ಚತುರಂಗ ಸೇನೆಯೂ ಕಡಿವಡೆದಿತು; ಬಂಧುಬಾಂಧವರೆಲ್ಲ ಅಳಿದರು, ದೇವಸೇನಾಪತಿಗೆ ಇದಿರಾಗಿ ನಿಲ್ಲುವವರು ತಾರಕನ ಕಡೆಯಲ್ಲಿ ಒಬ್ಬರೂ ಇಲ್ಲವಾದರು. ದೇವತೆಗಳ ಕೈ ಮೇಲಾಯಿತು. ಮಹಾಜಯವಾದ್ಯವನ್ನು ಮಾಡಿಕೊಂಡು ದೇವತೆಗಳು ಅಟ್ಟಿಕೊಂಡು ಬರುತ್ತಿರುವುದನ್ನು ತಾರಕಾಸುರನು ಕಂಡನು. ಕಿಡಿಕಿಡಿಯಾಗಿ ಘುಡುಘುಡಿಸಿದನು. ಕಾಲರುದ್ರನ ಹಣೆಗಣ್ಣಿನ ಬೆಂಕಿಯೇ ಆ ದೈತ್ಯನ ಕಣ್ಣಿನಲ್ಲಿ ಬಂದು ಸೇರಿದಂತೆ ಅವು ಕೆಂಪಾಗಿ ಉರಿಯುತ್ತಿದ್ದುವು. ಜಗತ್ತೆಲ್ಲ ತಲ್ಲಣಿಸುವಂತೆ ಮಹಾರ್ಭಟವನ್ನು ಮಾಡಿ, ತನ್ನ ಮರೆಹೊಕ್ಕಿರುವ ಸೇನೆಗೆ ಅಭಯವನ್ನು ಕೊಟ್ಟು, ರಥವನ್ನು ಮುಂದೆ ಸರಿಸಿದನು. ಆಗ ಅವನ ಭೀಕರಾಕೃತಿಯನ್ನು ನೋಡಿದರೆ—ವಿಷವನ್ನು ತಿಂದ ಕಾಳಸರ್ಪವೋ, ನೊಂದಿರುವ ಹುಲಿಯೋ, ಕೋಪವೇರಿದ ಕಾಡಹಂದಿಯೋ, ಹಸಿದು ಬಂದ ಹೆಮ್ಮಾರಿಯೋ, ಜಗನ್ನಾಶಕ್ಕಾಗಿ ಬರುವ ಮೃತ್ಯುವೋ, ಸಿಟ್ಟುಗೊಂಡ ಯಮನೋ, ಕೆರಳಿದ ವೀರಭದ್ರನೋ, ಕಾಲಭೈರವನೋ ಪ್ರಳಯಕಾಲದ ರುದ್ರನೋ ಎಂಬಂತೆ ತೋರುತ್ತಿದ್ದನು. ಈ ಮಹಾ ದೈತ್ಯನನ್ನು ನೋಡಿದ ಕೂಡಲೆ ದೇವತೆಗಳ ಕಹಳೆಗಳ ಸದ್ದೇ ಅಡಗಿತು; ನಗಾರಿಯವನ ಕೈ ಹಾಗೆಯೇ ನಿಂತುಹೋಯಿತು; ಮಾವುತರ ಕಣ್ಣು ಬಿಟ್ಟುದು ಬಿಟ್ಟಂತೆಯೇ ಇದ್ದಿತು; ಕುದುರೆಗಳು ನೊಗವನ್ನು ಮುರಿದು ರಥವನ್ನುರುಳಿಸಿ ವಾಘುಯನ್ನು ಕಿತ್ತು ಓಡಿಹೋದುವು; ಆನೆಗಳು ಕಿರ್ರೆಂದು ಕಿರುಚಿ ಬಾಲವನ್ನು ಮಡಿಸಿ ಸೊಂಡಿಲನ್ನು ಸುತ್ತಿ ಹಿಂದಿರುಗಿದುವು; ಇಂದ್ರನು ಓರೆಯಾದನು; ಅಗ್ನಿಯು ಮರೆಯಾದನು; ಯಮನು ಕಾಲಿಗೆ ಬುದ್ಧಿ ಹೇಳಿದನು; ನಿರೃತಿಯು ಪಲಾಯನ ಪಾರಾಯಣವನ್ನು ಮಾಡಿದನು; ವರುಣನು ಎದೆಯೊಣಗಿ ನೀರನ್ನು ಹುಡುಕುತ್ತಿದ್ದನು; ಗಾಳಿಯು ಎಲ್ಲೋ ಅವಿತುಕೊಂಡನು; ಕುಬೇರನು ವೇಷಾಂತರವನ್ನು ಧರಿಸಿದನು; ಈಶಾನನು ಇವರೆಲ್ಲರಿಗೂ ಗುರುವಾಗಿ ಅದೃಶ್ಯನಾದನು; ಹರಿಬ್ರಹ್ಮರು ಎಲ್ಲಿಹೋದರೋ ಕಾಣಲೇ ಇಲ್ಲ. ತಾರಕನನ್ನು ಕಂಡಮಾತ್ರದಿಂದಲೇ ತನ್ನ ಸೇನಾನಿಕರದ ಅವಸ್ಥೆಯೆಲ್ಲ ಹೀಗಾದುದನ್ನು ಕುಮಾ

ರವಮೂರ್ತಿಯು ಕಂಡು, ಖತಿಗೊಂಡು, ತನ್ನ ವಾಹನವನ್ನು ತಟ್ಟ ಸ
ಮಾಧಾನಗೊಳಿಸಿ, ಬೆಂಬಲಕ್ಕೆಲ್ಲ ಅಭಯವನ್ನಿತ್ತು, ಕಣ್ಣುಗಳಲ್ಲಿ ಕಿಡಿ
ಯನ್ನು ಸುರಿಸುತ್ತ, ಕೈಗೆ ಬಿಲ್ಲನ್ನು ತೆಗೆದುಕೊಂಡು ವಾಹನವನ್ನು
ತಾರಕನ ಮುಂಗಡೆಗೆ ನಡಿಸಿದನು. ಸಿಂಜಿನಿಯನ್ನು ಮಿಡಿದಮಾತ್ರದಿಂದ
ಅದರ ದನಿಯು ಕೋಟಿ ಸಿಡಿಲಿನ ಆರ್ಭಟದಂತೆ ಕೇಳಿದವರಿಗೆ ಮೂರ್ಛೆ
ಯನ್ನುಂಟುಮಾಡಿತು. ಭೂಮಿಯು ಬಿರಿದಿತು. ಸಮುದ್ರವು ತುಳು
ಕಾಡಿತು. ಇದಿರಾದ ಶಿವಪುತ್ರನನ್ನು ತಾರಕನು ಕಂಡನು. ಬೇಸಗೆ
ಯ ಮಧ್ಯಾಹ್ನದ ಸೂರ್ಯನಂತೆ ತೇಜೋಮೂರ್ತಿಯಾಗಿ ರಂಜಿಸುತ್ತಿ
ರುವ ಈ ದೇವನನ್ನು ನೋಡಿ ತಾರಕನ ಕಣ್ಣು ಮುಚ್ಚಿಹೋದುವು.
ಎದೆಯು ಝಗ್ಗೆಂದಿತು. ಈ ಶೂರನು ತನ್ನ ಪ್ರಾಣವನ್ನು ತೆಗೆದು
ಕೊಳ್ಳದೆ ಬಿಡಲಾರನೆಂದು ಯೋಚಿಸಿದನು. ಆದರೂ ಧೈರ್ಯವನ್ನು ತಂದು
ಕೊಂಡು, ವಿಜಯಧನುಸ್ಸನ್ನು ಹಿಡಿದು, ಸಿಂಜಿನಿಯನ್ನು ಮಿಡಿದು,
ಯುದ್ಧಕ್ಕೆ ಸನ್ನದ್ಧನಾಗಿ ನಿಂತನು. ಎಂಬಲ್ಲಿಗೆ ಹನ್ನೆರಡನೇ ಅಧ್ಯಾ
ಯವು ಸಂಪೂರ್ಣವು.

## ೧೩ನೇ ಅಧ್ಯಾಯವು.

### ತಾರಕಸಂಹಾರವು.

ಎಲೆ ಸಿದ್ಧರಾಮೇಶನೆ ಕೇಳು, ಬಳಿಕ ತಾರಕನು ಷಣ್ಮುಖನಿದಿರಿಗೆ
ಬಂದು, ಮೃದುವಚನದಿಂದ-ಎಲೆ ಹಸುಳೆಯೆ, ನಿನ್ನನ್ನು ನೋಡಿದರೆ ಸಾ
ಧಾರಣವಾದ ಶಿಶುವಂತಿಲ್ಲ; ನಿನ್ನನ್ನು ಹೆತ್ತ ತಾಯಾರೋ ಕಾಣೆ; ಮ
ಗ್ಗುಲಲ್ಲಿ ಮಲಗಿ ತಾಯ ಮೊಲೆಹಾಲನ್ನು ಕುಡಿಯುವ ಈ ವಯಸ್ಸಿನಲ್ಲಿ
ನೀನು ಆ ವಿಷ್ಣು ಮೊದಲಾದವರ ಮಾಯೆಯ ಮಾತಿನ ಬಲೆಗೆ ಸಿಕ್ಕಬ
ಹುದೆ? ಈಗಳೂ ನಾನು ಬಿಟ್ಟುಕೊಡುತ್ತೇನೆ, ಹೋಗಿ ಬದುಕು; ಎಂದು
ನುಡಿಯಲು, ಕುಮಾರಸ್ವಾಮಿಯು ನಕ್ಕನು. ಮತ್ತು "ಎಲೆ ರಾಕ್ಷಸನೇ!
ನಾನು ಶಿಶುವಾದರೇನಾಯ್ತು ? ಕತ್ತಲೆಯ ಒಟ್ಟಲಿಗೆ ಬಾಲಸೂರ್ಯನು
ಹೆದರಿಕೊಳ್ಳುವನೆ? ಕಾಡಾನೆಯ ಭೀಕರತ್ವವನ್ನು ಕಂಡು ಸಿಹ್ಮದಮರಿ
ಅಂಜಿ ಓಡುವುದೆ? ಬೆಟ್ಟಗಳಿಗೆ ವಜ್ರವು ಹೆದರುವುದೆ? ನೀನು ವಿಚಾರ

ಮಾಡದೆ ಹುಚ್ಚನಂತೆಗಳಹಬಹುದೆ? ಮೂರುಲೋಕವನ್ನೂ ನೀನೇ ತಿಂದು ತೇಗುತ್ತಿರುವಾಗ, ನನ್ನನ್ನು ಉಳುಹಿ ಪಾಲಿಸುವ ಗುಣವು ನಿನಗೇಕೆ?'' ಎಂದು ಮೂದಲಿಸುತ್ತ, ಬಾಣಗಳನ್ನು ಜೋಡಿಸಿಜೋಡಿಸಿ ರಕ್ಕಸನಮೇಲೆ ಪ್ರಯೋಗಿಸಿದನು. ಆ ಬಾಣದ ಮಳೆಯಲ್ಲಿ ಮುಳುಗಿಹೋದ ರಕ್ಕಸನು ಕೆರಳಿ,– ಆಹಾ! ನಾನು ಯುದ್ಧದಲ್ಲಿ ಹರ್ಯಜೇಂದ್ರಾದಿ ದೇವಾಧಿದೇವತೆಗಳಿಗೆಲ್ಲ ಭಂಗಗೊಳಿಸಿ, ಮನೋವ್ಯಥೆಯನ್ನುಂಟುಮಾಡಿರುವೆನು; ಸ್ವರ್ಗಮರ್ತ್ಯಪಾತಾಳಗಳಲ್ಲಿ ನನಗೆ ಇದಿರಾಗುವವರು ಯಾರೂ ಇಲ್ಲ; ಇಂಥ ನನ್ನ ಪರಾಕ್ರಮಾತಿಶಯವನ್ನು ನೀನು ಕೇಳಿ ತಿಳಿಯೆಯಾ? ಜಗತ್ತಿನಲ್ಲಿ ಜಯಲಕ್ಷ್ಮೀಕಾಂತನು ನಾನೊಬ್ಬನೇ ಸರಿಯೆಂಬುದು ನಿನಗೆ ಗೊತ್ತಿಲ್ಲ; ಪಾಪ! ನೀನು ಹಸುಳೆ; ಎಂದು ಗರ್ವೋಕ್ತಿಯನ್ನಾಡಿ, ತೀಕ್ಷ್ಣಬಾಣಗಳನ್ನು ಪ್ರಯೋಗಿಸಿ ಸಿಂಹನಾದವನ್ನು ಮಾಡಿದನು. ಕುಮಾರನಾದರೋ—ಥಟ್ಟನೆ ಪ್ರತಿಬಾಣದಿಂದ ಅವುಗಳನ್ನು ಖಂಡಿಸಿ,– ಎಲೊ ಖೂಳನೇ, ನೀನು ಹರಿಬ್ರಹ್ಮಾದಿಗಳನ್ನೆಲ್ಲ ಯುದ್ಧದಲ್ಲಿ ಗೆದ್ದು ಓಡಿಸಿರುವೆಯೆಂಬ ಸುದ್ದಿಯನ್ನು ನಾನು ಕೇಳಿ, ಅವರನ್ನು ಕಾಪಾಡಿ ನಿನ್ನನ್ನು ಕೊಲ್ಲುವುದಕ್ಕಾಗಿಯೇ ಇಲ್ಲಿಗೆ ಬಂದಿರುವೆನು; ನನ್ನ ಪರಾಕ್ರಮವನ್ನು ಈಗ ನೋಡು; ನೀನು ತಪಸ್ಸನ್ನು ಮಾಡಿ ಬ್ರಹ್ಮನಿಂದ ವರವನ್ನು ಪಡೆದುಕೊಂಡಿದ್ದುದು ಇಂದಿಗೆ ಸರಿಯಾಯ್ತು; ವರವನ್ನು ಕೊಟ್ಟವನಮೇಲೆಯೇ ನೀನು ತಿರುಗಿಬಿದ್ದೆ; ಅದಕ್ಕೆ ತಕ್ಕ ಫಲವನ್ನು ಈಗ ಉಣ್ಣಿಸುತ್ತೇನೆ; ನಾನು ಪರಶಿವನ ಕುಮಾರನೆಂಬುದನ್ನು ನೀನು ತಿಳಿದಿಲ್ಲವೊ? ಎಂದು ಮೂದಲಿಸಿ, ಮತ್ತೆ ಬಾಣಗಳನ್ನು ದೈತ್ಯನ ಮೇಲೆ ಸುರಿಸಿದನು. ತಾರಕನು ಅವನ್ನು ಖಂಡಿಸಿ,—“ಎಲೊ ಕಂದನೆ! ನೀನು ಹಲವರಿಗೆ ಹುಟ್ಟಿ ಶಿವಕುಮಾರನೆಂದು ಹೇಳಿಕೊಳ್ಳುವುದನ್ನು ನೋಡಿದರೆ, ಮಗ್ಗುಲಲ್ಲಿರುವವರು ಕೇಳಿ ನಗುವುದಿಲ್ಲವೆ? ಬಿಡು; ಬುಡವನ್ನೆಲ್ಲ ಬಲ್ಲವರಿಗೆ ಮೇಲಣ ಎಲೆಯನ್ನು ತೋರಿಸಿ ಮುಚ್ಚುವುದಕ್ಕಾದೀತೆ? ಸಾಕುಸಾಕು, ನಿನ್ನ ಜಂಭದ ಮಾತನ್ನು ಬಿಡು; ನಿನ್ನ ಸಾಲುದಲೆಗಳನ್ನೆಲ್ಲ ಬಂದೇ ಏಟಿಗೆ ಕತ್ತರಿಸುತ್ತೇನೆ, ನೋಡು'' ಎಂದು ಜರೆದು, ಬಾಣಗಳನ್ನು ಬಿಟ್ಟನು. ಅವನ್ನೆಲ್ಲ ಕುಮಾರನು ಖಂಡಿ

ಸಿ, ತಾನು ಕೆಲವು ಬಾಣಗಳನ್ನು ಬಿಟ್ಟನು. ಅವನ್ನು ಅವನು ಕತ್ತರಿಸಿದನು. ಹೀಗೆ ಈರ್ವರೂ ಯುದ್ಧಕಲಾಚಾತುರ್ಯವನ್ನು ತೋರಿಸಿ ಎರಡೆರಡು ಕೈಗಳಿಂದಲೂ ಅತಿಚಮತ್ಕಾರದಿಂದ ಅವಿಚ್ಛಿನ್ನವಾಗಿ ಬಾಣಗಳನ್ನು ಒಬ್ಬರಮೇಲೊಬ್ಬರು ಕರೆಯುತ್ತ ಬಂದರು. ಖಣಿಖಣಿಲು, ಛಿಟಿಛಿಟಿಲು, ಭುಗಿಭುಗಿಲು ಎಂಬ ಶಬ್ದವು ಅಂತರಿಕ್ಷಮಂಡಲವನ್ನೆಲ್ಲ ವ್ಯಾಪಿಸಿಕೊಂಡಿತು. ಬಾಣಬಾಣಗಳ ತಾಟುವಿಕೆಯಿಂದ ಹುಟ್ಟಿದ ಕಿಡಿಗಳು ಲೋಕವನ್ನೆಲ್ಲ ಸುಡುತ್ತಬಂದುವು. ಈರ್ವರೂ ಒಂದೇ ಸಮನಾಗಿ ಸೆಣಸುತ್ತ, ಹುಬ್ಬು ಗಂಟಿಕ್ಕಿ, ಕಣ್ಣನ್ನು ಕೆಂಪಗೆ ಮಾಡಿ, ಮೂಗು ಬಾಯಿಗಳಿಂದ ಕೋಪಾಗ್ನಿಯ ಬಿಸಿಯಾದ ಹೊಗೆಯನ್ನು ಬಿಡುತ್ತ, ಆಗಾಗ್ಗೆ ಸಿಹ್ಮನಾದವನ್ನು ಮಾಡುತ್ತ ಹೊಡೆದಾಡುತ್ತಿದ್ದರು. ಆಗ ಕುಮಾರನು ಅತ್ಯಂತ ಕೋಪೋದ್ರಿಕ್ತನಾಗಿ ಎರಡು ಮಂತ್ರಾಸ್ತ್ರಗಳನ್ನು ಜೋಡಿಸಿ, ಬಲವಾಗಿ ಸೆಳೆದು ದೈತ್ಯನ ಹಣೆಗೆ ಗುರಿಯಿಟ್ಟು ಹೊಡೆದನು. ಅವು ನಟ್ಟು ಗಾಯಮಾಡಿ ಬಿಸಿರಕ್ತವನ್ನು ಸುರಿಸಿದುವು. ಅವನ್ನು ರಕ್ಕಸನು ಕಿತ್ತು ರಕ್ತವನ್ನೊರಸಿ, ತಾಂಬೂಲವನ್ನು ಸವಿದು ಉಲ್ಲಾಸಗೊಂಡು, ತನ್ನ ಬತ್ತಳಿಕೆಯಲ್ಲಿದ್ದ ಬಾಣಗಳೆಲ್ಲ ತೀಕ್ಷ್ಣವಾದುವುಗಳನ್ನಾದು ಐದನ್ನು ಒಂದೇಬಾರಿಗೆ ಜೋಡಿಸಿ ಪ್ರಯೋಗಿಸಿ ಗರ್ಜಿಸಿದನು. ಅಗ್ನಿಕಣವನ್ನು ಸುರಿಸುತ್ತ ಬಂದ ಆ ಬಾಣಗಳನ್ನು ಕ್ಷಣಾರ್ಧದಲ್ಲಿ ಕುಮಾರನು ಖಂಡಿಸಿ, ಬೇರೆ ನಿಶಿತಾಸ್ತ್ರಗಳನ್ನು ದನುಜನಮೇಲೆ ಬಿಟ್ಟನು. ಅವು ತಾರಕನ ಎದೆಯನ್ನು ಹೊಕ್ಕು ಬೆನ್ನನ್ನು ಭೇದಿಸಿ ಹೊರಕ್ಕೆ ಹೊರಟು ಪಾತಾಳವನ್ನು ನುಗ್ಗಿ ಆದಿಶೇಷನನ್ನು ಚುಚ್ಚಿದುವು. ಆ ಏಟಿನಿಂದ ತಾರಕನು ಮೂರ್ಛಾಗತನಾದನು. ಕ್ಷಣಕಾಲದಲ್ಲಿ ಚೇತರಿಸಿಕೊಂಡೆದ್ದು ನಿಂತು,—"ಎಲೊ ಮಗುವೇ! ಹಸುಗೂಸಿನೊಡನೆ ಅತುಳಪರಾಕ್ರಮವನ್ನು ತೋರಿಸುವುದೇತಕ್ಕೆಂದು ನಾನು ಸಾಧಾರಣವಾಗಿ ಕಾದುತ್ತಿದ್ದರೆ ನೀನು ಗರ್ವದಿಂದ ಬೆರೆತುಕೊಂಡೆ! ಇದೋ ನನ್ನ ಶೌರ್ಯವನ್ನೀಗ ತೋರಿಸುತ್ತೇನೆ; ನಿನ್ನ ತಲೆಗಳನ್ನುಳುಹಿಕೊ" ಎಂದು ತೀಕ್ಷ್ಣವಾದ ಬಾಣಗಳನ್ನು ತಡೆಬಿಡುವಿಲ್ಲದಂತೆ ಕುಮಾರನಮೇಲೆ ಸುರಿಸಿದನು. ಗುಹನಾದರೊ ಅವುಗಳನ್ನೆಲ್ಲ ಲೀಲಾಮಾ

ತ್ರದಲ್ಲಿ ಛೇದಿಸಿ, ಬೇರೆ ಬಾಣಗಳನ್ನು ಬಿಟ್ಟು ರಾಕ್ಷಸನ ಸಾರಥಿ ರಥ ತುರಗಗಳನ್ನೆಲ್ಲ ಕತ್ತರಿಸಿದನು. ತಾರಕನು ಹೊಸರಥವನ್ನೇರಿ ಬಂದು ಮತ್ತೆ ಬಾಣಗಳನ್ನು ಬಿಡಲು, ಕುಮಾರನು ಅವನ ಧನುರ್ಬಾಣಗಳನ್ನೂ ಬತ್ತಳಿಕೆಯನ್ನೂ ಕಡಿತುಂಡುಗಳನ್ನು ಮಾಡಿದನು. ಹೀಗೆ ಒಬ್ಬರೊಬ್ಬರ ಬಾಣಗಳನ್ನು ಕಡಿದು ಕೋಟ್ಯಂತರ ಬಾಣಗಳ ತುಂಡುಗಳ ರಾಶಿಯನ್ನು ಯುದ್ಧಾಂಗಣದಲ್ಲಿ ಒಟ್ಟಿದರು. ರಕ್ಕಸನು ಬಲುಬೇಸತ್ತು, ಅಗ್ನ್ಯಸ್ತ್ರವನ್ನು ತೆಗೆದು ಕುಮಾರನ ಮೇಲೆ ಪ್ರಯೋಗಿಸಿದನು. ಅದು ದೇವಸೇನೆಯ ಮೇಲೆಲ್ಲ ನಾಲಿಗೆಯನ್ನು ಚಾಚಿ, ಧಗಧಗನೆ ಉಜ್ವಲಿಸಿ ಸುಡುತ್ತ, ಕರಿ ತುರಗ ರಥ ಛತ್ರ ಚಾಮರಗಳನ್ನೆಲ್ಲ ಕರುಕುಗೊಳಿಸಿ, ಭಂಗವನ್ನುಂಟುಮಾಡುತ್ತ ಬಂದಿತು. ಷಣ್ಮುಖನು ವರುಣಾಸ್ತ್ರವನ್ನು ಬಿಟ್ಟು ಆ ಬೆಂಕಿಯನ್ನಾರಿಸಿ, ದೈತ್ಯವಾಹಿನಿಯನ್ನೆಲ್ಲ ಜಲದಿಂದ ಕೊಚ್ಚಿ ಹೋಗುವಂತೆ ಮಾಡಿದನು. ತಾರಕನು ಕೆರಳಿ ಬಡಬಾಸ್ತ್ರವನ್ನು ಬಿಟ್ಟು ಆ ನೀರನ್ನು ಇಂಗಿಸಿ, ಮತ್ತೆ ಪರ್ವತಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಗುಹನು ವಜ್ರಾಸ್ತ್ರದಿಂದ ಖಂಡಿಸಲು, ತಾರಕನು ಅಂಧಕಾರಾಸ್ತ್ರವನ್ನು ಬಿಟ್ಟು ಕತ್ತಲೆಗವಿಸಿದನು. ಷಡ್ವದನನು ಸೂರ್ಯಾಸ್ತ್ರದಿಂದ ಕತ್ತಲೆಯನ್ನು ತೊಲಗಿಸಲು, ದೈತ್ಯನು ಸರ್ಪಾಸ್ತ್ರವನ್ನು ಬಿಟ್ಟನು. ಕುಮಾರನು ಗರುಡಾಸ್ತ್ರದಿಂದದನ್ನು ಖಂಡಿಸಿದನು. ಹೀಗೆ ಇಬ್ಬರೂ ದಿವ್ಯಾಸ್ತ್ರಗಳಿಂದ ಎಚ್ಚಾಡಿ ಒಬ್ಬರೂ ಸೋಲುಗೆಲುವುಗಳನ್ನು ಪಡೆಯದೆ ಸೆಣಸುತ್ತಿರಲು, ತಾರಕನು ಬ್ರಹ್ಮಾಸ್ತ್ರವನ್ನು ತೊಟ್ಟು ಬಿಟ್ಟನು. ಮೃತ್ಯುವಿನ ನಾಲಿಗೆಯಂತೆ ಲೋಕಭಯಂಕರವಾಗಿ ಬರುತ್ತಿರುವ ಆ ಬಾಣವನ್ನು ನೋಡಿ, ಕಾರ್ತಿಕೇಯನು ರುದ್ರಾಸ್ತ್ರವನ್ನು ಬಿಟ್ಟು ಆ ಬ್ರಹ್ಮಾಸ್ತ್ರವನ್ನು ಎರಡು ತುಂಡಾಗಿ ಕತ್ತರಿಸಿ ಕೆಡಹಿದನು. ಅದನ್ನು ಕಂಡು ತಾರಕನ ಕೋಪವು ಮಿತಿಮೀರಿತು. ಘುಡುಘುಡಿಸಿ, ದಿವ್ಯ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡು ಗರಗರನೆ ತಿರುಗಿಸುತ್ತಿರಲು, ಅದರ ಅಗ್ರಧಾರೆಯಿಂದ ಉದಿರುತ್ತಿರುವ ಕಿಡಿಗಳಿಂದ ಲೋಕವೆಲ್ಲ ತಲ್ಲಣಿಸುತ್ತಿದ್ದುವು. "ಎಲೊ ಬಾಲಕನೆ! ನನ್ನೊಡನೆ ಹಗೆತನವನ್ನು ಕಟ್ಟಿಕೊಂಡ ಫಲವನ್ನು ಈಗ ಉಣ್ಣು" ಎಂದು ತಾರಕನು ನುಡಿದು, ರಭ

ಸಸಿಂದ ಕುಮಾರನಮೇಲೆ ಪ್ರಯೋಗಿಸಿದನು. ಅದನ್ನು ಸೇನಾನಿಯು ಲೀಲಾಮಾತ್ರದಿಂದ ಕೈಯಲ್ಲಿ ಹಿಡಿದು, ಅದನ್ನೇ ಗರಗರನೆ ತಿರುಗಿಸಿ ತಾರಕನಮೇಲೆ ಬಿಟ್ಟನು. ಅದು ರಕ್ಕಸನ ಎದೆಯನ್ನು ನಟ್ಟು ಸೀಳಿತು. ತಾರಕನ ದೇಹವು ಗಡಗಡನೆ ನಡುಗಿಹೋಯಿತು. ರಕ್ತವು ಆಕಾಶಮಂಡಲಕ್ಕೆ ಚಿಲ್ಲನೆ ಚಿಮ್ಮಿತು. ತುಟಿಗಳು ಒಣಗಿದುವು. ತಲೆ ತಿರುಗಿ ಧೊಪ್ಪನೆ ಭೂಮಿಯಮೇಲೆ ಬಿದ್ದನು. ರಕ್ತದಿಂದ ಅಭಿಷಿಕ್ತವಾಗಿ ಬಿದ್ದಿದ್ದ ರಕ್ಕಸನ ದೇಹವು ಕೆಂಗಲ್ಲಿನ ಬೆಟ್ಟವು ಬಿದ್ದಿರುವಂತೆ ಕಾಣುತ್ತಿದ್ದಿತು. ತಮ್ಮೊಡೆಯನಿಗುಂಟಾದ ಈ ಅವಸ್ಥೆಯನ್ನು ಕಂಡು ದೈತ್ಯವಾಹಿನಿಯು ಹಾಹಾಕಾರ ಮಾಡುತ್ತ ಕುಮಾರನನ್ನು ಮುತ್ತಿತು. ಕುಮಾರಸ್ವಾಮಿಯು ನಾಲ್ಕು ದಿಕ್ಕಿಗೂ ಬಾಣಗಳನ್ನು ಬಿಡುತ್ತ ನೊರಜುಗಳನ್ನೊರಸಿದಂತೆ ಸಾಯಿಸುತ್ತ ಬಂದನು. ಅಷ್ಟರಲ್ಲಿ ತಾರಕನು ಮತ್ತೆ ಮೂರ್ಛೆತಿಳಿದೆದ್ದು, ಎದೆಯಲ್ಲಿ ನಾಟಿದ್ದ ಶಕ್ತ್ಯಾಯುಧವನ್ನು ಕಿತ್ತು, ಮನಸ್ಸಿನಲ್ಲಿ ಖೇದಪಟ್ಟು, "ಇದುವರೆಗೂ ನಾನು ಈತನನ್ನು ಹಸುಳೆಯೆಂದು ತಿಳಿದು ಔದಾಸೀನ್ಯದಿಂದ ಯುದ್ಧಮಾಡಿದಂತೆಯೇ ಮುಂದೆಯೂ ಮಾಡಿದರೆ, ಇವನು ನನ್ನ ತಲೆಯನ್ನು ಕತ್ತರಿಸಿಬಿಡುವುದೇ ನಿಜ; ಅದುಕಾರಣ ಈ ದಿನವನ್ನು ಬಿಟ್ಟು ಚೇತರಿಸಿಕೊಂಡು ನಾಳೆಯ ದಿನ ಬಂದು, ಈ ದೇವಸೇನೆಯನ್ನೆಲ್ಲ ಒಟ್ಟಿಗೆ ಬಲಿ ತೆಗೆದುಕೊಳ್ಳಬೇಕು" ಎಂದು ಯೋಚಿಸಿ, ರಣಾಂಗಣದಿಂದೆದ್ದು ಮೆಲ್ಲಗೆ ತಲೆ ತಪ್ಪಿಸಿಕೊಂಡು ಹೋಗಿ ಕ್ರೌಂಚಪರ್ವತದ ಗುಹೆಯಲ್ಲಿ ಹೊಕ್ಕಿಕೊಂಡನು. ಮಹಾಸೇನನು ದೈತ್ಯಸೈನ್ಯವನ್ನೆಲ್ಲ ಒಂದುಕಡೆಯಿಂದ ಕತ್ತರಿಸಿಕೊಂಡು ಬಂದರೂ ತಾರಕನು ಸಿಕ್ಕಲಿಲ್ಲ. ಹರಿಬ್ರಹ್ಮಾದಿಗಳೆಲ್ಲ ತಮಗಾದ ಜಯವನ್ನು ಕಂಡು ಪರಮಾನಂದಗೊಂಡು ತಾರಕಾರಿಯನ್ನು ಕೊಂಡಾಡಿದರು. ಎಲ್ಲರೂ ತಾರಕನನ್ನು ತಡಕುವುದಕ್ಕೆ ಉಜ್ಜುಗಿಸಿದರು. ರಣಾಂಗಣವೆಲ್ಲವೂ ರುಂಡಮುಂಡಗಳಿಂದಲೂ, ರಕ್ತಮಾಂಸಗಳಿಂದಲೂ ಕರುಳಿನರಗಳಿಂದಲೂ ಕುಣಿವ ಬೇತಾಳಗಳಿಂದಲೂ, ನಲಿವ ಮರುಳುಗಳಿಂದಲೂ, ತೂಗಾಡುವ ಪಿಶಾಚಗಳಿಂದಲೂ ಭೀಕರವಾಗಿದ್ದಿತು. ದೇವತೆಗಳು ಹೆಣಗಳ ಗುಡ್ಡೆಗಳನ್ನು ಬಗಿಬಗಿದು ನೋಡುತ್ತಲೂ, ಆನೆಗಳ ರುಂಡಗಳನ್ನು ಕೆದರಿ ತಡ

ಕುತ್ತಲೂ, ರಥಗಳ ನುಗ್ಗುಗಳನ್ನು ಬೆದಕಿ ನೋಡುತ್ತಲೂ, ರಕ್ತದ ಗುಳ್ಳಗಳಲ್ಲಿ ತುಳದಾಡಿ ನೋಸುತ್ತಲೂ, ತಾರಕನನ್ನು ಕಾಣದೆ ಕ್ಲೇಶಪಡುತ್ತಿದ್ದರು. ಬಳಿಕ ರಣಾಂಗಣವನ್ನು ಬಿಟ್ಟು ದಶದಿಕ್ಕುಗಳಲ್ಲೂ ಹುಡುಕುವುದಕ್ಕೆ ತೊಡಗಿದರು. ಕಾಡು ನೋಡು ಗಿರಿ ವನ ನದಿಗಳನ್ನೆಲ್ಲ ಪರಿಶೋಧಿಸುತ್ತಿದ್ದರು. ಕ್ರೌಂಚಪರ್ವತದ ಗುಹೆಯೊಳಗೆ ದೈತ್ಯನು ಅವಿತಿರುವನೆಂಬ ಸುಳುವನ್ನು ಹರಿಯು ತಿಳಿದು ಓಡಿಬಂದು ಇಂದ್ರನೊಡನೆ ಹೇಳಲು, ಅವನು ಕುಮಾರಸ್ವಾಮಿಗೆ ಬಿನ್ನೈಸಿದನು. ಆತನು ತನ್ನ ಬತ್ತಳಿಕೆಯಲ್ಲಿದ್ದ ಶಾಂಭವಾಸ್ತ್ರವನ್ನು ತೆಗೆದುಕೊಂಡು ಸಿಂಜಿನಿಗೆ ಸೇರಿಸಿ ಕರ್ಣಾಂತವಾಗಿ ಸೆಳೆದನು. ಆ ಅಸ್ತ್ರದ ಜ್ವಾಲೆಯು ಲೋಕತ್ರಯವನ್ನೂ ಬೇಗೆಗೊಳಿಸಿತು. ನಕ್ಷತ್ರಗಳು ಉದುರಿದುವು. ಭೂಮಿಯು ಬಿರಿದಿತು. ಸಮುದ್ರಗಳು ಕುದಿದುವು. ಮಹಾಪ್ರಳಯಸಮಯವೊದಗಿತೆಂದು ಜಗತ್ತೆಲ್ಲ ದಡಗುಟ್ಟಿತು. ಆಗ ಕುಮಾರನು ಅಸ್ತ್ರವನ್ನಭಿಮಂತ್ರಿಸಿ, ಕ್ರೌಂಚಪರ್ವತದ ಗುಹೆಯಲ್ಲಿ ಅಡಗಿರುವ ತಾರಕನೇ ನಿನಗೆ ಗುರಿಯೆಂದು ಬೋಧಿಸಿ, ಮಹಾ ರಭಸದಿಂದ ಪ್ರಯೋಗಿಸಿದನು. ಅದು ಹೊರಟಶಬ್ದಕ್ಕೆ ಪ್ರಪಂಚವೆಲ್ಲ ಪ್ರತಿಧ್ವನಿಗೊಂಡಿತು. ಮುಖದಿಂದುಗಿದ ಕಿಡಿಗಳು ಭೂಮ್ಯಂತರಿಕ್ಷವನ್ನು ತುಂಬಿದುವು. ವಾಯುವೇಗವನ್ನು ಮೀರಿ ಬಂದ ಮಹಾಸ್ತ್ರವು ಕ್ರೌಂಚಪರ್ವತವನ್ನೇ ನಟ್ಟು ಎರಡು ಹೋಳ್ಮಾಡಿ ಉರುಳಿಸಿ, ಒಳಗಿದ್ದ ತಾರಕನ ದೇಹವನ್ನು ತುಣುತುಣುಕಾಗಿ ಕತ್ತರಿಸಿಬಿಟ್ಟಿತು. ಇತ್ತ ರಣಾಂಗಣದಲ್ಲಿ ಆಕಾಶದಿಂದ ಹೂಮಳೆಯು ಸುರಿಸಿತು. ದೇವದುಂದುಭಿಯು ಮೊಳಗಿತು. ದೇವತೆಗಳು ಜಯಘೋಷವನ್ನು ಮಾಡಿದರು. ಗಣವರರು ಉಘೇ ಯೆಂದರು. ವಂದಿಗಳು ಕುಮಾರಸ್ವಾಮಿಯ ಬಿರುದಾವಳಿಗಳನ್ನುದ್ಘೋಷಿಸಿದರು. ಹರಿಬ್ರಹ್ಮರುಗಳೂ ಇಂದ್ರಾದಿದಿಕ್ಪಾಲಕರೂ, ಕಿನ್ನರಕಿಂಪುರುಷವಿದ್ಯಾಧರಾದಿಗಳೂ ತಾರಕಾರಿಯನ್ನು ಕೊಂಡಾಡಿ ನಮಸ್ಕರಿಸಿದರು. ಎಲೆ ಸಿದ್ಧರಾಮೇಶನೇ ಕೇಳು— ದುರ್ಜನರನ್ನು ಮೈಹಾಕಿಕೊಂಡರೆ ತನಗೂ ಕೇಡು ತಪ್ಪದು ಎಂಬ ನೀತಿಯು ಸುಳ್ಳಾಗದು. ಲೋಕಕಂಟಕನಾದ ತಾರಕನನ್ನು ಮೈಹಾಕಿಕೊಂಡುದರಿಂದ ಕ್ರೌಂಚಪರ್ವತವೂ ಇಬ್ಭಾಗ

ಗೊಳ್ಳಬೇಕಾಯಿತು. ಬಳಿಕ ದಿಕ್ಪಾಲಕರೆಲ್ಲರಿಗೂ ಮಹಾಸೇನಾನಿಯು ಅವರವರ ಪಟ್ಟಣಗಳನ್ನವರವರು ವಶಮಾಡಿಕೊಳ್ಳುವಂತೆ ಅಪ್ಪಣೆ ಮಾಡಿದನು. ಜಗತ್ತು ನಿಷ್ಕಂಟಕವಾಯಿತು. ಸರ್ವರೂ ಹಾಲು ಅನ್ನವನ್ನುಂಡು ಸಂತೋಷಿಸಿ ಕುಮಾರಸ್ವಾಮಿಯನ್ನು ಕೊಂಡಾಡಿದರು. ಅತ್ತ ತಾರಕನ ಮಕ್ಕಳುಗಳೂ ಕಳೆಮುಳಿದ ಇತರ ರಾಕ್ಷಸರೂ ಓಡಿಹೋಗಿ ಬೆಟ್ಟಗುಡ್ಡಗಳನ್ನು ಸೇರಿಕೊಂಡರು. ಇತ್ತ ಶಿಖಿವಾಹನನು ಹರ್ವ್ಯಜೇಂದ್ರಾದಿ ಸಕಲ ದೇವತಾಸ್ತೋಮದೊಡನೆ ಕೂಡಿ ವಿಜಯಪತಾಕೆಯನ್ನು ಹಿಡಿಸಿಕೊಂಡು ಮಹಾವಾದ್ಯವೈಭವದೊಡನೆ ಕೈಲಾಸಕ್ಕೆ ಬಂದು ಪಾರ್ವತೀಪರಶಿವರಿಗೆ ನಮಸ್ಕರಿಸಿ, ನಡೆದ ಸಂಗತಿಯನ್ನೆಲ್ಲ ಬಿನ್ನೈಸಿದನು. ಸಕಲ ದೇವತೆಗಳೂ ದೀರ್ಘದಂಡವಾಗಿ ನಮಸ್ಕರಿಸಿ, ಶಿವಾನುಗ್ರಹದಿಂದ ಬಾಳಿದೆವೆಂದು ಬಿನ್ನೈಸಿಕೊಂಡರು. ಸ್ವಾಮಿಯು ಕುಮಾರನನ್ನು ತೆಗೆದಾಲಿಂಗಿಸಿ, ತಲೆ ಸವರಿ ಮುದ್ದಾಡಿ, ದೇವತೆಗಳಿಗೆಲ್ಲ ಅವರವರ ಪಟ್ಟಣಕ್ಕೆ ಹೋಗುವಂತೆ ಅಪ್ಪಣೆ ಮಾಡಿ, ನಗಜಾತೆಯೊಡನೆ ನಂದನನ ಪೌರುಷವನ್ನು ಹೇಳಿಕೊಂಡು ಆನಂದಪಡುತ್ತಿದ್ದನೆಂಬಲ್ಲಿಗೆ ಹದಿಮೂರನೇ ಅಧ್ಯಾಯದೊಡನೆ ಮೂರನೇ ಕಾಂಡವು ಮುಗಿದುದು.

---

## ೪ ನೆಯ ಕಾಂಡ.

---

### ೧ ನೇ ಅಧ್ಯಾಯವು.

#### ಪಶುಪತಿ ಪಟ್ಟವು.

ಬಳಿಕ ಸಿದ್ಧರಾಮೇಶನು ಚೆನ್ನಬಸವೇಶನನ್ನು ಕುರಿತು— ಸ್ವಾಮಿಾ! ತಾರಕನ ಮಕ್ಕಳು ಮೊದಲಾದವರು ಗುಹಾಂತರಗಳನ್ನು ಸೇರಿದ ಬಳಿಕ ಕೊನೆಗೆ ಅವರವಸ್ಥೆಯೇನಾಯಿತು? ಎಂದು ಬೆಸಗೊಳ್ಳಲು, ಚೆನ್ನಬಸವೇಶನು— ಅಯ್ಯಾ! ತಾರಕನಾಶಾನಂತರ ಹರಿಬ್ರಹ್ಮಾದಿಗಳೆಲ್ಲರೂ ತಮ್ಮ ತಮ್ಮ ಪಟ್ಟಣಗಳನ್ನು ಗುಡಿತೋರಣಮೊದಲಾದುವುಗ

ಳಂಪಲಂಕರಿಸಿ ಪ್ರವೇಶಿಸಿ ಸುಖವಾಗಿ ಬಾಳಿಕೊಂಡಿರಲು, ಇತ್ತ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ತಾರಕನ ಮೂರು ಮಂದಿ ಮಕ್ಕಳೂ ಬೆಟ್ಟಗಳ ಗುಹೆಯಲ್ಲಿ ಇತರ ರಾಕ್ಷಸರೊಡನೆ ಗೂಢನಾಗಿ ವಾಸಮಾಡಿಕೊಂಡು ಹಲವು ದಿನಗಳನ್ನು ಕಳೆದರು. ಹೀಗಿರುತ್ತಿರಲು, ಶೂರರಾದ ಆ ದೈತ್ಯರಿಗೆ ಹೇಡಿಗಳಂತೆ ಅಜ್ಞಾತವಾಸದಿಂದ ಜೀವಿಸುವುದು ಸೊಗಸದೆಹೋಯಿತು. ಮೂವರೂ ಕೂಡಿ ಮುಂದೇನು ಮಾಡಬೇಕೆಂದು ಆಲೋಚಿಸಿದರು. ತಮ್ಮ ತಂದೆಯಂತೆಯೇ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿ ಘನತರವಾದ ವರವನ್ನು ಪಡೆದು, ದೇವತೆಗಳನ್ನು ನಿರ್ನಾಮಗೊಳಿಸಬೇಕೆಂದು ನಿರ್ಧರಿಸಿದರು. ಮೂವರೂ ವನಾಂತರಕ್ಕೆ ಹೋಗಿ ತಪಸ್ಸಿಗೆ ಉಚಿತವಾದ ಸ್ಥಲವನ್ನು ಗೊತ್ತುಮಾಡಿ, ಸರೋವರದಲ್ಲಿ ಮುಳುಗಿ ನಾಮದೆಯನ್ನಿಟ್ಟು ಭಸಿತ ರುದ್ರಾಕ್ಷಗಳನ್ನು ಧರಿಸಿ, ಸೂರ್ಯನಿಗಭಿಮುಖಿಸಿ, ಕಾಲಿನ ಹೆಬ್ಬೆರಲನ್ನು ಮಾತ್ರ ಭೂಮಿಯಲ್ಲೂರಿ, ಮೂಗಿನ ತುದಿಯಮೇಲೆ ದೃಷ್ಟಿಯನ್ನಿಟ್ಟು, ಹೃದಯದಲ್ಲಿ ಬ್ರಹ್ಮನ ಮೂರ್ತಿಯನ್ನು ನೆಲೆಗೊಳಿಸಿ, ಧ್ಯಾನಾರೂಢರಾದರು. ದೇಹಾಭಿಮಾನವು ಅಳಿದುಹೋಯಿತು. ಚಿತ್ತವು ಸ್ಥಿರತೆಯಿಂದ ಬಲಿಯಿತು. ತಪಸ್ಸು ದಿನೆ ದಿನೆ ವೃದ್ಧಿಗೊಂಡಿತು. ಇವರ ಉಗ್ರತಪಸ್ಸಿನಿಂದ ಹೊರಟ ಜ್ವಾಲೆಯು ಭೂಮ್ಯಾಕಾಶಗಳಲ್ಲಿ ಹರಿಗೆಯಾಡಿತು. ಪಶುಪಕ್ಷಿ ಮೃಗ ಪಕ್ಷಿನಗಾದಿಗಳೆಲ್ಲ ಬೇಯಲಾರಂಭಿಸಿದುವು. ನದಿಗಳಲ್ಲಿ ನೀರು ಕಾದು ಕೊಳಕೊಳನೆ ಕುದಿಯಿತು. ಕೊನೆಕೊನೆಗೆ ಬ್ರಹ್ಮಾಂಡಕಟಾಹವನ್ನೆಲ್ಲ ಈ ಉರಿಯು ವ್ಯಾಪಿಸಿತು. ಅಷ್ಟದಿಗ್ಗಜಗಳು ಪಾತಾಳದ ಸರ್ಪಗಳು ಆದಿಕೂರ್ಮನು ಸಹ ಈ ಬೇಗೆಯಿಂದ ಹೊರಳಾಡಿದುವು. ಭೂತಳವು ನಡುಗಾಡಿತು. ಈ ಅನಾಹುತಕ್ಕೆ ಕಾರಣವೇನೆಂಬುದನ್ನು ಬ್ರಹ್ಮನು ವಿಚಾರಮಾಡಿ, ಜ್ಞಾನದೃಷ್ಟಿಯಿಂದ ತಿಳಿದು, ಈ ಖಳದೈತ್ಯರಿಗೆ ನಾನು ಪ್ರಸನ್ನನಾದರೆ ಮುಂದೆ ಇವರಪ್ರಸಿಂಹಾವಸ್ಥಿತಿಯೇ ಲೋಕಕ್ಕೆ ಉಂಟಾಗದೆ ತಪ್ಪುವುದಿಲ್ಲ; ಪ್ರತ್ಯಕ್ಷನಾಗದಿದ್ದರೆ ಇವರ ತಪೋಜ್ವಾಲೆಯ ಬೇಗೆಯು ಲೋಕವನ್ನು ಹಾಳ್ಮಾಡದೆ ಬಿಡುವುದಿಲ್ಲ; ಇದಕ್ಕೇನು ಮಾಡಬೇಕೆಂದು ಚಿಂತಾಕುಲನಾಗಿ, ಕಡೆಗೆ ಶಿವನ ಕರುಣವಿದ್ದಂತಾಗಲಿ ಎಂದು ನಿಶ್ಚೈಸಿ,

ರಾಕ್ಷಸರಿದ್ದ ಬಳಿಗೆ ಬಂದನು. ಎಲೆ ದೈತ್ಯರೆ, ನಿಮ್ಮ ತಪಸ್ಸಿಗೆ ಮೆಚ್ಚಿ ಬಂದೆನು, ನಿಮ್ಮ ಇಷ್ಟಾರ್ಥವೇನು ? ಬೇಡಿರಿ, ಎಂದನು. ಅವರುಗಳು ಈ ಮಾತನ್ನು ಕೇಳಿ ಕಣ್ಣನ್ನು ಬಿಟ್ಟು, ಬ್ರಹ್ಮನನ್ನು ಕಂಡು ನಮಸ್ಕರಿಸಿ, ನಾನಾವಿಧವಾಗಿ ಸ್ತುತಿಸಿ, ಎಲೌ ಸ್ವಾಮಿಯೆ, ನಮಗೆ ಯಾರಿಂದಲೂ ಮರಣವಾಗದಂತೆ ನಿತ್ಯತ್ವವನ್ನು ಕೊಡಬೇಕೆಂದು ಬೇಡಿದರು. ಬ್ರಹ್ಮನಾದರೂ— ನನಗೇ ನಿತ್ಯತ್ವವಿಲ್ಲ; ನಿಮಗೆ ಆ ವರನ್ನು ಹೇಗೆ ಕೊಡಲಿ ? ಅದನ್ನು ಬಿಟ್ಟು ಬೇರೆ ವರವನ್ನು ಬೇಡಿರಿ: ಎನ್ನಲು, ದೈತ್ಯರು— ಹಾಗಾದರೆ ಸ್ವರ್ಗಮರ್ತ್ಯಪಾತಾಳದಲ್ಲಿರುವ ಯಾರಿಗೂ ಪ್ರವೇಶಿಸಲಶಕ್ಯವಾಗಿರುವಂತೆ ಆಕಾಶದಲ್ಲಿ ಚಿನ್ನ ಬೆಳ್ಳಿ ಕಬ್ಬಿಣಗಳಿಂದ ಮೂರು ಪಟ್ಟಣಗಳನ್ನು ಕಟ್ಟಿಕೊಳ್ಳುವುದಕ್ಕೂ, ಇವು ಮೂರು ನಿಲ್ಲುವುದಕ್ಕೂ ಒಂದೇ ಕೀಲಿರುವಂತೆಯೂ, ಅದನ್ನು ಸುರನರೋರಗಾದಿಗಳಲ್ಲಿ ಯಾರೂ ಕಾಣದಿರುವಂತೆಯೂ, ದೇವಮಾನದ ಸಹಸ್ರವರ್ಷಗಳವರೆ ಆಗ ಮೂರೂ ಒಂದಾಗುವಂತೆಯೂ, ಆ ಸಮಯದಲ್ಲಿ ಒಂದೇ ಬಾಣವನ್ನು ಪ್ರಯೋಗಿಸಿ ಕೀಲನ್ನು ಮುರಿದರೆ ಈ ಪಟ್ಟಣವು ಅಳಿಯುವಂತೆಯೂ, ಹಾಗಲ್ಲದಿದ್ದರೆ ಸದಾಕಾಲವೂ ಗರಗರನೆ ತಿರುಗುತ್ತಿರುವಂತೆಯೂ, ವಿದ್ಯಾಧರಕಿನ್ನರಕಿಂಪುರುಷಯಕ್ಷೋರಗಾದಿಗಳೆಲ್ಲರೂ ನಮ್ಮನ್ನು ಸೇವಿಸಿಕೊಂಡು ನಮ್ಮ ಆಜ್ಞಾಪ್ರಕಾರ ನಡೆದುಕೊಳ್ಳುವಂತೆಯೂ, ಸಕಲ ಸಂಪತ್ತೂ ಅಮಿತವಾದ ಶೌರ್ಯೈಶ್ವರ್ಯಗಳೂ ನಮಗೆ ಪ್ರಾಪ್ತವಾಗುವಂತೆಯೂ, ವರವನ್ನು ಕೊಡಬೇಕು. ಎಂದು ಬೇಡಿದರು. ಅದನ್ನು ಕೇಳಿ ಬ್ರಹ್ಮನು ತಾನು ಯೋಚಿಸಿಕೊಂಡು ಬಂದುದಯೇ ಆಯ್ತೆಂದು ತಿಳಿದು, ನಿಟ್ಟುಸುರುಬಿಟ್ಟನು. ಕಡೆಗೆ ಉಪಾಯಾಂತರವಿಲ್ಲದೆ "ನಿಮ್ಮಿಷ್ಟದಂತೆಯೇ ಸರ್ವವೂ ಆಗಲಿ" ಎಂದು ವರವಿತ್ತು ಸತ್ಯಲೋಕಕ್ಕೆ ತೆರಳಿದನು. ಆಗ ರಾಕ್ಷಸರಿಗುಂಟಾದ ಆನಂದವನ್ನು ಹೇಳತೀರದು. ಅಡರಿಕಾಡನ್ನು ಮುತ್ತಿ ಒಣಗಿದ ಸೌದೆಯನ್ನು ತಿಂದು ತೇಗುತ್ತಿರುವ ಅಗ್ನಿಗೆ ಗಾಳಿಯೂ ಸಹಾಯವಾದರೆ ಹೇಳತಕ್ಕದ್ದೇನು ? ಮೊದಲೇ ಇವರು ಜಗತ್ಕ್ಷೋಭಕರನಾದ ತಾರಕನ ಮಕ್ಕಳು ! ಇದರಮೇಲೆ ಬ್ರಹ್ಮನವರವೂ ಇವರಿಗುಂಟಾದ ಬಳಿಕ ಇನ್ನಿವರನ್ನು ತಡೆಯುವವರಾರು ? ಇವರಿಗಸಾ

ಧ್ಯವಾದ ಕಾರ್ಯವಾವುದು ? ಕೂಡಲೇ ದಾನವಶಿಲ್ಪಿಯಾದ ಮಯನನ್ನು ಬರಮಾಡಿದರು. ತಮ್ಮ ಸಂಕಲ್ಪಕ್ಕೆ ತಕ್ಕಂತೆ ಅಂತರಿಕ್ಷದಲ್ಲಿ ತ್ರಿಪುರಗಳನ್ನು ಕಟ್ಟಬೇಕೆಂದು ಅಪ್ಪಣೆ ಮಾಡಿದರು. ಅದರಂತೆಯೇ ಅವನು ಚಿನ್ನ ಬೆಳ್ಳಿ ಕಬ್ಬಿಣಗಳಿಂದ ಪಟ್ಟಣಗಳನ್ನು ಕಟ್ಟಿದನು. ಒಳಗೆ ರತ್ನಖಚಿತವಾದ ಸುವರ್ಣರಜತದ ಉಪ್ಪರಿಗೆಗಳು ಕೋಟೆಗಳು, ಧ್ವಜಪತಾಕೆಗಳು ಮೊದಲಾದುವುಗಳು ಥಳಥಳಿಸುತ್ತಿದ್ದುವು. ಅವುಗಳಲ್ಲಿ ಚಿನ್ನದ ಕೋಟೆಯನ್ನು ತಾರಕಾಕ್ಷನೂ, ಬೆಳ್ಳಿಯಕೋಟೆಯನ್ನು ಕಮಲಾಕ್ಷನೂ, ಕಬ್ಬಿಣದ ಕೋಟೆಯನ್ನು ವಿದ್ಯುನ್ಮಾಲಿಯೂ ವಹಿಸಿಕೊಂಡು, ಅರವತ್ತಾರು ಕೋಟಿ ಸೈನ್ಯವನ್ನು ಕಟ್ಟಿ ಆಳುತ್ತ ಅತ್ಯಂತ ವೈಭವದಿಂದ ಸಕಲೈಶ್ವರ್ಯದೊಡನೆ ಮೆರೆಯುತ್ತಿದ್ದರು. ಅಂತರಿಕ್ಷದಲ್ಲಿ ಅತ್ಯಪೂರ್ವವಾಗಿ ಥಳಥಳಿಸುತ್ತಿರುವ ಈ ಪಟ್ಟಣಗಳನ್ನು ಜಗತ್ತಿನವರೆಲ್ಲರೂ ನೋಡಿ ಆಶ್ಚರ್ಯಪಡುತ್ತಿದ್ದರು. ಹಿಂದೆ ತಾರಕನ ಯುದ್ಧದ ಕಾಲದಲ್ಲಿ ಮಡಿದಿದ್ದ ಶೂರದೈತ್ಯರ ವಂಶಿಕರಾದ ನಳ, ನೀಳ, ಮೂಕ, ಜಂಭ, ಧೂಮ್ರಾಕ್ಷ, ಜಟಾಸುರ, ಮುಂತಾದ ಮಹಾಮಹಾ ಶೂರರಾಕ್ಷಸರೆಲ್ಲ ಗುಡ್ಡಗಳನ್ನು ಬಿಟ್ಟು ತ್ರಿಪುರವನ್ನು ಸೇರಿಕೊಂಡರು. ಒಂದು ದಿನ ತಾರಕಾಕ್ಷಾದಿಗಳ ಸಭೆಯಲ್ಲಿ ಶಿಲ್ಪಿಯಾದ ಮಯನು ಬಂದು ಕುಳಿತಿರುವಲ್ಲಿ, ಅವನು ತ್ರಿಪುರವನ್ನು ನಿರ್ಮಿಸಿದ ಚಮತ್ಕಾರವನ್ನು ಕುರಿತು ಮೂವರು ರಾಜರೂ ಬಹುಳವಾಗಿ ಅವನನ್ನು ಕೊಂಡಾಡುತ್ತಿದ್ದರು. ಆಗ ಮಯನಾದರೋ– “ರಾಕ್ಷಸೇಶ್ವರರೇ! ನೀವು ಘೋರತಪಸ್ಸನ್ನು ಮಾಡಿ ಮಹತ್ತರಗಳಾದ ವರಗಳನ್ನು ಪಡೆದು ಈಗ ಲೋಕೋತ್ತರಪದವಿಯನ್ನೇನೋ ಅನುಭವಿಸುತ್ತಿರುವಿರಿ, ಒಂದು ಸಾವಿರ ವರ್ಷಗಳು ಕಳೆದ ನಂತರ ಯಾವನಾದರೊಬ್ಬ ದೇವನಿಂದ ನಿಮ್ಮ ಈ ತ್ರಿಪುರಕ್ಕೆ ಅತುಲವಾದ ಸಂಪತ್ತಿಗೂ ಹಾನಿಯು ಬಂದರೂ ಬರಬಹುದು; ಅದುಕಾರಣ ಆಗಳೂ ಯಾನ ಭಂಗವೂ ತಟ್ಟದಂತೆ ನೀವು ಮಾಡಿಕೊಳ್ಳುವುದಕ್ಕಾಗಿ, ಸೃಷ್ಟಿ ಸ್ಥಿತಿ ಪ್ರಳಯಗಳಿಗಧಿಪತಿಯೆಂತಲೂ, ದೇವಾಧಿದೇವನೆಂತಲೂ, ಭಕ್ತವತ್ಸಲನೆಂತಲೂ ಪ್ರಸಿದ್ಧನಾಗಿರುವ ಪರಮೇಶ್ವರನಲ್ಲಿ ನೀವುಗಳು ಭಕ್ತಿಯುಕ್ತರಾಗಿ ಸದಾ ಪೂಜಿಸುತ್ತಲಿರಿ, ಇದೇ ನಿಯ

ಮವನ್ನು ನಿಮ್ಮ ಪಟ್ಟಣದ ನಿವಾಸಿಗಳೆಲ್ಲ ಕೈಕೊಳ್ಳುವಂತೆ ಆಜ್ಞೆ ಮಾಡಿರಿ; ಆಗ ನೀವು ನಿಷ್ಕಂಟಕರಾಗಿ ಬಾಳುವಿರಿ.'' ಎಂದು ಹೇಳಿದನು. ಅದಕ್ಕೆ ದಾನವೇಶ್ವರರು ಒಪ್ಪಿಕೊಂಡು, ಕೂಡಲೇ ಲಿಂಗಗಳನ್ನು ರಚಿಸಿ ಕೊಡಬೇಕೆಂದು ಮಯನಿಗೆ ಆಜ್ಞಾಪಿಸಿದರು. ಮನೆಗೆ ಒಂದೊಂದು ಲಿಂಗದಂತೆ ಅವನು ಮಾಡಿಕೊಟ್ಟನು. ಸರ್ವರೂ ಭಸ್ಮರುದ್ರಾಕ್ಷಧಾರಿಗಳಾಗಿ ಪಂಚಾಕ್ಷರಗಳನ್ನು ಜಪಿಸುತ್ತ ಶಿವಾರಾಧನೆಯಲ್ಲಿ ತತ್ಪರರಾದರು. ಪುರುಷರೆಲ್ಲರೂ ಜಿತೇಂದ್ರಿಯರೂ ಸ್ತ್ರೀಯರೆಲ್ಲರೂ ಪತಿವ್ರತೆಯರೂ ಪಾಪದೂರರೂ ಭಕ್ತಿತತ್ಪರೂ ಆಗಿ ಬಾಳುತ್ತಿದ್ದರು. ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳೆಲ್ಲ ರಾಕ್ಷಸರ ಲೋಕದಲ್ಲಿ ಸೇರಿದುವು. ಸಕಲೋತ್ಸವವೂ ರಾಕ್ಷಸರ ಪಾಲಾಯಿತು. ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ ಎಲ್ಲಿ ನೋಡಿದರೂ ರಾಕ್ಷಸರ ರಥ, ರಾಕ್ಷಸರ ಕುದುರೆ, ರಾಕ್ಷಸರ ಆನೆ, ರಾಕ್ಷಸರ ವಿಮಾನ, ರಾಕ್ಷಸರ ಪಲ್ಲಕ್ಕಿಗಳೇ ಕಾಣುವಂತಾದುವು. ಇವರ ಪ್ರಾಬಲ್ಯವನ್ನು ದೇವತೆಗಳು ಕೇಳಿ, ಇನ್ನು ಮುಂದೆ ನಮ್ಮ ಗತಿಯೇನಾಗುವುದೋ ಎಂದು ಚಿಂತಿಸುತ್ತಿದ್ದರು. ಅವರು ಭಯಪಡುತ್ತಿದ್ದಂತೆಯೇ ತಾರಕಾಕ್ಷಾದಿಗಳು ದಿಗ್ವಿಜಯಕ್ಕೆ ಹೊರಟು ಸ್ವರ್ಗಮರ್ತ್ಯಪಾತಾಳಗಳನ್ನೆಲ್ಲ ಲಗ್ಗೆಹತ್ತಿ ಸರ್ವವನ್ನೂ ತಮ್ಮ ವಶಮಾಡಿಕೊಳ್ಳುತ್ತ ಬಂದರು. ದಿಕ್ಪಾಲಕರ ಪಟ್ಟಣಗಳನ್ನೆಲ್ಲ ನುಗ್ಗಿ ಸಿಕ್ಕಿದ ವಸ್ತುಗಳನ್ನು ಕೊಳ್ಳೆ ಹೊಡೆದು ಕೈಗೆ ಸಿಕ್ಕಿದವರನ್ನು ಸೆರೆ ಹಿಡಿದು ತಮ್ಮ ನಗರಗಳಿಗೆ ಕಳಿಸುತ್ತ ಬಂದರು. ದೇವರಾಜನಾದ ಇಂದ್ರನು ವೇಷಾಂತರದಿಂದ ತಲೆತಪ್ಪಿಸಿಕೊಂಡು ಓಡಿ ಹೋಗಿ ಮೇರುಪರ್ವತದ ಗುಹೆಯಲ್ಲಿ ಹೊಕ್ಕಿಕೊಂಡನು. ಉಳಿದ ದೇವತೆಗಳೂ ಅವನನ್ನೇ ಅನುಸರಿಸಿದರು. ಒಂದು ದಿನ ಎಲ್ಲರೂ ಕುಳಿತುಕೊಂಡು ರಾಕ್ಷಸರ ವಧೆಗೆ ಉಪಾಯವೇನೆಂದು ಆಲೋಚಿಸಿದರು. ತಮ್ಮಿಂದ ಹರಿಯದೆ ಹೋಗಲು, ರಾಕ್ಷಸರಿಗೆ ವರವನ್ನು ಕೊಟ್ಟು ಇದಕ್ಕೆಲ್ಲ ಮೂಲಭೂತನಾದ ಬ್ರಹ್ಮನಿಂದಲೇ ಇದಕ್ಕೆ ಪರಿಹಾರವನ್ನು ಮಾಡಿಸಬೇಕೆಂದು ಯೋಚಿಸಿ, ಅವನಲ್ಲಿಗೆ ಹೋದರು. ಅವನು ಇವರು ಬಂದ ಕಾರಣವನ್ನೆಲ್ಲ ಕೇಳಿ, ವಿಷ್ಣುವಿನ ಬಳಿಗೆ ಎಲ್ಲರನ್ನೂ ಕರೆದುಕೊಂಡುಹೋದನು. ತಾರಕಾಕ್ಷಾದಿದೈತ್ಯರ ಹಾವಳಿಯು

ನ್ನು ಸಾಂಗವಾಗಿ ಹರಿಯೊಡನೆ ಬಿನ್ನೈಸಿಕೊಂಡು ನಮ್ಮ ಉದ್ಧಾರಕ್ಕೆ ಉಪಾಯವನ್ನು ತಿಳಿಸಬೇಕೆಂದು ಬೇಡಿದರು. ವಿಷ್ಣುವಾದರೋ— "ಎಲೆ ದೇವತೆಗಳಿರಾ! ಈಗ ನಾವು ಆ ರಾಕ್ಷಸರನ್ನು ಗೆಲ್ಲುವುದು ಸುಲಭವಲ್ಲ; ಅವರೆಲ್ಲರೂ ಮಹಾಶಿವಭಕ್ತರಾಗಿ ಲಿಂಗಾರ್ಚನೆಯನ್ನು ಮಾಡುತ್ತಿದ್ದಾರೆ; ಅವರ ಪತ್ನಿಯರೆಲ್ಲರೂ ಮಹಾಪತಿವ್ರತೆಯರಾಗಿದ್ದಾರೆ; ಆ ಶಿವಭಕ್ತಿ ಪಾತಿವ್ರತ್ಯಗಳ ಬಲವು ಅವರಲ್ಲಿರುವವರೆಗೂ ನಾವು ಅವರನ್ನು ಜೈಸಲಾರೆವು" ಎಂದನು. ದೇವತೆಗಳಾದರೋ— ರಾಕ್ಷಸರು ಮಯನ ಮಾತಿನ ಮೇರೆ ಶಿವಾರಾಧನೆಯನ್ನು ಮಾಡುತ್ತಿದ್ದಾರೆಯೇ ಹೊರತು, ಅಂಥ ಕೇವಲ ಭಕ್ತಿತತ್ಪರರಲ್ಲ; ಎಂದು ನುಡಿಯಲು, ವಿಷ್ಣುವು— ಅವರು ಭಕ್ತಿಯಲ್ಲಿ ಕಡಮೆಯಾದವರಲ್ಲ; ಸಾಮಾನ್ಯರೆಂದು ನೀವು ತಿಳಿಯಬೇಡಿ; ಎಂದು ಹೇಳಿದನು. ಕಡೆಗೆ "ನಾವೆಲ್ಲರೂ ಶಿವನನ್ನು ಧ್ಯಾನಿಸಿ ಅವನಾಜ್ಞೆಯಿಂದ ಅಗಣಿತವಾದ ಭೂತಪ್ರೇತಾದಿಗಳನ್ನು ಹುಟ್ಟಿಸಿ, ಅವುಗಳನ್ನು ದೈತ್ಯರಮೇಲೆ ನುಗ್ಗಿಸಿ ಕೊಲ್ಲಿಸಿಬಿಡಬೇಕು" ಎಂದು ನಿರ್ಧರಿಸಿ, ಅದರಂತೆಯೇ ಧ್ಯಾನಿಸಿ, ಶಿವನ ವರದಿಂದ ಅಪರಿಮಿತಬಲಗಳಾದ ಭೂತಗಳನ್ನು ಪಡೆದು, ರಾಕ್ಷಸರ ಪಟ್ಟಣಗಳಮೇಲೆ ನುಗ್ಗುವುದಕ್ಕೆ ಕಳಿಸಿದರು. ಅವು ತ್ರಿಪುರದ ಬಾಗಿಲಿಗೆ ಹೋದ ಕೂಡಲೇ ಭೂರಿರುದ್ರಾಕ್ಷಧಾರಣಸಂಪನ್ನರಾಗಿರುವ ರಾಕ್ಷಸರ ಸ್ತೋಮವನ್ನು ನೋಡಿ, ಒಳನುಗ್ಗಲಾರದೆ ಹಿಂತಿರುಗಿ ಓಡಿ, ಬಹಿರುದ್ಯಾನಗಳಲ್ಲಿ ನುಗ್ಗಿ, ಹಲಸು ಮಾವು ಬಾಳೆ ಮೊದಲಾದ ಹಣ್ಣುಗಳನ್ನು ಕಿತ್ತು ತಿನ್ನುತ್ತಿದ್ದುವು. ಕಾವಲಿನ ರಾಕ್ಷಸರು ಇದನ್ನು ಕಂಡು ಕಬ್ಬಿಣದ ದಂಡಗಳಿಂದ ಅವುಗಳನ್ನು ಹೊಡೆದು ಬಡಿದರು. ಅನೇಕ ರಾಕ್ಷಸರು ಅಲ್ಲಿಗೆ ಬಂದು ಮುತ್ತಿದರು. ಭೂತಗಳಿಗೂ ಅವರಿಗೂ ಘೋರಯುದ್ಧವಾಯಿತು. ಅನೇಕ ಭೂತಗಳು ಪ್ರಾಣವನ್ನೀಗಿ, ಉಳಿದುವು ಓಡಿಹೋಗಿ, ದೇವತೆಗಳಮುಂದೆ ಬಿದ್ದು ಹೊರಳಾಡಿ, ತಮಗಾದವಸ್ಥೆಯನ್ನು ಹೇಳಿಕೊಂಡು ಅತ್ತುವು. ಅತ್ತ ರಾಕ್ಷಸರು ಇದೆಲ್ಲ ದೇವತೆಗಳ ಚೇಷ್ಟೆಯೇ ಸರಿ ಎಂದು ಯೋಚಿಸಿ, ಅವರನ್ನು ತಡಕಿಕೊಂಡು ಲೋಕಲೋಕಗಳನ್ನೆಲ್ಲ ಸುತ್ತುತ್ತಿದ್ದರು. ಇತ್ತ ವಿಷ್ಣುಬ್ರಹ್ಮೇಂದ್ರಾದಿಗಳು ತಮ್ಮ ಯೋಚನೆಯು ಸಿದ್ಧಿಸದೆ ಹೋದುದನ್ನು

ಕಂಡು ವ್ಯಸನಪಟ್ಟು, ಸರ್ವರೂ ಕೈಲಾಸಕ್ಕೆ ತೆರಳಿದರು. ದ್ವಾರದಲ್ಲಿ ನಂದೀಶ್ವರನು ಈಗ ಸಮಯವಿಲ್ಲವೆಂದು ತಡೆಯಲು, ಆತನಪ್ಪಣೆಯ ಮೇರೆ ಮಹಾದ್ವಾರದ ಪಕ್ಕದ ಮಂಟಪದಲ್ಲಿ ಎಲ್ಲರೂ ಗುಂಪು ಕಟ್ಟಿಕೊಂಡು ಕುಳಿತು, ಗಜಬಜನೆ ಮಾತನಾಡಿಕೊಂಡು ತಮ್ಮವಸ್ಥೆಗಳನ್ನೆಲ್ಲ ವರ್ಣಿಸಿ ಪ್ರಲಾಪಿಸುತ್ತಿದ್ದರು. ನಂದೀಶನು ಬಂದು ಸದ್ದನ್ನು ಮಾಡಬೇಡಿರೆಂದು ದಂಡದಿಂದ ಹೊಡೆದು ಎಚ್ಚರಿಸಲು, ಕಂಗೆಟ್ಟು ಒಳಗೊಳಗೆ ಗುಸುಗುಸುಗುಟ್ಟುತ್ತ ಮುಂದೇನುಪಾಯವೆಂದು ವಿಷ್ಣುವನ್ನು ಕೇಳಿದರು. ನನಗೆ ಬುದ್ಧಿಯೇ ಓಡುವುದಿಲ್ಲವೆಂದು ಆತನು ನಿರಾಶೆಯಿಂದ ಹೇಳಲು, ಎಲ್ಲರೂ ನಿಶ್ಶಬ್ದವಾಗಿ ಕುಳಿತು ಆಲೋಚಿಸುತ್ತಿದ್ದು, ಕೊನೆಗೆ ವಿಷ್ಣುವನ್ನು ಕುರಿತು—“ಸ್ವಾಮಿ! ಮೊದಲು ತಾವು ಹೇಳಿದಂತೆಯೇ ರಾಕ್ಷಸರು ಶಿವಭಕ್ತಿ ಪಾತಿವ್ರತ್ಯಗಳ ಬಲವುಳ್ಳವರಾಗಿರುವವರೆಗೂ ನಾವು ಅವರನ್ನು ಏನೂ ಮಾಡಲಾರೆವು; ನೀವು ಯಾವುದಾದರೊಂದು ಮಾಯೋಪಾಯದಿಂದ ಅವರ ಭಕ್ತಿಪಾತಿವ್ರತ್ಯಗಳನ್ನು ಕೆಡಿಸಿದರೆ, ಆಗ ಪರಶಿವನು ಅವರ ವಿಷಯದಲ್ಲಿನ ಕಾರುಣ್ಯವನ್ನು ತೊರೆಯುವನು; ಮುಂದೆ ಶಿವನಿಂದಲೇ ಅವರ ಅಂತ್ಯವನ್ನು ಕಾಣಬಹುದು; ಹಾಗಲ್ಲದೆಹೋದರೆ ನಮಗೆ ಮೇರುಪರ್ವತದ ಗುಹಾವಾಸವೇ ಗತಿಯಾಗುವುದು;” ಎಂದು ನುಡಿದರು. ಅದನ್ನು ಕೇಳಿದ ವಿಷ್ಣುವು—ಹಾಗೆಯೇ ಆಗಲಿ, ನಾನು ಅದಕ್ಕೆ ಪ್ರಯತ್ನಿಸುತ್ತೇನೆ, ನೀವು ಅವರ ನಾಶಕ್ಕೆ ಶಿವನ ಅನುಮತಿಯನ್ನು ಪಡೆದುಕೊಳ್ಳಿರಿ ಎಂದು ಹೇಳಿ, ನಾರದನನ್ನು ಕರೆದುಕೊಂಡು ತ್ರಿಪುರದ ಕಡೆಗೆ ಪ್ರಯಾಣಮಾಡಿದನು. ಹರಿಯು ಬುದ್ಧಾವತಾರ ಮಾಡಿದನು. ನಾರದನು ಅವನ ಶಿಷ್ಯನಾದನು. ಅಜ್ಞಾನವರ್ಧಕವಾದ ಶಾಸ್ತ್ರಗಳನ್ನು ವಿಷ್ಣುವು ರಚಿಸಲು, ಇಬ್ಬರೂ ಮೃದುಮಧುರವಾದ ವಚನಗಳನ್ನಾಡುತ್ತ ರಾಕ್ಷಸರ ಪಟ್ಟಣವನ್ನು ಸೇರಿದರು. ಇಬ್ಬರೂ ಬಹು ಸುಂದರರಾಗಿ ನಡೆನುಡಿ ಮೊದಲಾದುವುಗಳಿಂದ ಸ್ತ್ರೀಕುಲದ ಚಿತ್ತವನ್ನು ಕೆಡಿಸುತ್ತ, ನಾನಾರತ್ನಭೂಷಣ ವಸನಾದಿಗಳನ್ನು ರಾಕ್ಷಸಸ್ತ್ರೀಯರಿಗೆ ತೋರಿಸುತ್ತಲೂ, ಕೇಳಿದಂತೆ ಕೊಡುತ್ತಲೂ, ಅವರ ಮನಸ್ಸನ್ನು ಸೆಳೆದುಕೊಂಡರು. ತಮ್ಮ ಇಂದ್ರಜಾಲದ ಕಾಪಟ್ಯದಿಂದ ಎಲ್ಲರನ್ನೂ ಬೆರಗು

ಗೊಳಿಸಿದರು. ಎಲ್ಲೆಲ್ಲಿಯೂ ಈ ಗುರುಶಿಷ್ಯರ ಸತ್ಕಾರವೇ ನಡೆಯುವಂತಾಯಿತು. ರಾಕ್ಷಸರ ನಾಯಕರು ಈತನಾರೆಂಬುದನ್ನು ತಿಳಿಯುವುದಕ್ಕಾಗಿ ಶಿಷ್ಯನನ್ನು ಗುಟ್ಟಾಗಿ ಕರೆದು, ಈ ಮಹಿಮನು ಯಾರು? ನಮ್ಮನ್ನು ಅನುಗ್ರಹಿಸುವುದಕ್ಕಾಗಿ ಎಲ್ಲಿಂದ ಬಂದನು? ಎಂದು ಕೇಳಿದರು. ಶಿಷ್ಯನಾದರೋ— "ಈತನು ಜಗತ್ಸ್ರಷ್ಟೃವಾದ ಭಗವಂತನು; ಲೋಕವನ್ನು ಸಂಚರಿಸಿ ನೋಡಿಕೊಂಡು ಹೋಗುವುದಕ್ಕಾಗಿ ಬಂದಿರುವನು; ಎಲ್ಲಿ ತನ್ನ ಮನಸ್ಸಿಗೆ ಸೊಗಸು ಕಾಣುವುದೋ ಅಲ್ಲಿ ನಿಂತು ತನ್ನ ಮಹಿಮೆಯನ್ನು ಪ್ರಕಾಶಪಡಿಸಿ, ಆಶ್ರಿತರಿಗೆ ಸಕಲಾಭೀಷ್ಟವನ್ನೂ ಕೊಡುವನು," ಎಂದು ನುಡಿದನು. ಅದನ್ನು ಕೇಳಿ ಸಕಲರೂ ಭಕ್ತಿಯಿಂದ ಆಬುದ್ಧನನ್ನೇ ಓಲೈಸುವವರಾದರು. ಅವರು ಕೇಳಿ ಕೇಳಿದುದನ್ನೆಲ್ಲ ಈ ಮಾಯಾವಿಯು ಕೊಟ್ಟು ವಶಮಾಡಿಕೊಂಡನು. ಬಳಿಕ ರಾಕ್ಷಸರಲ್ಲಿ ಕೆಲರು ಬುದ್ಧಿವಂತರು ನಾರದನನ್ನು ರಹಸ್ಯವಾಗಿ ಕರೆದು,—ಈ ಮಹಿಮನಲ್ಲಿ ಹೀಗೆ ಧನಕನಕಾದಿಗಳನ್ನು ದಾನಮಾಡುವ ಮಹಿಮೆಯು ಮಾತ್ರವಿರುವುದೋ? ಇನ್ನೇನಾದರೂ ಸಿದ್ಧಿಗಳಿರುವುವೋ? ಎಂದು ಕೇಳಲು, ನಾರದನು— ನಾನೇನು ಹೇಳಲಿ? ನಮ್ಮ ಗುರುವಿನ ವಿಷಯವು ಹಾಗಿರಲಿ, ಆತನ ಶಿಷ್ಯಕೋಟಿಯಲ್ಲೆಲ್ಲ ನಾನು ಸಾಮಾನ್ಯನಾದ ಮುಗ್ಧಶಿಷ್ಯ; ಆದರೂ ನನ್ನ ಬಳಿಯಲ್ಲಿ ನನ್ನ ಗುರುವಿನ ಅನುಗ್ರಹದಿಂದ ಪ್ರಾಪ್ತವಾಗಿರುವ ಸಿದ್ಧಿಯನ್ನು ನೀವು ಸ್ವಲ್ಪ ನೋಡಿರಿ, ಎಂದು ಹೇಳಿ, ಕಮಂಡಲುವಿನಲ್ಲಿದ್ದ ನೀರನ್ನು ಅಭಿಮಂತ್ರಿಸಿ, ಭೂಮಿಯಮೇಲೆ ತಳಿದನು. ಆಕೂಡಲೇ ವಿಷ್ಣುಬ್ರಹ್ಮೇಂದ್ರಾದಿದೇವತೆಗಳು ಉದ್ಭವಿಸಿ ನಿಂತರು. ಮತ್ತೆ ಮಂತ್ರೋದಕವನ್ನು ಸೇಚಿಸಲು, ಅದೃಶ್ಯರಾದರು. ಬಳಿಕ ಹಾಗೆಯೇ ಕಪಟದ ಅಮೃತವನ್ನು ನಿರ್ಮಿಸಿ ರಾಕ್ಷಸರಿಗೆ ಕೊಟ್ಟು ಕುಡಿಸಿದನು. ಇದರಿಂದಲೂ ರಾಕ್ಷಸರೆಲ್ಲರೂ ಭ್ರಾಂತರಾಗಿ, ತಮ್ಮ ಸರ್ವಸ್ವವನ್ನೂ ಈ ಗುರುಶಿಷ್ಯರಿಗೆ ಒಪ್ಪಿಸಿಬಿಡಲು ಹಿಂತೆಗೆಯದಂತಾದರು. ತಾವೂ ಶಿಷ್ಯರಾಗಬೇಕೆಂದು ಬಲಾತ್ಕರಿಸಿದರು. ಇದನ್ನು ತಿಳಿದು ನಾರದನು ಎಲ್ಲರನ್ನೂ ಗುರುವಿನ ಬಳಿಗೆ ಕರೆದುಕೊಂಡುಬಂದು, ಬಹುವಿಧವಾಗಿ ಪ್ರಾರ್ಥಿಸಿ ಒಡಂಬಡಿಸಿದಂತೆ ಮಾಡಿ

ರಾಕ್ಷಸಸ್ತ್ರೀಯರನ್ನೆಲ್ಲಾ ಶಿಷ್ಯರನ್ನಾಗಿ ಅಂಗೀಕರಿಸಿಕೊಳ್ಳುವಂತೆ
ಮಾಡಿದನು. ಆಗ ಬುದ್ಧನು ಅವರೆಲ್ಲರಿಗೂ ದೀಕ್ಷೆಮಾಡಿಸಿದನು. ಬ
ಳಿಕ– ಎಲೆ ಶಿಷ್ಯರೇ! ಇನ್ನುಮುಂದೆ ನೀವು ಶಿವಾರ್ಚನೆಯನ್ನು ಬಿಟ್ಟು
ನನ್ನನ್ನೇ ಪೂಜಿಸಬೇಕು, ನಾನೇ ಬುದ್ಧನು, ನನ್ನ ನಾಮ ಜಪವನ್ನು
ನೀವು ಯಾವಾಗಲೂ ಮಾಡುತಿರಬೇಕು, ನನ್ನ ಆರಾಧನೆಯಿಂದಲೇ ನಿ
ಮಗೆ ಸಕಲೇಷ್ಟಾರ್ಥಗಳೂ ಸಿದ್ಧಿಸುವುವು; ಇಹಲೋಕದ ಸೌಖ್ಯವು
ಯಾವುದುಂಟೋ ಅದನ್ನೇ ಪಡೆಯಬೇಕು; ಪರಲೋಕದ ಸುಖವೆಂ
ಬುದು ಸುಳ್ಳು; ವಿಭೂತಿರುದ್ರಾಕ್ಷ ಧಾರಣೆಗಳನ್ನು ಮಾಡಬಾರದು;
ವೇದವಚನಗಳೆಲ್ಲ ಸುಳ್ಳು; ಇದರಂತೆ ತಿಳಿದು ಯಾರು ಆಚರಿಸುತ್ತಾರೋ
ಅವರೇ ನನ್ನ ಶಿಷ್ಯರಾಗುವುದಕ್ಕೆ ಅರ್ಹರು, ಅವರಿಗೇ ಸಕಲ ಸಿದ್ಧಿ
ಗಳೂ ದೊರೆಯುವುವು; ಉಳಿದವರಿಗೆ ಇಲ್ಲ; ಎಂದು ಉಪದೇಶಿಸಿದನು.
ಅದರಂತೆ ನಡೆಯುವುದಕ್ಕೆ ಸರ್ವರೂ ಒಪ್ಪಿದರು. ವಿಭೂತಿ ರುದ್ರಾಕ್ಷ
ಧಾರಣಗಳನ್ನೂ ಶಿವಾರ್ಚನವನ್ನೂ ಬಿಟ್ಟರು. ನಾರದನ ಲೀಲಾಚೇಷ್ಟೆ
ಗಳಿಂದ ರಾಕ್ಷಸಸ್ತ್ರೀಯರು ಮೋಹಿತರಾಗಿ ಆತನ ಸಂಗವನ್ನು ಮಾಡಿ
ಜಾರತನದಲ್ಲಿ ಅಭಿರುಚಿಗೊಂಡರು. ಹೆಂಗುಸರು ಕಸಪೊರಕೆ, ಒರ
ಳೆ, ಒರಲು, ಗೋಡೆ ಮೊದಲಾದುವುಗಳನ್ನು ಪೂಜಿಸುವುದಕ್ಕೆ ಪ್ರೇರಿ
ತರಾದರು. ಹಗಲೂ ರಾತ್ರಿಯೂ ತ್ರಿಪುರದಲ್ಲೆಲ್ಲ ಜಾರತನವೇ ನಡೆಯು
ವಂತಾಯಿತು. ಸರ್ವರೂ ದುರ್ವ್ಯಸನ ಪಾತ್ರರಾದರು. ಈ ಸಂಗತಿ
ಯನ್ನೆಲ್ಲ ನಾರದನು ತನ್ನ ಗುರುವಿನೊಡನೆ ಬಿನ್ನೈಸಿ, ಸ್ವಾಮಿ! ನಾ
ವು ಬಂದ ಕಾರ್ಯವೆಲ್ಲ ಸಿದ್ಧಿಸಿತು, ಆದರೆ ಮೂರುಪುರಗಳಲ್ಲೂ ಒಬ್ಬೊ
ಬ್ಬರಂತೆ ಪರಮಯೋಗಿ, ಶೀಲಪರ, ವಿರಕ್ತ ಎಂಬ ಮೂರು ಮಂದಿಗಳಿ
ದ್ದಾರೆ. ಅವರು ದಧೀಚಿ ಉಪಮನ್ಯು ಅಗಸ್ತ್ಯಾದಿಗಳಿಗಿಂತಲೂ ಮ
ಹಾಶಿವಭಕ್ತರಾಗಿದ್ದಾರೆ; ಅವರು ಮಾತ್ರ ನಮ್ಮ ಬಲೆಗೆ ವಶರಾಗಲಿಲ್ಲ;
ಎಂದು ನುಡಿದನು. ಅವರ ತಂಟೆಗೆ ಹೋಗಬೇಡವೆಂದು ವಿಷ್ಣುವು ಹೇ
ಳಲು, ಗುರುಶಿಷ್ಯರುಗಳು ಅಲ್ಲಿಂದ ಕೈಲಾಸದ ಕಡೆಗೆ ತಿರುಗಿದರು.
ಮಧ್ಯೆ ವಿಷ್ಣುವು–ಅಯ್ಯಾ ನಾರದನೆ! ನಾವು ದೇವತೆಗಳ ಕಾರ್ಯಕ್ಕಾಗಿ
ಶಿವಭಕ್ತರಲ್ಲಿ ನಾಸ್ತಿಕ್ಯವನ್ನು ವೃದ್ಧಿ ಮಾಡಲು ಬುದ್ಧಾವತಾರವನ್ನು ಧ

ರಿಗ್ರಹಿಸಿದ್ದೆವು. ಈ ದೋಷದಿಂದ ದೂಷಿತರಾದ ನಮಗೆ ಶಿವಸಭೆಯ ಪ್ರಾಪ್ತಿಯು ಹೇಗೆತಾನೇ ಆದೀತು? ಆದುಕಾರಣ ಈ ದೋಷವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ತಪಸ್ಸನ್ನಾಚರಿಸಬೇಕು. ಎಂದು ಹೇಳಲು, ಅವರಂತೆಯೇ ನಾರದನೊಪ್ಪಿ, ಇಬ್ಬರೂ ತಪಸ್ಸಿಗೆ ಕುಳಿತರು. ಶಿವನು ಅಶರೀರಿಯಾಗಿ ಬಂದು– ನೀವಿಬ್ಬರೂ ದೇವತೆಗಳ ಮಾತನ್ನು ಕೇಳಿ, ಶಿವಭಕ್ತಿಯನ್ನು ತಪ್ಪಿಸಿ, ಮೋಹಶಾಸ್ತ್ರವನ್ನು ನನ್ನ ಭಕ್ತರಲ್ಲಿ ಹರಡಿರುವಿರಿ; ಅದುಕಾರಣ ಸರ್ವದೇವತಾಸ್ತೋಮದೊಡನೆ ನೀವೂ ಕೂಡ ಕೈಲಾಸವನ್ನು ಪ್ರವೇಶಿಸುವುದಕ್ಕೆ ಅನರ್ಹರು. ನೀವೆಲ್ಲರೂ ಹೋಗಿ ಮಾನಸಸರೋವರದಲ್ಲಿ ಮುಳುಗಿ ತಪಸ್ಸನ್ನಾಚರಿಸಿ ಶುದ್ಧರಾದರೆ ಆಗ ನನ್ನನುಗ್ರಹಕ್ಕೆ ಪಾತ್ರರಾಗುವಿರಿ, ಎಂದು ನುಡಿದನು. ಈ ಆಕಾಶವಾಣಿಯನ್ನು ವಿಷ್ಣುನಾರದರು ಕೇಳಿ, ತಪಸ್ಸಿನಿಂದೆದ್ದು ದೇವತೆಗಳಿದ್ದ ಬಳಿಗೆ ಬಂದು, ಅದುವರೆಗೆ ನಡೆದ ಸಂಗತಿಯನ್ನೆಲ್ಲ ಹೇಳಿ ಎಲ್ಲರನ್ನೂ ಕರೆದುಕೊಂಡು ಹಿಮವತ್ಪರ್ವತಕ್ಕೆ ಹೋಗಿ, ಮಾನಸಸರೋವರದಲ್ಲಿ ದೇಹವನ್ನೆಲ್ಲ ಮುಳುಗಿಸಿಕೊಂಡು ಕೈಗಳನ್ನು ಮಾತ್ರ ಜೋಡಿಸಿ ತಲೆ ಮೇಲಕ್ಕೆತ್ತಿ ಘೋರತಪಸ್ಸನ್ನಾಚರಿಸಿದರು. ಆಗ ಶಿವನು ಪ್ರತ್ಯಕ್ಷನಾದನು. ಸರ್ವರೂ ನಮಸ್ಕರಿಸಿ ಹೊಗಳಿದರು. ಮತ್ತು– "ಪ್ರಭುವೇ! ನಾವು ಮೂಢಮತಿಯಿಂದ ದುರಾಲೋಚಿಸಿ ನಾಸ್ತಿಕ್ಯವರ್ಧನಕ್ಕೆ ಸಹಾಯಕರಾದೆವು. ನಾವೆಲ್ಲರೂ ಅಜ್ಞಾನಿಗಳೂ ಜನನಮರಣಬದ್ಧರೂ ಆದ ಪಶುಗಳು; ಜನನಮರಣದೂರನೂ ಸರ್ವಜ್ಞನೂ ಆದ ನೀನೇ ಪತಿಯು; ನಿನ್ನಪ್ಪಣೆಯಿಲ್ಲದೆ ನಾವು ಆಚರಿಸಿದ ತಪ್ಪನ್ನು ಕ್ಷಮಿಸಬೇಕು. ಇತಃಪರಃ ನಿಮ್ಮಪ್ಪಣೆಯಮೇರೆ ನಾವು ನಡೆದುಕೊಳ್ಳುವಂತೆಯೂ, ಶುದ್ಧರಾಗುವಂತೆಯೂ ನಮ್ಮನ್ನು ಅನುಗ್ರಹಿಸಬೇಕು. ಮತ್ತು ತಾರಕಾದಿದೈತ್ಯರ ಉಪಟಲವನ್ನು ತಪ್ಪಿಸಿ ನಮ್ಮನ್ನು ಉದ್ಧರಿಸಬೇಕು" ಎಂದು, ಬೇಡಿಕೊಂಡರು. ಆಗ ಸ್ವಾಮಿಯು– "ಹಾಗಾದರೆ ನಮಗೆ ಪಶುಪತಿಪಟ್ಟವನ್ನು ಕಟ್ಟಿ ನಾವು ಬೋಧಿಸಿದಂತೆ ನೀವೆಲ್ಲರೂ ನಡೆದುಕೊಳ್ಳಿರಿ" ಎಂದು ಅಪ್ಪಣೆ ಮಾಡಿದನು. ದೇವತೆಗಳೆಲ್ಲರೂ "ತಥಾಸ್ತು" ಎಂದು ಹರ್ಷದಿಂದ ಪರಶಿವನನ್ನು ಸಿಂಹಾಸನದಲ್ಲಿ ಮೂ

ರಿಗೊಳಸಿ, ಅತ್ಯಂತ ವೈಭವದಿಂದ ಪಶುಪತಿಪಟ್ಟವನ್ನು ಕಟ್ಟ, ಹರಿಬ್ರಹ್ಮೇಂದ್ರಾದಿಗಳೆಲ್ಲರೂ ಶಿವನ ಪಾದಕ್ಕೆ ಕಾಣ್ಕೆಯನ್ನೊಪ್ಪಿಸಿ ನಮಸ್ಕರಿಸಿ ಕೈಕಟ್ಟಿ ನಿಂತರು. ಆಗ ಸ್ವಾಮಿಯು ಸರ್ವರಿಗೂ ವಿಭೂತಿರುದ್ರಾಕ್ಷಧಾರಣಗಳನ್ನು ಮಾಡಿಸಿ, ಶಿವಾರಾಧನೆಯ ಕ್ರಮವನ್ನು ತಿಳಿಸಿ, ಪಾಶುಪತವ್ರತವನ್ನು ಬೋಧಿಸಿ, ಎಲ್ಲರನ್ನೂ ಪಾಶುಪತರನ್ನು ಮಾಡಿ ಅನುಗ್ರಹಿಸಿದನು. ಬಳಿಕ ತ್ರಿಪುರಜಯ ಪ್ರಯಾಣಕ್ಕೆ ಸರ್ವವೂ ಸಿದ್ಧವಾಗಲಿ ಎಂದು ನಂದೀಶ್ವರನನ್ನು ಕುರಿತು ಪರಶಿವನು ಅಪ್ಪಣೆಮಾಡಿ, ಪತ್ನೀಸಮೇತನಾಗಿ ತೆರಳಿದನೆಂಬಲ್ಲಿಗೆ ಒಂದನೇ ಅಧ್ಯಾಯವು ಸಂಪೂರ್ಣವು.

---

## ೨ ನೇ ಅಧ್ಯಾಯವು.

### ತ್ರಿಪುರವಿಜಯ ಯಾತ್ರೆಯು.

ಎಲೆ ಸಿದ್ಧಬಸವೇಶನೆ ಕೇಳು, ಶಿವನಪ್ಪಣೆಯಮೇರೆ ನಂದೀಶನು ಚತುರಂಗಸೈನ್ಯವೂ ಸನ್ನಾಹಗೊಳ್ಳಬೇಕೆಂದು ದೇವತೆಗಳೆಲ್ಲರಿಗೂ ಆಜ್ಞಾಪಿಸಿದನು. ಜಗತ್ಸಾಕ್ಷಿಯಾದ ಸ್ವಾಮಿಯ ಆರೋಹಣಕ್ಕೆ ಅರ್ಹವಾದ ರಥವನ್ನು ರಚಿಸುವುದಕ್ಕೆ ವಿಶ್ವಕರ್ಮನು ನಿಂತನು. ಅದಕ್ಕೆ ತಕ್ಕ ಬಲವತ್ತರಗಳಾದ ಉಪಕರಣಗಳನ್ನೇ ಜೋಡಿಸಿದನು. ಭೂತಲನೇ ರಥದ ಪೀಠವಾಯಿತು. ಆಕಾಶವೇ ಮೇಲಣ ಮಂಟಪಸ್ಥಲವಾಯಿತು. ಸಮುದ್ರ ನಕ್ಷತ್ರ ಮೊದಲಾದುವುಗಳು ಅಚ್ಚಾದುವು. ಸೂರ್ಯಚಂದ್ರರೇ ಎರಡು ಚಕ್ರಗಳಾದುವು. ನಾಲ್ಕು ವೇದಗಳೇ ನಾಲ್ಕು ಕುದುರೆಗಳಾದುವು. ಉತ್ತರ ದಕ್ಷಿಣಾಯನಗಳು ನೊಗವಾದುವು. ಉಪನಿಷತ್ತುಗಳು ಕಟ್ಟುವ ಹಗ್ಗವಾದುವು. ಶಾಸ್ತ್ರಗಳು ಕೀಲಾಯಿತು. ಓಂಕಾರವೇ ಚಾವಟಿಯಾಯಿತು. ಮೇರುಪರ್ವತವು ಧನುಸ್ಸಾಯಿತು. ಆದಿಶೇಷನು ಸಿಂಜಿನಿಯಾದನು. ವಿಷ್ಣುವು ಬಾಣವಾದನು. ಬ್ರಹ್ಮನು ಸಾರಥಿಯಾದನು. ನದೀನಾರಿಯರು ಚಾಮರಗ್ರಾಹಿಣಿಯರಾದರು ಕೈಲಾಸವೇ ಶ್ವೇತಛತ್ರವಾಯಿತು. ವಸಿಷ್ಠಾದಿ ಮಹರ್ಷಿಗಳು ಸ್ವಸ್ತಿವಾಚನವನ್ನು ಮಾಡುವವರಾದರು. ಕಿನ್ನರ ಯಕ್ಷಸಿದ್ಧಾದಿಗಳು ಸ್ತುತಿಪಾಠಕರಾದರು. ಗರುಡಗಂಧರ್ವಾದಿಗಳು ಕವಿಗಳಾದರು. ಕುಲಶೈಲಗ

ಳು ಮೇಘಗಳು ಸಪ ಮೇಲುಕಟ್ಟುಗಳಾದುವು. ಇಂದ್ರಾದಿದಿಕ್ಪಾಲಕರು ಮಹಾರಥಿಕರಾದರು. ಸಕಲ ದೇವತಾಸಮೂಹವೂ ಸನ್ನದ್ಧವಾಗಿ ನಿಂತು ಮಹಾಸಮುದ್ರದಂತೆ ಕಾಣಿಸಿತು. ಆಗ ನಂದೀಶನು ಶಿವನ ಬಳಗೆ ಹೋಗಿ ನಮಸ್ಕರಿಸಿ, ಎಲ್ಲವೂ ಸಿದ್ಧವಾಯಿತೆಂದು ಬಿನ್ನೈಸಿದನು. ಪರಶಿವನು ಪಾರ್ವತಿಯೊಡನೆ ಮಂದಸ್ಮಿತನಾಗಿ ಸಿಂಹಾಸನದಿಂದಿಳಿದು, ವೃಷಭವನ್ನೇರಿ ರಥದ ಬಳಿಗೆ ಬಂದನು. ಮಹಾವಾದ್ಯಘೋಷವು ವಿಜೃಂಭಿಸಿತು. ಸರ್ವದೇವತೆಗಳೂ ಜಯಘೋಷವನ್ನು ಮಾಡಿದರು. ಶಂಕರನು ವೃಷಭದಿಂದಿಳಿದು ಆ ಮಹಾರಥದಮೇಲೆ ಎಡಪಾದವೊಂದನ್ನಿಟ್ಟನು. ಅನೇಕ ಬ್ರಹ್ಮಾಂಡೋದರನಾದ ಆ ಮಹಾಸ್ವಾಮಿಯ ಭಾರವನ್ನು ತಾಳಲಾರದೆ, ಕೂಡಲೇ ರಥವು ಕಟಕಟನೆ ಶಬ್ದಮಾಡಿ ಜರ್ಝರಿತವಾಗಿ ಗಾಲಿಗಳು ನಗ್ಗಿ ಕುದುರೆಗಳು ಬಳ್ಕಿ ರಥವು ಪಾತಾಳಕ್ಕೆ ಇಳಿದು ಹೋಯಿತು. ವಿಷ್ಣುವು ಕೆಲಸಕೆಟ್ಟಿತೆಂದು ಯೋಚಿಸಿ, ಥಟ್ಟನೆ ಮಹಾವೃಷಭಾಕಾರವನ್ನು ಧರಿಸಿ, ಕೋಡನ್ನು ರಥದ ಅಡಿಗೆ ಕೊಟ್ಟು ಮೀಂಟಿದನು. ರಥವು ಎದ್ದು ನಿಂತಿತು. ವಿಶ್ವಕರ್ಮನು ಕೀಲುಗಳನ್ನೆಲ್ಲ ಬಿಗಿ ಮಾಡಿ ಸರಿಗೊಳಿಸಿದನು. ವೃಷಭಾಕಾರದ ಹರಿಯು ರಥದ ಮಹಾಭಾರವನ್ನೆತ್ತಿದುದರಿಂದ ತೆರಹಿಸಿ ಕಣ್ಣು ತಿರುಗಿ ರಕ್ತವನ್ನು ಕಕ್ಕಿ ವಿಚೇತನನಾದನು. ಆಗ ಶಂಕರನು ಕರುಣಾಕಟಾಕ್ಷದಿಂದ ನೋಡಿ ಚೈತನ್ಯವನ್ನು ಕೊಟ್ಟು, ಹರಿಯೆ! ನಿನ್ನ ಸಾಹಸಕ್ಕೆ ಮೆಚ್ಚಿದೆನು, ಇಷ್ಟಾರ್ಥವನ್ನು ಕೇಳು ಎನಲು, ಹರಿಯು— ಸ್ವಾಮಿಾ ನಾನು ಶಕ್ತಿಯೊಳಗೆಲ್ಲ ಮೂಲಶಕ್ತಿಯಾಗಿ ನಿನ್ನಲ್ಲಿ ಹೇಗೆ ಇರುವೆನೋ, ಹಾಗೆಯೇ ವೃಷಭನಲ್ಲಿ ಮಹಾವೃಷಭನಾಗಿ ನಾನಿರುವಂತೆಯೂ ನಿನ್ನ ಮೇಲಣ ಭಕ್ತಿಯು ನನ್ನಲ್ಲಿ ಸಂಪೂರ್ಣವಾಗಿರುವಂತೆಯೂ ಅನುಗ್ರಹಿಸು, ಎಂದು ಬೇಡಿದನು. ಶಿವನು ತಥಾಸ್ತು ಎಂದನು. ಸಕಲ ದೇವತೆಗಳೂ ಮತ್ತೆ ಜಯಘೋಷವನ್ನು ಮಾಡಿದರು. ಸ್ವಾಮಿಯು ಪತ್ನೀಸಮೇತನಾಗಿ ರಥದಲ್ಲಿ ಮೂರ್ತಿಗೊಂಡನು. ಸರ್ವರಿಗೂ ಅವರವರ ವಾಹನವನ್ನೇರುವಂತೆ ಅಪ್ಪಣೆ ಮಾಡಿದನು. ದೇವತಾಸ್ತೋಮವು ಗಣಪತಿಯ ಸ್ತೋತ್ರವನ್ನು ಮಾಡಲು, ಆತನು ಸಂತುಷ್ಟನಾಗಿ ನಿರ್ವಿಘ್ನತೆಯ ವರವನ್ನಿತ್ತು ದೇವ

ದುಂದುಭಿಯನ್ನು ತಾಡಿಸಿದನು. ಮಹಾವಾದ್ಯಗಳ ವಿಜೃಂಭಣೆಯು ಬ್ರಹ್ಮಾಂಡಕಟಾಹವನ್ನು ಒಡೆಯುವಂತೆ ಮಾಡಿತು. ಸಕಲ ಚತುರಂಗ ಸೈನ್ಯವೂ ಆಯತ್ತವಾಗಿ ಹೊರಟಿತು. ರಥದ ಮುಂಗಡೆಯಲ್ಲಿ ನಂದೀಶನು ಛತ್ರವನ್ನು ಹಿಡಿದು ನಡೆದನು. ಎಡಬಲದಲ್ಲಿ ಗಣಪತಿಷಣ್ಮುಖರು ಇಲಿ ನವಿಲುಗಳನ್ನು ಹತ್ತಿ ನಡೆದರು. ಹರಿಬ್ರಹ್ಮರು ಗರುಡಹಂಸಗಳನ್ನು ಹತ್ತಿ ಅವರ ಪಕ್ಕದಲ್ಲಿ ನಡೆದರು. ದಿಕ್ಪಾಲಕರುಗಳು ರಥದ ಸುತ್ತಲೂ ಅವರವರ ವಾಹನಗಳನ್ನೇರಿ ತಮ್ಮ ತಮ್ಮ ದಿಕ್ಕಿನಲ್ಲಿ ನಿಂತು ಹೊರಟರು. ಇಂಥ ಮಹಾವಿಜೃಂಭಣೆಯ ಪ್ರಯಾಣವನ್ನು ನೋಡಿದ ಮನುಮುನಿಸಿದ್ಧಸಾಧ್ಯಾದಿಗಳೆಲ್ಲರೂ ಇದು ನಮ್ಮ ಕಣ್ಣಿನ ಹಬ್ಬವಾಯಿತೆಂದು ಧನ್ಯವಾದವನ್ನು ಮಾಡುತ್ತಿದ್ದರು. ಗಣನಾತೀತವಾದ ಹಸ್ತ್ಯಶ್ವರಥಪದಾತಿಗಳಿಂದಲೂ ಛತ್ರಚಾಮರಧ್ವಜಪಟಗಳಿಂದಲೂ, ನಿಬಿಡವಾದ ಈ ಮಹಾದೇವಸೇನೆಯು ತ್ರಿಪುರದ ದಾರಿಯನ್ನು ಹಿಡಿದು ನಡೆದು, ಪಟ್ಟಣಕ್ಕೆ ಸಮೀಪವಾದ ಒಂದು ದೊಡ್ಡಬಯಲಿನಲ್ಲಿ ಬೀಡನ್ನು ಬಿಟ್ಟು ಮಾರ್ಗಾಯಾಸದಿಂದ ವಿಶ್ರಮಿಸಿಕೊಂಡಿತು. ಈ ಸೈನ್ಯದ ಒಟ್ಟು ಕಾವಲು ಭೈರವನಿಗೆ ನೇಮಿಸಲ್ಪಟ್ಟಿತು. ಷಣ್ಮುಖನಿಗೆ ಮುಖ್ಯಸೇನಾಧಿಪತ್ಯವು ಕೊಡಲ್ಪಟ್ಟಿತು. ಉಳಿದ ಯುದ್ಧಸಾಮಗ್ರಿಗಳ ಯಾಜಮಾನ್ಯವೆಲ್ಲ ವೀರಭದ್ರೇಶ್ವರನಿಗೆ ಒಪ್ಪಿಸಲ್ಪಟ್ಟಿತು. ಅಷ್ಟರಲ್ಲಿ ಸಂಧ್ಯಾಕಾಲವಾಗಲು ಸೂರ್ಯನು ಅಸ್ತಮಿಸಿದನು. ಕತ್ತಲೆಯು ಆವರಿಸಿತು. ಆಗ ತಾರಕನು ತನ್ನ ಅರಮನೆಯೊಳಗೆ ಸಕಲ ಸೇನಾಪ್ರಮುಖರಿಂದ ಕೂಡಿದ ಒಡ್ಡೋಲಗದಲ್ಲಿದ್ದನು. ಸಿಂಹಾಸನದ ಬಲಗಡೆಯಲ್ಲಿ ಕುಳಿತಿದ್ದ ಕುಲಗುರುವಾದ ಶುಕ್ರಾಚಾರ್ಯನನ್ನು ಕುರಿತು ಮುಗುಳ್ನಗೆಯಿಂದ—"ಗುರುವೇ! ಆಶ್ಚರ್ಯವನ್ನು ಕೇಳಿದಿರಾ? ದೇವತೆಗಳು ನಮ್ಮಿಂದ ಹೆದರಿ ಓಡಿ ಹೋಗಿ ಶಿವನೊಡನೆ ದೂರನ್ನು ಹೇಳಿಕೊಂಡು, ನಮ್ಮನ್ನು ಜೈಸುವುದಕ್ಕಾಗಿ ಶಿವನನ್ನೇ ಕರೆದುಕೊಂಡುಬಂದಿರುವರಂತೆ! ಈಗ ನಾವು ಮಾಡತಕ್ಕ ಕಾರ್ಯವೇನು?" ಎಂದು ಕೇಳಿದನು. ಶುಕ್ರಾಚಾರ್ಯನಾದರೋ— "ಶಿವನೇ ಕೊಲ್ಲಬೇಕೆಂದು ಪ್ರಯತ್ನಿಸಿದರೆ ಇನ್ನು ಬಿಡಿಸಿಕೊಳ್ಳುವುದಕ್ಕೆ ಯಾರಿಂದತಾನೇ ಆದೀತು? ಈಗ ಶಿವನ ಬಳಿಗೆ ನಾವೇ ಹೋಗಿ

ಶರಣಾಗತರಾಗುವುದೇ ನ್ಯಾಯವು'' ಎಂದು ಉತ್ತರ ಕೊಟ್ಟನು. ಅದನ್ನು ಕೇಳಿ ವಿದ್ಯುನ್ಮಾಲಿಯು ಕಿಡಿಕಿಡಿಯಾಗಿ,– ಗುರುವೆ! ಏನೆಂಬಿರಿ? ಶರಣಾಗತರಾಗುವುದ? ಸರಿ ಸರಿ! ಸಮುದ್ರವನ್ನೆಲ್ಲ ಸುರ್ರನೆ ಹೀರಿಬಿಡುವ ಬಡಬಾಗ್ನಿಯು ನೀರಿನ ಸಣ್ಣಹನಿಗೆ ಅಂಜಬೇಕೆ? ನನ್ನ ಶಕ್ತಿಯನ್ನು ಪರೀಕ್ಷಿಸಬೇಕಾದರೆ ಆ ದೇವತೆಗಳಮೇಲೆ ಬಿಟ್ಟು ನೋಡಿ, ಅವರು ನಮಗೆ ಸಣ್ಣ ಕೀಟಗಳಿಗೆ ಸಮಾನರು. ನಮ್ಮ ತ್ರಿಪುರದ ಎಲ್ಲೆಯನ್ನು ಮುಟ್ಟುವುದಕ್ಕಾದರೂ ಅವರಿಗೆ ಸಾಮರ್ಥ್ಯವುಂಟೆ? ಅವರ ಬೆದರಿಕೆಯನ್ನು ನಮಗೆ ತೋರಿಸುವುದು ಹುಲಿಯ ಬಿರುದನ್ನು ಹುಲ್ಲೆಯು ಅಳಿಸಿಬಿಡುವುದೆಂದು ಹೇಳಿದಹಾಗಾಯಿತು! ಎಂದನು. ಅಷ್ಟರಲ್ಲಿ ಉಳಿದ ಸೇನಾಪ್ರಮುಖರೆಲ್ಲ ಎದ್ದು ನಿಂತು– ಗುರುವೆ! ನಮ್ಮ ಪರಾಕ್ರಮವನ್ನು ಪರೀಕ್ಷಿಸಬೇಕು, ಸಕಲ ದಿಕ್ಪಾಲಕರನ್ನೂ ಕಟ್ಟಿ ಪಾದಕ್ಕೆ ತಂದೊಪ್ಪಿಸುವೆವು. ಸಪ್ತಸಮುದ್ರಗಳನ್ನೂ ಕುಡಿದುಬರುವೆವು. ಕುಲಾಚಲಗಳನ್ನೆಲ್ಲ ಕಿತ್ತು ತರುವೆವು. ಸಕಲ ದೇವತೆಗಳ ಪ್ರಾಣವನ್ನೂ ತೆಗೆಯುವುದಕ್ಕೆ ಸಂಚಕಾರವನ್ನು ಹಿಡಿವೆವು. ಕೊನೆಗೆ ಶಿವನೇ ಬಂದರೂ ತಡೆದು ನಿಲ್ಲಿಸುವೆವು. ನಮ್ಮನ್ನು ಬಿಟ್ಟು ನೋಡು'' ಎಂದು ಗರ್ಜಿಸಿದರು. ತಾರಕಾಕ್ಷನು ಆ ಶೂರರನ್ನೆಲ್ಲ ಉಚಿತ ವಚನಗಳಿಂದ ಗೌರವಿಸಿ, ಓಲಗವನ್ನು ವಿಸರ್ಜಿಸಿ, ಮೂರು ಪುರಗಳ ಕೋಟೆಗಳ ಕಾವಲಿನವರಿಗೂ ಎಚ್ಚರಿಕೆಯನ್ನು ಹೇಳಿಸಿ, ತಾನು ಅಂತಃಪುರಕ್ಕೆ ಹೋದನು. ಆಳ್ವೇರಿಯಮೇಲೆ ಕಾವಲಿನವರು ತಮ್ಮಟೆಗಳನ್ನು ಹೊಡೆದು, ಕಹಳೆಗಳನ್ನೂದಿ, ಗಟ್ಟಿಯಾಗಿ ಕೂಗಿ ಎಚ್ಚರಿಸಿ, ಪಂಜುಗಳನ್ನು ಹತ್ತಿಸಿ ಸುತ್ತುತ್ತ, ನಿದ್ರೆಯಿಲ್ಲದೆ ಕಾಯುತ್ತಿದ್ದರು. ಕಾಸಿದ ಮಳಲಗುಡ್ಡೆಗಳು, ಕಾಸಿದ ಎಣ್ಣೆ, ಹುಲ್ಲನ್ನು ತುಂಬಿದ ಚೀಲಗಳು, ದಸಿಗಳು, ತೊಲೆಗಳು, ಗುಂಡುಗೋವಿಗಳು, ಸುಣ್ಣದ ಚೀಲಗಳು, ಕಲ್ಲುಗುಂಡುಗಳು, ಕವಣೆಗಳು, ಕತ್ತಿ ಗುರಾಣಿಗಳು, ಬಲ್ಲೆಗಳು, ಹಂದಿಯ ತಲೆಗಳು, ಮೊದಲಾದ ಪರಿಕರವನ್ನೆಲ್ಲ ಆಳ್ವೇರಿಯಮೇಲೆ ಜೋಡಿಸುತ್ತಿದ್ದರು. ಅಷ್ಟರಲ್ಲಿ ಬೆಳಗಾಯಿತು. ದೇವಸೇನೆಯಲ್ಲಿ ತ್ರಿಪುರವನ್ನು ಲಗ್ಗೆಹತ್ತುವುದಕ್ಕೆ ಸನ್ನಾಹಗೊಳ್ಳಬೇಕೆಂದು ಡಂಗುರದಿಂದ ಅಪ್ಪಣೆಯಾಯಿತು. ಅತ್ತ ತ್ರಿ

ಪುರದ ಜನರು, ಶಿವನು ತಮ್ಮ ಪಟ್ಟಣದಮೇಲೆ ದಾಡೆತ್ತಿ ಬರುವುದನ್ನು ನೋಡಬೇಕೆಂದು ಆಳ್ವೇರಿಗಳಮೇಲೆ ಹತ್ತಿ ಸಾಲಾಗಿ ನಿಂತಿದ್ದರು. ರಾಕ್ಷಸಾಂಗನೆಯರು– ಇನ್ನು ನಮ್ಮ ಗತಿಯೇನು? ದೇವತೆಗಳು ನಮ್ಮ ಪಟ್ಟಣವನ್ನು ಸೂರೆ ಮಾಡಿಕೊಳ್ಳುವರಂತೆ! ಎಂದು ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಿದ್ದರು. ಇತ್ತ ಇಂದ್ರಾದಿದಿಕ್ಪಾಲಕರು ತಮ್ಮ ನಿತ್ಯಕ್ರಿಯೆಗಳನ್ನು ಮುಗಿಸಿಕೊಂಡು, ಶಿವನಬಳಿಗೆ ಹೋಗಿ ನಮಸ್ಕರಿಸಿ ಅಪ್ಪಣೆ ಯೇನೆಂದು ಬೆಸಗೊಳ್ಳಲು, ಮೊದಲು ತ್ರಿಪುರವನ್ನು ಲಗ್ಗೆ ಹತ್ತುವುದಕ್ಕೆ ಇಂದ್ರನಿಗೆ ಅಪ್ಪಣೆ ಮಾಡಿದನು. ಆತನು ಐರಾವತದಮೇಲಣ ಅಂಬಾರಿಯನ್ನೇರಿ ತನ್ನ ಸೇನಾಸಮೂಹದೊಡನೆ ಬಿರುದಾವಳಿಗಳನ್ನು ಹೊಗಳಿಸಿಕೊಳ್ಳುತ್ತ ತ್ರಿಪುರದಮೇಲೆ ಸಾಗಿದನು. ಅದರ ಕೋಟೆಗಳು ಪ್ರತಿಸೂರ್ಯಮಂಡಲಗಳಂತೆ ಥಳಥಳನೆ ಹೊಳೆಯುತ್ತ ಕ್ಷಣಮಾತ್ರವೂ ನಿಲ್ಲದೆ ಗರಗರನೆ ಸುತ್ತುತ್ತ ನೋಡುವವರನ್ನು ದಿಗ್ಭ್ರಮೆಗೊಳಿಸುತ್ತಿದ್ದುವು. ಅವುಗಳ ಸಮೀಪಕ್ಕೆ ಇಂದ್ರನು ಬಂದು, ತನ್ನ ಕಡೆಯ ಸಿದ್ಧಸಾಧ್ಯವಿದ್ಯಾಧರ ಕಿನ್ನರ ಕಿಂಪುರುಷಾದಿಗಳಿಗೆಲ್ಲ ಕೋಟೆಯನ್ನು ಲಗ್ಗೆ ಹತ್ತುವುದಕ್ಕೆ ಅಪ್ಪಣೆ ಮಾಡಿದನು. ಕೂಡಲೇ ಹೆಗ್ಗಾಳೆಗಳು ಕೂಗಿದುವು. ಭೇರಿಗಳು ಭೋರ್ಗರೆದುವು. ದೇವಸೇನೆಯು ಕೋಟೆಯ ಸುತ್ತಲೂ ಬಳಸಿ ಮೇಲಕ್ಕೆ ಅಟ್ಟಣೆಗಳನ್ನು ಕಟ್ಟುತ್ತಲೂ, ಪರುಜಿಣ್ಣಗಳನ್ನು ರಚಿಸುತ್ತಲೂ, ಕೋಲಾಹಲವನ್ನು ಮಾಡುತ್ತಿದ್ದಿತು. ಅಷ್ಟರಲ್ಲಿ ತಾರಕಾಕ್ಷಾದಿಗಳ ಸೇನೆಯು ತಮ್ಮ ಸೇನಾಪತಿಯ ಅಪ್ಪಣೆಯನ್ನು ಪಡೆದು ಕೋಟೆಯಮೇಲೆ ಬಂದು ನಿಂತು ದೇವಸೇನೆಯ ಚಾಪಲ್ಯವನ್ನು ನೋಡಿದರು. ಭಿಂಡಿ, ತೋಮರ, ಗದೆ, ಮುಸಲ, ಕುಂತ, ಅಸಿ, ಬಾಣ, ಮೊದಲಾದ ಆಯುಧಗಳನ್ನು ಜಳಪಿಸಿ, ಮಹಾವೀರನಾದವನ್ನು ಮಾಡಿ, ಎಲೆಲೊ ನೀಚದೇವತೆಗಳಿರಾ! ಹುಲಿಯ ಹುತ್ತವನ್ನು ಮೊಲಗಳು ಕೆಣಕುವಂತೆ ತ್ರಿಪುರಕ್ಕೆ ಮುತ್ತಿಗೆಯನ್ನು ಹಾಕುವ ದುರ್ಬುದ್ಧಿಯು ನಿಮಗೇಕೆ? ಎಂದು ಮೂದಲಿಸಿ, ಬಾಣದ ಮಳೆಯನ್ನು ದೇವತೆಗಳಮೇಲೆ ಕರೆದರು. ಕವಣೆಗಳನ್ನೆಸೆದರು. ಕಾದ ಎಣ್ಣೆಯನ್ನು ಸುರಿದರು. ಸುಟ್ಟ ಸುಣ್ಣವನ್ನು ಬಗ್ಗಿಸಿದರು. ಸುಡುವ ಮಳಲನ್ನು ಸುರಿದರು.

ದೊಡ್ಡದೊಡ್ಡ ಗುಂಡುಗಳನ್ನುರುಳಿಸಿದರು. ಕೆಳಗಿದ್ದ ದೇವತೆಗಳು ರಾ
ಕ್ಷಸರ ಏಟುಗಳಿಗೆ ಸಿಕ್ಕಿ ಹತರಾಗುತ್ತಲೂ, ಪೈಗಳಲ್ಲಿ ಹೊಪ್ಪಳಿಗ
ಳೇಳಲು ಕಿರುಚುತ್ತಲೂ, ಕೈಕಾಲುಗಳನ್ನು ಮುರಿದುಕೊಂಡು ರೋದಿಸು
ತ್ತಲೂ, ತಲೆಯೊಡೆದು ರಕ್ತವನ್ನು ಕಾರುತ್ತಲೂ, ಆನೆಗಳ ಮರೆಯಲ್ಲಿ
ಅವಿತುಗೊಳ್ಳುತ್ತಲೂ, ಹೆಣಗಳನ್ನು ಮೇಲೆ ಎಳೆದುಕೊಂಡು ಬಿದ್ದು
ಕೊಳ್ಳುತ್ತಲೂ ದಿಕ್ಕುದಿಕ್ಕಿಗೆ ಓಡುತ್ತಲೂ, ಪರಿಭವಗೊಂಡರು. ಇದನ್ನು
ದೇವೇಂದ್ರನು ನೋಡಿ, ಛೀಗುಟ್ಟಿ, ನೀಚರಾದ ದೈತ್ಯರಿಗೆ ನೀವುಗಳು ಹೆ
ದರಿಕೊಳ್ಳಬಹುದೆ ? ಜಗದೀಶನಾದ ಮಹಾದೇವನು ಬೆಂಬಲದಲ್ಲಿರುವಾಗ
ನಮಗೆ ಭೀತಿಯೆಂದರೇನು ? ಮುಂದಿಟ್ಟ ಕಾಲನ್ನು ಹಿಂದೆಗೆದು ದೇವ
ಕುಲಕ್ಕೆ ಅಪಯಶಸ್ಸನ್ನು ತರಬೇಡಿರಿ, ಎಂದು ಮೊದಲಾಗಿ ಹೇಳಿ ಹುರಿ
ದುಂಬಿಸಿ, ಮತ್ತೆ ಕೋಟೆಯಮೇಲೆ ನುಗ್ಗಿಸಿದನು. ದೇವತೆಗಳು ದೇಹಾ
ಭಿಮಾನವನ್ನು ತೊರೆದು ಲಗ್ಗೆ ಹತ್ತುವುದಕ್ಕಾರಂಭಿಸಿದರು. ರಾಕ್ಷಸರ
ಏಟಿಗೆ ಮುಂದಿನವರು ಬಿದ್ದರೆ ಹಿಂದಿನವರು ಅದನ್ನು ಸರಕುಗೊಳ್ಳದೆ ಬಿ
ದ್ದವರನ್ನೇ ಗುದ್ದೆ ಹಾಕಿ ಮೇಲೇರುತ್ತಲೂ, ಮೇಲೆ ಹತ್ತಿದವರು ಕೆಳ
ಗಿದ್ದವರಿಗೆ ನಡುಕಟ್ಟುಗಳನ್ನೂ ಬಳ್ಳಿಗಳನ್ನೂ ನಿಡುಗಾಲ್ಗಳನ್ನೂ ಇಳ
ಯಬಿಟ್ಟು ಹಿಡಿಸಿ ಸೇದಿಕೊಳ್ಳುತ್ತಲೂ, ಆಳ್ವೇರಿಯಮೇಲೆ ಇದಿರುಬಿದ್ದ
ರಾಕ್ಷಸರನ್ನು ಮಲ್ಲಗಾಳಗದಿಂದಲೂ, ಕೇಶಾಕೇಶಿಯಿಂದಲೂ, ಮುಷ್ಟಾ
ಮುಷ್ಟಿಯಿಂದಲೂ, ಗದಾಗದೆಯಿಂದಲೂ, ಹೊಡೆದಾಡುತ್ತಲೂ, ಸುರಂ
ಗಗಳ ಮಾರ್ಗದಿಂದ ನುಗ್ಗಿ, ನಾಲ್ಕು ಕಡೆಯಲ್ಲೂ ದೈತ್ಯರನ್ನು ಬಳಸು
ತ್ತಲೂ, ಹೆಜ್ಜೆಹೆಜ್ಜೆಗೆ ಭೂಮಿಗುರುಳಿದರೂ ಇತರರು ಎದೆಗೆಡದೆ ಮುಂ
ದೆ ಸಾಗುತ್ತಲೂ, ಒಂದು ಜಾವದೊಳಗಾಗಿ ತ್ರಿಪುರದ ಕೋಟೆಯಮೇ
ಲೆ ಇಂದ್ರನ ಸೇನೆಯ ಬಹು ಭಾಗವು ಹತ್ತಿ ಮಹಾತುಮುಲಯು
ದ್ಧವನ್ನು ಮಾಡುತ್ತಿದ್ದಿತು. ಶೂಲಗಳ ಕೊಡಲಿಗಳ ಕತ್ತಿಗಳ ಮುದ್ಗ
ರಗಳ ಮುಸಲಗಳ ಪ್ರಹಾರಗಳು ಖಣಿಖಣಿಲ್ ಛಿಟಛಿಟಲ್ ಎಂದು ಶಬ್ದಮಾ
ಡುತ್ತಿದ್ದುವು. ಹೆಣಗಳು ರಕ್ತಮಾಂಸಗಳು ಆಯುಧಗಳು ಕರಿತುರಗ
ರಥಗಳು ಗುಡ್ಡೆಗುಡ್ಡೆಯಾಗಿ ಆಳ್ವೇರಿಯಮೇಲೂ ಅಗಳುಗಳಲ್ಲೂ ತುಂ
ಬಿದುವು. ಇಂದ್ರಾದಿದಿಕ್ಪಾಲಕರೆಲ್ಲರೂ ಅತ್ಯಂತ ವೀರಾವೇಶದಿಂದ ಸೇನೆ

ಯನ್ನು ಪ್ರೋತ್ಸಾಹಿಸುತ್ತ ಕೋಟೆಯಮೇಲೆ ಏರಿಸುತ್ತಿದ್ದರು. ಪುರದ ರಾಕ್ಷಸರೆಲ್ಲರೂ ತಮ್ಮ ಪಟ್ಟಣವು ದೇವತೆಗಳಿಗೆ ಸೂರೆಹೋಯಿತೆಂದು ಪ್ರಲಾಪಿಸುತ್ತ ಅರಮನೆಯ ಮುಂದೆ ಗೋಳಿಟ್ಟರು. ಆಗ ವಿದ್ಯುನ್ಮಾಲಿಯು ವೀರಗಾಸೆಯನ್ನು ಕಟ್ಟಿ ಧನುರ್ಬಾಣಗಳನ್ನು ಹಿಡಿದು ಮಣಿರಥವನ್ನೇರಿ ಬಿರುದಾವಳಿಗಳನ್ನು ಹೊಗಳಿಸಿಕೊಳ್ಳುತ್ತ ಕೋಪದಿಂದ ಸಿಂಹಗರ್ಜನೆಯನ್ನು ಮಾಡಿಕೊಂಡು ಕೋಟೆಯ ಕಡೆಗೆ ಸಾಗಿಬಂದನು. ಅವನೊಡನೆ ಅಂತಕನ ಸೇನೆಯಂತೆ ಭಯಂಕರವಾದ ಮಹಾಚತುರಂಗಸೈನ್ಯವು ವಾದ್ಯಗಳನ್ನು ಭೋರ್ಗರಿಸುತ್ತ ಬಂದಿತು. ಎಂಬಲ್ಲಿಗೆ ೨ ನೇ ಅಧ್ಯಾಯವು ಸಂಪೂರ್ಣವು.

---

## ೩ ನೇ ಅಧ್ಯಾಯವು.

### ಕಮಲಾಕ್ಷ ದೇವಸೇನಾಯುದ್ಧವು.

ಎಲೆ ಸಿದ್ಧರಾಮೇಶನೆ ಕೇಳು, ವಿದ್ಯುನ್ಮಾಲಿಯೊಡನೆ ಬಂದ ಮಹಾದೈತ್ಯಸೇನೆಯು ಕೋಪಾಟೋಪದಿಂದ ಕೋಟೆಯನ್ನೇರಿ ಅಲ್ಲಿದ್ದ ದೇವತಾನೀಕವನ್ನೆಲ್ಲ ತೋಳಗಳು ಕುರಿಗಳನ್ನಟ್ಟಿಕೊಂಡು ಹೋದಂತೆ ಅಟ್ಟಿ ಓಡಿಸಿ ಕೋಟೆಯ ಹೊರಗಣ ಬೈಲನ್ನು ಸೇರಿಸಿತು. ಅಲ್ಲಿ ದಿವಿಜದಾನವ ಸೈನ್ಯಗಳೆರಡಕ್ಕೂ ಮಹಾಯುದ್ಧವು ನಡೆಯಿತು. ಎರಡು ಕಡೆಯಲ್ಲಿಯೂ ಆನೆಗೆ ಆನೆ ಕುದುರೆಗೆ ಕುದುರೆ ರಥಕ್ಕೆ ರಥ ಕಾಲಾಳ್ಗಳಿಗೆ ಕಾಲಾಳುಗಳು ಸಾಧಿಸಿ ತಮ್ಮ ತಮ್ಮ ಆಯುಧಗಳಿಂದ ಕಡಿದಾಡಿದರು. ರಕ್ಕಸರ ಅತುಳಪ್ರತಾಪವು ದೇವಸೇನೆಯನ್ನು ಮುಖಗೆಡಿಸಿತು. ಅರಿಗಳಿಗೆ ಬೆನ್ನು ಚಾಚಿ ದೇವತೆಗಳು ಮುರಿದೋಡಿ ಇಂದ್ರನ ಮರೆಹೊಕ್ಕರು. ಆಗ ದಿಕ್ಪಾಲಕರೆಲ್ಲರೂ ತಮ್ಮ ಸೇನೆಗೆ ಧೈರ್ಯವನ್ನು ಕೊಟ್ಟರು. ಇಂದ್ರನು ತಾನೇ ಶತ್ರುಗಳಿಗೆ ಇದಿರಾದನು. ರಾಕ್ಷಸರಲ್ಲಿ ಪ್ರಬಲನಾದ ಜಂಭಾಸುರನು ಇಂದ್ರನ ಮುಂಗಡೆಗೆ ಬಂದನು. ಈ ಉಭಯವೀರರಿಗೂ ಒಂದುಗಳಿಗೆಯೊಳಗಾಗಿ ನಡೆದ ಯುದ್ಧವು ಉಭಯಸೇನೆಯನ್ನೂ ತಲೆದೂಗುವಂತೆ ಮಾಡಿತು. ಇಂದ್ರನ ಬಾಣಗಳು ತ್ರಿಪುರಕ್ಕೆಲ್ಲ ಬಾಣದ ಹಂದರವನ್ನು ಕಟ್ಟಿದಂತೆ ಮಾಡಿದ್ದುವು. ಜಂಭನು ಬಿಟ್ಟ ಬಾಣಗ

ಳು ದೇವಸೇನೆಯು ಮೇಲೆಲ್ಲ ಬಿಸಿಲು ನುಗ್ಗುವುದಕ್ಕೂ ಎಡೆಗೊಡದಂತೆ ಕವಿದುಕೊಂಡಿದ್ದುವು. ಇಂದ್ರನು ಜಂಭನ ಎದೆಗೆ ಗುರಿಕಟ್ಟಿ ಹೊಡೆದ ೧೦ ಬಾಣಗಳನ್ನು ಜಂಭನು ಮಧ್ಯದಾರಿಯಲ್ಲೇ ಕತ್ತರಿಸಿ, ಇಂದ್ರನ ಎದೆಗೆ ಗುರಿಕಟ್ಟಿ ೫ ಬಾಣಗಳನ್ನು ತಾನು ಬಿಟ್ಟನು. ಅವನ್ನು ಇಂದ್ರನು ಕಡಿದು ಮತ್ತೆ ೫ ಬಾಣಗಳನ್ನು ಬರಸೆಳೆದು ಬಿಡಲು, ಅವು ದೈತ್ಯನ ಹೊಟ್ಟೆಯನ್ನು ಹೊಕ್ಕು ಬೆನ್ನಿನಲ್ಲಿ ಮೂಡಿ ಹೊರಹೋದುವು. ಅದರಿಂದ ಜಂಭನು ನಿಶ್ಚೇತನನಾಗಿ ಮಲಗಲು, ಇಂದ್ರನು ಮತ್ತೆ ೧೮ ಬಾಣಗಳನ್ನು ಬಿಟ್ಟು ಅವನ ರಥ ಸಾರಥಿ ಹಯಾದಿಗಳನ್ನೆಲ್ಲ ತರಿದುರುಳಿಸಿದನು. ಆಗ ದೈತ್ಯಸೇನೆಯು ಬೇರೊಂದು ರಥವನ್ನು ಅಣಿಮಾಡಿ ಅದರಲ್ಲಿ ಜಂಭನನ್ನು ಮಲಗಿಸಿಕೊಂಡುಹೋದರು. ಇಂದ್ರನು ಉಳಿದ ರಾಕ್ಷಸರಮೇಲೆಲ್ಲ ಬಾಣಗಳನ್ನು ಕರೆದು ಆನೆಯ ಹಿಂಡಿಗೆ ನುಗ್ಗಿದ ಸಿಹ್ಮದಂತೆ ಗರ್ಜಿಸಿ ಪ್ರಳಯವನ್ನುಂಟುಮಾಡುತ್ತಿದ್ದನು. ಇವನ ಶೌರ್ಯಾಡಂಬರವನ್ನು ವಿದ್ಯುನ್ಮಾಲಿಯು ಕೇಳಿ ಕೆರಳಿ ಇದಿರಾಗಿ, ಎಲೊ ನೀಚನೆ! ನೀನೆಯೊ ನಮ್ಮ ಜಂಭಾಸುರನನ್ನು ನಿಶ್ಚೇತನಗೊಳಿಸಿದವನು? ನೀನೆಯೊ ದೇವರಾಜ? ನಮ್ಮ ತ್ರಿಪುರವನ್ನು ಸುಡಿಸುವುದಕ್ಕಾಗಿ ಶಿವನಿಗೆ ಚಾಡಿ ಹೇಳಿ ಕರೆದುಕೊಂಡು ಬಂದ ಅಧಮನೊ ನೀನು? ನಮ್ಮಮೇಲೆ ಕೈಮಾಡಿ ನೋಡಲು ನಿನ್ನ ಪ್ರಾಣವನ್ನುಳಿಸಿಕೊ. ಭೂಮಿಯಲ್ಲಿ ಬಡಹಾರ್ವರು ಯಜ್ಞದಲ್ಲಿ ಕೊಡುವ ಹವಿರ್ಭಾಗವನ್ನೆಲ್ಲ ನುಂಗಿ ನುಂಗಿ ಕೊಬ್ಬಿರುವ ನೀನು, ಆ ಹವಿಸ್ಸನ್ನು ನುಂಗುವ ಹಾಗೆ ಈ ಯುದ್ಧವೂ ಸುಲಭವೆಂದು ಯೋಚಿಸಿ ಬಂದೆಯೊ! ದೇವವಾರಾಂಗನೆಯರೊಡನೆ ಕೂಡಿ ಜೀರ್ಕೊಳವೆಗಳಿಂದ ಜಲಕ್ರೀಡೆಯನ್ನಾಡುವಂತೆ ಬಾಣದೇಟು ಸದರವೆಂದು ತಿಳಿದು ಇಲ್ಲಿಗೆ ಬಂದೆಯಾ? ಎಂದು ನಾನಾವಿಧವಾಗಿ ಮೂದಲಿಸುತ್ತ, ಇಂದ್ರನ ಮೇಲೆ ಬಾಣಗಳ ಮೊತ್ತವನ್ನು ಸುರಿಸಿದನು. ಅವುಗಳನ್ನೆಲ್ಲ ಇಂದ್ರನು ತರಿದು, ಮತ್ತೆ ದೈತ್ಯನ ಮೇಲೆ ನಿಶಿತಾಸ್ತ್ರಗಳನ್ನು ಬಿಟ್ಟನು. ಅವನ್ನು ಕಂಡು ವಿದ್ಯುನ್ಮಾಲಿಯು ಕೆರಳಿ, ಮಹಾತೀಕ್ಷ್ಣಾಸ್ತ್ರಗಳು ಮೂರನ್ನು ಬಿಟ್ಟು ಇಂದ್ರನ ಎದೆಯನ್ನು ನಟ್ಟು ಮೂರ್ಛೆಗೊಳಿಸಿ ಉರುಳಿಸಿದನು. ದೇವಸೇನೆಯು ಘೊಳ್ ಎಂದಿತು. ಬಳಿಕ

ವಿದ್ಯುನ್ಮಾಲಿಯು ಮಹಾಕೋಪದಿಂದ ಉಳಿದ ದೇವಸೇನೆಯಮೇಲೂ ಬಿದ್ದನು. ಆಗ ಷಣ್ಮುಖನು ಅವನಿಗಿದಿರಾಗಿ ಧನುಷ್ಟಂಕಾರವನ್ನು ಮಾಡಿ ರಾಕ್ಷಸರ ಎದೆಯನ್ನೆಲ್ಲ ಗಡಗುಟ್ಟಿಸಿದನು. ಆದರೂ ವಿದ್ಯುನ್ಮಾಲಿಯು ಬೆದರದೆ ನಿಂತಿರುವುದನ್ನು ಕುಮಾರಸ್ವಾಮಿಯು ನೋಡಿ– "ಎಲೆ ಖೂಳರಾಕ್ಷಸನೆ! ನಾನಾರು ತಿಳಿಯೆಯಾ? ನಿಮ್ಮಪ್ಪನ ದರ್ಪವನ್ನು ಮುರಿದು ಯಮಸದನಕ್ಕೆ ಕಳಸಿದ ಮಹಾಸೇನಾನಿಯೇ ನಾನಲ್ಲವೆ? ನಿನ್ನನ್ನು ಹುಟ್ಟಿಸಿದವನ ಗತಿಯೇ ಹಾಗಾಗಿರುವಾಗ ನೀನು ಏನನ್ನುತಾನೇ ಮಾಡಬಲ್ಲೆ? ಅವನ ಗತಿಯನ್ನು ನೀನೂ ತಂದುಕೊಳ್ಳದೆ ಶರಣಾಗತನಾಗಿ, ಇನ್ನೂ ನಾಲ್ಕು ದಿನ ಭೂಮಿಯಲ್ಲಿ ಬದುಕು; ಇಲ್ಲದೆ ಹೋದರೆ ನಿಮ್ಮಪ್ಪನಿಗೆ ಬಿಟ್ಟಂತಹ ಬಾಣಗಳನ್ನೇ ಈಗ ನಿನಗೂ ಬಿಡುತ್ತೇನೆ ತಾಳಿಕೊ" ಎಂದು ಹೇಳಿ ಬಾಣವನ್ನು ತೊಟ್ಟನು. ವಿದ್ಯುನ್ಮಾಲಿಯು ಕೆರಳಿ– "ಆಹಾ! ನಾನಾಗಿ ಹುಡುಕಿಕೊಂಡುಹೋಗುತಿದ್ದ ಬಳ್ಳಿಯು ಕಾಲಿಗೇ ಸಿಕ್ಕಿದಂತಾಯಿತು! ನಮ್ಮಪ್ಪನನ್ನು ಕೊಂದವನಿಗೆ ಮುಯ್ಯಿಗೆ ಮುಯ್ಯಾಡಿ ಹಗೆತನವನ್ನು ತೀರಿಸಿಕೊಳ್ಳಬೇಕೆಂದು ನಾವು ಯೋಚಿಸಿಕೊಂಡಿದ್ದರೂ, ತಿರುಕನ ಮಗನಾದ ನೀನು ಇಷ್ಟರೊಳಗೇ ಸತ್ತುಹೋಗಿರಬಹುದೆಂದು ನಾವು ಯೋಚಿಸಿದ್ದೆವು; ಆದರೆ ನೀನಿನ್ನೂ ಬದುಕಿದ್ದುದು ನಮ್ಮಗಳ ಪುಣ್ಯವೇ ಸರಿ; ಸುಕೃತವು ಕೈಗೂಡುವ ಕಾಲಕ್ಕೆ ಅರಸಿದ ವಸ್ತುವೆಲ್ಲ ತಾನಾಗಿಯೇ ಕೈಗೂಡುವುದು ಹೀಗೆಯೇ" ಎಂದು ಗರ್ವೋಕ್ತಿಯನ್ನಾಡುತ್ತ, ಷಣ್ಮುಖನಮೇಲೆ ಬಾಣಗಳನ್ನು ತೊಟ್ಟನು. ಅಷ್ಟರಲ್ಲಿ ಕುಮಾರನು– ಎಲೆ "ಮೂರ್ಖನೆ! ಇನ್ನು ಸ್ವಲ್ಪ ಹೊತ್ತಿನೊಳಗಾಗಿ ನಿಮ್ಮ ತ್ರಿಪುರಗಳೆಲ್ಲ ಧೂಳೀಪಟಲವಾಗಿ ಹೋಗುವುವು; ಬರೀಮಾತಿನಲ್ಲಿ ನಾನು ಕಾಲವನ್ನು ಕಳೆಯುವವನಲ್ಲ; ನಿನ್ನ ಹೆಮ್ಮೆಯು ನನ್ನ ಬಾಣದ ರುಚಿಯನ್ನು ನೋಡಲಿ" ಎಂದು ಹೇಳಿ, ಮಹಾಸ್ತ್ರವೊಂದನ್ನು ಬತ್ತಳಿಕೆಯಿಂದ ತೆಗೆದು ಸಿಂಜಿನಿಗೆ ಹೂಡುವಲ್ಲಿ ಅದು ಹತ್ತಾಯಿತು; ಹೊರಕ್ಕೆ ಹೊರಡುತ್ತಲೂ ನೂರಾಯಿತು; ಹೆಜ್ಜೆಹೆಜ್ಜೆಗೆ ಹೆಚ್ಚುತ್ತ ಲಕ್ಷೋಪಲಕ್ಷವಾಗಿ ರಾಕ್ಷಸನ ಸೇನೆಯನ್ನು ಮುತ್ತಿತು. ಇದನ್ನು ಕಂಡು ಎರಡು ಕಡೆಯ ಸೈನ್ಯವೂ ತಲೆದೂಗಿತು. ಅದನ್ನು ವಿದ್ಯು

ನ್ಮಾಲಿಯು ಕಂಡು ಅತ್ಯಂತ ರೋಷಗೊಂಡು ಅವಕ್ಕೆ ಇಮ್ಮಡಿಯಾದಷ್ಟು ಬಾಣಗಳನ್ನು ಕ್ಷಣಕಾಲದಲ್ಲಿ ಪ್ರಯೋಗಿಸಿ ಸಿಹ್ಮಗರ್ಜನೆಯನ್ನು ಮಾಡಿದನು. ಷಣ್ಮುಖನು ಅವನ ಪರಾಕ್ರಮವನ್ನು ಶ್ಲಾಘಿಸಿ, ಮತ್ತ ಬದ್ಧಭ್ರುಕುಟಿಯಾಗಿ ವೀರಾವೇಶದಿಂದ ತೀಕ್ಷ್ಣಬಾಣಾವಳಿಗಳನ್ನು ಸುರಿಸಿದನು. ಅವು ಭೂಮ್ಯಂತರಿಕ್ಷಗಳನ್ನೆಲ್ಲ ಒಂದುಗೊಳಿಸುವಂತೆ ತುಂಬಿ, ದೈತ್ಯರ ಸೇನೆಯನ್ನು ಮುತ್ತಿ ಚುಚ್ಚಿ ಕೊರೆದು ಇರಿದು ಲಯಗೊಳಿಸುತ್ತ ಬಂದುವು. ವಿದ್ಯುನ್ಮಾಲಿಯು ಮತ್ತೆ ಕೆರಳಿ, ಎಲೊ ವೀರನೆ! ಇದೊ ನಿನ್ನ ಬಾಣಕ್ಕೆ ೧, ವಾಹನಕ್ಕೆ ೨, ಆರು ಮೊಗಗಳಿಗೆ ೩, ಬಿಲ್ಲಿಗೆ ೪, ತೋಳುಗಳಿಗೆ ೫, ಎಂದು ಎಣಿಸುತ್ತ ಬಾಣಗಳನ್ನು ಪ್ರಯೋಗಿಸಿದನು. ಷಣ್ಮುಖನು ನೋಡಿ ನಸುನಗುತ್ತ, ಎಲೆ ಖಳನೇ! ಇದೋ ನಿನ್ನ ಬಾಣಗಳಿಗೆ ೧, ನಿನ್ನ ಬಿಲ್ಲಿಗೆ ೨, ಸಾರಥಿಗೆ ೩, ನಿನ್ನ ಕುದುರೆಗಳಿಗೆ ೪, ನಿನ್ನ ರಥಕ್ಕೆ ೫, ನಿನ್ನ ಎದೆಯನ್ನು ಸೀಳುವುದಕ್ಕೆ ೬, ನಿನ್ನೊಡನೆ ಬಂದಿರುವ ಸೇನೆಗೆ ೭, ನಿನ್ನ ತ್ರಿಪುರಗಳಿಗೆ ೮, ಉಳಿದ ರಾಕ್ಷಸಕುಲಕ್ಕೆಲ್ಲ ೯, ಎಂದು ಎಣಿಸಿ ಎಣಿಸಿ ಪ್ರಯೋಗಿಸಿದನು. ಅವುಗಳ ಶಕ್ತಿಯನ್ನೇನು ಹೇಳಲಿ! ದೈತ್ಯನ ಸಾರಥಿಯೂ ಕುದುರೆಗಳೂ ಸತ್ತುರುಳಿದುವು. ರಥವು ಪುಡಿಯಾಯಿತು. ರಕ್ಕಸನ ಎದೆಯಿಂದ ರಕ್ತದ ಪ್ರವಾಹವು ಹೊರಟಿತು. ಅವನ ಸೇನೆಯು ಕುಯ್ಲಾಗಿ ಅರಿಯುವೇಳೆ ಬಿದ್ದಿರುವ ಪೈರಿನಂತೆ ಯುದ್ಧಾಂಗಣದಲ್ಲಿ ಒರಗಿತು. ತ್ರಿಪುರದಕೋಟೆಯು ಖಣಖಣಿಲನೆ ಶಬ್ದ ಮಾಡಿತು! ಈತನೇ ಧನುರ್ವಿದ್ಯಾಮೃತ್ಯುಂಜಯನು! ಈತನೇ ಬಾಣಲೋಕಸೃಷ್ಟಿಕರ್ತನಾದ ಬ್ರಹ್ಮನು! ಎಂದು ಸಕಲರೂ ಷಣ್ಮುಖಸ್ವಾಮಿಯನ್ನು ಕೊಂಡಾಡಿದರು. ಅಷ್ಟರಲ್ಲಿ ವಿದ್ಯುನ್ಮಾಲಿಯು ಮತ್ತೆ ಚೇತರಿಸಿಕೊಂಡು, ಬೇರೆ ರಥವನ್ನೇರಿ, ಸರ್ಪಾಸ್ತ್ರಾದಿಗಳನ್ನು ಪ್ರಯೋಗಿಸಲು, ಅವನ್ನು ಕುಮಾರನು ಪ್ರತ್ಯಸ್ತ್ರಗಳಿಂದ ಖಂಡಿಸಿ, ನಿನ್ನ ಮಂತ್ರಾಸ್ತ್ರಗಳ ಆಡಂಬರವೆಲ್ಲ ಮುಗಿದು ಹೋಯಿತೆ? ಎಂದು ಹಂಗಿಸಲು, ರಾಕ್ಷಸನು ಕೋಪವೇರಿ ಮತ್ತೆ ತೀಕ್ಷ್ಣವಾದ ಎಂಟು ಬಾಣಗಳನ್ನು ಬಿಟ್ಟನು. ಷಣ್ಮುಖನು ಅವನ್ನು ದಾರಿಯಲ್ಲೇ ಖಂಡಿಸಿ, ಶಕ್ತ್ಯಾಯುಧವನ್ನು ಪ್ರಯೋಗಿಸಲು, ಅದು

ಮಹಾಗ್ನಿಕಣವನ್ನು ಸುರಿಸುತ್ತ ಹೋಗಿ ಕ್ಷಣಾರ್ಧದಲ್ಲಿ ವಿದ್ಯುನ್ಮಾಲಿಯು ಎದೆಯನ್ನುಗಿದು ಬೆನ್ನನ್ನು ಸೀಳಿಕೊಂಡುಹೋಯಿತು. ಕಾಲ್ವೆಯಂತೆ ರಕ್ತವು ದೇಹದಿಂದ ಹರಿಯಲು, ವಿದ್ಯುನ್ಮಾಲಿಯು ಮೂರ್ಛೆಗೊಂಡು ಭೂಮಿಯಮೇಲೆ ಬಿದ್ದನು. ರಾಕ್ಷಸರು ಅವನನ್ನು ಎತ್ತಿ ರಥವಲ್ಲಿಟ್ಟು ಪಟ್ಟಣಕ್ಕೆ ಸಾಗಿಸಿದರು. ಉಳಿದ ರಾಕ್ಷಸಸೈನ್ಯವನ್ನೆಲ್ಲ ಕುವರನು ಉತ್ತರಿಸಿ, ಜಯಭೇರಿಯ ವಾದ್ಯದೊಡನೆ ಹಿಂದಿರುಗಿದನು. ಅತ್ತ ಕಮಲಾಕ್ಷನು ತನ್ನ ತಮ್ಮನು ಪರಾಜಿತನಾಗಿ ಬಂದನೆಂಬ ಕೋಪದಿಂದ ಘುಡುಘುಡಿಸಿ, ಅಪರಿಮಿತವಾದ ಬಲವನ್ನು ಕೂಡಿಕೊಂಡು ಅಣ್ಣನಾದ ತಾರಕಾಕ್ಷನಿಂದ ವೀಳಯವನ್ನು ಪಡೆದು, ತ್ರಿಪುರವನ್ನು ಬಿಟ್ಟು ದೇವತೆಗಳಮೇಲೆ ಸಾಗಿ ಬಂದನು. ದಿಕ್ಪಾಲಭೈರವನಾದ ಕಮಲಾಕ್ಷನು ಬರುತ್ತಿರುವನು! ದೇವತಾವನಘುಡುಂರಝಾನಿಲನು ಬರುತ್ತಿರುವನು! ಎಂದು ಕಹಳೆಗಳು ಮುಂದೆ ಕೂಗುತ್ತಿದ್ದುವು. ಈ ಮಹಾರಾಕ್ಷಸನ ಸೈನ್ಯವು ಸಾಂದ್ರವಾಗಿ ನಿಂತಿರುವ ಮಹಾದೇವಸೇನೆಯಮೇಲೆ ಹೋಗಿ ಬೀಳಲು ಸಮುದ್ರಸಮುದ್ರಗಳು ಕೂಡಿದಂತೆ ಮಹಾಕೋಲಾಹಲದೊಡನೆ ಭೀಕರವಾಗಿ ತೋರಿತು. ಕರಿತುರಗರಥಪದಾತಿಗಳು ಒಂದನ್ನೊಂದು ಸಂಧಿಸಿ ಧನುಸ್ಸು ಬಾಣ ಕತ್ತಿ ಗದೆ ತೋಮರ ಕುಂತ ಪರಶು ಮುಸಲ ಮೊದಲಾದ ಆಯುಧಗಳಿಂದ ಹೊಡೆದಾಡುತ್ತಿದ್ದರು. ರಾಕ್ಷಸರು ಕೋರೆದಾಡೆಯನ್ನು ಬಿಟ್ಟು, ನಾಲಿಗೆಯನ್ನು ನೀಡಿ ಮಹಾಗರ್ಜನೆಯನ್ನು ಮಾಡಿ ಮುಂಗಡೆಯ ದೇವಸೇನೆಯನ್ನು ಕೊಚ್ಚಿ ಕೊಚ್ಚುತ್ತ ಬರಲು, ಹಿಂದಿದ್ದ ದೇವತೆಗಳೆಲ್ಲ ಪಲಾಯನಗೊಂಡು, ಅಯ್ಯೋ! ಆ ಹಾಳುಹರಿಯು ಮೇರುಗಿರಿಯಲ್ಲಿ ಅಡಗಿದ್ದ ನಮ್ಮನ್ನು ಸುಮ್ಮನೆ ಇರಗೊಡಿಸದೆ, ಶಿವನು ನಮ್ಮನ್ನು ಉಳಿಹುತ್ತಾನೆ ಬನ್ನಿರಿ ಯೆಂದು ಬೋಧಿಸಿ ಉಪಾಯದಿಂದ ಕರೆದುಕೊಂಡು ಬಂದು ಈಗ ಈ ಹೆಮ್ಮಾರಿಯ ಬಾಯಿಗೆ ನಮ್ಮನ್ನು ತುತ್ತುಮಾಡಿದನೆ! ಎಂದು ಪ್ರಲಾಪಿಸುತ್ತಲಿದ್ದರು. ಇದನ್ನು ಶಿವಕುಮಾರನಾದ ವೀರಭದ್ರೇಶನು ಕೇಳಿ, ರೋಷದಿಂದ ಅವರ ಕೆನ್ನೆಗೆ ತಟ್ಟಿ, ಸುಮ್ಮನಿರಿಸಿ, ತಾನೇ ಯುದ್ಧಕ್ಕೆ ನಡೆದನು. ಇದೋ ತಾರಕಾರಿ ಬಂದನು! ಇದೋ ದಕ್ಷಾಧ್ವರಧ್ವಂಸಿ ಬಂದನು! ಇದೋ ರಾಕ್ಷಸಗಿರಿವಜ್ರನು ಬಂದ

ನು ! ಎಂದು ಮೊದಲಾಗಿ ಸ್ತುತಿಪಾಠಕರು ಮುಂದೆ ಹೊಗಳುತ್ತಿದ್ದರು. ವೀರಭದ್ರನ ಸೇನೆಯು ಪ್ರಚಂಡರಾಕ್ಷಸಸೇನೆಯಮೇಲೆ ಬಿದ್ದಿತು. ಚೂಣಿಯವರ ಕೈ ಕೈ ಹತ್ತಿತು. ವೀರೇಶನು ಸಿಹ್ಮನಾದವನ್ನು ಮಾಡಿ, ಹಸ್ತದ ಕತ್ತಿಯನ್ನು ಜಳಪಿಸಿ, ರಕ್ಕಸರ ಮುಂಗಡೆಗೆ ಹೋಗಿ,— "ಸಣ್ಣಸಣ್ಣ ನೊರಜುಗಳೆಲ್ಲ ದಾರಿ ಬಿಡಿ, ನಿಮ್ಮಲ್ಲಿ ಬಾಹುಬಲವುಳ್ಳ ವೀರರುಗಳು ಯಾರಾದರೂ ಇದ್ದರೆ ಮುಂದೆ ಬನ್ನಿರಿ, ನಿಮ್ಮ ಹೊಟ್ಟೆಗಳನ್ನು ಬಗಿದು ರಕ್ತವನ್ನೂ ಕರುಳನ್ನೂ ಭೂತಗಣಕ್ಕೆ ಕೊಟ್ಟು ತೃಪ್ತಿಪಡಿಸುತ್ತೇನೆ" ಎಂದು ಹೇಳುತ್ತ, ಮಹಾಶೌರ್ಯದಿಂದ ರಕ್ಕಸರ ತಲೆಗಳನ್ನು ಚಂಡಾಡುತ್ತ ನುಗ್ಗಿದನು. ಕಾಡಿಗೆ ನುಗ್ಗಿದ ಕಿಚ್ಚಿನಂತೆಯೂ, ಸಮುದ್ರದಲ್ಲಿ ಬೇಯುವ ಬಡಬಾಗ್ನಿಯಂತೆಯೂ, ಕ್ಷಣಕಾಲವೂ ವಿರಾಮವಿಲ್ಲದೆ ವೀರೇಶನ ಕೈಕತ್ತಿಯು ರಕ್ಕಸರ ಚತುರಂಗಬಲವನ್ನೂ ಆಹುತಿ ತೆಗೆದುಕೊಳ್ಳುತ್ತಿದ್ದಿತು. ಈ ಪ್ರಳಯವನ್ನು ರಾಕ್ಷಸಸೇನಾಪ್ರಮುಖರು ನೋಡಿ, ಇವನೆಯೋ ಪ್ರಳಯಕಾಲದ ರುದ್ರ? ಎಂದು ಕೇಳುತ್ತ, ತಮ್ಮ ಕೋಟ್ಯಂತರ ಸೈನ್ಯವನ್ನು ಒಂದೇಬಾರಿಗೆ ವೀರೇಶನಮೇಲೆ ನುಗ್ಗುವಂತೆ ಅಪ್ಪಣೆ ಮಾಡಿ, ತಾವುಗಳೂ ಮಹಾರ್ಭಟದಿಂದ ಮುತ್ತಿದರು. ಆದರೇನು ? ಅಷ್ಟೊಂದು ಸೇನೆಯೂ ವೀರೇಶನ ಬಳಿಗೆ ಬರುವಷ್ಟರಲ್ಲೇ ದೀಪಕ್ಕೆರಗಿದ ಪತಂಗದ ಹುಳುವಿನಂತಾದುವು. ಗರುಡನಮೇಲೆ ಬಿದ್ದ ಸರ್ಪಗಳಂತಾದುವು. ಸಿಹ್ಮವನ್ನು ಕೆಣಕಿದ ಆನೆಯಂತಾದುವು. ರಕ್ಕಸರ ದೇಹಖಂಡ ಮಾಂಸ ರಕ್ತರಾಶಿಗಳನ್ನು ತಿಂದು ತೇಗಿ ಶಾಕಿನಿ ಡಾಕಿನಿ ಭೂತಬೇತಾಳಾದಿಗಳು ವೀರಭದ್ರೇಶನ ಕೀರ್ತಿಯನ್ನು ಕೊಂಡಾಡಿ ಕುಣಿಯುತ್ತಿದ್ದುವು. ಉಳಿದ ರಕ್ಕಸರು ವೀರೇಶನ ಪರಾಕ್ರಮವನ್ನು ಕಂಡು ಮೂಗಿನ ಮೇಲೆ ಬೆರಳಿಟ್ಟು ತಲೆಯನ್ನು ತೂಗಾಡಿದರು. ದೇವತೆಗಳೆಲ್ಲರೂ ಜಯಘೋಷ ಮಾಡಿ ಆನಂದಿಸಿದರು. ಅಷ್ಟರಲ್ಲಿ ಕಮಲಾಕ್ಷನು ತನ್ನ ಸೇನಾಸ್ತೋಮವೆಲ್ಲವೂ ವೀರಭದ್ರೇಶನಿಂದ ಲಯಗೊಂಡುದನ್ನು ಕಂಡು, ಅತಿ ರೌದ್ರಾವೇಶದಿಂದ ರಥವನ್ನು ವೀರೇಶನ ಮುಂಗಡೆಗೆ ಸಾಗಿಸಿ, ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು, ಮೀಸೆಯನ್ನು ಹುರಿ ಮಾಡಿ ಗರ್ಜಿಸಿ,— ಎಲೋ ಶೂರನೆ ! ನೀನೆಯೋ ವೀರಭದ್ರೇಶನೆಂಬುವನು ? ಇದು

ವರೆಗೆ ಸಾಧಾರಣಸೇನೆಯನ್ನು ಕೊಂದ ನಿನ್ನ ಹೆಮ್ಮೆಯನ್ನು ಇನ್ನು ಮರೆತುಬಿಡು; ತ್ರಿಪುರವನ್ನು ಬಡವಕ್ಷನ ಯಾಗಶಾಲೆ ಯೆಂದು ತಿಳಿದು ಕೊಂಡೆಯೊ ? ಎಂದು ಮೂದಲಿಸುತ್ತ, ಗುರಿಯಿಟ್ಟು ಮೂವತ್ತೆಂಟು ಬಾಣಗಳನ್ನು ಪ್ರಯೋಗಿಸಿದನು. ವೀರೇಶನು ರಕ್ಕಸನ ಕೊಬ್ಬಿನ ಮಾತನ್ನು ಕೇಳಿ ನಕ್ಕು, ಥಟ್ಟನೆ ಒಂದೇ ನಿಶಿತಾಸ್ತ್ರವನ್ನು ಬಿಟ್ಟು ಆ ಬಾಣಗಳನ್ನೆಲ್ಲ ಮಧ್ಯದಲ್ಲೇ ಖಂಡಿಸಿ, ಮತ್ತೆ ಧನುಷ್ಟಂಕಾರವನ್ನು ಮಾಡಿ ಆ ಶಬ್ದದಿಂದಲೇ ದನುಜಾಳಿಯ ಎದೆಯನ್ನು ಬಿರಿಯಿಸಿ, ಮತ್ತೊಂದು ಬಾಣವನ್ನು ದೈತ್ಯನ ಎದೆಗೆ ಗುರಿಯಿಟ್ಟು ಹೊಡೆದು "ಇದೋ ಬಡಹಾರ್ವ ದಕ್ಷನನ್ನು ಕಡಿದ ನನ್ನ ಶೌರ್ಯವನ್ನು ನೀನೂ ಸ್ವಲ್ಪ ನೋಡು'' ಎಂದು ಹೇಳಿ, ಗರ್ಜಿಸಿದನು. ಕಮಲಾಕ್ಷನು ಆ ಏಟಿನಿಂದ ಗಾಯವಡೆದು ಕಂಪಿಸಿ, ಮತ್ತೆ ಧೈರ್ಯದಿಂದ ವೀರೇಶನ ಮೇಲೆ ಬಾಣದ ಮಳೆಯನ್ನು ಕರೆದನು. ಆಗ ವೀರೇಶನು ಕೆರಳಿ ಕಣ್ಣಿನಿಂದ ಕಿಡಿಗಳನ್ನು ಸುರಿಸುತ್ತ ಹೂಂಕರಿಸಿ, ಎಲೊ ನೀಚನೆ ! ನನ್ನೊಡನೆ ಇಷ್ಟು ಕಾಲ ಸೆಣಸುವುದಕ್ಕೆ ನೀನೆಷ್ಟರವನು ? ಎಂದು ಹೇಳಿ, ನಿಶಿತಾಸ್ತ್ರವೊಂದನ್ನು ತೆಗೆಯುವಷ್ಟರಲ್ಲಿ, ದೈತ್ಯನು ಬತ್ತಳಿಕೆಯಿಂದ ಮಹಾಶಕ್ತ್ಯಾಯುಧವನ್ನು ತೆಗೆದು ಗರಗರನೆ ತಿರುಗಿಸಿ " ಎಲೊ ವೀರನೇ! ಇದು ನಿನ್ನನ್ನು ಸುಟ್ಟುಹಾಕದೆ ಬಿಡುವುದಿಲ್ಲ; ನಿನ್ನ ಪ್ರಾಣವನ್ನುಳುಹಿಸಿಕೊಳ್ಳುವುದಕ್ಕೆ ನಿಮ್ಮಪ್ಪನನ್ನು ಬರಹೇಳು'' ಎಂದು ಮಹಾರ್ಭಟವನ್ನು ಮಾಡಿ ವೀರೇಶನ ಮೇಲೆ ಪ್ರಯೋಗಿಸಿದನು. ಅದು ಅಲಗಿನಿಂದ ಮಹಾಗ್ನಿವರ್ಷವನ್ನು ಕರೆಯುತ್ತ ಭೀಕರವಾಗಿ ಬರುತ್ತಿರಲು, ಉಭಯಪಕ್ಷದ ಸೇನೆಯೂ ಅದನ್ನು ನೋಡಲಾರದೆ ಕಣ್ಣನ್ನು ಮುಚ್ಚಿಕೊಂಡಿತು. ಆಗ ವೀರಭದ್ರೇಶನು ಕ್ರೂರಗಳಾದ ೫ ಅಸ್ತ್ರಗಳನ್ನು ಪ್ರಯೋಗಿಸಿ, ಶಕ್ತ್ಯಾಯುಧವನ್ನು ತುಂಡು ಮಾಡಿ ಕೆಡಹಿದನು. ಒಡನೆಯೇ ಮತ್ತೊಂದು ಮಹಾಸ್ತ್ರವನ್ನು ಬಿಟ್ಟು ಅತುಳಶೌರ್ಯಾಟೋಪದಿಂದಾರ್ಭಟಿಸಿ, ಕಮಲಾಕ್ಷನ ಎದೆಗೆ ಗುರಿಯಿಟ್ಟು ಹೊಡೆದನು. ಅದು ಕ್ಷಣಮಾತ್ರದಲ್ಲಿ ರಕ್ಕಸನನ್ನು ನಟ್ಟು ಅವನ ಶರೀರವನ್ನೇ ಆಕಾಶಕ್ಕೆ ಹಾರಿಸಿಕೊಂಡು ರಕ್ತಸ್ರವಣವನ್ನು ಮಾಡಿಸುತ್ತ ಹೋಗಿ ತ್ರಿಪುರದಲ್ಲಿ

ತಾರಕಾಕ್ಷನ ಇದಿರಿಗೆ ಬಿಸುಡಿತು. ಕಂಠಗತಪ್ರಾಣನಾಗಿ ಮೂರ್ಛೆಯಿಂದಿ ತನ್ನ ಮುಂದೆ ಬಿದ್ದ ತಮ್ಮನನ್ನು ತಾರಕಾಕ್ಷನು ನೋಡಿ ಖಿನ್ನನಾಗಿ, ಕೆಣಕಿದ ಸಿಹ್ಮದಂತೆ ಮಹಾಗರ್ಜನೆಯನ್ನು ಮಾಡಿ, ಅತ್ತಿತ್ತ ಕುಳಿತಿರುವ ತನ್ನ ಸಭಾಪ್ರಮುಖರನ್ನೆಲ್ಲ ದುರುದುರನೆ ನೋಡಿದನು. ಅವರಲ್ಲಿದ್ದ ಶಿಶುಮಾರನೆಂಬ ತಾರಕಾಕ್ಷನ ಮೈದುನನು ಎದ್ದು ಬಾವನಿಗೆ ಕೈಮುಗಿದು "ನನಗೆ ಅಪ್ಪಣೆಯನ್ನು ಮಾಡಿದರೆ ತ್ರಿಲೋಕದಲ್ಲಿರುವ ಸುರನರಭುಜಂಗಮರ ತಲೆಯನ್ನೆಲ್ಲ ತರಿದು ತಂದೊಪ್ಪಿಸುತ್ತೇನೆ, ಹರಿಬ್ರಹ್ಮರುಗಳನ್ನಾದರೂ ಕಟ್ಟಿ ತರುತ್ತೇನೆ, ಕಡೆಗೆ ಶಿವನು ಬಂದರೂ ಅವನನ್ನೂ ಶಕ್ತಿಗುಂದಿಸುತ್ತೇನೆ, ವೀಳೆಯವನ್ನು ಕೊಟ್ಟು ನನ್ನ ಪರಾಕ್ರಮವನ್ನು ಪರೀಕ್ಷಿಸು" ಎಂದು ಬಿನ್ನೈಸಲು, ತಾರಕಾಕ್ಷನು ಮೈದುನನ ಶೌರ್ಯವಚನಕ್ಕೆ ಸಂತೋಷಿಸಿ, ಅವನಿಷ್ಟದಂತೆಯೇ ಸಕಲ ಸೈನ್ಯದೊಡನೆ ಯುದ್ಧಕ್ಕೆ ತೆರಳಲು ಅವನಿಗೆ ಅಪ್ಪಣೆಯನ್ನು ಕೊಟ್ಟು ಕಳಿಸಿದನು; ಎಂಬಲ್ಲಿಗೆ ಮೂರನೇ ಅಧ್ಯಾಯವು ಮುಗಿದುದು.

---

## ೪ ನೇ ಅಧ್ಯಾಯವು

### ತ್ರಿಪುರಸಹ್ಮಾರವು.

ಎಲೆ ಸಿದ್ಧರಾಮೇಶನೆ ಕೇಳು— ಕ್ರೂರಶಿಂಶುಮಾರನು ತನಗೆ ಬೇಕಾದಷ್ಟು ಚತುರಂಗಸೈನ್ಯವನ್ನು ಕೂಡಿಕೊಂಡು ಯುದ್ಧಾಂಗಣದ ಕಡೆಗೆ ಹೊರಟನು. ಆ ದೈತ್ಯನ ದೇಹದ ಆಕೃತಿಯನ್ನು ವರ್ಣಿಸುವುದಕ್ಕೇ ಅಸಾಧ್ಯವು. ಅವನ ಹೊಟ್ಟೆಯು ಬ್ರಹ್ಮಾಂಡಕಟಾಹದಂತಿದ್ದಿತು. ತಲೆಯು ಆಕಾಶಮಂಡಲವನ್ನು ಸೋಂಕುತಿದ್ದಿತು. ಕಾಲ್ಗಳ ತುಳಿತಕ್ಕೆ ಧರೆಯು ಕಂಪಿಸುತ್ತಿದ್ದಿತು. ಶಿವಶಿವಾ! ಇವನನ್ನು ಹೆತ್ತ ಮಾತೆಯಾರೋ! ಎಂದು ಜಗದ ಜನವೆಲ್ಲ ಆಶ್ಚರ್ಯಪಡುತ್ತಿದ್ದಿತು. ಅವನ ದೇಹದ ಆಕೃತಿಯು ದೊಡ್ಡದಾಗಿದ್ದುದು ಮಾತ್ರವೇ ಅಲ್ಲ; ಅಂಗಗಳೆಲ್ಲ ಪರ್ವತದಂತೆ ಕಠಿಣವಾಗಿಯೂ ಇದ್ದುವು. ಸಕಲ ಲೋಕವನ್ನೂ ತಿಂದು ತೇಗುವ ಶೌರ್ಯವೂ ಇದ್ದಿತು. ಅವನ ಬಣ್ಣವೋ ಅಚ್ಚುಕಪ್ಪು! ಮುಖವೋ ಮಹಾಕ್ರೂರ! ರೋಮರಾಜಿಯೋ ವಜ್ರಶಲಾಕಗಳೇ! ಕಣ್ಣು

ಗಳೂ ಅಗ್ನಿಯ ಕುಂಡಗಳೇ! ಕೋರೆಗಳೂ ಯಮನ ಕರವಾಳದಂತ ಗಳೇ! ಆಗಿ ತೋರುತ್ತಿದ್ದವು. ಇಂಥ ಮಹಾತ್ಮ್ಯನೊಡನೆ ಬರು ತ್ತಿದ್ದ ಸೈನಿಕರಾದರೂ ಅವನ ಮಕ್ಕಳಂತೆಯೇ ಕಾಣುತ್ತಿದ್ದರು. ಈ ಘೋರ ದೈತ್ಯವಾಹಿನಿಯು ಪಟಹ ನಿಸ್ಸಾಳೆ ಭೇರಿ ತಮ್ಮಟೆ ಮೊದ ಲಾದ ವಾದ್ಯಗಳನ್ನು ಭೋರ್ಗರಿಸುತ್ತ, ಹೆಜ್ಜೆಹೆಜ್ಜೆಗೆ ವೀರನಾದವ ನ್ನು ಮಾಡಿ ಭುಜಾಸ್ಫಾಲನಗೊಳ್ಳುತ್ತ, ಕೈಯಾಯುಧಗಳನ್ನು ಜಳಪಿ ಸುತ್ತ ಬರುತ್ತಿರಲು, ದೂರದಲ್ಲೇ ದೇವವಾಹಿನಿಯು ಇವರನ್ನು ಕಂಡು ಕಾಲನ್ನು ಹಿಂಜರಿಸಹತ್ತಿತು. ಒಡನೆಯೇ ರಾಕ್ಷಸರು ದೇವತೆಗಳ ಮೇಲೆ ಬಿದ್ದು ಕೂಗಿನಿಂದಲೇ ಮೂರ್ಛೆಗೊಳಿಸುತ್ತಲೂ, ಆನೆಗಳನ್ನೇ ರಥಗಳನ್ನೇ ಕುದುರೆಗಳನ್ನೇ ಎಳೆದುಕೊಂಡು ಗರಗರನೆ ಸುತ್ತಿ ಬೀಸಿ ದೇವತೆಗಳಮೇಲೆ ಎಸೆದು ಸದೆಬಡಿಯುತ್ತಲೂ, ಕಾಲಿನಿಂದ ರಭಾಡಿಸಿ, ಕೈಯಿಂದ ಬಡಿದು, ತೊಡೆಗಳಲ್ಲಿರುಕಿ, ತಲೆಯಿಂದ ಗುದ್ದರಿಸಿ, ಮುಷ್ಟಿ ಯಿಂದ ಗುದ್ದಿ, ದೇವತೆಗಳನ್ನು ಕೆಡಹುತ್ತಲೂ, ಎರಡು ಕೈಗಳಲ್ಲೂ ದೇವತೆಗಳ ಕಾಲ್ಗಳನ್ನು ಹಿಡಿಹಿಡಿದು ಎತ್ತಿ ಗದೆಗಳನ್ನು ತಿರುಗಿಸಿದಂತೆ ತಿರುಗಿ ಆಕಾಶಕ್ಕೆ ಇಕುತ್ತಲೂ ಲಯಗೊಳಿಸುತ್ತ ಬಂದರು. ದೇವತೆಗ ಳೆಲ್ಲರೂ ಚದರಿ ಮತಿಗೆಟ್ಟು ನಗರುತ್ತ ಓಡಿಬಂದು ಶಿವನ ಮುಂಗಡೆಯ ಲ್ಲಿ ಉದ್ದುದ್ದನಾಗಿ ಬಿದ್ದು,– ಪ್ರಭುವೇ! ಇಂದಿಗೆ ದೇವತೆಗಳ ಆಟ ವು ಮುಗಿದಿತು. ಯುದ್ಧದ ಸುದ್ದಿಯು ನಮಗೆ ಇನ್ನೆಂದಿಗೂ ಬೇ ಡ, ಸದ್ಯಃ ನೀನೇ ಎದ್ದು ಪಾಶುಪತಾಸ್ತ್ರವನ್ನು ತೊಟ್ಟರೆ ನಾವು ಉಳಿ ವೆವು; ಇಲ್ಲದಿದ್ದರೆ ಪುನಃ ನಮ್ಮ ಹೆಂಡಿರ ಮುಖವನ್ನು ನಾವು ನೋ ಡುವಹಾಗಿಲ್ಲ; ಈಗ ಬಂದಿರುವ ಕಾಳರಾಕ್ಷಸರು ಇದುವರೆಗೆ ಕಾದಿದ ರ ಕ್ಕಸರಂತಲ್ಲ; ನಾವು ಇದುವರೆಗೂ ಅಂಥ ಭೀಕರ ರೂಪಿನ ಕ್ರೂರ ದೈ ತ್ಯನನ್ನೇ ನೋಡಿರಲಿಲ್ಲ; ನೀಲಗಿರಿಗೇ ಕೈಕಾಲ್ಗಳೇನಾದರೂ ಹುಟ್ಟಿದು ವೋ! ಕತ್ತಲೆಯೇ ಪುರುಷಾಕಾರವನ್ನು ಧರಿಸಿ ಬಂದಿರುವುದೋ! ತಿಳಿ ಯಲಿಲ್ಲ; ಎಂದು ಹೇಳಿಕೊಂಡು ಗೋಳಿಟ್ಟರು. ಶಿವನು ಇದನ್ನು ಕೇಳಿ ನಸುನಗುತ್ತಿರಲು, ವಾಹನನಾದ ಮಹಾವೃಷಭೇಶನು ಘುಡುಘುಡಿಸಿ ಎ ದ್ದು, "ಛೀ ನೀಚರಿರಾ! ಇದೊಂದು ದೊಡ್ಡಸುದ್ದಿಯೆಂದು ಪರಶಿವನೊಡ

ನೆ ಹೇಳಿಕೊಳ್ಳುವುದಕ್ಕೆ ಬಂದಿರಾ? ಸಾಕು; ನಡೆಯಿರಿ; ಎಂದು ಗದರಿ,— ಶಿಂಶುಮಾರನ ಮೇಲೆ ಯುದ್ಧಕ್ಕೆ ಹೊರಡಲು ಶಿವನಪ್ಪಣೆಯನ್ನು ಪಡೆದು ತಾನೇ ಹೊರಟನು. ಮುಂದೆ ವಂದಿಗಳೂ ವಾದ್ಯಗಳೂ ಭೋರ್ಗರೆದುವು. ಕೈಲಾಸಪರ್ವತಕ್ಕೇ ಕಾಲ್ಗಳು ಮೂಡಿ ನಡೆದು ಹೋಗುವಂತೆ ಶುಭ್ರಾಂಗನಾದ ಮಹಾವೃಷಭನು ಕೆಕ್ಕರಿಸಿಕೊಂಡು ದಿಕ್ಕುದಿಕ್ಕುಗಳನ್ನು ನೋಡುತ್ತ ಬಂದು ದೈತ್ಯವಾಹಿನಿಯನ್ನು ನುಗ್ಗಿದನು. ಈ ಅದ್ಭುತ ವೃಷಭನನ್ನು ನೋಡಿ ರಾಕ್ಷಸರು ಬೆಕ್ಕಸಬೆರಗಾದರು. ಅದರ ನಾಲ್ಕು ಪಾದಗಳಿಂದಲೂ ಕೆರೆದ ಧೂಳಿಯು ಸೂರ್ಯಮಂಡಲವನ್ನೇ ಮುಚ್ಚಿ ಕತ್ತಲೆಗವಿಸಿತು. ಅದರ ಠಣತ್ಕಾರಕ್ಕೆ ರಕ್ಕಸರು ಮೂರ್ಛೆಗೊಂಡು ಉರುಳುತ್ತಿದ್ದರು. ಅದರ ಬಾಲದ ಬೀಸುವಿಕೆಯ ರಭಸಕ್ಕೆ ನಕ್ಷತ್ರಗಳು ಕಳಿದು ಬೀಳುತ್ತಿದ್ದುವು. ಅದರ ಕೊಂಬಿನ ತಿವಿತದಿಂದ ರಕ್ಕಸರ ತಂಡತಂಡವೇ ಗಾಯವಡೆದು ಮಡಿಯುತ್ತಿದ್ದಿತು. ಬೆಟ್ಟದ ಗುಂಡುಗಳನ್ನು ಕಾಲಿನಿಂದುರುಳಿಸಿ ಕೋಡುಗಳಿಂದ ವಿರಾಟ ರಾಕ್ಷಸಸೈನ್ಯದ ಮೇಲೆ ಉರುಳಿಸಿ ನುಗ್ಗುಮಾಡುತ್ತಿದ್ದಿತು. ಮೂಗಿನಲ್ಲಿ ಬಿಟ್ಟ ಉಸುರಿನಿಂದ ಕೊಚ್ಚಿಹೋದ ದನುಜರು ದಿಗಂತದಲ್ಲಿ ಬಿದ್ದು ನರಳುತ್ತಿದ್ದರು. ರಾಕ್ಷಸರು ಬಾಣಗಳನ್ನೂ ಕಲ್ಗುಂಡುಗಳನ್ನೂ ಮರಗಳನ್ನೂ ವೃಷಭೇಂದ್ರನ ಮೇಲೆ ಸುರಿಸುತ್ತಿದ್ದರು. ಆದರೇನು? ವಜ್ರದಮೇಲೆ ಬಿದ್ದ ಕಲ್ಲಿನಂತೆ ಅವುಗಳೇ ಜರ್ಝರಿತವಾಗಿ ಹಾರಿಹೋಗುತ್ತಿದ್ದುವು. ಆಯುಧಗಳಿಗೆ ಈ ಬಸವನು ಜಗ್ಗುವುದಲ್ಲವೆಂದು ದೊಡ್ಡದೊಡ್ಡ ಸರಪಳಿಗಳನ್ನೂ ಮಿಳಿಗಳನ್ನೂ ತಂದು ಕಾಲಿಗೆ ತೊಡರಿಸಿ ಸುತ್ತಿ ಕೆಡಹಬೇಕೆಂದು ರಾಕ್ಷಸರು ಪ್ರಯತ್ನಿಸಿದರು. ಆನೆಯು ತಾವರೆಯ ನೂಲನ್ನು ಕೀಳುವಂತೆ ವೃಷಭನು ಆ ಕಟ್ಟುಗಳನ್ನೆಲ್ಲ ಒಂದೇ ಬಾರಿ ವಿಜೃಂಭಿಸಿ ಕಿತ್ತು, ಹಾರಿ ಓಡಾಡಿ ದೈತ್ಯಸೇನೆಯನ್ನು ತುಳಿದು ತಿವಿದು ಒದೆದು ಹೂಂಕರಿಸಿ ಬಾಲವನ್ನು ಬೀಸಿ ಲಯಗೊಳಿಸಿತು. ಆಗ ಶಿಂಶುಮಾರನು ವೃಷಭೇಂದ್ರನಿಗೆ ಇದಿರಾಗಿ ಗರ್ಜಿಸಿ ನಿಂತು,— "ಎಲೆ ಗೂಳಿಯೆ! ಕಾರಹಬ್ಬದಲ್ಲಿ ನಿನ್ನ ಘನತೆಯೋ ಹೊರತು ಯುದ್ಧದಲ್ಲಿ ನಿನ್ನನ್ನು ಕೇಳುವವರಾರು? ಯಾವ ಹೆಂಗುಸು ಎಷ್ಟು ದಿನ ತಪಸ್ಸುಮಾಡಿ ನಿನ್ನನ್ನು ಹಡೆದಳೋ ಕಾಣೆ," ಎಂದು ಹಾ

ಸ್ಯವಮಾಡಿ ಧನುಸ್ಸನ್ನು ಜೇಕಡೆದನು. ವೃಷಭೇಂದ್ರನಾದರೊ- "ಎಲೊ ನಾಯಿ! ನಿನ್ನ ಕುರೂಪವನ್ನು ನೀನು ನೋಡಿಕೊಳ್ಳದೆ ಹೆರರನ್ನೇಕೆ ಜರೆಯುವೆ? ಈದಿನವೇ ಕಾಳಹಬ್ಬವೆಂಬುದನ್ನು ನೀನು ತಿಳಿಸಿಲ್ಲ! ದನುಜರನ್ನು ತರಿದು ಅವರ ಖಂಡವನ್ನೇ ಬಳಸಾಗಿ ಮಾಡುವೆನು, ನಿಮ್ಮ ರಕ್ತದ ಮಡುವೆಂಬ ಕೆರೆಯಲ್ಲಿ ಈಸಾಡಿ ಗೆದ್ದು ಬಂದು ದೇವತೆಗಳಾದ ಪೂಜೆಗೊಳ್ಳುವೆನು" ಎಂದು ನುಡಿದು ಹೂಂಕರಿಸಿದನು. ದೈತ್ಯನು- ಹಾಗಾದರೆ ಇದೋ ನಿನಗೆ ನಾನೇ ಪೂಜೆಯನ್ನು ಮಾಡುವೆನೆಂದು ಹೇಳಿ, ದೊಡ್ಡದೊಂದು ಪರ್ವತವನ್ನೆತ್ತಿ ವೃಷಭನಮೇಲೆ ಇಟ್ಟನು. ಅದು ವೃಷಭೇಶನ ರೋಮಗಳಿಗೆ ಸೋಂಕಿದ ಕೂಡಲೇ ಗಾಜಿನ ಬಳೆಗಳನ್ನು ನಗ್ಗಿದಂತೆ ತಾನೇ ಚೂರುಚೂರಾಗಿ ಹೋಯಿತು. ಇದನ್ನು ಶಿಂಶುಮಾರನು ನೋಡಿ ಮತ್ತಷ್ಟು ರೋಷವೇರಿ, ಇನ್ನೊಂದು ಬೆಟ್ಟವನ್ನೆತ್ತಿ ವೃಷಭನ ನೆತ್ತಿಯಮೇಲೆ ಇಟ್ಟನು. ಅದಕ್ಕೆ ವೃಷೇಂದ್ರನು ಕೊಂಬನ್ನೊಡ್ಡಿ ತಡೆದು ರಾಕ್ಷಸರ ಸೈನ್ಯದಮೇಲೆಯೇ ರಭಸಾಡಿಸಲು, ಕೋಟ್ಯಂತರ ರಾಕ್ಷಸರನ್ನು ಅದು ಬಜ್ಜುಗೊಳಿಸಿತು. ಆಗ ವೃಷಭೇಂದ್ರನು ಗುಟುರೆಯಿಕ್ಕಿ ರಾಕ್ಷಸಸೇನೆಗೆ ಮೂರ್ಛೆಯನ್ನುಂಟುಮಾಡಿ, ಶಿಂಶುಮಾರನ ಗದ್ದವನ್ನು ತಿವಿದು ಕೆಡಹಬೇಕೆಂದು ಹಾರಲು, ಇವನ್ನೇ ನುಂಗಿಬಿಡಬೇಕೆಂದು ಶಿಂಶುಮಾರನು ಬಾಯ್ದೆರೆದನು. ವೃಷಭೇಂದ್ರನಾದರೊ ಮುಖದ್ವಾರದಿಂದ ಆ ರಾಕ್ಷಸನ ಉದರವನ್ನೇ ಹೊಕ್ಕನು. ಆದರೆ ಈ ಸದ್ಧರ್ಮಮೂರ್ತಿಯು ಆ ನೀಚನ ಉದರದಲ್ಲಿ ನಿಲ್ಲುವುದುಂಟೆ! ಕ್ಷಣಕಾಲದಲ್ಲಿ ಮಹಾದ್ಭುತಕಾಯನಾಗಿ ಒಳಗೇ ಅರಳಿದನು. ಮತ್ತು ಗೊರಸುಗಳಿಂದಲೂ ಕೊಂಬುಗಳಿಂದಲೂ ರಕ್ಕಸನ ಹೊಟ್ಟೆಯೊಳಗೆ ಕೆರೆದು ತಿವಿದು ಬಗಿದು ಎರಡು ಹೋಳನ್ನಾಗಿ ಅವನ ದೇಹವನ್ನು ಸೀಳಿಬಿಟ್ಟನು. ಬಳಿಕ ಎರಡು ಕೋಡುಗಳಿಂದಲೂ ಎರಡು ಸೀಳುಗಳನ್ನು ಚುಚ್ಚಿ ಎತ್ತಿ, ಒಂದನ್ನು ತ್ರಿಪುರಕ್ಕೆ ಇಟ್ಟನು; ಒಂದನ್ನು ಶಿವನ ಮುಂದುಗಡೆಗೆ ಇಟ್ಟನು; ಆ ಹೋಳಿನ ಕೆಳಗೆ ಸಿಕ್ಕಿಬಿದ್ದ ರಕ್ಕಸರೂ ದೇವತೆಗಳೂ ಅನಂತವಾಗಿ ಮಡಿದರು. ಶಿಂಶುಮಾರನು ಮರಣಗೊಂಡನೆಂಬುದನ್ನು ತಾರಕಾಕ್ಷನು ಕೇಳಿ, ಆಹಾ! ನನ್ನ ವೈರುದನನು ಸತ್ತನೇ? ನಮ್ಮ ಭುಜವನ್ನು ಜಯಲಕ್ಷ್ಮಿ ಬಿಟ್ಟ

ಹೋದಳೆ? ಐಶ್ವರ್ಯ ಸಮುದ್ರವು ಬತ್ತಿ ಹೋಯಿತೆ? ಎಂದು ಪ್ರಲಾಪಿಸಿ, ಪ್ರಳಯಕಾಲದ ಯಮನಂತೆ ಕೆರಳಿ ಘುಡುಘುಡಿಸಿ, ಸಿಂಹಪೀಠದಿಂದಿಳಿದು, ತಾನೇ ಯುದ್ಧಕ್ಕೆ ಹೊರಟನು. ಚತುಸ್ಸಮುದ್ರಗಳೂ ಇವನ ಹಿಂದೆ ಹೊರಟಂತೆ ಮಹಾರಾಕ್ಷಸರ ಚತುರಂಗಸೈನ್ಯವು ಒಡನೆ ಹೊರಟಿತು. ಅವರಲ್ಲಿ ದೈತ್ಯನಾಯಕರ ಸಂಖ್ಯೆಯೇ ೩೦ ಪದ್ಮವಿದ್ದಿತು. ಇನ್ನು ಉಳಿದ ಸಾಮಾನ್ಯಸೇನೆಯನ್ನೂ ಹಯಗಜರಥಾದಿಗಳನ್ನೂ ಎಣಿಸುವವರಾರು? ಆನೆಗಳ ಗುಟುರು ಶಬ್ದ ಮತ್ತು ಗರ್ಜನೆ, ಕುದುರೆಗಳ ಕಡಿವಾಣಗಳ ಗೊರಸುಗಳ ಶಬ್ದ ಮತ್ತು ಕೆನೆಯುವಿಕೆ, ರಕ್ಕಸರ ಭುಜಾಸ್ಫಾಲನ ಧ್ವನಿ, ಮತ್ತು ವಾದ್ಯಗಳಬ್ಬರ, ರಥಗಳ ಚೀತ್ಕಾರ ಮತ್ತು ರಥಿಕರ ಧನುಷ್ಟಂಕಾರ, ಸಿಂಹನಾದ, ಇವುಗಳೆಲ್ಲ ಸೇರಿ ಲೋಕವನ್ನೇ ಕಿವುಡುಗೊಳಿಸಿದುವು. ತಾರಕಾಕ್ಷನು ತನ್ನ ಸೇನೆಗೆ ಕೈಬೀಸಿ ಮುಂದೆ ಸರಿಸುತ್ತ, ದೇವತೆಗಳ ಗುಂಪನ್ನು ಸೀಳು, ಹಿಂದೆಗೆಯುವ ನಾಯಿಗಳ ತಲೆಯಮೇಲೆ ಹೊಡೆ, ಎಂದು ಕೂಗಿ ತನ್ನ ಸೇನೆಯನ್ನು ಹುರಿದುಂಬಿಸುತ್ತ, ದೇವಸೇನೆಯನ್ನು ಸಂಧಿಸಿದನು. ಮುಂಗಡೆಯ ರಕ್ಕಸರು ದೇವತೆಗಳಮೇಲೆ ಬಿದ್ದು ಬಾಳೆಯ ವನವನ್ನು ನುಗ್ಗಿದ ಆನೆಗಳಂತೆ ತುಳಿಯುತ್ತಲೂ, ಒಂದು ಕಾಲನ್ನು ಮೆಟ್ಟಿ ಮತ್ತೊಂದು ಕಾಲನ್ನು ಹಿಡಿದು ಸೀಳುತ್ತಲೂ, ಒಬ್ಬರನ್ನೊಬ್ಬರಿಗೆ ತಾಟುಹೊಡಿಸಿ ಕೆಡಹುತ್ತಲೂ, ಕತ್ತಿಗಳಿಂದ ತರಿಯುತ್ತಲೂ, ಕೊಡಲಿಗಳಿಂದ ಕಡಿಯುತ್ತಲೂ, ಮುಚ್ಚಗಳಿಂದ ಕೊಚ್ಚುತ್ತಲೂ, ಗದೆಗಳಿಂದ ಬಡಿಯುತ್ತಲೂ, ಚಕ್ರಗಳಿಂದ ಕತ್ತರಿಸುತ್ತಲೂ, ಅಂಕುಶದಿಂದ ಚುಚ್ಚುತ್ತಲೂ, ಬಾಣಗಳಿಂದ ನೆಡುತ್ತಲೂ, ಲಯಗೊಳಿಸುತ್ತ ಬಂದರು. ಒಂದು ಕಡೆಯಲ್ಲಿ ಕಮಲಾಕ್ಷ ಜಂಭಾಸುರರೂ, ಮತ್ತೊಂದು ಕಡೆ ವಜ್ರನಾಭನೂ, ಬೇರೊಂದು ಕಡೆ ಸುಭವಿದ್ಯುನ್ಮಾಲಿಗಳೂ, ಮಗುಳೊಂದುಕಡೆಯಲ್ಲಿ ಶಂಭಾಸುರನೂ, ಇನ್ನೊಂದು ತಾಣದಲ್ಲಿ ತಾರಕಾಕ್ಷನೂ ನುಗ್ಗಿ ದೇವಸೇನೆಯನ್ನು ತರಿದು ತರುಬುತ್ತ ಹೋದರು. ಈ ರಕ್ಕಸರ ಉಪಟಳವನ್ನು ತಾಳಲಾರದೆ ದೇವತೆಗಳು ಕಣ್ಗೆಟ್ಟು ಹಿಂತಿರುಗಿ ಓಡಿದರು. ಇದನ್ನು ದೇವೇಂದ್ರನು ಕಂಡು, ಈ ಮಹಾಕ್ರೂರದೈತ್ಯರ ಹತಿಯನ್ನು ತಡೆಯುವುದಕ್ಕೆ ಇ

ನ್ನು ನಮ್ಮಿಂದಸಾಧ್ಯವೆಂದು ಯೋಚಿಸಿ, ಪರಶಿವನ ಬಳಿಗೆ ಓಡಿಹೋಗಿ, ಪ್ರಭುವೆ! ದೇವತೆಗಳು ಹಿಮ್ಮೆಟ್ಟಿದರು; ರಾಕ್ಷಸರ ಶೌರ್ಯವು ಪ್ರಬಲತರವಾಗಿದೆ; ಇದೋ ನಮ್ಮ ಸಮೀಪಕ್ಕೆ ಅಟ್ಟಿಸಿಕೊಂಡುಬರುತ್ತಿದಾರೆ; ಎಂದು ಬಿನ್ನೈಸಿದನು. ಶಿವನು ತನ್ನ ನೆರೆಯಲ್ಲಿ ನಿಂತಿದ್ದ ನಂದೀಶ ಭೃಂಗೀಶ ವೀರೇಶ ಷಣ್ಮುಖ ಗಜಾನನಭೈರವಾದಿಗಳನ್ನು ಕಡೆಗಣ್ಣಿನಿಂದ ನೋಡಿದನು. ಆ ಕೂಡಲೇ ಅವರು ಹಸಾದವೆಂದು ನುಡಿದು ನಮಸ್ಕರಿಸಿ, ತಮ್ಮ ತಮ್ಮ ಸೈನ್ಯದೊಡನೆ ಕೂಡಿ, ತಾರಕಾಕ್ಷನ ಸೇನೆಗೆ ಇದಿರಾದರು. ದೇವತೆಗಳ ಸೇನೆಯಲ್ಲಿ ಮತ್ತೆ ಮಹಾಯುದ್ಧದ ಭೇರೀನಾದವಾಯಿತು. ಕಹಳೆಗಳು ಭೋರೆಂದುವು. ವೀರೇಶನು ಕಮಲಾಕ್ಷನನ್ನು ತಡೆದನು. ಕುಮಾರಸ್ವಾಮಿಯು ವಿದ್ಯುನ್ಮಾಲಿಗೆ ಇದಿರಾದನು. ನಂದೀಶನು ಶುಂಭಾಸುರನನ್ನು ಪ್ರತಿಭಟಿಸಿದನು. ಇಂದ್ರನು ಜಂಭಾಸುರನನ್ನು ಕೆಣಕಿದನು. ಭೈರವನು ತಾರಕಾಕ್ಷನನ್ನು ನಿಲ್ಲಿಸಿದನು. ಹೀಗೆ ಒಬ್ಬರಿಗೊಬ್ಬರು ಪ್ರತಿಭಟಿಸಿ ನಾನಾಯುಧಗಳಿಂದ ಸೆಣಸಹತ್ತಿದರು. ಅಧರ್ಮಪ್ರಾಬಲ್ಯದಿಂದ ಜಯಲಕ್ಷ್ಮಿಯ ಕಟಾಕ್ಷಕ್ಕೆ ದೂರರಾಗಿದ್ದ ರಾಕ್ಷಸರ ಬಲವು ಧರ್ಮಾವತಾರಿಗಳಾದ ಶಿವಪಕ್ಷದವರ ಮುಂದೆ ಕ್ಷಣಕ್ಷಣಕ್ಕೆ ಕುಗ್ಗುತ್ತಾ ಬಂದಿತು. ವೀರೇಶ ನಂದೀಶ ಕುಮಾರಾದಿಗಳ ಬಾಣಹತಿಯು ರಕ್ಕಸರ ಎದೆಯನ್ನು ಬಿರಿಸಿ, ಸೈನ್ಯವನ್ನೆಲ್ಲ ಗಾಯಗೊಳಿಸಿ ರಕ್ತದಿಂದ ತೋಯಿಸಿ, ಮೂರ್ಛಾಗತರನ್ನು ಮಾಡಿತು. ರಕ್ಕಸರ ಸೇನೆಯು ದವಾಗ್ನಿಯ ಮುಂಗಡೆಯ ತರಗೆಲೆಗಳಂತೆ ಲಯಗೊಂಡಿತು. ದೈತ್ಯನಾಯಕರಲ್ಲಿ ಹರಣವನ್ನುಳಿಸಿಕೊಂಡವರು ದಿಕ್ಕುದಿಕ್ಕಿಗೆ ಪಲಾಯನಗೊಂಡರು. ರಕ್ತಪ್ರವಾಹದಲ್ಲಿ ಮುಳುಗುತ್ತಲೂ ತೇಲುತ್ತಲೂ ಕೊಚ್ಚಿ ಹೋಗುತ್ತಿರುವ ತಲೆಬುರುಡೆಗಳಿಂದಲೂ, ಗುಡ್ಡೆಯಾಗಿ ಬಿದ್ದಿರುವ ಮುಂಡಗಳಿಂದಲೂ, ಚೆಲ್ಲಿ ಬಿದ್ದಿರುವ ತೋಳ್ತೊಡೆ ಕಾಲು ಕೈಗಳಿಂದಲೂ, ನರಳುತ್ತಿರುವ ಅರೆಹೆಣಗಳಿಂದಲೂ, ಕರುಳು ಮಾಂಸಗಳ ರಾಶಿಗಳಿಂದಲೂ, ಕಡಿದು ಮುರಿದು ಬಿದ್ದಿರುವ ಆಯುಧಗಳಿಂದಲೂ ಹರಕು ಮುರುಕು ಚೂರು ನುಗ್ಗಾಗಿ ಬಿದ್ದಿರುವ ಛತ್ರ ಚಾಮರಧ್ವಜಪತಾಕೆಗಳಿಂದಲೂ ರಣರಂಗವು ಭಯಂಕರವಾಗಿದ್ದಿತು. ಓಡುವ ರಾಕ್ಷಸ

ರನ್ನು ಕಂಡು ದಿಕ್ಪಾಲಕಾದಿದೇವತೆಗಳು ಅಟ್ಟಿಸಿಕೊಂಡು ಹೋಗುತ್ತಿದ್ದರು. ರಕ್ಷಸರು ಹೆಂಗಳನ್ನು ತುಳಿದ ಕೊಂಡು ರಕ್ತವನ್ನು ಕಾದು ಎಡಹುತ್ತ ಮುಗ್ಗರಿಸುತ್ತ ಕೂಗುತ್ತ ಕೆಮ್ಮುತ್ತ ಹಿಂತಿರುಗಿತಿರುಗಿ ನೋಡುತ್ತ, ಬಾಯ್ಗೆ ಬಂದಂತೆ ದೇವತೆಗಳನ್ನು ಬೈಯುತ್ತ, ಗಟ್ಟಗುಡ್ಡಗಳಿಗೆ ಓಡಿಹೋದರು. ತಾರಕಾಕ್ಷ ಕಮಲಾಕ್ಷ ವಿದ್ಯುನ್ಮಾಲಿಗಳು ತಲೆಯುಳುಹಿಕೊಂಡು ತ್ರಿಪುರವನ್ನು ಹೊಕ್ಕಿಕೊಂಡರು. ರಕ್ಕಸರು ಕೋಟೆಯ ಬಾಗಿಲುಗಳನ್ನು ಮುಚ್ಚಿ ಅಗಳುಗಳಲ್ಲಿ ನೀರನ್ನು ತುಂಬಿ ಆಳ್ವೇರಿಯಮೇಲೆ ಹತ್ತಿ ಆಯುಧಾದಿಗಳನ್ನು ಅಣಿಮಾಡಿಕೊಂಡು ನಿಂತರು. ಇತ್ತ ಶಿವನಸೇನೆಯು ತ್ರಿಪುರದ ಕಡೆಗೆ ಅಟ್ಟಿಸಿಕೊಂಡು ಹೋಗಿ ಕೋಟೆಯ ನಾಲ್ಕು ಕಡೆಗೂ ಮುತ್ತಿಗೆಯನ್ನು ಹಾಕಿತು. ಜಯಭೇರೀಕಹಳೆಗಳನ್ನು ಧ್ವನಿಗೈದರು. ಪರಶಿವನು ದೂರದಲ್ಲಿ ನಿಂತು ಅನಿಮೇಷದೃಷ್ಟಿಯಿಂದ ತ್ರಿಪುರಗಳ ನಿಲ್ಲುವಿಕೆಯನ್ನೂ ಅವುಗಳ ಕೀಲನ್ನೂ ಗುರಿಯಿಟ್ಟು ನೋಡುತ್ತಿದ್ದನು. ಅಲ್ಲಿಗೆ ದೇವಮಾನದ ೧ ಸಹಸ್ರ ವರ್ಷಗಳು ಸರಿಯಾಗಿ ತುಂಬಲು, ತಿರುಗುವಿಕೆಯನ್ನು ಬಿಟ್ಟು ತ್ರಿಪುರಗಳು ಒಂದಾದುವು. ಆ ಸಮಯಕ್ಕೆ ಸರಿಯಾಗಿ ಶಂಕರನು ಧನುಸ್ಸಿನಲ್ಲಿ ಪಾಶುಪತಬಾಣವನ್ನು ತೊಟ್ಟು ಕರ್ಣಾಂತವಾಗಿ ಸೆಳೆದು ಅವುಗಳ ಕೀಲಿಗೆ ಪ್ರಯೋಗಿಸಿದನು. ಅದು ಜಗತ್ತನ್ನೆಲ್ಲ ಜ್ವಾಲೆಯಿಂದ ಉರಿಸುತ್ತಹೋಗಿ ಖಣಿಖಣಿಲೆಂದು ಹೊಡೆದು ತ್ರಿಪುರಗಳನ್ನು ಭೇದಿಸಿ ಮಹಾಗ್ನಿಯಿಂದ ಪಟ್ಟಣವನ್ನೆಲ್ಲ ಬೇಯಿಸಿತು. ಅವರೊಳಗೆ ಶಿವಭಕ್ತಿಸಾಂದ್ರರಾಗಿದ್ದ ಮೂವರು ಶಿವಯೋಗಿಗಳು ಮಾತ್ರ ಅಗ್ನಿತಪ್ತರಾಗದೆ ಶಿವಕಾರುಣ್ಯದಿಂದ ತಮ್ಮ ಮಂದಿರಗಳ ಸಮೇತವಾಗಿ ಭೂತಲಕ್ಕಿಳಿದು ಬಂದು ಶಿವನ ಪಾದವನ್ನು ಸೇರಿದರು. ಪಟ್ಟಣದಲ್ಲಿದ್ದ ಸಕಲ ರಾಕ್ಷಸಸ್ತೋಮವೂ ತಮ್ಮ ಸಕಲಸಂಪತ್ತಿನೊಡನೆ ಭಸ್ಮೀಕೃತವಾಯಿತು. ತಾರಕಾಕ್ಷಾದಿ ಮೂರು ಮಂದಿ ಸಹೋದರರೂ ಮೊದಲು ತಮ್ಮ ಗುರುವು ಬೋಧಿಸಿದುದನ್ನು ಸ್ಮರಿಸಿ ತಪ್ಪಿಸಿಕೊಂಡು ಹೋಗಿ ಶಿವನನುಗ್ರಹವನ್ನು ಪಡೆದು ಬದುಕುವುದೇ ತಮಗೆ ಶ್ರೇಯಸ್ಕರವೆಂದು ತಿಳಿದು ಬಂದು ಸ್ವಾಮಿಯ ಪಾದಾರವಿಂದಕ್ಕೆ ಸಾಷ್ಟಾಂಗವಾಗಿ ಮಣಿದು, ತಮ್ಮಪರಾಧವನ್ನು ಕ್ಷಮಿ

ಸಬೇಕೆಂದು ಬೇಡಿದರು. ಭಕ್ತವತ್ಸಲನಾದ ಸ್ವಾಮಿಯು ಅವರ ಮೇಲೆ ಕೃಪೆಯಿಟ್ಟು, ನಿಮ್ಮಿಷ್ಟಾರ್ಥವೇನೆಂದು ಕೇಳಿದನು. ಆಗ ಅವರುಗಳು ನಿಮ್ಮ ಪಾದಸೇವೆಯನ್ನು ಮಾಡಿಕೊಂಡು ಕೈಲಾಸದ ದ್ವಾರವನ್ನು ಕಾದುಕೊಂಡಿರುವಂತೆ ನಮಗೆ ಅನುಗ್ರಹಿಸಬೇಕೆಂದು ಬೇಡಿದರು. ಶಿವನು ಹಾಗೆಯೇ ಆಗಲಿ ಯೆಂದು ವರವಿತ್ತನು. ಬಳಿಕ ಅಂತರಿಕ್ಷದಿಂದ ಪುಷ್ಪವೃಷ್ಟಿಯು ಸುರಿಯಿತು. ಶಿವಗಣಗಳು ಜಯಜಯಧ್ವಾನವನ್ನು ಮಾಡಿದರು. ದೇವತೆಗಳು ಜಯದುಂದುಭಿಯನ್ನು ಬಾರಿಸಿದರು. ಹರಿಬ್ರಹ್ಮರುಗಳು ಶಿವನನ್ನು ಕೊಂಡಾಡುತ್ತಿದ್ದರು. ಸಕಲ ಮನು ಮುನಿ ಕಿನ್ನರ ಕಿಂಪುರುಷಾದಿಗಳೆಲ್ಲರೂ ಇಂದು ಬದುಕಿದೆವೆಂದು ಶಿವನ ಪಾದಕ್ಕೆ ಮಣಿದರು. ಆಗ ಪರಶಿವನು ಸಕಲಪರಿವಾರದೊಡನೆ ಕೂಡಿ ಕೈಲಾಸದ ಕಡೆಗೆ ಹಿಂದಿರುಗಿದನು. ಎಂಬಲ್ಲಿಗೆ ನಾಲ್ಕನೇ ಅಧ್ಯಾಯವು ಸಂಪೂರ್ಣವು.

---

## ೫ ನೇ ಅಧ್ಯಾಯವು.

### ಶಿವ ವನವಿಹಾರೋತ್ಸವವು.

ಎಲೆ ಸಿದ್ಧರಾಮೇಶನೆ ಕೇಳು,— ಶಿವನು ಪಾರ್ವತೀಸಮೇತನಾಗಿ ಮಂದರಪರ್ವತದಲ್ಲಿ ವಾಸವಾಗಿರುತ್ತಿರಲು, ಪುಷ್ಪದತ್ತನೆಂಬ ಹೂವಳಿಗನು ಪ್ರತಿದಿನವೂ ನಾನಾ ಲೋಕಗಳಲ್ಲಿ ತಿರುಗಿ, ಸುಗಂಧಕುಸುಮಗಳನ್ನೆತ್ತಿ ತಂದು, ಮಾಲೆಯನ್ನು ಕಟ್ಟಿ, ಪಾರ್ವತೀದೇವಿಯು ಮುಡಿಗೆ ಅಲಂಕರಿಸಿಕೊಳ್ಳುವುದಕ್ಕಾಗಿ ಅತಿಭಕ್ತಿಯಿಂದ ಒಪ್ಪಿಸುತ್ತಿದ್ದನು. ಒಂದುದಿನ ಇವನು ಒಪ್ಪಿಸಿದ ಹೂವಿನಲ್ಲಿ ಪಾರಿಜಾತಪುಷ್ಪವು ಇಲ್ಲದೆ ಇರಲು, ಗೌರೀದೇವಿಯು ಪುಷ್ಪದತ್ತನ ಮುಖವನ್ನು ನೋಡಿ, ಪಾರಿಜಾತವೇತಕ್ಕಿಲ್ಲವೆಂದು ಕೇಳಲು; ತಾಯಿ! ನಂದನವನದಲ್ಲಿ ಆ ಹೂವಿರುವುದು, ಅದನ್ನು ಈ ದಿನ ಶಚೀದೇವಿಯು ಅಪೇಕ್ಷಿಸಿ ಮುಂಚಿತವಾಗಿ ಎತ್ತಿಸಿಕೊಂಡಿದ್ದಳು, ಅದರಿಂದ ನನಗೆ ದೊರೆಯಲಿಲ್ಲವೆಂದು ಕೈಮುಗಿದು ಭಯದಿಂದ ಬಿನ್ನೈಸಿದನು. ಆ ಮಾತನ್ನು ಕೇಳಿ ಶಂಕರಿಗೆ ಮನಸ್ಸಿನಲ್ಲಿ ಈರ್ಷೆಯು ಹುಟ್ಟಿತು. ಸತಿಯ ಖಿನ್ನವಾದ ವದನವನ್ನು ಪರಶಿವನು ನೋಡಿ, ದೇವಿಯೆ! ಇದಕ್ಕಾಗಿ ನೀನು ಮನಸ್ಸಿನಲ್ಲಿ ಇಷ್ಟೊಂದು ನೊಂ

ದುಕೊಳ್ಳುವುದೆ? ಕಲ್ಪವೃಕ್ಷದ ಕುಸುಮಗಳು ನಿನಗೆ ದುರ್ಲಭವೆ? ಐದು ಜಾತಿಯ ಕಲ್ಪತರುಗಳೂ ಈ ಪರ್ವತದ ತಪ್ಪಲಿನಲ್ಲೇ ಇರುವಂತೆ ನಾನು ಮನೋಹರವಾದ ಉಪವನವನ್ನು ಕ್ಷಣಕಾಲದಲ್ಲಿ ವಿರಚಿಸುವೆನು ನಡೆ ನೋಡು, ಎನ್ನಲು, ಭವಾನಿಯು ಕೂಡಲೇ ತನ್ನ ಆಪ್ತಸಖಿಯರೊಡನೆ ಕೂಡಿ ಹೊರಟಳು. ಶಿವನೂ ಸಂಗಡಲೇ ನಡೆಗೊಂಡನು. ಪರ್ವತದ ತಪ್ಪಲಿನಲ್ಲಿ ೧ ಸಹಸ್ರಯೋಜನದಗಲವುಳ್ಳವಾಗಿ ಗಗನಚುಂಬಿಗಳಾಗಿ ಬೆಳೆದಿರುವ ಕಲ್ಪತರುಗಳಿಂದ ಒಪ್ಪುತಲಿರುವ ಉಪವನವು ಶಿವನ ಇಚ್ಛಾಮಾತ್ರದಿಂದ ನಿರ್ಮಿತವಾಗಿ ಕಾಣಿಸಿತು. ಅಲ್ಲಲ್ಲಿಗೆ ತಿಳಿಗೊಳಗಳು, ಹೂಜಾತಿಯ ಗಿಡಬಳ್ಳಿಗಳು, ಚಂದ್ರಕಾಂತಶಿಲೆಯ ಪೀಠಗಳು, ಲತಾಗೃಹಗಳು, ರಂಜಿಸುತ್ತಿರಲು, ಅದರ ಸೊಗಸನ್ನು ಪಾರ್ವತಿಯು ನೋಡಿ ಸಂತೋಷಿಸಿ ನಕ್ಕು, ಸ್ವಾಮಿ! ತಮ್ಮ ಕರುಣಾಮೃತರಸ ವೃಷ್ಟಿಯಿಂದ ನನಗೆ ಯಾವ ಸುಖದ ಬೆಳಸುತಾನೇ ದುರ್ಲಭವಾಗಿರುವುದು? ಎಂದು ಪತಿಯನ್ನು ಕುರಿತು ಹೇಳಿ ಹರ್ಷಗೊಳಿಸುತ್ತ ಉಪವನದೊಳಗೆ ಸಂಚರಿಸುತ್ತಿರಲು, ಶಿವನು— ರಮಣಿಯೆ! ಈ ಉದ್ಯಾನಕ್ಕೆ ಚೈತ್ರರಥವೆಂಬ ಹೆಸರು; ಇದಕ್ಕೆ ಸದೃಶವಾದ ಉಪವನವು ತ್ರಿಭುವನದಲ್ಲೂ ಇಲ್ಲ; ಇದರಲ್ಲಿ ಬೆಳೆವ ಹೂವುಗಳಿಗೆ ನಿನ್ನ ಮುಡಿಯೂ ಆ ಮುಡಿಗೆ ಈ ಹೂವೂ ಒಂದಕ್ಕೊಂದು ಯೋಗ್ಯವಾದುವುಗಳು; ಎಂದು ಹೇಳಿ, ಹೊಸಹೊಸ ಹೂಗಳನ್ನೆತ್ತಿ ತರಿಸಿ, ತನ್ನ ಬೆರಲುಗುರುಗಳಿಂದಲೇ ದೇವಿಯ ತಲೆಕೂದಲನ್ನು ಸಿಕ್ಕುಬಿಡಿಸಿ, ಕೂದಲಿನೊಳಗೆ ಹೂವಿನ ಸರವನ್ನು ಸೇರಿಸಿ ಎಣ್ಣೆಗಂಟಿಕ್ಕಿ, ಮುಖವನ್ನು ನೋಡಿ ಸಂತೋಷಿಸಿ, ಬಳಿಕ ಆ ವನದ ಕಾವಲಿಗೆ ಒಬ್ಬ ಚಾರನನ್ನು ನೇಮಿಸಿ, ಬುದುದಿನವೂ ತಪ್ಪದೆ ಆ ವನದ ಪುಷ್ಪಗಳನ್ನೆತ್ತಿ ದೇವಿಯರಿಗೆ ತಂದುಕೊಡಬೇಕೆಂದು ಪುಷ್ಪದತ್ತನಿಗೆ ಆಜ್ಞಾಪಿಸಿ, ಅರಮನೆಗೆ ತೆರಳಿ ಸುಖಮಯನಾಗಿದ್ದನು. ಹೀಗಿರುತ್ತಿರುವಲ್ಲಿ ವಸಂತಋತುವು ಸಂಧಿಸಿತು. ಚಳಿಯು ತಪ್ಪಿತು. ತಂಗಾಳಿಯು ಬೀಸಿತು. ಪುಷ್ಪಪರಿಮಳವು ತುಂಬಿತು. ತುಂಬಿಗಳ ಸ್ತೋಮವು ನಲಿದಾಡಿತು. ಕೋಗಿಲೆಗಳ ತಿಂತಿಣಿಯು ಹಾಡಿತು. ಮದನನಿಗೆ ಬಲ ಹೆಚ್ಚಿತು. ವೃಕ್ಷಲತಾನಿಕುರಂಬವು ಚಿಗುರೇರಿತು. ವಿರಹಿ

ಜನದ ಎದೆಯು ಬಿರಿದಿತು. ಭೋಗಿಗಳ ಮನಸ್ಸು ಉಲ್ಲಾಸವೇರಿತು. ತಾವರೆಯ ಬಳ್ಳಿಯಲ್ಲಿ ಹೂಪತ್ತಿತು; ಗಿಳಿಗಳ ಬಳಗವು ಹಣ್ಣುಗಳನ್ನು ತಿಂದು ಹಾರಾಡಿತು. ಆಕಾಶವು ಸ್ವಚ್ಛವಾಯಿತು. ಚಂದ್ರರುಚಿಯು ಆಹ್ಲಾದಕವಾಯಿತು. ಎತ್ತನೋಡಿದರೂ ಭೂಮಿಯು ಪಳಚ್ಚನೆ ತೋರುತ್ತಿದ್ದಿತು. ಎಲ್ಲಿ ತಿರುಗಿದರೂ ಸುರಭಿಮಂದಮಾರುತವು ಬೀಸುತ್ತಿದ್ದಿತು. ಎಲ್ಲಿಗೆ ಹೋದರೂ ಶುಕಪಿಕಾದಿಗಳ ಮಧುರಸ್ವರವು ಕೇಳುತ್ತಿದ್ದಿತು. ಪ್ರತಿಯೊಂದು ಉಪವನಗಳೂ ಪುಷ್ಪಪಲ್ಲವಾದಿಗಳಿಂದ ತುಂಬಿ ಮದನರಾಜನ ಬಾಣಶಾಲೆಯೊ, ರತಿಪತಿಯ ವಿಹಾರಮಂದಿರವೋ, ಭೋಗಿಗಳ ವಿನೋದಮಂಟಪವೋ, ಗಿಳಿಗಳ ಭೋಜನಶಾಲೆಯೋ, ತುಂಬಿಗಳ ಅರವಟ್ಟಿಗೆಯೋ, ನವಿಲುಗಳ ನರ್ತನರಂಗವೋ, ಕೋಕಿಲಗಳ ಸಂಗೀತಶಾಲೆಯೋ, ಎಂಬಂತೆ ತೋರುತ್ತಿದ್ದುವು. ಮದನನು ಉಪವನವೆಂಬ ತನ್ನರಮನೆಯ ಸುತ್ತಲೂ ದಸಿಯ ಪ್ರಾಕಾರವನ್ನು ಕಟ್ಟಿಸಿರುವನೋ ಎಂಬಂತೆ ಮೊನೆಯಾದ ಕೆಂಗೇದಗೆ ಹೂವುಗಳನ್ನು ಬಿಟ್ಟಿರುವ ತಾಳೆಮರಗಳ ಬೇಲಿಯು ಒಪ್ಪಿದ್ದಿತು. ವಿಜಯಯಾತ್ರೋತ್ಸುಕನಾದ ಮನ್ಮಥರಾಜನಿಗೆ ಇಳಿದುಕೊಳ್ಳುವುದಕ್ಕಾಗಿ ವಸಂತನು ಚಿಗುರುಗಳೆಂಬ ರತ್ನಗುಚ್ಛಗಳಿಂದಲೂ, ಪುಷ್ಪಗುಚ್ಛವೆಂಬ ಚಿನ್ನದ ಸರಿಗೆಯ ಕುಚ್ಚುಗಳಿಂದಲೂ, ಹೀಚುಗಳೆಂಬ ಪಚ್ಚೆಮಣಿಯ ಜೊಂಪೆಗಳಿಂದಲೂ, ಹಬ್ಬಿದ ಮಲ್ಲಿಗೆಯ ಬಳ್ಳಿಯ ಮೊಗ್ಗೆಗಳೆಂಬ ಮುತ್ತಿನ ಗುದಿಗಳಿಂದಲೂ, ಹಾರಾಡುವ ತುಂಬಿಗಳೆಂಬ ಇಂದ್ರನೀಲಮಣಿಯ ಸರಗಳಿಂದಲೂ, ರಚಿಸಿರುವ ಕೆಂಬಣ್ಣದ ಗೂಡಾರವಂತೆ ಪಲ್ಲವಪುಷ್ಪಾದಿಗಳಿಂದ ಸಾಂದ್ರವಾದ ಮಾವಿನ ಮರವು ಒಪ್ಪಿದ್ದಿತು. ವಸಂತನೆಂಬ ಬೇಟೆಗಾರನು ವಿರಹಿಗಳೆಂಬ ಮೃಗಗಳನ್ನು ಹಿಡಿದು ತಂದು ಸುಡುವುದಕ್ಕಾಗಿ ಒಟ್ಟಿರುವ ದೊಡ್ಡಕಿಚ್ಚಿನಂತೆ ಕೆಂಪು ಚಿಗುರಿನಿಂದ ಮುಚ್ಚಿರುವ ಅಶೋಕವೃಕ್ಷಗಳು ತೋರುತ್ತಿದ್ದುವು. ಭೂಮಿಯೆಲ್ಲ ಪುಷ್ಪಗಂಧಮಯವಾಗಿದ್ದಿತು. ದಿಕ್ಕುದಿಕ್ಕುಗಳಲ್ಲೆಲ್ಲ ಹಣ್ಣುಗಳೇ ಕಾಣುತ್ತಿದ್ದುವು. ವನಗಳೆಲ್ಲ ಮದನನ ಸೇನಾಮಯವಾಗಿದ್ದುವು. ಲೋಕವೆಲ್ಲ ಸುಖಿಗಳಮಯವಾಯಿತು. ಮಾತುಗಳೆಲ್ಲ ಕಾಮಲೀಲಾಮಯವಾಗಿದ್ದುವು. ಲತಾ

ಗೃಹಗಳೆಲ್ಲ ವಿಟಾಳಿಗಳ ಮಯವಾಗಿದ್ದುವು. ಸರೋವರಗಳೆಲ್ಲ ವಿರಹಿಗಳ ವಾಸಸ್ಥಲವಾಗಿದ್ದುವು. ಹೀಗೆ ಲೋಕಾನಂದಕರವಾಗಿ ವಸಂತಋತುವಿನ ಪ್ರಭಾವವು ಒಪ್ಪುತ್ತಿರಲು, ಶಿವನ ಚೈತ್ರರಥವನವು ವನಪಾಲನ ಸಾಹಸವಿಶೇಷದಿಂದ ಅತ್ಯತಿಶಯವಾದ ಸೊಂಪುಗೊಂಡು ಮೆರೆಯುತ್ತಿದ್ದಿತು. ಅಲ್ಲಲ್ಲಿಗೆ ಲತಾಮಂಟಪಗಳು, ಚಿಗುರ ಚಪ್ಪರಗಳು, ತಳಿರ ತೋರಣಗಳು, ಹೂವಿನ ಹಾಸಿಗೆಗಳು, ಚಿಗುರ ಉಯ್ಯಾಲೆಗಳು, ಪನ್ನೀರ ಕಾಲ್ವೆಗಳು, ಅರವಟ್ಟಿಗೆಗಳು, ಪುಷ್ಪಗುಚ್ಛದ ಕುರುಜುಗಳು, ನೀರು ಹಾರುತ್ತಿರುವ ಕಾಳಂಜಿಗಳು, ಹೂವಿನ ಝೊಂಪೆಗಳು, ಚಂದ್ರಕಾಂತಶಿಲೆಯ ವಿಶ್ರಾಂತಿ ಪೀಠಗಳು, ಒಪ್ಪಿದ್ದುವು. ವನಪಾಲಕನು ಅದರ ಸೊಬಗನ್ನು ನೋಡಿ ತಲೆದೂಗಿದನು. ಪರಶಿವನಿಗೆ ಬಿನ್ನೈಸಿ ಕರೆದುಕೊಂಡು ಬಂದು ತೋರಿಸಬೇಕೆಂದು ಯೋಚಿಸಿದನು. ಮಲ್ಲಿಗೆಯ ಮೊಗ್ಗೆಗಳನ್ನೂ, ಸಂಪಗೆಯ ಹೂವುಗಳನ್ನೂ, ತಾವರೆಯ ಅರಲುಗಳನ್ನೂ, ಕೇದಗೆಯ ಪುಷ್ಪಗಳನ್ನೂ, ದವನದ ಗುಚ್ಛಗಳನ್ನೂ, ಅಶೋಕದ ಚಿಗುರುಗಳನ್ನೂ, ಹೊಂಬಾಳೆಗಳನ್ನೂ, ಪೊಟ್ಟಳಗಳಲ್ಲಿ ಕಟ್ಟದನು. ರಸಬಾಳೆಯ ಗೊನೆಗಳನ್ನೂ, ಅಡಕೆ ತೆಂಗಿನ ತಾರುಗಳನ್ನೂ, ಹಲಸು, ಮಾವು, ದಾಳಿಂಬೆ, ನೇರಿಲು, ಅಂಜೂರ, ಸೇಬು, ದ್ರಾಕ್ಷಿ, ಮೊದಲಾದ ಹಣ್ಣುಗಳನ್ನೂ ಆಳುಗಳಮೇಲೆ ಹೊರಿಸಿದನು. ಇವನ್ನೆಲ್ಲ ಶಿವನ ಬಳಿಗೆ ಸಾಗಿಸಿಕೊಂಡು ಹೋಗಿ ಮುಂಚಿಟ್ಟು ನಮಸ್ಕರಿಸಿ, ಭಕ್ತಿಯಿಂದ ಕೈಕಟ್ಟನಿಂತು, ಜೀಯಾ! ತಾವು ನನ್ನ ಪಾಲನೆಗೆ ಒಪ್ಪಿಸಿದ ವನವು ಈಗ ಫಲಭರಿತವಾಗಿರುವುದು, ವನದೇವಿಯು ದಾಳಿಂಬಬೀಜಗಳೆಂಬ ಹಲ್ಲನ್ನು ಕಿರಿದು ಕೋಗಿಲೆಯ ಧ್ವನಿಯೆಂಬ ಕೂಗಿನಿಂದ ನಿಮ್ಮ ಆಗಮನವನ್ನು ಬಯಸಿ ಪ್ರಾರ್ಥಿಸುತ್ತ ನನ್ನನ್ನು ಕರೆಯಲಟ್ಟಿರುವಳು; ಕೃಪೆಯಿಟ್ಟು ಚಿತ್ತೈಸಿ ಪರಾಮರಿಸಬೇಕು; ಎಂದು ವಿಜ್ಞಾಪಿಸಿದನು. ಶಿವನು ಅವನಿಗೆ ಉಡುಗೊರೆಗಳನ್ನು ಕೊಟ್ಟು ಕಳಿಸಿ, ಸತಿಯೊಡನೆ ವನವಿಹಾರೋತ್ಸವಕ್ಕೆ ನಡೆಗೊಂಡನು. ದೇವಿಯೊಡನೆ ಸುಂದರಿಯರಾದ ಸಖಿಯರನೇಕರು ಹೊರಟರು. ಅವರ ಪಾದವೇ ಚಿಗುರುಗಳು, ಕೂದಲೇ ತುಂಬಿಗಳು, ಮುಖವೇ ತಾವರೆ, ತೋಳುಗಳೇ ಬಳ್ಳಿಗಳು, ತೊಡೆ

ಗಳೇ ಬಾಳೆಗಂಬಗಳು, ಹೊಕ್ಕುಳೇ ಕೊಳಗಳು, ಮೊಲೆಗಳೇ ಚಕ್ರವಾಕಪಕ್ಷಿಗಳು, ಮಾತುಗಳೇ ಗಿಳಿಗಳು, ನಡೆಯೇ ಹಂಸೆಗಳು, ಮುಡಿಗಳೇ ನವಿಲ್ಗಳು, ಎಂಬಂತೆ ತೋರುತ್ತಿರಲು, ಚಲಿಸುವ ವನದಂತಿರುವ ದೇವಾಂಗನೆಯರು ಸ್ಥಾವರವನದರ್ಶನಕ್ಕೆ ಹೊರಟರು. ಸರಪಳಿಗಳನ್ನು ಕಿತ್ತು ಬಂದಿರುವ ಕಾಮನ ಮದದಾನೆಗಳಂತಿರುವ ಈ ಸಖಿಯರೊಡನೆ ಹೊರಟ ಪಾರ್ವತೀಪರಶಿವರು ಚೈತ್ರರಥವನ್ನು ಪ್ರವೇಶಿಸಿದರು. ಸಖಿಯರುಗಳು ಹೂಚಿಗುರುಗಳ ಸೊಬಗನ್ನು ನೋಡಿ ನನಗೆ ತನಗೆ ಎಂದು ಮೇಲೆ ಬಿದ್ದು ಕೊಯ್ಯಲು ಆತುರಿಸಿದರು. ಆಗ ಇವು ಚಿಗುರು ಇವು ಪಾದಗಳು, ಇವು ತುಂಬಿಗಳು ಇವು ಕುರುಳುಗಳು, ಇವು ತುಟಿಗಳು ಇವು ಕೆಂಪು ಗುಲಾಬಿಯ ಹೂವುಗಳು, ಇವು ದೇಹಗಳು ಇವು ಬಳ್ಳಿಗಳು, ಇವು ಮೂಗುಗಳು ಇವು ಸಂಪಗೆಗಳು, ಇವು ಗಿಳಿಗಳ ನುಡಿ ಇವು ಸಖಿಯರ ಮಾತು; ಎಂಬ ಭೇದವನ್ನು ತಿಳಿದುಕೊಳ್ಳಲಾರದೆ ಕೆಲವರು ಮುಗ್ಧಾಂಗನೆಯರು ಪರದಾಡುತ್ತಿದ್ದರು. ಮಲ್ಲಿಗೆಯ ಮೊಗ್ಗೆಯನ್ನು ಕೊಯ್ಯುತ್ತಿದ್ದವಳ ಮೇಲ್ಮುಸುಗು ಜಾರಿ ಮೊಲೆಯು ಹೊರಕ್ಕೆ ಕಾಣುತ್ತಿರಲು, ಹತ್ತಿರದಲ್ಲಿ ನಿಂತಿದ್ದ ಮತ್ತೊಬ್ಬ ಮುಗ್ಧಾಂಗನೆಯು ಅಕ್ಕ! ಇದೇನಾಶ್ಚರ್ಯ! ಮಲ್ಲಿಗೆಯಬಳ್ಳಿಯು ತಾವರೆಯ ಮೊಗ್ಗೆಯನ್ನು ಬಿಟ್ಟಿರುವುದನ್ನೋಡಿದೆಯಾ ? ಎಂದು ಹೇಳಿ, ಅದನ್ನು ಕೊಯ್ದು ತೋರಿಸುವುದಕ್ಕಾಗಿ ಅವಳೆದೆಗೆ ಕೈಚಾಚಲು, ಉಳಿದ ಸಖಿಯರೆಲ್ಲ ನೋಡಿ ನಕ್ಕರು. ಸ್ತ್ರೀಯರು ಹೂವುಗಳನ್ನು ಕೊಯ್ಯುವುದಕ್ಕಾಗಿ ತಮ್ಮ ಹಸ್ತವನ್ನು ಚಾಚಿದರೆ ಅಂಗೈಯ ಕೆಂಪಿನಿಂದ ಮುಸುಗಿದ ಬಿಳಿಯ ಹೂವುಗಳು ಕೆಂಪು ಹೂವಿನಂತೆ ಕಾಣುತಿದ್ದುವು. ಕೆಂಪುಚಿಗುರುಗಳಮೇಲೆ ಅವರ ಕಣ್ಣಿನ ಕಾಂತಿಯು ಬಿದ್ದರೆ ಅವು ಬಿಳೀಚಿಗುರಿನಂತೆ ತೋರುತ್ತಿದ್ದುವು. ಹೊಂಬಣ್ಣದ ಹಣ್ಣುಗಳು ಅವರ ತುಟಿಯ ಕಾಂತಿಯಿಂದ ಕೆಂಬಣ್ಣವಾಗಿ ಒಪ್ಪುತ್ತಿದ್ದುವು. ಇದರಿಂದ ದೇವನಾರಿಯರು ಬಂದನ್ನು ಮತ್ತೊಂದುವಿಧವಾಗಿ ಮಾಡಿ ತೋರಿಸುವ ಯಕ್ಷಿಣಿಗಾರ್ತಿಯರಂತೆ ತೋರುತ್ತಿದ್ದರು. ಮತ್ತು ತಿಲಕವೃಕ್ಷವನ್ನು ಕಣ್ಣಿನಿಂದ ನೋಡಿಯೂ, ಗೋರಂಟೆಯನ್ನು ಮೊಲೆಗಳಿಂದೊತ್ತಿಯೂ, ಪಾದರಿಗಳನ್ನು

ಬಾಯಿಬಿಟ್ಟು ನಕ್ಕು, ಕಡಹದ ಮರವನ್ನು ದೇಹದಿಂದ ಸೋಂಕಿಸಿಯೂ, ಕಬ್ಬನ್ನು ಸರಳದಿಂದ ಜರೆದೂ, ಅಶೋಕವೃಕ್ಷವನ್ನು ಅಂಗಾಲಿನಿಂದೊದೆದೂ, ಹವಳದ ಹೂವಿನ ಮರವನ್ನು ತುಟಿಯಿಂದುಗಿದೂ, ಸುರಗಿಯ ಮರವನ್ನು ಇಂಪಾದ ದನಿಯಿಂದ ಹಾಡಿಯೂ, ಬೆಟ್ಟದಾವರೆಯನ್ನು ಅದರ ಗುಣಾತಿಶಯವನ್ನು ಕೊಂಡಾಡಿಯೂ, ಪಾರಿಜಾತವನ್ನು ಮೃದುವಚನಗಳಿಂದ ಮಾತನಾಡಿಸಿಯೂ ಹೂವನ್ನು ಬಿಟ್ಟು ಚಿಗುರೇರುವಂತೆ ಮಾಡುತ್ತಿದ್ದರು. ಕಣಿಗರೆ ಸುರಹೊನ್ನೆ ಪಗಡೆ ಸಂಪಗೆ ಸೇವಂತಿಗೆ ಮಲ್ಲಿಗೆ ಮೊಲ್ಲೆ ಪಾದರಿ ಗೋರಂಟೆ ಪಾರಿಜಾತ ತಾಳೆ ಗುಲಾಬಿ ನಾಗಸಂಪಗೆ ಮಾವು ಬೆಟ್ಟತಾವರೆ ನೈದಿಲು ಕೆಂದಾವರೆ ಮೊದಲಾದ ಪುಷ್ಪಗಳನ್ನೆಲ್ಲ ಎತ್ತಿಕೊಂಡು ಪಾರ್ವತೀಪರಮೇಶ್ವರರಿಗೆ ಒಪ್ಪಿಸಿದರು. ಅದನ್ನೆಲ್ಲ ಪರಿಗ್ರಹಿಸಿ ಶಂಕರನು ಸತೀಸಮೇತನಾಗಿ ವನದಲ್ಲಿ ವಿಹರಿಸುತ್ತ ಅವರ ಸೊಬಗಿಗೆ ತಲೆದೂಗುತ್ತ ಒಂದು ಸರೋವರದ ಬಳಿಗೆ ಬಂದನು. ಅದು ರನ್ನಹೊನ್ನದ ಸೋಪಾನಗಳಿಂದಲೂ, ತೀರದ ಮೇಲಿರುವ ಚಂದ್ರಕಾಂತಶಿಲೆಯ ಮಂಟಪದಿಂದಲೂ, ತಿಳಿನೀರಿನಿಂದಲೂ ನೈದಿಲು ತಾವರೆಗಳ ಸಾಲುಗಳಿಂದಲೂ, ಹಂಸಗಳ ಸಂಚಾರದಿಂದಲೂ ತುಂಬಿಗಳ ಝುಂಕಾರದಿಂದಲೂ, ತೆರೆನೊರೆಗಳಿಂದಲೂ, ಮನೋಹರವಾಗಿದ್ದಿತು. ಜಲಕ್ರೀಡೆಗಾಗಿ ಶಿವನು ಸತಿಯೊಡನೆ ಕೊಳವನ್ನು ಹೊಕ್ಕನು. ಸಖಿಯರು ನವಿಲು ಹಂಸೆ ಗಿಳಿ ಕೋಗಿಲೆ ಗರುಡ ಕುದುರೆ ಆನೆ ಮೊದಲಾದವುಗಳ ಆಕಾರದ ಚಿನ್ನದ ಚೀರ್ಕೊಳವೆಗಳನ್ನು ಪಿಡಿದು ನೀರಿಗಿಳಿದರು. ಒಬ್ಬರಮೇಲೊಬ್ಬರು ನೀರನ್ನು ಹೊಯ್ದಾಡಿದರು. ಶಿವಶಿವೆಯರು ವಿನೋದದಿಂದ ನೀರನ್ನೆರಚಾಡಿದರು. ಶಿವನ ಜಲವರ್ಷಣಕ್ಕೆ ಪಾರ್ವತಿಯು ಹಿಂದೆಗೆದು ಕಣ್ಸನ್ನೆಯಿಂದ ಸಖಿಯರನ್ನೆಲ್ಲ ಎಚ್ಚರಿಸಿ ಸುತ್ತಲೂ ಮುತ್ತಿ ಶಿವನ ಮೇಲೆ ನೀರನ್ನೆರಚುವಂತೆ ಮಾಡಿದಳು. ಮದನನು ತನ್ನನ್ನು ಅಗ್ನಿಯಿಂದ ಸುಟ್ಟ ಶಿವನನ್ನು ತನ್ನ ಸೈನಿಕರಾದ ನಾರಿಯರ ಹಸ್ತದಿಂದ ಜಲಾಸ್ತ್ರದ ಮೂಲಕ ಹೊಡಿಸಿ ಸೋಲಿಸಬೇಕೆಂದು ಪ್ರಯತ್ನಿಸಿದನೋ ಎಂಬಂತೆ ನಾರೀಕುಲವು ಶಿವನಮೇಲೆ ಚೀರ್ಕೊಳವೆಗಳಿಂದ ನೀರನ್ನು ಪ್ರಯೋಗಿಸುತ್ತಿದ್ದಿತು. ನೀರನ್ನು ಮೊಗೆಯುವ

ಎರಚುವ ಕೇಳಿಹಾಕುವ ದುಮುಕುವ ಶಬ್ದವು ತುಂಬಿತು. ಹೀಗೆ ಜಲ ಕ್ರೀಡೆಯನ್ನಾಡಿದ ಬಳಿಕ ಮೊದಲು ಶಂಕರೀಶಂಕರರು ಸೋಪಾನವನ್ನು ಹತ್ತಿ ಮೇಲಣ ಮಂಟಪಕ್ಕೆ ತೆರಳಿ ವಸ್ತ್ರಭೂಷಣಾದಿಗಳನ್ನು ಧರಿಸಿ ಕೊಳದ ಕಡೆಗೆ ತಿರುಗಿ ನೋಡುತ್ತ ನಿಲ್ಲಲು, ಸೋಪಾನಗಳಮೇಲೆ ಒ ದ್ದೆಯಾದ ಬಟ್ಟೆಗಳಿಂದ ಹತ್ತಿದ ಶರೀರದಿಂದ ಬೆಳ್ಳಬೆಳ್ಳಗೆ ನಿಂತು ಬಿಸಿಲಿಗೆ ದೇಹವನ್ನು ಒಡ್ಡಿ ಕಾಯಿಸಿಕೊಳ್ಳುತ್ತಿರುವ ದೇವಾಂಗನೆಯರು ಸೋ ಪಾನಗಳಮೇಲೆಕೆತ್ತಿ ನಿಲ್ಲಿಸಿರುವ ಚಂದ್ರಕಾಂತಶಿಲೆಯ ಪ್ರತಿಮೆಗಳೋ, ಶಿವಸೇವೆಗಾಗಿ ಪಾತಾಳಲೋಕದಿಂದ ಹೊರಟು ಈ ಸರೋವರದ ದ್ವಾ ರದಿಂದ ಬಂದ ನಾಗಕನ್ನಿಕೆಯರೋ, ಮನ್ಮಥನ ಮಂತ್ರಾಧಿದೇವತೆಯೇ ಹೀಗೆ ಬಹುರೂಪವಾಂತು ನಿಂತಿರುವಳೋ, ಎಂಬಂತೆ ತೋರುತ್ತಿದ್ದರು. ಇಂತಹ ನಾರಿಯರೆಲ್ಲರೂ ತಲೆಯನ್ನಾರಿಸಿ ಮಡಿಯ ಸೀರೆಗಳನ್ನೂ ಆಭ ರಣಗಳನ್ನೂ ಧರಿಸಿ, ಸಕರ್ಪೂರತಾಂಬೂಲವನ್ನು ಸವಿದು ಸಿದ್ಧರಾಗಿ ನಿಂತರು. ಶಿವನು ವನಪಾಲಕನಿಗೆ ಬೇಕಾದುದುಗೊರೆಗಳನ್ನಿತ್ತು ಸಂ ತೋಷಪಡಿಸಿ, ಕೈಲಾಸಕ್ಕೆ ಹೋಗಿ ಅಲ್ಲಿರುವುದಕ್ಕಿಂತಲೂ ವಸಂತಋ ತುವು ಮುಗಿಯುವವರೆಗೂ ಉಪವನಾಂತದಲ್ಲಿರುವ ಉಪ್ಪರಿಗೆ ಮನೆ ಯಲ್ಲೇ ವಾಸಮಾಡಿಕೊಂಡಿರುವುದು ಸುಖವೆಂದು ಬಯಸಿ ಪಾರ್ವತಿಯೊ ಡನೆ ಅಲ್ಲೇ ವಿಲಾಸದಿಂದಿರುತ್ತಿದ್ದನು ಎಂಬಲ್ಲಿಗೆ ಐದನೇ ಅಧ್ಯಾಯವು ಸಂಪೂರ್ಣವು.

## ೬ ನೇ ಅಧ್ಯಾಯವು.

### ಗಂಗಾಧರ ಲೀಲೆಯು.

ಎಲೆ ಸಿದ್ಧರಾಮೇಶನೆ! ಮರುದಿವಸ ಪರಶಿವನು ಅಂತಃಪುರದಲ್ಲಿ ಪಾರ್ವತಿಯೊಡನೆ ಮಲಗಿದ್ದು, ತಾನೊಬ್ಬನೇ ಎದ್ದು ಬಾಗಿಲನ್ನು ತೆರೆದು ಹೊರಕ್ಕೆ ಹೊರಟು ಉಪವನದ ಸೊಗಸನ್ನು ನೋಡುತ್ತ ತಿರುಗಾಡುತ್ತಿ ದ್ದನು. ಇದಿರಿನಲ್ಲಿ ಒಂದು ಮಾವಿನ ಮರವು ಚಿಗುರಿನಿಂದಲೂ, ಹೂ ವು ಹೀಚು ಕಾಯಿಗಳಿಂದಲೂ ತುಂಬಿ ಮನೋಹರವಾಗಿ ಕಾಣುತ್ತಿದ್ದಿ ತು. ಅದರಮೇಲೆ ತುಂಬಿಗಳು ಕೋಗಿಲೆಗಳು ತುಂಬಿಕೊಂಡು ಧ್ವನಿಸೈ

ಯುತ್ತಿದ್ದುವು. ಶಿವನು ಅವರ ಬಳಿಗೆ ಬಂದು, ಕೆಳಗೆ ಹಾಕಿದ್ದ ಚಂದ್ರಕಾಂತಶಿಲೆಯ ಜಗತಿಯಮೇಲೆ ಕುಳಿತುಕೊಂಡು ವನದ ಚೆಲ್ವಿಕೆಯನ್ನು ನೋಡುತ್ತಿದ್ದನು. ಆ ಮರದಮೇಲೆ ಗೂಡು ಕಟ್ಟಿಕೊಂಡಿದ್ದ ಮೃದುವಾಣಿ ಯೆಂಬ ಹೆಣ್ಗಿಳಿಯು, ತನ್ನ ಪ್ರಾಣಕಾಂತನಾದ ಮಧುಮಿತ್ರನೆಂಬ ಗಂಡುಗಿಳಿಯು ಕಳೆದ ರಾತ್ರಿ ಮನೆಗೆ ಬರದೆ ಇದ್ದುದನ್ನು ಕಂಡು ಖೇದಗೊಂಡು, ಅಯ್ಯೋ! ನನ್ನ ನಾಯಕನನ್ನು ಬೆಕ್ಕು ನುಂಗಿತೊ? ಬೇಡರು ಬಲೆಯೊಡ್ಡಿ ಹಿಡಿದರೊ? ಕಲ್ಲಿನೇಟಿನಿಂದ ರೆಕ್ಕೆ ಮುರಿದುಕೊಂಡು ಹಾರಲಾರದೆ ಕುಳಿತಿರುವುದೊ? ಇನ್ನಾವುದಾದರೂ ಹೆಣ್ಣುಗಿಳಿಯ ರೂಪಯೌವನಾದಿಗಳನ್ನು ನೋಡಿ ಮೋಹಿಸಿ ಅವರ ಠಕ್ಕಿಗೊಳಗಾಗಿ ನಿಂತಿತೊ? ಎಂದೂ ನಿಲ್ಲದೆ ಇರುತ್ತಿದ್ದ ರಮಣನು ಈಗ ತಪ್ಪಿಸಿಕೊಳ್ಳುವುದಕ್ಕೆ ಕಾರಣವೇನು? ಅಯ್ಯೋ! ವಿಧಿಯೆ! ಹಾ! ಎಂದು ಹಂಬಲಿಸಿ ಕಣ್ಣೀರನ್ನು ಸುರಿಸುತ್ತಿದ್ದಿತು. ತನ್ನ ಪತಿಯ ಸದ್ದು ಎಲ್ಲಿಯಾದರೂ ಕೇಳಿಸುವುದೇ ಎಂದು ಒಂದು ಬಾರಿ ಕಿವಿಗೊಟ್ಟು ಸುತ್ತಲೂ ಆಲಿಸುವುದು; ಮತ್ತೊಂದು ಬಾರಿ ದಾರಿ ದಾರಿಯನ್ನು ನೋಡುವುದು; ಮತ್ತೊಂದಾವೃತ್ತಿ ರೋದಿಸುತ್ತ ಗೂಡಿನೊಳಗೂ ಹೊರಗೂ ತಿರುಗುವುದು; ಎಲ್ಲೆಲ್ಲೂ ನಿಲ್ಲದೆ ರೆಕ್ಕೆಗಳನ್ನು ಜೋಲುಬಿಟ್ಟು ಆಹಾರವನ್ನು ತ್ಯಜಿಸಿ ನಿಟ್ಟುಸಿರನ್ನು ಬಿಟ್ಟು, ಹಾ ರಮಣಾ! ನೀನು ನನ್ನ ಕಣ್ಣಿಗೆ ಮರೆಯಾದ ಬಳಿಕ ನಾನು ಬಾಳುವುದುಂಟೆ? ನಿನ್ನ ರೂಪ ಸೌಂದರ್ಯ ಶೃಂಗಾರವಿಲಾಸಾದಿಗಳು ಮತ್ತಾವಗಿಳಿಗಾದರೂ ಉಂಟೆ? ನಿನ್ನ ಗುಣವನ್ನು ನಾನಿನ್ನೆಲ್ಲಿ ಕಾಣಲಿ? ಇಷ್ಟೇಕೆ ತಡಮಾಡುವೆ? ಬಾ, ನೋಡು, ಮುಖ ತೋರಿಸು, ಮಾತನಾಡಿಸು, ಚುಂಬಿಸು, ಆಲಿಂಗಿಸು, ಸುಖಿಸು, ಎಂದು ಮೊದಲಾಗಿ ಹೇಳಿಕೊಂಡು ವಿರಹದಿಂದ ಹಂಬಲಿಸುತ್ತಿದ್ದಿತು. ಅಷ್ಟರಲ್ಲಿ ಗಂಡುಗಿಳಿಯು ದೂರದಿಂದ ಬರುತ್ತ,—ತನ್ನ ಮನಃಕಾಂತೆಯು ವಿಯೋಗದುಃಖದಿಂದ ಸತ್ತಿರುವಳೊ? ಬದುಕಿರುವಳೊ? ಎಷ್ಟು ದುಃಖಿಸುವಳೊ? ಎಂದೂ ನನ್ನ ಅಗಲುವಿಕೆಯನ್ನು ಅನುಭವಿಸದ ರಮಣಿಯು ಎಷ್ಟು ಸಂತಾಪಪಟ್ಟಳೊ? ಎಷ್ಟು ಹೆದರಿದಳೊ? ಆದರೆ ನಾನು ಶಿವನ ಸೇವೆ

ಯಲ್ಲಿ ನಿರತನಾಗಿದ್ದುದರಿಂದ ಅವರ ಫಲವು ನನಗೆ ಯಾವ ಅನಿಷ್ಟವನ್ನೂ ಉಂಟುಮಾಡಲಾರದು; ಎಂದು ಯೋಚಿಸಿಕೊಳ್ಳುತ್ತ, ಧೈರ್ಯದಿಂದ ಗೂಡಿನ ಬಳಿಗೆ ಬಂದಿತು. ಈಗಿಳಿಯ ರೆಕ್ಕೆಗಳು ಕೇಸರಿಯ ಜಲದಿಂದ ಸಿಕ್ತವಾಗಿದ್ದುವು. ಕತ್ತಿನಲ್ಲಿ ಗಂಧೋದಕದ ಲೇಪನವು ತೋರುತ್ತಿದ್ದಿತು. ಕೊಕ್ಕಿನಲ್ಲಿ ಕಸ್ತೂರೀಕರ್ದಮವು ಲಿಪ್ತವಾಗಿದ್ದಿತು. ಇವುಗಳ ಪರಿಮಳವು ಘಮ್ಮನೆ ಆ ಮರವನ್ನೆಲ್ಲ ತುಂಬಿತು. ಇದಾವುದೋ ಹೊಸಗಿಳಿ ಬಂದಿತೆಂದು ಕೋಪಿಸಿದ ಹೆಂಗಿಳಿಯು ಅದರ ದನಿಯನ್ನು ಕೇಳಿ ಗಂಡನೆಂದು ತಿಳಿದು, ಪ್ರಾಣಬಂದಂತೆ ಹರ್ಷಗೊಂಡೆದ್ದು, ಗುಟುಕನ್ನು ಪಡೆದು, ಕಾಮಾತುರದಿಂದ ಉಸುರಿನಲ್ಲಿ ಉಷ್ಣವು ಹೆಚ್ಚಲು, ಮೆಯ್ಮೇಳಕ್ಕೆ ಆತುರಿಸಿ, ಕಣ್ಣೀರನ್ನು ಸುರಿಸಿ, ಕಾತರಿಸುತ್ತಿರುವಲ್ಲಿ ರಮಣನ ದೇಹದ ಗಂಧವನ್ನು ಕಂಡು, ಇದು ಅನ್ಯರಮಣಿಯ ಸಂಗದಿಂದ ಬಂದ ಸುವಾಸನೆ ಯೆಂದು ಕೋಪಿಸಿಕೊಂಡು, ಮುಖವನ್ನು ಗಂಟಿಕ್ಕಿ ಕಣ್ಣನ್ನು ಮುಚ್ಚಿ, ದೇಹವನ್ನು ಹಿಂದೆಗೆದು, ಬಿರುಸಾಗಿ ಉಸುರನ್ನು ಬಿಡುತ್ತಿದ್ದಿತು. ಪ್ರಿಯೆಯ ಈ ಸ್ಥಿತಿಯನ್ನು ನೋಡಿ ಗಂಡುಗಿಳಿಯು ತತ್ತರಿಸಿಹೋಯಿತು. ರಮಣೀ ! ನಾನು ರಾತ್ರಿ ಬರದೆ ನಿಂತುದಕ್ಕೆ ನೀನು ಇಷ್ಟೊಂದು ಕೋಪಿಸಿಕೊಳ್ಳಬಹುದೆ? ನಮ್ಮನಮ್ಮ ಪ್ರೀತಿಯಲ್ಲಿ ಇದನ್ನೊಂದು ದೊಡ್ಡತಪ್ಪೆಂದು ನೀನು ಅರಿಯಬಹುದೆ? ನಿನ್ನ ಮನಸ್ಸಿಗೆ ಇದೇ ಅಪರಾಧವಾಗಿ ತೋರಿದಲ್ಲಿ ಇಂದಿಗೆ ದಯವಿಟ್ಟು ಕ್ಷಮಿಸು; ಎಂದು ಹೇಳಿ ಕಾಲಿಗೆ ಬಿದ್ದಿತು. ಹೆಂಗಿಳಿಯು ವಕ್ರದೃಷ್ಟಿಯಿಂದ ನೋಡಿ ಕಾಲಿನಿಂದೊದೆದು ನೂಂಕಿ, ಮತ್ತೆ ಇಲ್ಲಿಗೇಕೆ ಬಂದೆ? ನೆನ್ನೆ ಯಾವಳಲ್ಲಿದ್ದೆಯೊ ಅಲ್ಲೇ ಇರು, ಹೋಗು; ನನ್ನಿಂದೇನು ಕೆಲಸ? ನೀನು ಎಷ್ಟು ಮುಚ್ಚಿದರೂ ನಿನ್ನ ಕಳ್ಳತನವು ನನಗೆ ಗೊತ್ತಾಗಲಿಲ್ಲವೆ? ಸಾಕು; ನಡೆ: ಎಂದು ಸಿಡಿಮಿಡಿಗೊಂಡು ಗಜರಿತು. ಗಂಡುಗಿಳಿಯಾದರೋ— ರಮಣೀ ! ನಿನ್ನ ಹೊರತು ನನಗೆ ಪ್ರಿಯರಾದವರು ಲೋಕದಲ್ಲಿ ಮತ್ತಾರೂ ಇಲ್ಲ; ಮತ್ತಾವಳ ಸಂಗವನ್ನೂ ನಾನು ಸತ್ಯವಾಗಿಯೂ ಮಾಡಿದವನಲ್ಲ; ಸುಮ್ಮನೆ ನನ್ನ ಮೇಲೆ ಕೋಪಗೊಂಡು ನನ್ನ ಮನೋವ್ಯಥೆಯನ್ನು ಹೆಚ್ಚಿಸಬೇಡ: ನನ್ನ ಶರೀರದಲ್ಲಿ ಇ

ಷ್ಟೊಂದು ಪರಿಮಳವುಂಟಾಗುವುದಕ್ಕೆ ಕಾರಣವೇನೆಂಬುದನ್ನು ನೀನು ವಿಚಾರಿಸದೆ ಸಂಶಯಪಡುವುದು ಉಚಿತವಲ್ಲ; ಪರಶಿವನು ಈ ಉದ್ಯಾನವನದ ಸರೋವರದಲ್ಲಿ ಜಲಕ್ರೀಡೆಯನ್ನು ಮಾಡಿದುದರಿಂದ ಅದು ಜಗತ್ತಿನಲ್ಲೆಲ್ಲ ಪುಣ್ಯತೀರ್ಥವೆಂದು ಪ್ರಸಿದ್ಧವಾಗಿರುವುದು; ಅದರಲ್ಲಿ ಹರಿಬ್ರಹ್ಮಾದಿಗಳೆಲ್ಲ ಸ್ನಾನ ಮಾಡಿ ಪುಣ್ಯಶರೀರಿಗಳಾಗಿರುವರು; ಅಂತಹ ತೀರ್ಥದಲ್ಲಿ ಸ್ನಾನ ಮಾಡುತ್ತ ತಡವಾದುದರಿಂದ ರಾತ್ರಿ ಬರುವುದಕ್ಕೆ ನನಗೆ ಅವಕಾಶವಿಲ್ಲವಾಯಿತು. ಬೇಕಿದ್ದರೆ ಆ ಕೊಳವನ್ನು ನಿನಗೂ ತೋರಿಸುತ್ತೇನೆ, ಎಂದು ಹೇಳಿ ಸಮಾಧಾನಪಡಿಸಲು, ಎರಡೂ ಪರಸ್ಪರವಾಗಿ ಸಂತೋಷಿಸಿ ಸುಖಿಸಿದುವು. ಇತ್ತ ಶಿವನು ಆ ಗಿಳಿಗಳ ಚರಿತ್ರವನ್ನೆಲ್ಲ ನೋಡುತ್ತಿರಲು, ಅತ್ತ ಮಂಚದ ಮೇಲೆ ಮಲಗಿದ್ದ ಪಾರ್ವತಿಯು ನಿದ್ರೆ ತಿಳಿದೆದ್ದು, ಮಗ್ಗುಲಲ್ಲಿ ಶಿವನಿಲ್ಲದಿರುವುದನ್ನು ಕಂಡು, ಎತ್ತ ಹೋದನೊ ! ಎಂದು ಅಂತಃಪುರದಲ್ಲೆಲ್ಲ ತಡಕಿ, ಕಾಣದೆ, ಜಲಕ್ರೀಡೆಯ ಆಸಕ್ತಿಯಿಂದ ಮತ್ತಾವ ಸಖಿಯನ್ನಾದರೂ ಕೂಡಿಕೊಂಡು ಹೋಗಿರುವನೊ? ಎಂದು ಯೋಚಿಸಿ, ವನದಲ್ಲೆಲ್ಲ ಹುಡುಕುತ್ತ ಬಂದಳು. ಮರಗಳ ಬುಡಗಳು ಲತಾಗೃಹಗಳು ಸರಸ್ತೀರಗಳು ಜಗತಿಗಳು ಹೂವಿನ ಚಪ್ಪರಗಳು ಕ್ರೀಡಾಪರ್ವತಗಳು ಕೊಳಗಳು ಮೊದಲಾದೆಡೆಯಲ್ಲೆಲ್ಲ ಹುಡುಕಿಕೊಂಡು ಬರುತ್ತ, ಮಾವಿನ ಮರದ ಕೆಳಗೆ ಶಿವನೊಬ್ಬನೇ ಕುಳಿತಿರುವುದನ್ನು ಕಂಡಳು. ಸಂತೋಷದಿಂದ ರೋಮಾಂಚಗೊಂಡು ಕಣ್ಣೀರನ್ನು ಸುರಿಸಿದಳು. ತಾನೊಬ್ಬಳೇ ಅರಸಿಕೊಂಡು ಬಂದುದಕ್ಕೆ ಭೀತಿಯನ್ನೂ ಲಜ್ಜೆಯನ್ನೂ ಹೊಂದಿದಳು. ಈಗೊಂದುಪಾಯವನ್ನು ಮಾಡಬೇಕೆಂದು ಯೋಚಿಸಿದಳು. ಆಭರಣಗಳು ಸದ್ದಾಗದಂತೆ ಬಂದು ಲತಾಮಂಟಪದ ಮರೆಗೆ ಹೋಗಿ ನಿಂತು, ಸಖಿಯರನ್ನೆಲ್ಲ ಕೈಸನ್ನೆಯಿಂದ ಹಿಂದಕ್ಕೆ ಕಳಿಸಿ, ಮೆಲ್ಲನೆ ಶಿವನ ಹಿಂಗಡೆಗೆ ಬಂದು, ತನ್ನ ಕರಪಲ್ಲವದಿಂದ ಶಿವನ ಕಣ್ಣುಗಳನ್ನು ಬಿಮ್ಮನೆ ಮುಚ್ಚಿದಳು. ಆ ಹಸ್ತಗಳ ಸೋಂಕಿನಿಂದಲೇ ಈಕೆಯು ಪಾರ್ವತಿಯೆಂದು ಶಂಕರನು ತಿಳಿದನು. ಮತ್ತು ಪ್ರಿಯಳ ಮೈಯ ಸ್ಪರ್ಶದಿಂದ ತನ್ನ ದೇಹದಲ್ಲಿ ರೋಮಾಂಚಿತನಾಗಿ, ಪರವಶನಾದನು. ಶಿವನ ಕಣ್ಣುಗಳು ಯಾವಾಗ

ಮುಚ್ಚಲ್ಪಟ್ಟವೋ ಅವನ ಕಣ್ಣುಗಳೇ ತಾವಾದ ಸೂರ್ಯಚಂದ್ರಮಂಡಲಗಳು ಕಾಣದಂತಾದುವು. ಘೋರಾಂಧಕಾರವು ಜಗತ್ತನ್ನೆಲ್ಲ ಆವರಿಸಿತು. ಲೋಕದವರ ಕಣ್ಣೆಲ್ಲ ಮುಚ್ಚಿದಂತಾದುವು. ಇದೇನು ದೊಡ್ಡ ಕಾಡಿಗೆಯ ಬರಣಿಯೊ ? ಕಾಳರಾತ್ರಿಗಳ ಒಬ್ಬುಳಿಯೊ ? ಪ್ರಳಯ ಕಾಲದ ಮೇಘಗಳ ಒಡ್ಡೊ? ಮಾಯೆಯ ಬೀಜದ ಒಟ್ಟಿಲೊ? ವಿಷದ ಗುಳಿಯೊ ? ಎಂಬಂತೆ ಬ್ರಹ್ಮಾಂಡಸ್ವರೂಪವು ಕರ್ರನೆ ಭೀಕರವಾಯಿತು. ಅಂತಹ ಮಹಾಂಧಕಾರದಲ್ಲಿ ಜಗತ್ತಿನ ಜನವು ಅತ್ತಿತ್ತ ತಿರುಗಾಡಲಾರದೆ ದಾರಿಕಾಣದೆ ನಿಂತಕಡೆ ನಿಂತು, ಕುಳಿತಕಡೆ ಕುಳಿತು, ಆಹಾರಗಳಿಲ್ಲದೆ ಲಯಗೊಳ್ಳುತ್ತ ಬಂದಿತು. ಹರಿಬ್ರಹ್ಮಾದಿಗಳು ಅಕಸ್ಮಾತ್ತಾಗಿ ಇದೇನು ಪ್ರಳಯಕಾಲವು ಸಂಧಿಸಿತು ! ಎಂದು ದಿಗಿಲುಬಿದ್ದು, ಮೃತ್ಯುಂಜಯ ಧ್ಯಾನವನ್ನು ಮಾಡಿದರು. ಅಷ್ಟರಲ್ಲಿ ಪಾರ್ವತಿಯ ಕಣ್ಣುಗಳಿಂದ ಸುರಿದ ಆನಂದಾಶ್ರುವು ಬೆನ್ನಿಗೆ ಇಳಿದು ತಣ್ಣಗಾಗಲು, ಶಂಕರನು ಎಚ್ಚೆತ್ತು, ಕತ್ತಲೆಯಿಂದ ಲೋಕಕ್ಕುಂಟಾಗಿರುವ ವಿಪತ್ತನ್ನು ತಿಳಿದು ಬಲಾತ್ಕಾರದಿಂದ ಕೈಗಳನ್ನು ಬಿಡಿಸಿದರೆ ಪಾರ್ವತಿಯು ಕೋಪಗೊಳ್ಳುವಳೆಂದು ಯೋಚಿಸಿ, ಕತ್ತಲೆಯ ಮನೆಗೆ ದೀಪವನ್ನಿಟ್ಟು ಬೆಳಕುಗೊಳಿಸುವಂತೆ ಮಾಡಬೇಕೆಂದು, ಹಣೆಗಣ್ಣಿನ ಕೊನೆಯನ್ನು ಸ್ವಲ್ಪಮಾತ್ರವೇ ತೆರೆದನು. ಅದರಿಂದಾದದ್ಭುತವನ್ನು ಏನು ಹೇಳಲಿ! ಮಹಾಗ್ನಿಜ್ವಾಲೆಯು ಭುಗಿಲು ಭುಗಿಲೆಂದು ಹೊರಟಿತು. ಕತ್ತಲೆಯು ಹರಿದೋಡಿತು. ಮತ್ತು ಒಂದು ಕಾರಣಕ್ಕಾಗಿ ಶಿವನಾಜ್ಞೆಯಿಂದ ಆ ಗಾಢಾಂಧಕಾರವೆಲ್ಲ ಒಟ್ಟುಗೂಡಿ ಬಲಿದು ಒಂದು ಶಿಶುವಿನಾಕಾರವನ್ನು ಧರಿಸಿ, ಶಿವನ ಬಳಿಗೆ ಬಂದು ನಿಂತಿತು. ಅತ್ತ ಅಗ್ನಿಜ್ವಾಲೆಯು ಬ್ರಹ್ಮಾಂಡಕಟಾಹವನ್ನೆಲ್ಲ ಬೆಳಗಿ ಉರಿದುಂಬಿಸಿತು. ಎತ್ತನೋಡಿದರೂ ಹೊಗೆ ಕಿಡಿ ಜ್ವಾಲೆಗಳೇ ಕಾಣುತ್ತಿದ್ದುವು. ಭುಗಿಭುಗಿಲ್ ಛಿಟಿಛಿಟಿಲ್ ಧಗಧಗಂ ಎಂಬ ಶಬ್ದವೇ ಕೇಳಿಸುತ್ತಿದ್ದಿತು. ಬೆಟ್ಟಗಳು ಸಿಡಿದುವು. ಸಮುದ್ರಗಳು ಕುದಿದುವು. ಭೂಮಿಯು ಬಿರಿದಿತು. ಪಾತಾಳದ ದಿಗ್ಗಜಕೂರ್ಮಶೇಷರುಗಳು ಕೈ ಕಾಲು ಬೆನ್ನು ಹೆಡೆಗಳನ್ನು ಕೊಡಹಿಕೊಂಡು ಭೂಮಿಯನ್ನು ನಡುಗಿಸಿದುವು. ಗಗನ ತಟದ ಮೇಘಗಳೆಲ್ಲ ಚುಯ್ಯನೆ ಸೀ

ದುಹೋದುವು. ಪಕ್ಷಿಗಳು ಪುರುಪುರನೆ ಉರಿದುಹೋದುವು. ಆನೆ ಸಿಹ್ಮ ಹುಲಿ ಕರಡಿ ಶರಭ ಮೊದಲಾದ ಮೃಗಗಳೆಲ್ಲ ಬೆಂದು ಕಿರುಚಾಡಿ ಸತ್ತುವು. ದನುಜ ದಿವಿಜ ಮನುಜಾದಿಗಳೆಲ್ಲರೂ ಬೆಂದು ಬಸವಳಿದು ನಿಶ್ಚೇತನರಾದರು. ಹರಿಬ್ರಹ್ಮರು ಹಾ! ಎಂದು ಮೊರೆಯಿಟ್ಟರು. ಶಿವನೇ ರಕ್ಷಿಸೆಂದು ಮನುಮುನಿಗಳು ಕೂಗಿದರು. ಆಗ ಪಾರ್ವತಿಯು ಇದೆಲ್ಲ ತನ್ನ ಅಪರಾಧದ ಫಲವೆಂದು ತಿಳಿದು, ಥಟ್ಟನೆ ಮುಚ್ಚಿದ್ದ ಕೈಗಳನ್ನು ತೆರೆದಳು. ಶಿವನ ಆನಂದಾಶ್ರುವು ಪಾರ್ವತಿಯ ಕೈಗಳಲ್ಲಿ ತುಂಬಿದ್ದು ಹತ್ತು ಬೆರಲುಗಳ ಮಾರ್ಗವಾಗಿಯೂ ಭೂಮಿಯಮೇಲೆ ಝಲ್ಲನೆಸುರಿದು ಹತ್ತುಹೊಳೆಗಳಾಯಿತು. ಹೆಜ್ಜೆಹೆಜ್ಜೆಗೆ ಸಾವಿರ ಹತ್ತುಸಾವಿರ ಲಕ್ಷಾನುಲಕ್ಷಭಾಗಗಳಾಗಿ ಭೂಲೋಕವನ್ನೆಲ್ಲ ವ್ಯಾಪಿಸಿ ಭೋರೆಂದು ಮೊರೆದು ಹರಿದಿತು ಇದರಿಂದ ಬೆಂಕಿಯೆಲ್ಲ ಆರಿಹೋಯಿತು. ಜಗತ್ತೆಲ್ಲ ಜಲಮಯವಾಯಿತು. ಎತ್ತ ನೋಡಿದರೂ ಸುಳಿ ನೊರೆ ತೆರೆಗಳಿಂದ ಕೂಡಿದ ಪ್ರವಾಹ, ಎಲ್ಲಿ ನೋಡಿದರೂ ಕೊಚ್ಚಿ ಬರುವ ಕಲ್ಲು ಗುಂಡುಗಳು ಕಾಣುವಂತಾದುವು. ಮಹಾಪ್ರಳಯಕಾಲದಲ್ಲಿ ಏಕಾರ್ಣವನಾಗುವಂತೆ ಲೋಕವೆಲ್ಲ ತೋರಿತು. ಅಷ್ಟಷ್ಟು ಉಳಿದಿದ್ದ ಸುರನರೋರಗರೆಲ್ಲ ನೀರಿನಲ್ಲಿ ಮುಳುಗಿ ಪ್ರಾಣಬಿಟ್ಟರು. ಹರಿಯು ಆಲದೆಲೆಯಮೇಲೆ ಮಲಗಿ ಮುಳುಗುತ್ತಲೂ ತೇಲುತ್ತಲೂ ಬಾಯಿಗೆ ಬಂದ ನೀರನ್ನು ಉಗುಳುತ್ತಲೂ, ಭಯದಿಂದ ಕಣ್ಣುಗುಡ್ಡೆಗಳನ್ನು ದಿಕ್ಕುದಿಕ್ಕಿಗೆ ತಿರುಗಿಸಿ ಕಂಪಿಸುತ್ತಲೂ ಕಾಲಯಾಪನೆ ಮಾಡುತ್ತಿದ್ದನು. ಈ ಮಹಾಪ್ರಳಯವನ್ನು ಕಂಡು ಶಂಕರಿಯು ಬೆರಗಾದಳು. ಜಗತ್ತಿಗೆ ನಾಶಪ್ರಾರಂಭವಾಯಿತೆಂದು ತಿಳಿದು, ಅದರ ಉದ್ಧಾರಕ್ಕಾಗಿ ಪರಶಿವನು ತನ್ನ ಜೆಡೆಯ ತುದಿಯನ್ನು ಹಿಡಿದು ಆ ಮಹಾಜಲಕ್ಕೆ ಅದ್ದಲು, ಬ್ರಹ್ಮಾಂಡವನ್ನೆಲ್ಲ ತುಂಬಿ ಥುಳುಕುತ್ತಿದ್ದ ನೀರು ಸುರ್ರನೆ ಸುರುಗಿ ಒಂದು ಮಣಿಯಂತೆ ಜಟಾಗ್ರದಲ್ಲಿ ನೆಲಸಿತು. ಹೀಗೆ ಗಂಗೆಯನ್ನು ಧರಿಸಿದ ಶಿವನು ಗಂಗಾಧರಲೀಲೆಯನ್ನು ಅನುಭವಿಸಿದನು. ಬಳಿಕ ಕರುಣದಿಂದ ಜಗತ್ತೆಲ್ಲ ಎಂದಿನಂತೆ ಉದ್ಭವಿಸಲಿ ಎಂದು ಅನುಗ್ರಹಿಸಿದನು. ಸುರನರೋರಗ ಯಕ್ಷ ರಾಕ್ಷಸಖಗಮೃಗಪಿಪೀಲಿಕಾದಿಗಳೆಲ್ಲವೂ ಜಗತ್ತಿನಲ್ಲಿ ತುಂಬಿ ತಮ್ಮ ತಮ್ಮ ಕಾರ್ಯದಲ್ಲಿ ತೊಡಗಿ

ದುವು. ಎಂದು ಚೆನ್ನಬಸವೇಶನು ಹೇಳಲು, ಸಿದ್ಧರಾಮೇಶನು ಕೇಳಿ, ಆಶ್ಚರ್ಯಪಟ್ಟು,– ಗುರುವೆ! ಈ ದೊಡ್ಡ ಮೂರು ಪ್ರಳಯಗಳಿಂದ ಲೋಕವೆಲ್ಲ ಅಳಿದುಹೋದಾಗ ಶಿವನು ಎಲ್ಲಿ ಹೇಗೆ ನಿಂತಿದ್ದನು ? ಎಂದು ಕೇಳಿದನು. ಚೆನ್ನಬಸವೇಶನು ಅದಕ್ಕೆ ನಕ್ಕು, ಎಲೆ ಸಿದ್ಧರಾಮನೇ ! ಆ ಸ್ವಾಮಿಯು ಹುಬ್ಬಿನ ಕೊನೆಯನ್ನು ಸ್ವಲ್ಪ ಅಲುಗಿಸಿದ ಮಾತ್ರದಿಂದಲೇ ಈ ಜಗತ್ತೆಲ್ಲವನ್ನೂ ಲಯಗೊಳಿಸಿ ಸೃಷ್ಟಿಸುವನು. ಅಂಥವನಿಗೆ ಇದಾವ ಮಹಾಶ್ಚರ್ಯ? ಅತ್ತಿಯ ಮರದಲ್ಲಿ ಕಾಯಿಗಳು ಕಚ್ಚಿರುವಂತೆ ಆ ಮಹಾದೇವನ ರೋಮಕೂಪಗಳಲ್ಲೆಲ್ಲ ಅನಂತಬ್ರಹ್ಮಾಂಡಗಳು ತುಂಬಿರುವುವು. ಮರದ ಹಣ್ಣುಗಳು ಕಳಿತು ಬಿದ್ದುಹೋದನಂತರ ಬರುವ ವರ್ಷಕ್ಕೆ ಅದರಂತೆಯೇ ಮತ್ತೆ ಬೇರೆ ಕಾಯಿಗಳು ಮೂಡಿ ಹೇಗೆ ತುಂಬಿಕೊಳ್ಳುವುವೋ ಹಾಗೆ ಕಾಲಕ್ರಮದಿಂದ ಅಳಿದ ಪ್ರಪಂಚವು ಮತ್ತೆ ಶಿವನ ಇಚ್ಛಾಮಾತ್ರದಿಂದುದ್ಭವಿಸುವುದು. ಶಿವನ ಲೀಲಾವಿಶೇಷಕ್ಕೆ ಇದಾವ ಘನವು ? ಅಂತಹ ತ್ರಿಪ್ರಳಯಗಳಲ್ಲೂ ಶಿವನು ಕತ್ತಲೆಯ ಮನೆಯಲ್ಲಿ ರತ್ನದೀಪವಿರುವಂತೆಯೂ, ಕಾಳ್ಗಿಚ್ಚು ಮುತ್ತಿರುವ ಕೊಳದಂತೆಯೂ, ಸಮುದ್ರವು ಸುತ್ತುವರಿದಿರುವ ಬಡಬಾಗ್ನಿಯಂತೆಯೂ ಅವುಗಳ ಬಾಧೆಗೆ ಸಿಲ್ಕದೆ, ಉಪವನದ ಚಂದ್ರಕಾಂತಶಿಲೆಯ ಜಗತಿಯಮೇಲೆ ಪಾರ್ವತೀಸಮೇತನಾಗಿ ಕುಳಿತು ನಲಿಯುತ್ತಿದ್ದನು. ಅವನ ಮಾಹಾತ್ಮ್ಯವನ್ನು ವರ್ಣಿಸುವುದಕ್ಕೆ ಯಾರಿಂದಾಗುವುದು ? ಎಂದು ಹೇಳಿದನೆಂಬಲ್ಲಿಗೆ ಆರನೇ ಅಧ್ಯಾಯವು ಸಂಪೂರ್ಣವು.

---

## ೭. ನೇ ಅಧ್ಯಾಯವು.

### ಅಂಧಕಾಸುರವೃತ್ತಾಂತವು.

ಎಲೆ ಸಿದ್ಧರಾಮೇಶನೆ, ಕೇಳು,– ಹಿರಣ್ಯಾಕ್ಷನೆಂಬ ಅಸುರನೊಬ್ಬನು ಪುತ್ರವರವನ್ನು ಪಡೆಯುವುದಕ್ಕಾಗಿ ಕೈಲಾಸಗಿರಿಯ ತಪ್ಪಲಿನಲ್ಲಿ ಶಿವನನ್ನು ಕುರಿತು ಘೋರತಪಸ್ಸನ್ನಾಚರಿಸುತ್ತಿದ್ದನು. ಪಾರ್ವತಿಯು ಕಣ್ಣನ್ನು ಮುಚ್ಚಲಾಗಿ ಅದರಿಂದ ಜನಿಸಿದ ಕತ್ತಲೆಯೇ ಶಿಶುರೂಪಾಂತು ಶಿವನ ಬಳಿಯಲ್ಲಿ ನಿಂತಿದ್ದಿತಷ್ಟೆ, ಆಮಗುವನ್ನೇ ಹಿರಣ್ಯಾಕ್ಷನಿ

ಗೆ ಕೊಡಬೇಕೆಂದು ಶಂಕರನು ಯೋಚಿಸಿ, ಪಾರ್ವತೀಸಮೇತನಾಗಿ ಆಶಿಶುವನ್ನು ಕರೆದುಕೊಂಡು ಕನಕಾಕ್ಷನಿದ್ದಲ್ಲಿಗೆ ಬಂದು ಕಾಣಿಸಿಕೊಂಡು ನಿನ್ನಿಷ್ಟಾರ್ಥವೇನೆಂದು ಕೇಳಿದನು. ರಕ್ಕಸನು ಕಣ್ದೆರೆದು ಎದ್ದು ಶಿವನಿಗೆ ನಮಸ್ಕರಿಸಿ, ದೇವದೇವೋತ್ತಮನೆ! ವಿಷ್ಣುಬ್ರಹ್ಮಾದಿಗಳನ್ನೆಲ್ಲ ತನ್ನ ಶಕ್ತಿಯಿಂದ ಗೆಲ್ಲುವ ಮಗನನ್ನು ನನಗೆ ಅನುಗ್ರಹಿಸಬೇಕು, ಎಂದು ಬೇಡಿದನು. ಆಗ ಶಂಕರನು ತನ್ನ ಬಳಿಯಲ್ಲಿ ನಿಂತಿದ್ದ ಶಿಶುವನ್ನು ಕನಕಾಕ್ಷನ ಮುಂಗಡೆಯಲ್ಲಿ ನಿಲ್ಲಿಸಿ, ಇದೋ ಅಂಧಕಾರರೂಪನಾಗಿರುವ ಈ ಮಗನು ನಿನ್ನಿಷ್ಟದಂತೆ ಮಹಾಪರಾಕ್ರಮದಿಂದ ಜಯಶೀಲನಾಗುವನು, ಪರಿಗ್ರಹಿಸು; ಎಂದು ಹೇಳಿ ಅನುಗ್ರಹಿಸಿ, ತನ್ನ ಸ್ಥಾನಕ್ಕೆ ತೆರಳಿದನು. ಕನಕಾಕ್ಷನು ಆ ಮಗುವನ್ನೆತ್ತಿ ತಬ್ಬಿ ಮುದ್ದಾಡಿ ಸಂತೋಷಗೊಂಡು, ತನ್ನ ಪಟ್ಟಣಕ್ಕೆ ಸುದ್ದಿಯನ್ನು ಕಳಿಸಿ, ಅಲಂಕಾರಗೊಳಿಸಿ, ಕಲಶ ಕನ್ನಡಿ ಆರತಿ ಮೊದಲಾದುವುಗಳನ್ನು ಹಿಡಿದ ಮುತ್ತೈದೆಯರಿಂದ ಇದಿರ್ಗೊಂಡು ವೈಭವದಿಂದ ಪುರಪ್ರವೇಶವನ್ನು ಮಾಡಿ, ಅರಮನೆಯಲ್ಲಿರುವ ತನ್ನ ಪತ್ನಿಯ ಹಸ್ತಕ್ಕೆ ವರಪುತ್ರನನ್ನು ಕೊಟ್ಟನು. ಆಕೆಯು ಕಂದನನ್ನು ಸಂಭ್ರಮದಿಂದೆತ್ತಿ ತೊಡೆಯ ಮೇಲೆ ಮಲಗಿಸಿ, ಹಾಲು ಚಿಮ್ಮುತ್ತಿರುವ ಮೊಲೆಯನ್ನುಣ್ಣಿಸಿ, ಮುದ್ದಾಡಿ "ತ್ರಿಬ್ರೀ" ಎಂದು ಪಾಡಿ, ಚಿನ್ನದ ತೊಟ್ಟಿಲಲ್ಲಿ ಮಲಗಿಸಿ ಜೋಗುಳವನ್ನು ಹೇಳಿ ಸಖಿಯರೊಡನೆ ತೂಗಿ, ಸಂತೋಷದಿಂದ ತನ್ನ ಪತಿಯ ಸಾಹಸವನ್ನು ನೆನೆನೆನೆದು ಕೊಂಡಾಡಿದಳು. ಮತ್ತು ಸತಿಪತಿಗಳು ಶುಭದಿವಸದಲ್ಲಿ ಗುರುವಾದ ಶುಕ್ರಾಚಾರ್ಯನ ನೇಮದಂತೆ ಶಿವನ ಬಾಯಿಂದ ಬಂದಿದ್ದ ನಾಮವನ್ನೇ ಅನುಸರಿಸಿ, "ಅಂಧಕಾಸುರ" ನೆಂದು ಮಗನಿಗೆ ನಾಮಕರಣ ಮಾಡಿದರು. ಆತನು ದೇವತೆಗಳ ಮಹಾಮೃತ್ಯುವು ವೃದ್ಧಿಗೊಳ್ಳುತ್ತಿರುವಂತೆಯೂ, ಪಾಪಸ್ವರೂಪವು ಬೆಳೆಯುತ್ತಿರುವಂತೆಯೂ, ಮಾಯೆಯ ಬೆಟ್ಟವು ದೊಡ್ಡದಾಗುತ್ತಿರುವಂತೆಯೂ ದಿನದಿನಕ್ಕೆ ಪ್ರವರ್ಧಮಾನನಾಗುತ್ತ ಬಂದನು. ಹೀಗಿರುತ್ತಿರುವಲ್ಲಿ ಈತನ ತಂದೆಯಾದ ಹಿರಣ್ಯಾಕ್ಷನೂ ಅವನ ಸಹೋದರನಾದ ಹಿರಣ್ಯಕಶಿಪುವೂ ವರಾಹ ನೃಸಿಂಹಾವತಾರವನ್ನು ಧರಿಸಿದ್ದ ಹರಿಯಿಂದ ಮೃತರಾಗಲಾಗಿ, ಅವರ ದುರ್ಗಗ

ಳಲ್ಲಿ ಅವರ ಅಣ್ಣತಮ್ಮಂದಿರ ಮಕ್ಕಳು ಮಿತ್ರರು ಮಂತ್ರಿಗಳು ದಳವಾಯಿಗಳು ಶೂರರು ಮೊದಲಾದವರುಗಳೆಲ್ಲ ವಾಸ ಮಾಡಿಕೊಂಡಿದ್ದರು. ಅವರೆಲ್ಲರನ್ನೂ ಅಂಧಕಾಸುರನ ಬಳಿಗೆ ಹೋಗಿ ಓಲೈಸಿಕೊಂಡಿರುವಂತೆ ಶುಕ್ರಾಚಾರ್ಯನು ಬೆಸಸಲಾಗಿ ಅದರಂತೆಯೇ ಅವರುಗಳು ಬಂದು ಅಂಧಾಸುರನಿಗೆ ರಾಕ್ಷಸರಾಜಪಟ್ಟವನ್ನು ಕಟ್ಟಿ ಕಾಣ್ಕೆಯಿತ್ತು ನಮಸ್ಕರಿಸಿ ಓಲೈಸಿಕೊಂಡಿದ್ದರು. ಇದರಿಂದ ಮದವೇರಿದ ಆನೆಯ ಕೈಗೆ ಆಯುಧವನ್ನು ಕೊಟ್ಟಂತೆಯೂ, ಹಸಿದ ಹೊಸಹಾವಿಗೆ ರೆಕ್ಕೆ ಮೂಡಿದಂತೆಯೂ ಕೋಪದಿಂದ ಆರ್ಭಟಿಸುವ ಹಿರಿಯಹುಲಿಗೆ ಧೈರ್ಯವು ಮೂಡಿದಂತೆಯೂ ಕತ್ತಲೆಗೆ ಕಾಠಿಣ್ಯವು ದೊರೆಕೊಂಡಂತೆಯೂ, ಮತ್ತಷ್ಟು ಸಹಾಯಕವಾಗಿ, ಈ ರಾಕ್ಷಸರಾಜನ ಶೌರ್ಯಸಾಹಸಬಲಗಳು ದಿನ ದಿನಕ್ಕೆ ಹೆಚ್ಚುತ್ತ ಬಂದುವು. ಭೂಮಿಯಮೇಲಿದ್ದ ಅನೇಕ ರಾಜರುಗಳ ಗಿರಿ ವನ ದುರ್ಗಾದಿಗಳನ್ನೆಲ್ಲ ತನ್ನಧೀನವಾಗಿಕೊಳ್ಳುತ್ತ ಬಂದನು. ಸಪ್ತದ್ವೀಪಸಪ್ತಸಮುದ್ರಾದಿಭೂಲೋಕವೆಲ್ಲ ತನ್ನಧೀನವಾದ ಬಳಿಕ ಸ್ವರ್ಗಲೋಕಕ್ಕೂ ದಾಳಿಯಿಟ್ಟನು. ಇಂದ್ರಾದಿದಿಕ್ಪಾಲಕರನ್ನು ಸದೆ ಬಡಿದು ಅವರವರ ಲೋಕದಿಂದ ಓಡಿಸಿದನು. ದೇವಾಂಗನೆಯರನ್ನೆಲ್ಲ ಸೆರೆ ಹಿಡಿಸಿ ತನ್ನ ಪಟ್ಟಣಕ್ಕೆ ಸಾಗಿಸಿದನು. ಕೊನೆಗೆ ಸತ್ಯಲೋಕ ವೈಕುಂಠಲೋಕಗಳಿಗೂ ನುಗ್ಗಿ ಬ್ರಹ್ಮವಿಷ್ಣುಗಳನ್ನೋಡಿಸಿದನು. ಅವರು ಹೆಂಡಿರುಗಳನ್ನು ಕಟ್ಟಿಕೊಂಡು ಕೈಲಾಸಪರ್ವತಕ್ಕೆ ಹೋಗಿ, ಶಿವನ ಮರೆಹೊಕ್ಕರು. ಇತ್ತ ಅಂಧಕಾಸುರನಿಗೆ ಚತುಸ್ಸಾಗರಮಧ್ಯದ ಭೂಮಿಯೆಲ್ಲ ಅಧೀನವೇ ಆಯಿತು. ಅವನಿಗಿದಿರಾಗುವವರು ಸ್ವರ್ಗಮರ್ತ್ಯಪಾತಾಳಗಳಲ್ಲಿ ಒಬ್ಬರೂ ಇಲ್ಲದಂತಾದರು. ಅವನ ಭುಜಪರಾಕ್ರಮವು ತ್ರಿಲೋಕವಲ್ಲೂ ಹರಡಿಕೊಂಡಿತು. ಕೀರ್ತಿಯು ದಿಙ್ಮಂಡಲವನ್ನೆಲ್ಲ ತುಂಬಿತು. ಇಂತಹ ಘನತೆಯಿಂದ ಮೆರೆಯುತ್ತಿದ್ದ ರಾಕ್ಷಸರಾಜನು ಒಂದು ದಿವಸ ತನ್ನ ಸುವರ್ಣಮಯವಾದ ರತ್ನಖಚಿತಸಿಂಹಾಸನದಲ್ಲಿ ಮೂರ್ತಿಗೊಂಡು ಒಡ್ಡೋಲಗದಲ್ಲಿರುವಾಗ, ನೀಲಗಿರಿಯಂತೆ ಸ್ಥೂಲರಾಗಿಯೂ, ಕೆವಿಮ್ಮಸೆ ಕೆಂಡಗಣ್ಣುಗಳಿಂದ ಭೀಕರರಾಗಿಯೂ, ಹುಬ್ಬುಗಳನ್ನು ಬಿಗಿದು ಕೋರೆದಾಡೆಗಳನ್ನು ಕಿರಿದು ಹೆಮ್ಮಾರಿಗಳಂತೆ ಕಾಣುತ್ತಲೂ, ಗುಂಜುರುಬಲೆ ಸಲಾ

ಕೆಸುರೋಮವು ದೊಡ್ಡ ಹೊಟ್ಟೆ ಕೊಬ್ಬಿದ ತೊಡೆ ಬಿರುದಿನ ಪೊಡೆಸು ಹೆಗ್ಗಲುಗಳಿಂದ ಮಹಾಕ್ರೂರರಾಗಿಯೂ, ತೋರುತ್ತಿರುವ ದೈತ್ಯರುಗಳು ಮಣಿ ಕಿರೀಟ ಕಂಕಣ ಕುಂಡಲ ಬಾಹುಪುರಗಳನ್ನು ಧರಿಸಿ, ಆಯುಧಗಳನ್ನು ಹಿಡಿದು, ಸಭೆಗೆ ಬಂದು ಮರ್ಯಾದಿಸಿ ಕುಳಿತುಕೊಂಡರು. ವಂದಿಗಳು ಅಂಧಕಾಸುರನ ಬಿರುದಾವಳಿಗಳನ್ನು ಹೊಗಳುತ್ತಿದ್ದರು. ನರ್ತಕಿಯರು ಕುಣಿಯುತ್ತಿದ್ದರು. ಸಖಿಯರು ಚಾಮರಗಳನ್ನು ಹಾಕುತ್ತಿದ್ದರು. ಇಂತಹ ಸಭೆಗೆ ನಾರದಮುನಿಯು ವೀಣಾಧ್ವನಿಯನ್ನು ಮಾಡುತ್ತ ಆಕಾಶಮಾರ್ಗದಿಂದಿಳಿದುಬಂದನು. ರಾಕ್ಷಸರಾಜನು ಪೀಠದಿಂದೆದ್ದು ಋಷಿವರನಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದು, ತನ್ನ ಪೀಠದಲ್ಲೇ ಕುಳ್ಳಿರಿಸಿಕೊಂಡು— ಆರ್ಯರೇ! ಎಷ್ಟೋ ಪುಣ್ಯಫಲದಿಂದ ಈ ದಿನ ತಮ್ಮ ದರ್ಶನವು ನಮಗೆ ಲಭಿಸಿತು; ಎಲ್ಲಿಂದ ಇಲ್ಲಿಗೆ ದಯೆಮಾಡಿಸಿದಿರಿ ? ಬಂದ ಕಾರ್ಯವೇನು ? ಎಂದು ಬೆಸಗೊಂಡನು. ನಾರದನು ಮಂದಹಾಸದಿಂದ— ರಾಕ್ಷಸೇಂದ್ರನೆ ! ನಾನು ತ್ರಿಲೋಕವನ್ನೂ ಸಂಚರಿಸಿಕೊಂಡು ಕೈಲಾಸಕ್ಕೆ ಹೋದೆನು. ನಿಮ್ಮಪ್ಪನನ್ನು ಕೊಂದು ಈಗ ನಿನ್ನಿಂದ ಪರಾಜಿತರಾದ ವಿಷ್ಣುವೂ ಬ್ರಹ್ಮೇಂದ್ರಾದಿಗಳೂ ಅಲ್ಲಿಗೆ ಬಂದು ನಿನ್ನ ಪರಾಕ್ರಮವನ್ನು ಕುರಿತು ಶಿವನೊಡನೆ ದೂರು ಹೇಳಿ, ನಿನ್ನ ಮೇಲೆ ಯುದ್ಧಕ್ಕೆ ಶಂಕರನನ್ನು ಹೊರಡಿಸಿರುವರು. ಆ ಸುದ್ದಿಯನ್ನು ತಿಳಿಸುವುದಕ್ಕಾಗಿ ನಾನಿಲ್ಲಿಗೆ ಬಂದೆನು; ಎಂದು ಹೇಳಲು, ರಕ್ಕಸನು ಕೇಳಿ, ಭುಜವು ಕುಣಿಯುವಂತೆ ಕೇಕೆ ಹಾಕಿ ನಕ್ಕು, ಶುಕ್ರಾಚಾರ್ಯನ ಮುಖವನ್ನು ನೋಡಿ, ಗುರುವೆ! ತ್ರಿಲೋಕವೂ ನಮ್ಮ ವಶವಾಗಿರುವುದೆಂದು ತಿಳಿದಿದ್ದೆ; ಆದರೆ ಇನ್ನಾರೋ? ಒಬ್ಬನು ಕೈಲಾಸದಲ್ಲಿ ಉಳಿದಿರುವನೆಂಬುದನ್ನು ನಾವು ತಿಳಿದಿರಲಿಲ್ಲ; ನೀವಾದರೂ ಇದುವರೆಗೂ ಹೇಳಬೇಡವೆ ? ಚೆನ್ನಾಯಿತು! ನಮ್ಮಪ್ಪನನ್ನು ಕೊಂದ ಹರಿಯನ್ನು ಮರೆಹಾಕಿಕೊಂಡು ನಮ್ಮನ್ನು ಜೈಸುವುದಕ್ಕಾಗಿ ಬರುವನೆಂಬ ಆ ಗಂಡುಗಲಿಯ ಹೆಸರೇನು ? ಮತ್ತೊಮ್ಮೆ ಹೇಳಿರಿ, ಎಂದು ಗರ್ವೋಕ್ತಿಯನ್ನಾಡಿ ಹೂಂಕರಿಸಿದನು. ಮತ್ತು ನಾರದನ ಕಡೆಗೆ ತಿರುಗಿ— ಋಷಿವರ್ಯರೆ! ಹಾಗಾದರೆ ಹರಿಬ್ರಹ್ಮಾದಿಗಳೆಲ್ಲ ಆ ಬೂದಿಬಡುಕನೊಡನೆ

ನಮ್ಮ ಮೇಲೆ ದೊಡ್ಡದಾಗಿ ದೂರು ಹೇಳಿಕೊಂಡರೊ? ಅವರ ಮಾತಿಗೆ ಮರುಳಾಗಿ ಆ ಅರೆಗಂಡುಸು ನಮ್ಮ ಮೇಲೆ ಯುದ್ಧಕ್ಕೆ ಬರುವನೊ? ಬರಲಿ; ಬರಲಿ; ಎಂದು ತಲೆಕುಣಿಸಿ, ಮೀಸೆಯನ್ನು ಮಾರ್ಯಾಡಿಸಿ ಕಳಿಸಿಕೊಟ್ಟನು. ಬಳಿಕ ಶತಮಾಯನೆಂಬ ಧಳವಾಯಿಯನ್ನು ಕರಸಿ, ಕುಂಭ ಶುಂಭ ನಿಶುಂಭ ಜಂಭ ಲಂಬ ಶಬಲ ಪ್ರಬಲ ಸುಬಲ ವಿಪುಳ ಚಪಳ ಕಪಿಳ ವೀರ ಘೋರ ಕ್ರೂರ ಧೀರ ಹುಂಡ ಮುಂಡ ಚಂಡಾಸುರಾದಿರಾಕ್ಷಸ ಪ್ರಮುಖರನ್ನೆಲ್ಲ ಅವರವರ ಸೇನೆಯೊಡನೆ ಕೂಡಿ ಬರುವಂತೆ ಆಜ್ಞಾಪಿಸು, ಜಯಯಾತ್ರೆಯ ಭೇರಿಯನ್ನು ಹೊಡಿಸು, ದೇವತೆಗಳ ಹುಟ್ಟನ್ನು ಈ ಬಾರಿ ನಿರ್ಮೂಲಗೊಳಿಸು, ಶಿವನ ಲೋಕಕ್ಕೆ ದಾಳಿಯಿಡಿಸು ಎಂದು ಆಜ್ಞಾಪಿಸಿದನು. ಅಲ್ಲಿ ಕುಳಿತಿದ್ದ ಅಂಧಕನ ಚಿಕ್ಕಪ್ಪನಾದ ಹಿರಣ್ಯಕಶಿಪುವಿನ ಮಗ ಪ್ರಹ್ಲಾದನು ಇದನ್ನು ಕೇಳಿ ಎದ್ದು— "ಅನುಜನೆ! ಇದೇನು ನಿನ್ನ ಸಾಹಸ? ಶಿವನೆಂದರೇನು? ನೀನೆಂದರೇನು? ಅವನ ಮೇಲೆ ನೀನು ಕೈ ಮಾಡುವುದೆಂದರೇನು? ಅವನಾರು? ನೀನಾರು? ಎಂಬುವನ್ನು ನೀನು ವಿಚಾರ ಮಾಡಿ ತಿಳಿ; ಶಂಕರನ ಕಣ್ಣನ್ನು ಪಾರ್ವತಿಯು ಮುಚ್ಚಲು, ಅದರಿಂದ ಹುಟ್ಟಿದ ಕತ್ತಲೆಯೇ ನೀನಾಗಿ ಶಿಶುರೂಪದಿಂದ ಶಿವನ ಬಳಿಯಲ್ಲಿ ಅಳುತ್ತ ನಿಂತಿದ್ದೆ; ನಿಮ್ಮ ತಂದೆ ಹಿರಣ್ಯಾಕ್ಷನು ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಪುತ್ರವರವನ್ನು ಬೇಡಲು, ನಿನ್ನನ್ನೇ ನಿಮ್ಮ ತಂದೆಯ ಕೈಗೆ ಒಪ್ಪಿಸಿದನು; ಈ ಸಂಗತಿಯು ನಿಜವೋ ಸುಳ್ಳೋ ಎಂಬುದನ್ನು ನಿಮ್ಮ ಗುರುವಿನ ಮುಖದಿಂದಲೇ ಕೇಳು; ತೋಳುಗಳು ಬಲಿತಮಾತ್ರದಿಂದ ಕೊಬ್ಬಿ ತಾಯನ್ನೇ ಮೋಹದಿಂದ ಆಲಿಂಗಿಸಲು ಪ್ರಯತ್ನಿಸುವವನಂತೆ ನೀನು ಜನಕನಾದ ಶಿವನ ಮೇಲೆಯೇ ಯುದ್ಧಕ್ಕೆ ಹೊರಡಬಹುದೆ? ಅದು ನಿನಗೆ ಶ್ರೇಯಸ್ಕರವಾಗುವುದೆ? ಮತ್ತು ಆತನೇನು ಸಾಮಾನ್ಯನೆ? ಉರುಲಿಂಗಾಕಾರದಿಂದ ಹರಿಬ್ರಹ್ಮರ ಕಲಹವನ್ನು ಅಡಗಿಸಿದನು; ಅಹಂಕಾರದಿಂದ ಮೆರೆಯುತ್ತಿದ್ದ ಬ್ರಹ್ಮನ ತಲೆಯನ್ನು ಚಿಗುಟಿದನು; ತನ್ನ ಅಗ್ನಿನೇತ್ರದಿಂದ ಕಾಲಕಾಮತ್ರಿಪುರಗಳನ್ನು ಸುಟ್ಟುಹಾಕಿದನು; ತನ್ನ ೭ ದಿನದ ಕಂದನಿಂದ ತಾರಕಾಸುರನನ್ನು ಕೊಲ್ಲಿಸಿದನು; ಜಲಂಧರಾಸುರನನ್ನು ಕಾಲಿನ ಬೆರ

ಲಿನಿಂದಬರೆದ ಚಕ್ರದಿಂದಲೇ ಕತ್ತರಿಸಿಹಾಕಿದನು. ನಪ್ಮ್ರಬ್ಬರತ್ರಂಪೆಗಳನ್ನು ಕೊಂದ ಹರಿಯು ವರಾಹನರಸಿಂಹಾಕಾರಗಳಾದ ಜಗತ್ಕಂಟಕನಾಗಿರಲು ಶಿವನು ಆ ಹರಿಯನ್ನು ಸೀಳಿ, ಸಿಹ್ಮನನ್ನು ತನ್ನ ಮಗನಿಂದ ಕೊಲ್ಲಿಸಿದನು. ಹೀಗೆ ಆತನಿಗೆ 'ದುಷ್ಟನಿಗ್ರಹ ಶಿಷ್ಟಪರಿಪಾಲನವೇ ಕಾರ್ಯವಾಗಿರುವುದು; ಅವನ ಇಚ್ಛಾಮಾತ್ರದಿಂದಲೇ ಅಗಣಿತಬ್ರಹ್ಮಾಂಡಗಳೂ ವಿಷ್ಣುಬ್ರಹ್ಮೇಂದ್ರಾದಿಗಳೂ ಹುಟ್ಟ ಅಳಿವರು. ಈ ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಗಳೆಲ್ಲ ಅವನ ಶರೀರನೇ; ಹೀಗಿರುವಲ್ಲಿ ಆ ಪರಮಾತ್ಮನೊಡನೆ ವಿರೋಧವನ್ನು ಕಟ್ಟಕೊಂಡರೆ ನೀನು ಬಾಳಬಹುವೆ? ಬೇಡ; ಅವನನ್ನು ನಾವು ಮರೆಹೊಕ್ಕರೆ ನಮಗೆ ಇಹಪರಸುಖಗಳೆರಡೂ ಲಭಿಸುವುವು" ಎಂದು ಹಿತೋಕ್ತಿಯನ್ನಾಡಲು, ಅಂಧಕಾಸುರನು ಕೇಳಿ, ಕಿಡಿಕಿಡಿಯಾಗಿ,– ಎಲೊ ಹೇಡಿಯೆ! ಇಷ್ಟೊಂದು ಕಣಿಯನ್ನು ಹೇಳುವುದಕ್ಕೆ ನಿನ್ನನ್ನು ಇಲ್ಲಿಗೆ ಕರೆದವರಾರು? ಬಾಯಿ ದೊಡ್ಡದಾಗಿದೆಯೆಂದು ಪುರಾಣವನ್ನು ಬಿಚ್ಚಿದೆಯೊ? ನೀನು ಹೇಳುವ ಹರಿಬ್ರಹ್ಮಾದಿಗಳೆಲ್ಲ ಈ ಅಂಧಕಾಸುರನ ಮುಂದೆ ಏನಾಗಿರುವರೆಂಬುದನ್ನು ನೀನು ಕಾಣೆಯಾ? ಈ ಭುವನಬ್ರಹ್ಮಾಂಡವನ್ನೆಲ್ಲ ನನ್ನ ಕಡೆಯ ಆಳುಗಳೇ ಆಳುತ್ತಿರುವಾಗ ಆ ಗೊರವಶಿವನೊಬ್ಬನು ನನ್ನನ್ನೇನುಮಾಡಬಲ್ಲನು? ಛೀ! ಖೂಳ; ಶೂರರಾದ ಮಹಾದೈತ್ಯರ ವಂಶದಲ್ಲಿ ಅಧಮನಾದ ನೀನೇಕೆ ಹುಟ್ಟಿದೆ? ನನ್ನ ಮುಂದೆ ನಿಲ್ಲಬೇಡ, ಹೋಗು; ಎಂದು ಗದರಿ, ತನ್ನ ಪಟುಭಟರ ಮುಖವನ್ನೆಲ್ಲ ಅವಲೋಕಿಸಿ, "ನೋಡಿದಿರಾ ಈ ಷಂಡನ ಮಾತನ್ನ! ಕೈಲಾಸಪರ್ವತದಲ್ಲಿ ಯಾವನೋ ಮೂರುಕಣ್ಣನವನಿರುವನಂತೆ! ಅವನು ಒಂದೆರಡು ಮೂರು ಊರುಗಳನ್ನು ಸುಟ್ಟವನಂತೆ! ಬಡಹಾರ್ವನ ತಲೆಯನ್ನು ಚಿವುಟಿದನಂತೆ! ನೀರಿನಲ್ಲಿದ್ದ ಒಂದು ಮೀನನ್ನು ಸೀಳಿದನಂತೆ! ಒಂದು ಹಂದಿಯನ್ನು ಕೊಂದನಂತೆ! ಅರೆಮಾನಿಸ (ನೃಸಿಹ್ಮ) ನನ್ನು ಕೊಂದನಂತೆ! ಬಡತಾರಕ ಮೂರ ಯಮರನ್ನು ನಾಶಗೊಳಿಸಿದನಂತೆ! ಅವನಿಗೆ ನಾವೆಲ್ಲ ತಲೆಬಾಗಿ ನಡೆದುಕೊಳ್ಳಬೇಕಂತೆ! ಈ ಕುನ್ನಿಯ ಕೆನ್ನೆಗೆ ತಟ್ಟಿರಿ; ಅವನಾವ ಮಹಾವೀರನು ನನ್ನ ಮುಂದೆ ನಿಂತು ಬದುಕಿ ಹೋಗುವನೊ? ನೋಡಿಕೊಳ್ಳು

ತ್ತೇನೆ; ಭೇರಿಯನ್ನು ಹೊಡೆಯಿರಿ" ಎಂದು ಹೇಳಿ, ಸಭೆಯಿಂದೆದ್ದನು. ಹೊರಗೆ ಧಂಧಣಧಳಂಧಳವೆಂದು ಭೇರಿಯ ಶಬ್ದವಾಯಿತು. ಆ ಶಬ್ದಕ್ಕೆ ಕುಲಾಚಲಗಳೆಲ್ಲ ನಡುಗಾಡಿದುವು. ಹಸ್ತ್ಯಶ್ವ ರಥ ಪದಾತಿ ಚತುರಂಗ ಸೈನ್ಯವೂ ಆಯತ್ತವಾಗಿ ನಿಂತಿತು. ಛತ್ರ ಚಾಮರ ಪತಾಕೆಗಳು ಇಂಬಿಲ್ಲದಂತೆ ತುಂಬಿದುವು. ಆಯುಧಗಳು ಜಳಪಿಸಿದುವು. ಧನುಸ್ಸುಗಳು ಠಂಕಾರಗೊಂಡುವು. ವೀರರ ಭುಜಾಸ್ಫಾಲನವು ಸಿಹ್ಮನಾದದೊಡನೆ ಕೂಡಿ ದೇವತೆಗಳ ಕಿವಿಗೆ ಅಪ್ಪಳಿಸಿದಂತೆ ಕೇಳಿ ಎದೆ ಬಿರಿಯಿಸಿದುವು. ಭೂಮಿಯೇ ಇದನ್ನು ಈಡಿತಳೀ ಎಂಬಂತೆ ತೋರುತ್ತಿದ್ದ ಅಗಣಿತವಾದ ದೈತ್ಯಸೇನೆಯ ಪದಹತಿಗೆ ಧರೆಯು ಅದುರುತ್ತಿದ್ದಿತು. ಒಂದು ಪದ್ಮ ಆನೆಗಳು, ೫ ಪದ್ಮ ಕುದುರೆಗಳು, ೧೦ ಪದ್ಮ ರಥಗಳು, ೨೦ ಪದ್ಮ ಕಾಲಾಳುಗಳನ್ನು ಒಬ್ಬೊಬ್ಬರ ವಶದಲ್ಲಿಟ್ಟುಕೊಂಡಿರುವ ಇಂತಹ ಸಾಮಂತ ರಾಕ್ಷಸರಾಜರು ಅಂಧಕಾಸುರನ ಕೈಕೆಳಗೆ ೮೮ ಕೋಟಿ ಇದ್ದರು. ಈ ಮಹಾಸೇನೆಯ ಜತೆಗೆ ರಾಣಿವಾಸದವರು, ಸಖಿಯರು, ಅಡಿಗೆಯವರು, ಪಲ್ಲಕ್ಕಿಯ ಹೊರುವವರು, ವಾರಾಂಗನೆಯರು, ಹೂವಾಡಿಗರು, ಹಡಪದವರು, ಮಡಿವಾಳರು, ಗಾಣಿಗರು, ಗೌಳಿಗರು, ನೇಗೆಯವರು, ಕುಂಬಾರರು, ಓಜಗಳು, ಕಮ್ಮಾರರು, ಚಿಂಪಿಗರು, ಮುಚ್ಚಿಗರು, ಅಕ್ಕಸಾಲಿಗರು, ಸಾಣೆಗಾರರು, ಕಸ ಗುಡಿಸುವವರು, ನೀರನ್ನು ಹೊರುವವರು, ಗುದ್ದಲಿ ಕೊಡಲಿ ಹಾರೆಯವರು, ದೋಸೆ ಕಜ್ಜಾಯ ಕಡುಬು ರೊಟ್ಟ ಉಪ್ಪಿನಕಾಯಿ ಚಕ್ಕುಲಿ ಕಡಲೆ ಪುರಿ ಕಬ್ಬು ಮೊದಲಾದುವುಗಳನ್ನು ಮಾರುವವರು, ಕವಿಗಳು, ವಿದ್ವಾಂಸರು, ಹಾಸ್ಯಗಾರರು, ವಾಗ್ಮಿಗಳು, ಜ್ಯೋತಿಷ್ಕರು, ನಟರು, ಗಾಯಕರು, ವಿಟರು, ವಿದೂಷಕರು ಮೊದಲಾದ ೬೪ ವಿದ್ಯೆಗಳನ್ನು ಬಲ್ಲವರೂ, ಬರವಣಿಗೆ, ವ್ಯಾಪಾರ, ಬೇಸಾಯ, ಆಯುಧಧಾರಣೆ ಗೋಪಾಲನ, ಯಾಚನೆ, ಎಂಬ ಆರುವಿಧದ ವೃತ್ತಿಗಳನ್ನು ಹಿಡಿದು ಜೀವಿಸುವವರೂ ಆದ ನಾಲ್ಕು ವರ್ಣದವರೂ ಹದಿನೆಂಟು ಜಾತಿಯವರೂ ನೂರೊಂದು ಕುಲದವರೂ ತಮ್ಮ ತಮ್ಮ ಉದ್ಯೋಗಗಳನ್ನು ಮಾಡಿಕೊಂಡು ದಂಡಿನೊಡನೆ ನಡೆಗೊಂಡರು. ಬಂಡಿಗಳ ಮೇಲೆ ಮದ್ದುಗಳು,

ಬಿಲ್ಲು ಬಾಣಗಳು, ಕವಚ ಕಿರೀಟಗಳು, ಜೀನುಹಲ್ಲಣಗಳು, ಕಡಿವಾಣಹಗ್ಗಗಳು, ಮೃಗ ಪಕ್ಷಿ ಪಶುಜಾತಿಯ ಮಾಂಸಗಳು, ನಾನಾಜಾತಿಯ ಮದ್ಯಗಳು, ಹುರಿಪೆಭಂಗಿ, ಜಾಯಿಕಾಯಿಪತ್ರೆ ಲವಂಗ ಕಸ್ತೂರಿ ಕೇಸರ ಪಚ್ಚಕರ್ಪೂರಗಳನ್ನು ಹಾಕಿ ಅರೆದ ಗುಳಿಗೆಗಳು, ಮೊದಲಾದ ಸಂಬಾರಗಳನ್ನು ಹೇರಿಕೊಂಡು ಹೋಗುತ್ತಿದ್ದರು. ಚಾಪೆಗಳು ಗೂತಾರಗಳು ದವಸಗಳು ಮೊದಲಾದ ಪರಿಕರಗಳನ್ನು ಆನೆಗಳು ಒಂಟೆಗಳು ಹೊರುತ್ತಿದ್ದುವು. ಮುಂಗಡೆಯ ಆಳುಗಳು ಮರಗಳನ್ನು ತರಿದು ಹಳ್ಳ ಕೊಳ್ಳಗಳನ್ನು ಮುಚ್ಚಿ ಮಾರ್ಗಗಳನ್ನು ಸರಿಪಡಿಸಿಕೊಂಡು ಹೋಗುತ್ತಿದ್ದರು. ಇಂಥ ಮಹಾಸೇನೆಯು ಮೂರು ಜಾವದವರೆಗೂ ನಡೆದು, ಅಲ್ಲಿಗೆ ಬೀಡಬಿಟ್ಟು ಭೋಜನಗೊಂಡು ಸುಖಶಯನದಿಂದ ಮಾರ್ಗಾಯಾಸವನ್ನು ಪರಿಹರಿಸಿಕೊಂಡು ಬೆಳಗಾದಕೂಡಲೇ ಎದ್ದು ಮುಂದೆ ನಡೆಯುತ್ತ ಕೈಲಾಸದ ಕಡೆಗೆ ಸಾಗುತ್ತಲಿದ್ದಿತು. ಎಂಬಲ್ಲಿಗೆ ೭ ನೇ ಅಧ್ಯಾಯವು ಸಂಪೂರ್ಣವು.

---

## ೮ ನೇ ಅಧ್ಯಾಯವು.

### ಅಂಧಕಸಂಹಾರಯಾತ್ರೆಯು.

ಎಲೆ ಸಿದ್ಧರಾಮೇಶನೆ! ಅಂಧಕಾಸುರನು ಶಿವಲೋಕದ ಎಲ್ಲೆಯನ್ನು ಸೇರಿದಕೂಡಲೇ ತನ್ನ ಕಡೆಯ ಬುದ್ಧಿವಂತನಾದ ಚಾರನೊಬ್ಬನನ್ನು ಕರೆದು, ನೀನು ಶಿವನ ಬಳಿಗೆ ಹೋಗಿ, ನಮ್ಮ ಶತ್ರುವಾದ ವಿಷ್ಣುವನ್ನು ಬಿಟ್ಟುಕೊಟ್ಟು ಬಾಳುವನೋ, ಅಥವಾ ಯುದ್ಧಕ್ಕೆ ನಿಲ್ಲುವನೋ ಎಂಬುದನ್ನು ಕೇಳಿ ತಿಳಿದುಕೊಂಡುಬಾರೆಂದು ಹೇಳಿಕಳಿಸಿದನು. ಆತನು "ಅಪ್ಪಣೆ" ಯೆಂದು ಹೇಳಿ ಕುದುರೆಯನ್ನೇರಿ ವಾಯುವೇಗದಿಂದ ಕೈಲಾಸಪುರಕ್ಕೆ ಹೋಗಿ, ಅರಮನೆಯ ಬಾಗಿಲಲ್ಲಿ ನಿಂತು, ತಮ್ಮ ರಾಜನ ಬಿರುದಾವಳಿಗಳನ್ನು ಹೇಳಿಕೊಂಡು, ತಾನು ಆತನ ಕಡೆಯ ದೂತನೆಂದು ತಿಳಿಸಲು, ಶಿವನಪ್ಪಣೆಯಮೇರೆ ದ್ವಾರಪಾಲಕನು ಈತನನ್ನು ಒಳಗೆ ಬಿಟ್ಟನು. ಚಾರನು ಶಂಕರನಿಗೆ ವಂದಿಸಿ,— ರಾಕ್ಷಸಾಧಿರಾಜನಾದ ಅಂಧಕಾಸುರಮಹಾರಾಜನು ದಿಗ್ವಿಜಯಕ್ಕಾಗಿ ಹೊರಟಿರುವನು, ಅವ

ನ ನೇನಾಗಮನಮಾತ್ರದಿಂದಲೇ ಭೂಸಮುದ್ರಪರ್ವತವನಾದಿಗಳೆಲ್ಲ ಕಂಪಿಸಿ ಬಣಗಿ ಧೂಳಿಯಾಗಿ ಉರಿದುಹೋಗಿರುವುವು. ದಿಗ್ಗಜಕೂರ್ಮಶೇಷಾದಿಗಳು ಕೂಡ ತಲೆಬಗ್ಗಿಸಿದುವು. ಆ ನಮ್ಮ ಪ್ರಭುವಿಗೆ ವೈರಿಯಾದ ವಿಷ್ಣುವನ್ನು ನೀನು ಮರೆಹಾಕಿಕೊಂಡಿರುವುದರಿಂದ ನಿನ್ನನ್ನೂ ಜೈಸುವುದಕ್ಕಾಗಿ ಬರುತ್ತಿರುವನು. ನೀನು ವಿನಯದಿಂದ ಆ ಹರಿಯನ್ನು ಬಿಟ್ಟುಕೊಡುವೆಯೊ ? ಯುದ್ಧಕ್ಕೆ ನಿಲ್ಲುವೆಯೊ? ಎಂಬುದನ್ನು ಕೇಳಿ ತಿಳಿದುಕೊಂಡು ಬರುವುದಕ್ಕಾಗಿ ನನ್ನನ್ನು ಕಳಿಸಿಕೊಟ್ಟಿರುವನು ಎಂದು ವಿಜ್ಞಾಪಿಸಿದನು. ಇದನ್ನು ಕೇಳಿ ಹರಿಬ್ರಹ್ಮರ ಎದೆಯು ನಡುಗಿತು. ನಂದೀಶವೀರೇಶ್ವರಾದಿಗಳು ಕೇಳಿ ಕಿಡಿಕಿಡಿಯಾಗಿ “ಇವನಾರು ಕುನ್ನಿ ? ಬಗುಳುವ ಇವನ ನಾಲಿಗೆಯನ್ನು ಸೀಳಿ ಕೆರುಳನ್ನು ಬಗಿದು ಕಾಲಲ್ಲಿ ಹೊಸಗಿರಿ ” ಎಂದು ಘುಡುಘುಡಿಸುತ್ತ ಎದ್ದು ಗರ್ಜಿಸಿದರು. ಆಗ ಶಿವನು– ಹೋ ಹೋ ನಿಲ್ಲಿರಿ; ಹೇಳಿದಂತೆ ಕೇಳಿ ನಡೆಯುವ ಬಂಟನಮೇಲೆ ನಿಮಗೇಕೆ ಸಾಹಸ ? ಅವನನ್ನು ಕೊಲ್ಲಬೇಡಿರಿ, ಎಂದು ತಡೆದು, ಬಳಿಕ ಚಾರನನ್ನು ಕುರಿತು– ಎಲೊ ! ಹರಿಯೆತ್ತ ? ನಿಮ್ಮೊಡೆಯನೆತ್ತ ? ಅವನಿಗೆಷ್ಟು ಅಹಂಕಾರ ? ಧೈರ್ಯವಿದ್ದರೆ ಅವನನ್ನೇ ಯುದ್ಧಕ್ಕೆ ಬರ ಹೇಳು, ಹೋಗು, ಎಂದು ಹೇಳಿ ಕಳಿಸಿದನು ಭೃತ್ಯನು ಬಂದು ರಾಕ್ಷಸರಾಜನೊಡನೆ ನಡೆದ ಸಂಗತಿಯನ್ನೆಲ್ಲ ಬಿನ್ನೈಸಿದನು. ಇದನ್ನು ಕೇಳಿ ಅಂಧಕನ ರಕ್ತವು ಕಾದು ಹೋಯಿತು. ಕಣ್ಣಿನಿಂದ ಕಿಡಿಗಳು ಸುರಿದುವು, ಕೈಲಾಸಗಿರಿಯನ್ನು ನಿಮಿಷಮಾತ್ರದಲ್ಲಿ ಸೂರೆಗೊಳ್ಳದೆ ಬಿಡುವೆನೆ? ಎಂದು ಗರ್ಜಿಸಿ, ತನ್ನ ಸೇನೆಗೆ ಹೊರಡಲಪ್ಪಣೆ ಕೊಟ್ಟನು. ಹಗಲು ರಾತ್ರಿಯೆನ್ನದೆ ಮಹಾಸೈನ್ಯವು ನಡೆತರುತ್ತಿದ್ದಿತು. ಅಷ್ಟರಲ್ಲಿ ಅಂಧಕನ ಹಾವಳಿಯಿಂದ ಸೂರೆಹೋದ ರಾಜ್ಯದ ಜನಗಳು ಓಡಿಬಂದು, ಶಿವನರಮನೆಯ ಬಾಗಿಲಲ್ಲಿ ನಿಂತು ಗೋಳಿಡುತ್ತಿದ್ದರು. ಅದನ್ನು ಶಿವನು ಕೇಳಿ ರಕ್ಕಸನಮೇಲೆ ಕೋಪಗೊಂಡು, ಅವನ ವಧೆಗಾಗಿ ಸಕಲ ದೇವಸೇನೆಯೂ ಸಿದ್ಧವಾಗಲಿ ಎಂದು ನಂದೀಶನೊಡನೆ ಅಪ್ಪಣೆ ಮಾಡಿದನು. ಅದರಂತೆಯೇ ನಂದೀಶನು ಸಾರಿಸಲು, ಸಿದ್ಧವಿದ್ಯಾಧರ ಗರುಡ ಗಂಧರ್ವ ಯಕ್ಷ ಭೂತ ಪಿಶಾಚ ಸಾಧ್ಯ ಗುಹ್ಯಕ ವಸು ಮಯೂರೋರಗ

ದಿಕ್ಪಾಲ ನವಗ್ರಹ ಮನು ಮುನಿ ಮೊದಲಾದವರೆಲ್ಲರೂ ಸನ್ನಾಹಗೊಂಡು ನಿಂತರು. ಅನಂತಬ್ರಹ್ಮರು ಅಗಣಿತವಿಷ್ಣುಗಳು ತಮ್ಮ ತಮ್ಮ ವಾಹನವನ್ನೇರಿ ಸಿದ್ಧರಾದರು. ವೀರೇಶ ಗಣೇಶ ಕುಮಾರ ನಂದಿ ಭೈರವ ಭೃಂಗೀಶರುಗಳು ತಮ್ಮ ತಮ್ಮ ಬಲದೊಡನೆ ಕೂಡಿ ಅಣಿಯಾದರು. ಕ್ರೂರಾಸ್ಯ ವಜ್ರದಂಷ್ಟ್ರ ಅನಿಲವೇಗ ಮೊದಲಾದ ಅಸಂಖ್ಯಾತ ರುದ್ರಗಣವೂ, ಘಂಟಾಕರ್ಣ ಧೂಮಾಂಗ ವಿರೂಪಾಕ್ಷ ವಿಕಟಾಂಗ ಮೊದಲಾದ ಅಪರಿಮಿತಪ್ರಮಥಗಣವೂ, ಆಯತ್ತವಾಗಿ ನಿಂತಿತು. ಎಡಗಡೆಯಲ್ಲಿ ಪಾರ್ವತಿಯು ಸಕಲ ಶಕ್ತಿಗಣದೊಡನೆ ಕೂಡಿ ಸಿಂಹವಾಹಿನಿಯಾಗಿ ಸಜ್ಜುಗೊಂಡಳು. ಸಪ್ತರ್ಷಿಗಳು ಯೋಗಾಚಾರ್ಯರುಗಳು ಬಲಗಡೆಯಲ್ಲಿ ಸನ್ನದ್ಧರಾದರು. ಮುಂದೆ ವೇದಪುರುಷರು ಉದ್ಘೋಷಿಸುತ್ತಿದ್ದರು. ಆಗ ಶಂಕರನು ಮಹಾವೃಷಭನನ್ನೇರಿ ಮಧ್ಯದಲ್ಲಿ ವಿರಾಜಿಸುತ್ತಿದ್ದನು. ಛತ್ರಚಾಮರಗಳ ಉಪಚಾರವು ನಡೆಯುತ್ತಿದ್ದಿತು. ಬೀರದಮ್ಮಟೆ, ಕಹಳೆ, ದುಂದುಭಿಗಳು ಮಹಾಶಬ್ದಗೊಂಡುವು. ಶಿವನಪ್ಪಣೆಯಾದೊಡನೆ ಸೇನೆಯು ನಡೆಗೊಂಡಿತು. ದುರ್ಗಗಳನ್ನಿಳಿದು ಬೀಡನ್ನು ಬಿಟ್ಟಿತು. ಮಳೆಯ ಹನಿಯನ್ನೆಣಿಸಿದರೂ ಎಣಿಸಬಹುದು, ನಕ್ಷತ್ರಗಳನ್ನು ಗಣಿಸಿದರೂ ಗಣಿಸಬಹುದು, ಈ ಮಹಾಸೈನ್ಯವನ್ನು ಮಾತ್ರ ಶಿವನ ಹೊರತ್ತು ಮತ್ತಿನ್ನಾರೂ ಲೆಕ್ಕವಿಡಲಾರರೆಂಬಂತೆ ಅಪರಿಮಿತವಾಗಿದ್ದಿತು. ಇಂತಹ ಶಿವಸೈನ್ಯವು ಬರುತ್ತಿರುವುದೆಂಬ ವಾರ್ತೆಯನ್ನು ಕೇಳಿ ರಾಕ್ಷಸಸೈನ್ಯವೂ ಬೇಗಬೇಗನೆ ಇದಿರಾಗಿ ಹೋಯಿತು. ಉಭಯಸೇನೆಯೂ ಒಂದನ್ನೊಂದು ಸಂಧಿಸಿದುವು. ಚೂಣಿಯವರು ಒಬ್ಬರನ್ನೊಬ್ಬರು ನೋಡಿ ತೋಳ್ತೊಡೆಗಳನ್ನು ತಟ್ಟಿದರು. ವೀರನಾದವು ವಿಜೃಂಭಿಸಿತು. ಕೈ ಕೈ ಮಸಗಿತು. ಬಿಲ್ಲುಗಾರರು ಬರಸೆಳೆದು ಬಾಣಗಳನ್ನು ಬಿಡುತ್ತಲೂ, ಕೈದುಗಾರರು ಕತ್ತಿಯನ್ನು ಜಳಪಿಸಿ ತಿರುತಿರುಗಿಸಿ ಕಡಿಯುತ್ತಲೂ, ಮುದ್ಗರ ಕುಂತ ಮುಸಲಾದಿಆಯುಧದವರು ನದೆಬಡಿಯುತ್ತಲೂ, ರಾವುತರು ವಾಘೆಯನ್ನೆಳೆದು ಕುದುರೆಗಳನ್ನು ಸರಿಸಿ, ಭಲ್ಲೆಗಳಿಂದಿರಿದು, ಕತ್ತಿಗಳಿಂದ ಸೀಳಿ ತಲೆಗಳನ್ನು ಹಾರಿಸುತ್ತಲೂ, ಮಾವುತರು ಕಾಲಿನಿಂದ ನಿಮಾಟ, ಅಂಕುಶದಿಂದಿರಿದು ಪ್ರತಿಸೈ

ನ್ಯದಲ್ಲಿ ತಮ್ಮಾನೆಗಳನ್ನು ನುಗ್ಗಿಸಿ, ಇದಿರಾನೆಯನ್ನು ಒತ್ತರಿಸಿ, ಮೇಲಣ ಮಾವುತನನ್ನು ಕೆಡಹಿಸಿ, ಕಾಲ್ಗೆ ಸಿಕ್ಕಿದವರನ್ನು ಹೊಸಗಿಸಿ, ಮಗ್ಗುಲಿಗೆ ಬಂದವರನ್ನು ಸುಂಡಿಲಿನಿಂ ಹಿಡಿಸಿ ಬಿಸುಡಿಸಿ, ಹಿಂದೆ ಬಂದವರನ್ನು ಬಾಲದಿಂ ಝಾಡಿಸಿ ಮಲಗಿಸಿ, ಲಯಗೊಳಿಸುತ್ತಲೂ, ರಥಿಕರು ಮುಂಗಡೆಗೆ ರಥಗಳನ್ನು ಸರಿಸಿ ಬಾಣವರ್ಷವನ್ನು ಕರೆದು ಸಿಂಹನಾದ ಮಾಡಿ ಏಟುಏಟಿಗೆ ಅನಂತಸೈನ್ಯವನ್ನು ಆಹುತಿಗೊಳ್ಳುತ್ತಲೂ ಇದ್ದರು. ಗಿರಿಗಿರಿಗಳು ಸೆಣಸಾಡಿ ನುಚ್ಚುನೂರಾಗಿ ಹರಡಿದಂತೆ ರುಂಡಮುಂಡಾದಿಗಳು ರಣಾಂಗಣದಲ್ಲಿ ಚೆಲ್ಲಾಡಿದುವು. ರಕ್ತವು ಹರಿದಿತು. ಅಷ್ಟರಲ್ಲಿ ಸಂಧ್ಯಾಕಾಲವಾಗಲು ಸೂರ್ಯನು ಅಸ್ತಗೊಂಡನು. ತಾವರೆಗಳು ಮೊಗ್ಗಾದುವು. ನೈದಿಲುಗಳು ಅರಲಿದುವು. ನಕ್ಷತ್ರಗಳು ಮಿರುಗಿದುವು. ನಿಶಾಂಗನೆಯು ಶಿವಸೈನ್ಯಕ್ಕೆ ವಿದ್ಯುಚ್ಛಕ್ತಿಯ ದೀಪಗಳನ್ನಿಟ್ಟು ಬೆಳಕುಗೊಳಿಸಿ, ಈ ರೂಪವಾದ ಸೇವೆಯಿಂದ ಶಿವನನುಗ್ರಹಕ್ಕೆ ಪಾತ್ರಳಾಗಬೇಕೆಂದು ಯೋಚಿಸಿ ರಚಿಸಿದಂತೆ ಅಂತರಿಕ್ಷದ ನಕ್ಷತ್ರರಾಶಿಗಳು ತೋರುತ್ತಿದ್ದುವು. ಎರಡು ಸೇನೆಯೂ ತಮ್ಮ ತಮ್ಮ ದಳವತಿಗಳ ಆಜ್ಞೆಯಮೇರೆ ಯುದ್ಧವನ್ನು ಬಿಟ್ಟು ಅಲ್ಲಲ್ಲೇ ಬೀಡನ್ನು ಬಿಟ್ಟಿತು. ಆನೆ ಕುದುರೆಗಳ ಪಕ್ಷರಕ್ಷೆಗಳನ್ನು ಕಳೆದು ಗೂಟಗಳನ್ನು ಹೊಡೆದು ಕಟ್ಟಿದರು. ರಥದ ಕುದುರೆಗಳನ್ನು ಬಿಚ್ಚಿದರು. ನೀರನ್ನು ಕುಡಿಸಿದರು. ನೇವನ್ನು ಹಾಕಿದರು. ಧನುಸ್ಸಿನ ಸಿಂಜಿನಿಯನ್ನು ಇಳಿಸಿದರು. ಲೋಹಕವಚಟೊಪ್ಪಿಗೆಗಳನ್ನು ಕಳೆದರು. ಗಾಯಗಳಿಗೆ ಪಟ್ಟಿಯನ್ನು ಅಂಟಿಸಿದರು. ಮುರಿದ ಮೂಳೆಗಳನ್ನು ಕಟ್ಟಿದರು. ಮದ್ದುಗಳನ್ನು ಕುಡಿದರು. ಗುಡಾರಗಳಲ್ಲಿ ದೀಪಗಳು ಮಿನುಗುತ್ತಿದ್ದುವು. ಭೂಮಿಯಷ್ಟಗಲಕ್ಕೂ ಎರಡು ಸೈನ್ಯಗಳೂ ಹರಡಿಕೊಂಡು ಇಳಿದಿದ್ದುವು. ಶಿವನು ತನ್ನ ಸೈನ್ಯದ ಇರುಳುಗಾವಲಿಗೆ ಎಂಟುಕಡೆಗೂ ದಿಕ್ಪಾಲಕರನ್ನು ಅವರ ಸೇನಾಸಮೇತವಾಗಿ ನಿಯಮಿಸಿದನು. ಅವರೊಳಗೆ ಪ್ರಮಥಸೇನೆಯು ಪ್ರಾಕಾರದಂತೆ ಆವರಿಸಿದ್ದಿತು. ಶಿವನ ಎಡಬಲಗಳಲ್ಲಿ ಹರಿಬ್ರಹ್ಮರ ಸೇನೆಯು ನಿಂತಿತು. ಶಂಕರನು ಎಲ್ಲ ಸೇನೆಯ ಒಟ್ಟುಗಾವಲನ್ನು ಕಾಲಭೈರವನಿಗೆ ವಹಿಸಿದನು. ಷಣ್ಮುಖನಿಗೆ ಸೇನಾಧಿಪತ್ಯವನ್ನು

ಕೊಟ್ಟನು. ವೀರಭದ್ರೇಶನಿಗೆ ಇತರರವೇಲಿಲ್ಲ ಯಜಮಾನಿಕೆಯನ್ನು ಕೊಟ್ಟನು ಅತ್ತ ರಾಕ್ಷಸಸೇನೆಯಲ್ಲಿ ಪಟ್ಟಗಾವಲು ಜಂಭಾಸುರನಿಗೂ, ಶತಮಾಯನಿಗೆ ಸೇನಾಪತಿತ್ವವೂ, ಉಳಿದ ಯಜಮಾನಿಕೆಯು ಶುಂಭಾಸುರನಿಗೂ ಅಂಧಕಾಸುರನಿಂದ ಕೊಡಲ್ಪಟ್ಟಿತು. ನಾಳೇ ದಿನ ದೊಡ್ಡ ಯುದ್ಧವಾಗುವುದೆಂದು ಎರಡುಕಡೆಯವರೂ ತಮ್ಮ ತಮ್ಮ ಸೇನೆಯಲ್ಲಿ ಸಾರಿದರು. ಎಲ್ಲರೂ ಉಂಡು ನಿದ್ರಾಗತರಾದರು. ಬಳಿಕ ಬೆಳಗಿನ ಕೋಳಿಯು ಕೂಗಿತು. ಉಭಯ ಸೇನೆಯ ಪ್ರತಾಪಾಗ್ನಿಯು ಈ ದಿನ ಇಷ್ಟು ಮಟ್ಟಿಗೆ ಪ್ರಜ್ವಲಿಸುವುದೆಂದು ಕಾಲಪುರುಷನು ಜಗತ್ತಿಗೆ ಸೂಚಿಸುವಂತೆ ಮೂಡಣದಿಕ್ಕಿನಲ್ಲಿ ಕೆಂಪು ಮೂಡಿತು. ತಾವರೆಗಳು ಅರಳಿದುವು. ಸೂರ್ಯನು ಉದಿಸಿದನು. ಕಹಳೆಗಳು ಭೇರಿಗಳು ಧ್ವನಿಗೈದುವು. ಎಲ್ಲರೂ ಎದ್ದರು. ನಿತ್ಯಕ್ರಿಯೆಗಳನ್ನು ತೀರಿಸಿದರು. ತಮ್ಮ ತಮ್ಮ ವಾಹನಗಳನ್ನು ಅಣಿಮಾಡಿಕೊಂಡರು. ಸೇನಾನಿಯು ಅಪ್ಪಣೆಯಮೇಲೆ ಹತ್ತಿನಿಂತರು. ರಕ್ಕಸನ ದಂಡೂ ಸಿದ್ಧವಾಯಿತು. ಆನೆಗಳು ಕುದುರೆಗಳು ತಮ್ಮತಮ್ಮ ನೆಳಲನ್ನೇ ಪ್ರತಿಗಜ ತುರಗಗಳೆಂದು ತಿಳಿದು, ಹೂಂಕರಿಸಿ ಘಾತಿಸುತ್ತಿದ್ದುವು. ವೀರರು ಶೌರ್ಯೋದ್ರೇಕದಿಂದ ಗರ್ಜಿಸುತ್ತಿದ್ದರು. ಅತ್ತ ಅಂಧಕಾಸುರನು ಸಜ್ಜಾಗಿ ನಿಂತು, ತನ್ನ ಬಲದಲ್ಲಿರುವ ಶುಕ್ರಾಚಾರ್ಯನನ್ನು ಕುರಿತು,– ಗುರುವೆ! ಇದಿರುಪಕ್ಷದಲ್ಲಿ ನಿಂತಿರುವ ದೇವಪ್ರಮುಖರು ಯಾರು ಯಾರೆಂಬುದನ್ನು ವಿವರಿಸಿ ತಿಳಿಸಿಕೊಡು, ಎಂದು ಬಿನ್ನೈಸಲು, ಶುಕ್ರಾಚಾರ್ಯನು–ಅದೋ ಸಾವಿರ ಕಣ್ಣುಗಳುಳ್ಳ ಕೂಡಿ ವಜ್ರಾಯುಧವನ್ನು ಹಿಡಿದು ಬಿಳಿಯಾನೆಯಮೇಲೆ ಕುಳಿತಿರುವನೇ ದೇವೇಂದ್ರನು; ಹಂಸವನ್ನೇರಿ ನಾಲ್ಕು ಮುಖಗಳಿಂದ ಕೂಡಿರುವವನೇ ಬ್ರಹ್ಮನು; ಅವನ ಪಕ್ಕಗಳಲ್ಲಿರುವವರೇ ಉಳಿದ ಎಂಟುಮಂದಿ ಬ್ರಹ್ಮರು; ಗರುಡನನ್ನೇರಿ ನಾಲ್ಕು ಕೈಗಳಲ್ಲಿ ಶಂಖ ಚಕ್ರ ಗದಾಶಾರ್ಙಗಳನ್ನು ಹಿಡಿದು ಪೀತಾಂಬರಧಾರಿಯಾಗಿ ಕಪ್ಪುಬಣ್ಣದಿಂದೊಪ್ಪುತ್ತಿರುವವನೇ ಹರಿಯು; ನವಿಲನ್ನೇರಿ ಆರು ಮುಖಗಳನ್ನು ಹೊಂದಿ ಶಕ್ತ್ಯಾಯುಧವನ್ನು ಹಿಡಿದಿರುವವನೇ ಏಳು ದಿನದ ವಯಸ್ಸಿನಲ್ಲಿ ಲೋಕಭೀಕರನಾದ ತಾರಕಾಸುರನನ್ನು ಕೊಂದ ಲೋಕೈಕವೀರನಾದ

ಕುಮಾರಸ್ವಾಮಿಯು; ಈತನೇ ಈ ಸಕಲ ದೇವಸೇನೆಗೂ ದಳಪತಿಯು; ಅದೋ ಖಡ್ಗ ಖೇಟ ಸಬಳ ಫಲಕ ಮೊದಲಾದ ಮೂವತ್ತೆರಡು ಆಯುಧಗಳನ್ನು ಹಿಡಿದು ವೀರರಸವೇ ಮೂರ್ತಿವೆತ್ತಂತೆ ನಿಂತು ತೋರುತ್ತಿರುವವನೇ ಶಿವನ ಕೋಪಾಗ್ನಿಯಿಂದುದಿಸಿದ ವೀರೇಶನು; ಈತನೇ ನೃಸಿಹ್ಮ ಭೀಮ ವಿಕ್ರಮ ವ್ಯಾಳ ಪಂಚಮೇಢ್ರ ಮೊದಲಾದವರನ್ನು ಜೈಸಿದ ಮಹಾಶೂರನು; ಅತ್ತ ನಿಂತಿರುವವರನ್ನು ನೋಡು— ಮುಳಿದರೆ ಅನಂತಬ್ರಹ್ಮಾಂಡವನ್ನೆಲ್ಲ ಸುಟ್ಟು ಬೂದಿ ಮಾಡುವ, ಸಮುದ್ರಗಳನ್ನೂ ಆಪೋಶನ ಮಾಡಿಕೊಳ್ಳುವ ಸಾಮರ್ಥ್ಯವುಳ್ಳ ರುದ್ರಗಣವೇ ಅವರು; ಇವರೆಲ್ಲರ ಮಧ್ಯದಲ್ಲಿ ನಿಂತು ಪಂಚಮುಖ ದಶಭುಜ ಚಂದ್ರಶೇಖರ ವೃಷಭವಾಹನಗಳಿಂದೊಪ್ಪುತ್ತ ಶುದ್ಧಸ್ಫಟಿಕವರ್ಣನಾಗಿರುವವನೇ ಪರಮೇಶ್ವರನು; ಆತನೇ ಇಚ್ಛಾಮಾತ್ರದಿಂದ ಅಗಣಿತಭುವನವನ್ನು ನಿರ್ಮಿಸಿ ಲಯಗೊಳಿಸುವ ಮಹಿಮೆಯ, ಪ್ರತಿಭಟಿಸಿದವರನ್ನು ಕೊಂದು ಮರೆಹೊಕ್ಕವರನ್ನು ಉದ್ಧರಿಸುವ ಬಿರುದಿನ ಮಹಾದೇವನು. ಆತನನ್ನು ಮರೆಹೊಕ್ಕು ಬಾಳುವುದೇ ನಿನಗೆ ಶ್ರೇಯಸ್ಕರವೆಂದು ನನಗೆ ತೋರುತ್ತದೆ. ಅದರಂತೆ ಮಾಡುವುದೇ ಸರ್ವಥಾ ಉಚಿತವು; ಎಂದು ನುಡಿದನು. ರಾಕ್ಷಸೇಶ್ವರನು ಕೇಳಿ ಖತಿಗೊಂಡು, ಗುರುಗಳೆ! ಚೆನ್ನಾಗಿ ಹೇಳಿದಿರಿ! ಒಳ್ಳೆಯ ಅಂಜುಕುಳಿಯ ಮಾತನ್ನಾಡಿದಿರಿ! ಎಂದು ತಿರಸ್ಕರಿಸಿ, ಆರ್ಭಟಮಾಡಿ, ತನ್ನ ಸುವರ್ಣರಥವನ್ನು ದೇವಸೇನೆಯ ಮುಂಗಡೆಗೆ ತಿರುಗಿಸಲು, ದಳಪತಿಗಳಪ್ಪಣೆಯ ಮೇರೆ ಚೂಣಿಯ ಸೈನಿಕರು ಸಂಧಿಸಿ ಕಾದಾಡಲುಪಕ್ರಮಿಸಿದರು. ಬೊಬ್ಬೆಗಳು ಬ್ರಹ್ಮಾಂಡವನ್ನು ಭೇದಿಸಿದುವು. ಮೂದಲೆಗಳು ಗಣನಾತೀತವಾದುವು. ಧನುಷ್ಟಂಕಾರವು ಎಡೆಬಿಡದುತ್ತಾಯಿತು. ಆಯುಧಗಳ ಸದ್ದು ಕಿವಿಯನ್ನು ಕಿವುಡುಗೊಳಿಸಿತು. ರಕ್ತದ ಹಾರಾಟವು ಬಿರುಮಳೆಯನ್ನು ಮೀರಿಸಿತು. ರಥಕ್ಕೆ ರಥ, ಆನೆಗೆ ಆನೆ, ಕುದುರೆಗೆ ಕುದುರೆ, ಕಾಲಾಳಿಗೆ ಕಾಲಾಳು, ಇದಿರಾಗಿ ವೀರಾವೇಶದಿಂದ ಕಾದಿ ಪ್ರತಿಪಕ್ಷದವರನ್ನು ತಲೆದೂಗಿಸುತ್ತಿದ್ದರು. ಇರಿವ ತರಿವ ಪರಿವ ಮುರಿವ ಕೊರೆವ ನರೆವ ಕೆಚ್ಚುವ ಕೊಚ್ಚುವ ಮೆಚ್ಚುವ ಹೆಚ್ಚುವ ಬೀಳ್ವ ಸೀಳ್ವ ಕೋಳ್ವ ಏಳ್ವ ಬಿಡಿವ ಮಿಡಿವ ಕಡಿವ ಕೆಡೆವ ಪೊಡೆವ

ತಡೆವ ನಡೆವ ಸೆಡೆವ ನೂಂಕುವ ಔಂಕುವ ಸೋಂಕುವ ತೇಂಕುವ ಇರುಂಕುವ ತುಡುಂಕುವ ಕೆಲಂಕುವ ಮಹಾಭಟರುಗಳು ಸಮರಾಂಗಣವನ್ನು ಭಯಂಕರವಾಗಿ ಮಾಡಿದರು. ಎತ್ತ ನೋಡಿದರೂ ಹೆಣಗಳು ಕರುಳುಗಳು ತಲೆಗಳು ಮುಂಡಗಳು ಕಡಿತೋಳು ರಕ್ತದ ಪ್ರವಾಹಗಳು ರಥದ ಮುರುಕುಗಳು ಆನೆಗಳ ಹೋಳುಗಳು ಕುದುರೆಗಳ ಸೀಳುಗಳು ಛತ್ರಚಾಮರಗಳ ತುಣುಕುಗಳು ಕಿರೀಟ ಕುಂಡಲಹಾರಗಳು ಬಾಣ ಬತ್ತಳಿಕೆ ಗದೆ ಕತ್ತಿ ಕುಂತ ಮೊದಲಾದಾಯುಧಗಳು ತುಂಬಿ ತೋರುತ್ತಿದ್ದವು. ಭೂತಪ್ರೇತಪಿಶಾಚ ಶಾಕಿನಿ ಡಾಕಿನಿಯರು ಮಾಂಸವನ್ನು ತಿಂದು ರಕ್ತವನ್ನು ಕುಡಿದು ಕರುಳಮಾಲೆಯನ್ನು ಹಾಕಿ ತಲೆಬುರುಡೆಗಳನ್ನು ಹಿಡಿದು ಹೆಣಗಳ ತಲೆಯ ಕಿರೀಟವನ್ನು ಕಿತ್ತು ತಮ್ಮ ತಲೆಗೆ ಸಿಕ್ಕಿಸಿ ಅವರ ಬಿರುದಿನ ಪೆಂಡೆಗಳನ್ನು ತಮ್ಮ ಕಾಲಿಗೆ ಹಾಕಿ ಹಾಡುತ್ತ ಕುಣಿಯುತ್ತ ಕುಪ್ಪರಿಸುತ್ತ ವಿಹರಿಸುತ್ತಿದ್ದವು. ಎಂಬಲ್ಲಿಗೆ ಎಂಟನೇ ಅಧ್ಯಾಯವು ಮುಗಿದುದು.

## ೯ ನೇ ಅಧ್ಯಾಯವು.

### ಬಲ ನಮುಚಿ ದೈತ್ಯಾದಿಯುದ್ಧವು

ಸಿದ್ಧರಾಮೇಶನೆ ಕೇಳು, ಚೂಣಿಯಸೇನೆಯೆಲ್ಲವೂ ಹತವಾಗುತ್ತ ಬರಲು, ಅತಿರಥ ಮಹಾರಥರುಗಳು ತಮ್ಮ ತಮ್ಮ ರಥಗಳನ್ನು ಮುಂದೆ ನಡಿಸಿ, ಧನುಸ್ಸಿಗೆ ಗರಿಯ ಬಾಣಗಳನ್ನು ಹೂಡಿ ಅತಿಚಮತ್ಕಾರದಿಂದ ಪ್ರಯೋಗಿಸುತ್ತಿದ್ದರು. ತೊಟ್ಟಾಗ ಕಾಣುತ್ತಿದ್ದ ೧ ಬಾಣವು ಬಿಟ್ಟಾಗ ಹತ್ತಾಗಿ, ಹೋಗುವಾಗ ನೂರಾಗಿ, ನಡುವಾಗ ಸಾವಿರವಾಗಿ, ಹೊರಹೊರಡುವಾಗ ಲಕ್ಷಗಳಾಗುತ್ತಿದ್ದಿತು. ರಾಕ್ಷಸನ ಸೇನಾನಾಯಕರೂ, ದೇವತೆಗಳ ಕಡೆಯ ದಿಕ್ಪಾಲಕರೂ ಬಿಟ್ಟ ಬಾಣಗಳು ಪ್ರತಿಪಕ್ಷದವರನ್ನು ಚುಚ್ಚಿ, ರಕ್ತವನ್ನು ಸುರಿಸಿ, ಕತ್ತುಗಳನ್ನು ಕತ್ತರಿಸಿ, ರುಂಡಗಳನ್ನು ಹಾರಿಸಿ, ಕಂಗೆಡಿಸುತ್ತ ಬಂದುವು. ಶಿವನ ಬೆಂಬಲವು ನಮಗಿರುವಾಗ ನಮಗೆ ಅಪಜಯವೆಂದರೇನು ? ಎಂದು ಹೇಳಿಕೊಂಡು, ಒಬ್ಬರನ್ನೊಬ್ಬರು ಹುರಿಮಾಡುತ್ತ, ದೇವಸೇನೆಯವರು ರೌದ್ರಾ

ವೇಶದಿಂದ ರಕ್ಕಸರನ್ನು ಬಡಿದು ಕೆಡಿದು ಉರುಳಿಸಿ ಬಿರುಗಾಳಿಯು ತರಗುಗಳನ್ನು ಗುಡಿಸಿಕೊಂಡು ಹೋಗುವಂತೆ ಸವರಿ ತರುಬಿಕೊಂಡು ಹೋಗುತ್ತಿದ್ದರು. ಕ್ಷಣಕ್ಷಣಕ್ಕೆ ರಾಕ್ಷಸಸ್ತೋಮವು ಬಯಲಾಗುತ್ತಲೂ, ಉಳಿದವರು ಹಿಮ್ಮೆಟ್ಟುತ್ತಲೂ ಇರುವುದನ್ನು ಬಲ, ನಮುಚಿ, ಜಂಭ, ದುಂದುಭಿ, ಮಹಾನಾಭ, ಗಜಶಿರ, ಶೂರ್ಪಕ, ವೃತ್ರ ಮೊದಲಾದ ಮಹಾದೈತ್ಯರು ಕಂಡು, ಕ್ರೋಧದಿಂದ ಘುಡಿಘುಡಿಸಿ, ಕಾರ್ಮುಗಿಲುಗಳು ಮುಚ್ಚುವಂತೆ ದೇವಸೇನೆಯನ್ನಾಕ್ರಮಿಸಿ, ಪ್ರಳಯಕಾಲದ ವೃಷ್ಟಿಯಂತೆ ಅವಿಚ್ಛಿನ್ನವಾಗಿ ಕ್ರೂರಬಾಣಗಳನ್ನು ಸುರಿಸುತ್ತ ಬಂದರು. ಇಂದ್ರನಮೇಲೆ ನಮುಚಿಯೂ, ಅಗ್ನಿಯಮೇಲೆ ಬಲನೂ, ಯಮನಮೇಲೆ ಜಂಭನೂ, ನಿಋತಿಯಮೇಲೆ ಗಜಶಿರನೂ, ವರುಣನ ಮೇಲೆ ದುಂದುಭಿಯೂ, ವಾಯುವಿನಮೇಲೆ ಶೂರ್ಪಕನೂ, ಕುಬೇರನ ಮೇಲೆ ಮಹಾನಾಭನೂ, ಈಶಾನನ ಮೇಲೆ ವೃತ್ರನೂ ಬಿದ್ದು ಕಾದಾಡಲುಪಕ್ರಮಿಸಿದರು. ನಮುಚಿಯು ಇಂದ್ರನು ಬಿಟ್ಟ ಬಾಣಗಳನ್ನು ಮಧ್ಯದಲ್ಲೇ ಖಂಡಿಸಿ, "ಎಲೊ ಇಂದ್ರನೆ! ಹತ್ತಾರುಕಡೆ ನೀನು ನನ್ನ ಕೈಗೆ ಸಿಕ್ಕಿದ್ದು ಪ್ರಾಣವನ್ನುಳಿಸಿಕೊಂಡು ಗೆದ್ದೆ; ಅಂದಿನಂತೆ ಈಗಲೂ ಉಳಿದು ಹೋಗುವೆನೆಂದು ಯೋಚಿಸಬೇಡ; ಈಗಲೇ ನಿನ್ನ ಹೆಂಡಿರು ಮಕ್ಕಳಿಗೆ ಬುದ್ಧಿ ಹೇಳಿಬಿಟ್ಟು ಬಾ; ಇಂದಿಗೆ ನಿನ್ನ ಪುಣ್ಯಫಲವೆಲ್ಲ ಮುಗಿದಿತೆಂದು ತಿಳಿ'' ಎಂದು ಮೂದಲಿಸಿ, ನಿಶಿತವಾದ ಬಾಣವೊಂದನ್ನು ತೊಟ್ಟು ಕರ್ಣಾಂತವಾಗಿ ಸೆಳೆದು ಗುರಿಕಟ್ಟಿ ಬಿಟ್ಟು ಬೊಬ್ಬಿರಿದನು. ಅದನ್ನು ಇಂದ್ರನು ನಡುದಾರಿಯಲ್ಲೇ ಖಂಡಿಸಿ, ಕಿಡಿಕಿಡಿಯಾಗಿ, "ಎಲೊ ಖೂಳನೆ! ರಾತ್ರಿ ಕುಡಿದ ಹೆಂಡದ ಮತ್ತು ಇನ್ನೂ ನಿನ್ನ ತಲೆಯಿಂದ ಇಳಿದಿರುವಂತೆ ಕಾಣಲಿಲ್ಲ; ಅದರಿಂದಲೇ ಇಷ್ಟು ಹರಟುತ್ತೀಯೆ; ನಮ್ಮ ಬೆಂಬಲನಾಗಿರುವವನು ಯಾರು ಬಲ್ಲೆಯಾ? ಈದಿನ ರಾಕ್ಷಸರ ಮಾಂಸವೆಲ್ಲ ಪಿಶಾಚಗಳಿಗೆ ದೊಡ್ಡ ಔತಣವಾಗಬೇಕಾಗಿದೆ; ಮೊದಲು ನಿನ್ನ ಪ್ರಾಣವಾಯುತವು ನನ್ನ ಬಾಣಸರ್ಪಕ್ಕೆ ಆಹುತಿಯಾಗಬೇಕಾಗಿದೆ; ಇದೊ ಈ ಬಾಣವನ್ನು ನಿನಗಾಗಿಯೇ ಮೀಸಲಾಗಿ ಇಟ್ಟಿದ್ದೆನು, ತೆಗದುಕೊ'' ಎಂದು ಹೇಳಿ ಗುರಿಗಟ್ಟಿ ಪ್ರಯೋಗಿಸಿ, ಅವನ ರಥ ತುರಗ, ಧ್ವ

ಜ ಪತಾಕೆಗಳನ್ನೆಲ್ಲ ಕಡಿದು, ಒಡನೆ ರುದ್ರಾಸ್ತ್ರವನ್ನು ಬಿಟ್ಟು ದನುಜನ ಕತ್ತನ್ನು ಕತ್ತರಿಸಿ ಗಗನ ತಟಕ್ಕೆ ಹಾರಿಸಿ ಬೊಬ್ಬಿರಿದನು. ಇದನ್ನು ಕಂಡು ಬಲಾಸುರನು ಇಂದ್ರನಿಗಿದಿರಾಗಿ, "ಎಲೊ ನೀಚನೇ! ನಿನ್ನ ಬಾಣಕ್ಕೆ ನಮುಚಿಯು ಬಲಿಯಾದನು. ನನ್ನ ಬಾಣಕ್ಕೆ ನೀನು ಬಲಿಯಾಗು," ಎಂದು ಹೇಳುತ್ತ, ಬಾಣಾವಳಿಗಳನ್ನು ಇಂದ್ರನ ಸುತ್ತಲೂ ಮುತ್ತಿಸಿದನು. ಇಂದ್ರನು ಕಣ್ಣನ್ನು ಮುಚ್ಚಿ ತೆರೆಯುವುದರೊಳಗೆ ಅವನ್ನೆಲ್ಲ ಪ್ರತಿಬಾಣಗಳಿಂದ ಖಂಡಿಸಿ, "ಎಲೊ ಖೂಳನೆ! ಕೈಯಲ್ಲಿ ಸಾಗದವನು ಬಾಯಲ್ಲಿ ಬೈಯ್ದಾಡಬೇಕು, ನಿನ್ನ ಆಸೆಯನ್ನು ಬಿಟ್ಟುಬಿಡುವಂತೆ ನಿನ್ನ ತಾಯೊಡನೆ ಹೇಳಿ ಬಂದಿದ್ದರೆ ಸರಿ, ಇಲ್ಲದಿದ್ದರೆ ಈಗಲಾದರೂ ಹೇಳಿ ಬಾ ಹೋಗು, ಅಥವಾ ನಿನ್ನ ಹೆತ್ತವಳನ್ನು ಪುತ್ರಶೋಕದಿಂದ ಸಾಯುವಂತೆ ಮಾಡದೆ, ನನಗೆ ಶರಣಾಗತನಾಗಿ ಯುದ್ಧಾಂಗಣದಿಂದ ತಿರುಗಿ ತಲೆಯುಳುಹಿಕೊಂಡು ಬಾಳು; ಇವೆರಡೂ ಇಲ್ಲದಿದ್ದರೆ ನಮುಚಿಯಮೇಲಣ ಅಭಿಮಾನದಿಂದ ಅವನ ಸ್ಥಾನಕ್ಕೆ ಬಂದು ನಿಂತಿರುವ ನಿನ್ನನ್ನೂ ಅವನ ಜತೆಯಲ್ಲಿಯೇ ಪರಲೋಕದಲ್ಲೂ ಇರುವಂತೆ ಮಾಡಿ ನಿಮ್ಮಿಬ್ಬರ ಸ್ನೇಹಬಂಧವನ್ನು ಕಾಪಾಡುತ್ತೇನೆ, ನೋಡು." ಎಂದು ಹೇಳಿ, ೧೫ ಬಾಣಗಳನ್ನು ತೆಗೆದು ರಾಕ್ಷಸನ ಮೇಲೆ ಪ್ರಯೋಗಿಸಿದನು. ಅವುಗಳ ಹತಿಯಿಂದ ನೊಂದ ರಕ್ಕಸನು ಕೆರಳಿ, ಘೋರವಾದ ಬಾಣವೊಂದನ್ನು ಇಂದ್ರನ ಹಣೆಗೆ ಪ್ರಯೋಗಿಸಿದನು. ಅದರೇಟಿನಿಂದ ಇಂದ್ರನು ಕಣ್ಣುಮುಚ್ಚಿ ಕ್ಷಣಕಾಲ ಮೂರ್ಛೆಗೊಂಡನು. ಬಳಿಕ ಎಚ್ಚೆತ್ತು ರೋಷೋದ್ರಿಕ್ತನಾಗಿ, ಕವಲುಬಾಣವನ್ನೊಂದು ತೆಗೆದು ಬರಸೆಳೆದು ದೈತ್ಯನ ಕೊರಲಿಗೆ ಗುರಿಯಿಟ್ಟು ಹೊಡೆದನು. ಅದು ರಕ್ಕಸನ ತಲೆಯನ್ನು ಚೆಂಡನ್ನು ಹಾರಿಸಿದಂತೆ ಹಾರಿಸಿಕೊಂಡು ಹೋಯಿತು. ಬಲನ ದೇಹವು ಭೂಮಿಯಮೇಲೆ ಬೆಟ್ಟದಂತೆ ಉರುಳಿತು. ದೇವಸೇನೆಯಲ್ಲಿ ಜಯಭೇರಿಯ ಶಬ್ದವಾಯಿತು. ರಾಕ್ಷಸರು ಬೆಚ್ಚಿ ಹಿಂದೆಗೆದರು. ವೃತ್ರ ಜಂಭಾಸುರರು ನಮುಚಿ ಬಲರ ಮರಣವನ್ನು ಕೇಳಿ ಕೆರಳಿ, ಇಂದ್ರನಕಡೆಗೆ ರಥವನ್ನು ಸಾಗಿಸಿಕೊಂಡು ಬಂದರು. ಮತ್ತು ಕೊಬ್ಬಿದ ದೇವೇಂದ್ರನನ್ನು ಈ ದಿನ ಕತ್ತರಿಸಿಕ್ಕದಿದ್ದರೆ ನಾವು ಬದು

ಕ್ಕೆ ಫಲವೇನೆಂದು ಶಪಥಮಾಡುತ್ತ, ಬಾಣಗಳನ್ನು ತೊಟ್ಟು ದೇವತೆಗ
ಳಮೇಲೆ ಸುರಿಸಿದರು. ಮೋಡದ ಒಟ್ಟಲಿನ ಮಧ್ಯದಲ್ಲಿ ಸಿಕ್ಕಿದ ಬೆಟ್ಟ
ದಂತೆ ಐರಾವತವು ರಕ್ಕಸರ ಬಾಣದ ಒಡ್ಡಿನ ಮಧ್ಯದಲ್ಲಿ ಸಿಕ್ಕಿತು. ಇಂ
ದ್ರನು ವೀರನಾದವನ್ನು ಮಾಡುತ್ತ ತನ್ನ ಧನುರ್ವಿದ್ಯಾಕೌಶಲ್ಯವನ್ನೆಲ್ಲ
ತೋರಿಸಿ, ರಕ್ಕಸರಿರ್ವರ ಬಾಣಗಳನ್ನೂ ತರಿದೊಟ್ಟುತ್ತಿದ್ದನು. ವ
ಜ್ರದಹತಿಯಿಂದ ರಕ್ಕೆಗಳನ್ನು ಕಳೆದುಕೊಂಡು ಉರುಳಿದ ಪರ್ವತಗಳಂ
ತೆ ಇಂದ್ರರಾಕ್ಷಸರ ಮಧ್ಯದಲ್ಲಿ ಬಾಣದ ತುಂಡುಗಳ ರಾಶಿಯು ಬಿದ್ದು ಬೆ
ಳೆಯಿತು. ಇಂದ್ರನ ಬಾಣದೇಟುಗಳಿಂದ ಒಂದೊಂದು ಬಾರಿ ಜಂಭ, ವೃ
ತ್ರಾಸುರರು ಮೂರ್ಛೆಗೊಂಡರೆ, ಅವರ ಸೇನೆಯು ಹಾ! ಎಂದು ಹ
ಮ್ಮೈಸುತ್ತಿದ್ದಿತು. ಮರಳಿ ಅವರೆಚ್ಚೆತ್ತು ಇಂದ್ರನನ್ನು ಘಾತಿಸಿ
ಮೈಮರಿಸಿದಾಗ ದೇವತೆಗಳು ಘೋಳ್ ಎನ್ನುತ್ತಿದ್ದರು. ಆಗ ದೈತ್ಯ
ರು ಕಡುಸಿಟ್ಟೆದ್ದು ಇಬ್ಬರೂ ಒಂದೇಬಾರಿಗೆ ದಿವ್ಯಾಸ್ತ್ರಗಳೆರಡನ್ನು
ಪ್ರಯೋಗಿಸಲು, ಅವುಗಳ ಪೆಟ್ಟಿನಿಂದ ಇಂದ್ರನು ಶಕ್ತಿಯುಳಿದು ಮೂ
ರ್ಛಾಗತನಾಗಿ ಭೂಮಿಗುರುಳಿದನು. ಬಳಿಕ ದೇವಸೇನೆಯನ್ನು ರಕ್ಕಸ
ರು ತರಿದಟ್ಟುತ್ತಿದ್ದರು. ಸಾರಥಿಯೂ ಅನುಚರರೂ ಶೈತ್ಯೋಪಚಾರ
ಮಾಡಿದುದರಿಂದ ಇಂದ್ರನು ಎಚ್ಚತ್ತು, ತನಗಾದ ಪರಾಭವದಿಂದ ಮತ್ತ
ಷ್ಟು ರೇಗಿ, ಪ್ರಳಯಾಗ್ನಿಯಂತೆ ಭೀಕರನಾಗಿ, ಎರಡು ಕೈಗಳಿಂದಲೂ
ಬಾಣಗಳನ್ನು ತೆಗೆದು ಪ್ರಯೋಗಿಸುತ್ತಲಿದ್ದನು. ಅವುಗಳು ಭೂ
ವ್ಯೋಮಗಳನ್ನೊಂದುಮಾಡುವಂತೆ ದಟ್ಟವಾಗಿ ತುಂಬಿದುವು. ರಕ್ಕ
ಸರ ಸೇನೆಯು ಸಿಡಿಲಿನಿಂದ ಉರಿದುಹೋಗುವ ಹಾವುಗಳಂತೆ ಇಂದ್ರನ
ಬಾಣಹತಿಯಿಂದ ಉರುಳುತ್ತಿದ್ದಿತು. ಬಳಿಕ ಇಂದ್ರನು ನಿಶಿತಾಸ್ತ್ರಗ
ಳೆರಡನ್ನು ಸೆಳೆದು ಎರಡು ಕೈಗಳಿಂದಲೂ ಆ ಇಬ್ಬರುದೈತ್ಯೇಂದ್ರರಮೇ
ಲೆ ಗುರಿಕಟ್ಟಿ ಪ್ರಯೋಗಿಸಿ ಬೊಬ್ಬಿರಿದನು. ಅವನ್ನು ಜಂಭವೃತ್ರ
ರು ಪ್ರತಿಬಾಣದಿಂದ ಮಧ್ಯಕ್ಕೆ ಖಂಡಿಸಿದರೂ, ಮತ್ತೆ ಹಿಂದಣ ತುಂಡು
ಗಳು ಮುಂದಣ ತುಂಡುಗಳಿಗೆ ಸೇರಿ ರಭಸದಿಂದ ಹೋಗಿ ಇಬ್ಬರ ತಲೆಗ
ಳನ್ನೂ ಕಚ್ಚಿ ನಭೋಮಂಡಲಕ್ಕೆ ತೆಗೆದುಕೊಂಡು ಹೋಗಿ ಸಮುದ್ರದಲ್ಲಿ
ಬಿಟ್ಟುವು. ಇವರ ಮರಣವಾರ್ತೆಯಿಂದ ದೇವತೆಗಳು ಸಂತೋಷಗೊಂ

ದು ಜಯಧ್ವನಿ ಮಾಡಿದರು. ರಕ್ಕಸರು ಗೋಳಿಟ್ಟು ಹಿಂಜರಿದರು. ರಾಕ್ಷಸಸೇನಾಪತಿಯಾದ ಶತಮಾಯನು ಪ್ರಳಯಕಾಲದ ಯಮನಂತೆ ಕಣ್ಣುಗಳಿಂದ ಕೆಂಗಿಡಿಯನ್ನು ಸುರಿಸುತ್ತ, ತನ್ನ ಕಡೆಯ ಸೇನೆಗೆ ಅಭಯವನ್ನು ಕೊಡುತ್ತ, ಇಂದ್ರನ ಮುಂಗಡೆಗೆ ಬಂದು ಹಲ್ಲನ್ನು ಕಡಿದು, "ಎಲೊ ಬಡಸೇವೇಂದ್ರನೆ! ಇದುವರೆಗೆ ಮಾಡಿದ ಹುಲುಗಾಳಗದಂತೆ ಶತಮಾಯನಯುದ್ಧವೆಂದು ತಿಳಿಯಬೇಡ; ಇಂದು ದೇವಲೋಕಕ್ಕೆ ದಿಕ್ಕಿಲ್ಲದಂತೆ ಮಾಡಿ, ನಿನ್ನ ಹೆಂಡಿರು ಸೂಳೆಯರನ್ನೆಲ್ಲ ರಕ್ಕಸರ ಪಾಲುಮಾಡದೆ ಬಿಡುವೆನೆ? ನನ್ನ ಪರಾಕ್ರಮವನ್ನು ನೋಡು" ಎಂದು ಹೇಳುತ್ತ, ಬಾಣಗಳನ್ನು ದೇವಸೇನೆಯಮೇಲೆ ಪ್ರಯೋಗಿಸಿದನು. ಇಂದ್ರನನ್ನು ೧೦೦ ಬಾಣಗಳಿಂದ, ಅಗ್ನಿಯನ್ನು ೧೬ ರಿಂದ, ಯಮನನ್ನು ೫ ರಿಂದ, ನಿಋತಿಯನ್ನು ೩ ರಿಂದ, ವರುಣ ವಾಯು ಕುಬೇರೈಶಾನರನ್ನು ೬-೬ ಬಾಣಗಳಿಂದ ಹೊಡೆದು, ಅವರ ಶರೀರಗಳಲ್ಲಿ ತೂತುಗಾಣಿಸಿ ರಕ್ತವನ್ನು ಸುರಿಸಿ, ಸಾರಥಿ ರಥಹಯಗಳನ್ನು ತುಂಡುಗೊಳಿಸಿ, ಮೇಲೆಮೇಲೆ ಬಾಣಗಳನ್ನು ಪ್ರಯೋಗಿಸುತ್ತಲೇ ಇದ್ದನು. ದಿಕ್ಪಾಲಕರೆಲ್ಲರೂ ಈತನ ಬಾಣಹತಿಯಿಂದ ಮೂರ್ಛೆಯೊಂದಿದರು. ಮಾರಿ ನುಗ್ಗಿದ ಊರಿನಂತೆ ದೇವಸೇನೆಯು ಲಯಗೊಳ್ಳುತ್ತ ಬಂದಿತು. ಯಕ್ಷ ವಿದ್ಯಾಧರ ಕಿನ್ನರ ಕಿಂಪುರುಷಾದಿಗಳೆಲ್ಲ ಭೀತಿನಟ್ಟು ಮತಿಗೆಟ್ಟು ಬಾಯ್ಬಿಟ್ಟು ಕಂಡಕಂಡಕಡೆಗೆ ಪಲಾಯನಗೊಂಡರು. ದಿಕ್ಪಾಲಕರು ಎಚ್ಚೆತ್ತು ಪ್ರತಿಬಾಣಗಳನ್ನು ಶತಮಾಯನಮೇಲೆ ಬಿಟ್ಟರೂ, ದಳ್ಳುರಿಯ ಮುಂದೆ ನಿಲ್ಲಲಾರದ ಮಿಣುಕುಹುಳುಗಳಂತೆ ತೇಜೋಹೀನರಾಗಿ, ಗಾಯದಿಂದ ರಕ್ತವನ್ನು ಸುರಿಸುತ್ತಲೂ, ಬೆವರನ್ನು ತೊಟ್ಟಿಕ್ಕಿಸುತ್ತಲೂ, ತಲೆಗೂದಲನ್ನು ನೇಲಾಡಿಸುತ್ತಲೂ, ಹರಕು ಕವಚವನ್ನು ಎಳೆದೆಳೆದು ಸಿಕ್ಕಿಸಿಕೊಳ್ಳುತ್ತಲೂ ಚಪಲವಾದ ಕಣ್ಣುಗಳಿಂದ ತಿರುತಿರುಗಿ ನೋಡಿ ನಡುಗುತ್ತಲೂ, ದೀರ್ಘನಿಟ್ಟುಸುರನ್ನು ಬಿಡುತ್ತಲೂ, ಬೆನ್ನಿನಲ್ಲಿ ನಟ್ಟ ಬಾಣವನ್ನು ಕೀಳುತ್ತಲೂ, ತಬ್ಬಿಬ್ಬಾಗಿ ಮಾತನಾಡುತ್ತಲೂ, ಎದೆ ಬಡಿದುಕೊಳ್ಳುತ್ತಲೂ ಅಳ್ಳೆಗಳು ಹೊಯ್ದುಕೊಳ್ಳುತ್ತಲೂ ಇರುವ ದೇವತೆಗಳು ಶಿವನ ಬಳಿಗೆ ಓಡಿಹೋಗಿ ನಾಚಿಕೆಯಿಂದ ತಲೆಬಗ್ಗಿಸಿ

ನಿಂತರು. ಬ್ರಹ್ಮನು ಇವರ ಸ್ವರೂಪವನ್ನು ನೋಡಿ ಭೀಗುಟ್ಟ, ಸುವರ್ಣರಥವನ್ನೇರಿ ತನ್ನ ಮಹಾಸೇನೆಯೊಡನೆ ಶತಮಾಯನಮೇಲೆ ಸಾಗಿದನು. ಆತನು ಬ್ರಹ್ಮನಿಗಿದಿರಾಗಿ— "ಎಲೊ ಬೊಮ್ಮನೆ! ಕುಂಬಾರನು ಮಡಕೆಗಳನ್ನು ಹುಟ್ಟಸುವಂತೆ ಲೋಕವನ್ನೆಲ್ಲ ಸೃಷ್ಟಿಸುವ ಶಕ್ತಿಯು ನಿನ್ನಲ್ಲಿದ್ದಮಾತ್ರದಿಂದಲೇ ಲೋಕವನ್ನೆಲ್ಲ ಕೊಲ್ಲುವ ಶಕ್ತಿಯೂ ನಿನಗಿದ್ದೀತೆ? ಯುದ್ಧದ ಪ್ರಸಕ್ತಿಯು ನಿನಗೇಕೆ? ವೇದಶಾಸ್ತ್ರವನ್ನು ಬಿಚ್ಚಿ ಹೊಟ್ಟೆ ಹೊರೆದುಕೊಂಡು ಇನ್ನೂ ಕೆಲ ಕಾಲ ಬದುಕು ಹೋಗು" ಎಂದು ಹೀಯಾಳಿಸಿ, ನೂರಾರು ಬಾಣಗಳನ್ನೊಂದೊಂದುಬಾರಿಗೆ ಪ್ರಯೋಗಿಸುತ್ತ ಬಂದನು. ಬ್ರಹ್ಮನು ಪ್ರತಿಬಾಣಗಳಿಂದವನ್ನೆಲ್ಲ ಖಂಡಿಸಿ, "ಎಲೊ ಮದಾಂಧದೈತ್ಯನೆ! ಸೊಳ್ಳೆಗಳನ್ನು ಸವರುವ ಶೌರ್ಯವನ್ನು ನನ್ನ ಮುಂದೆ ಬಿಚ್ಚಿ ಗೆದ್ದು ಬದುಕುವೆಯಾ? ಎಷ್ಟು ದಿನ ಯಾವ ಶಾಲೆಯಲ್ಲಿ ಯಾವ ಗುರುವಿನಿಂದ ಇವೆರಡು ಮಾತುಗಳಾಡುವುದನ್ನು ಕಲಿತೆ?" ಎಂದು ಮೂದಲಿಸಿ, ಮಸೆದ ಬಾಣಗಳು ನೂರನ್ನು ರಕ್ಕಸನಮೇಲೆ ಬಿಟ್ಟನು. ಅವನ್ನು ಶತಮಾಯನು ಖಂಡಿಸಿ, ಅನಂತವಾದ ಬಾಣಜಾಲವನ್ನು ಬ್ರಹ್ಮನ ಮೇಲೆ ಸುರಿಸಿ, ಭೂವ್ಯೋಂತರಿಕ್ಷಗಳೊಂದೂ ಕಾಣದಂತೆ ಮುಚ್ಚಿಬಿಟ್ಟನು. ಬ್ರಹ್ಮನು ಅವನ್ನೆಲ್ಲ ಕೊಚ್ಚಿ, ಅವನೆದೆಗೆ ಬಾಣವನ್ನು ನಟ್ಟು ಮೂರ್ಛೆಗೊಳಿಸುವನು. ಅದಕ್ಕೆ ಸರಿಯಾಗಿ ರಕ್ಕಸನು ಬ್ರಹ್ಮನಿಗೆ ಮುಯ್ಯಾಡುವನು. ಓರ್ವರೋರ್ವರ ರಥವನ್ನು ನುಚ್ಚು ಮಾಡುವರು. ಹೊಸಹೊಸತೇರ್ಗಳನ್ನು ಹತ್ತುವರು. ರೋಷದಿಂದ ಗಳಗೆ ಗಳಗೆಗೆ ಸಿಸ್ಮನಾದವನ್ನು ಮಾಡುವರು. ಹೀಗೆ ಈರ್ವರೂ ಸಮನಾಗಿ ಯುದ್ಧಮಾಡುತ್ತಿರುವಲ್ಲಿ, ಮಾಯಾವಿಯಾದ ಶತಮಾಯನು ಅತಿಶಯವಾಗಿ ಕೆರಳಿ, ತನ್ನ ಮಾಯಾಜಾಲದಿಂದ ಬ್ರಹ್ಮನನ್ನು ಗೆಲ್ಲಬೇಕೆಂದು ಯೋಚಿಸಿ, ಕಪಟವಿದ್ಯೆಯ ಶಕ್ತಿಯನ್ನು ಬಿಟ್ಟದನು. ಕ್ಷಣಕಾಲದಲ್ಲಿ ರಣಾಂಗಣದಲ್ಲೆಲ್ಲ ಕಾಳ್ಗತ್ತಲೆಕವಿದಿತು. ಒಬ್ಬರನ್ನೊಬ್ಬರು ಕಾಣದಂತಾಯಿತು. ಹುಲಿ ಕರಡಿ ಸಿಂಹ ಶಾರ್ದೂಲ ಕೋಣ ತೋಳ ಹಾವು ಚೇಳು ಮೊಸಳೆ ಮೀನು ಮೊದಲಾದ ಭೀಕರಪ್ರಾಣಿಗಳು ಅನಂತವಾಗಿ ಹುಟ್ಟ ದೇವತೆಗಳ ಮೇಲೆ ಬಿದ್ದು ತಿವಿದು ಪರಚಿ ಬ

ಗಿದು ಕಡಿದು ಹಾನಿಗೊಳಿಸಿದುವು. ಮಳೆ ಮಿಂಚು ಸಿಡಿಲು ಗಾಳಿ ಧೂಳಿ ಹೊಗೆ ಬೆಟ್ಟ ಗುಡ್ಡ ಕಲ್ಲು ಗುಂಡುಗಳು ಕೋಟ್ಯನುಕೋಟಿಯಾಗಿ ದೇವತೆಗಳ ಮೇಲೆ ಬಿದ್ದು ನೋಯಿಸಿದುವು. ಎತ್ತಲೂ ಹಳ್ಳ, ಎತ್ತಲೂ ಮುಳ್ಳು, ಎತ್ತಲೂ ಹೊಳೆ, ಎತ್ತಲೂ ಬೆಂಕಿ, ಎತ್ತಲೂ ಗಾಳಿ, ಎತ್ತಲೂ ಭೂತಪ್ರೇತಪಿಶಾಚಗಳು ಕಾಣುತ್ತಿದ್ದುವು. ಈ ವಿಕಾರಗಳನ್ನೆಲ್ಲ ಬ್ರಹ್ಮನು ಕಂಡು ದೈತ್ಯನ ಸಾಮರ್ಥ್ಯಕ್ಕೆ ತಲೆದೂಗಿದನು. ಮತ್ತು ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಯೋಚಿಸಿ, ಅದೃಶ್ಯರೂಪಿನಿಂದ ರಕ್ಕಸನ ಸುತ್ತಲೂ ತಿರುತಿರುಗುತ್ತ ಅನಂತಗಳಾದ ಬಾಣಗಳನ್ನು ಬಿಟ್ಟು ಅವನ ದೇಹದ ಎಲ್ಲ ಕಡೆಯಲ್ಲೂ ನಡುತ್ತಿದ್ದನು. ಆಗ ಶತಮಾಯನು ತಾನೂ ಅದೃಶ್ಯರೂಪವನ್ನು ಧರಿಸಿ, ಪ್ರಳಯಕಾಲದ ಮೇಘವು ಮಳೆಗರೆವಂತೆ ದೇವತೆಗಳ ಮೇಲೆಲ್ಲ ಸಾಂದ್ರವಾದ ಬಾಣವೃಷ್ಟಿಯನ್ನು ಸುರಿಸಿ, ಮೂರ್ಛೆಗೊಳಿಸುತ್ತ ಬಂದನು. ಎಲ್ಲಿ ಹುಡುಕಿದರೂ ಬ್ರಹ್ಮನ ಕಣ್ಣಿಗೆ ಕಾಣದಂತೆ ಶತಮಾಯನು ಲಯಗೊಳಿಸುತ್ತಿದ್ದನು. ಅವನ ಬಿಲ್ಲಿನ ಶಬ್ದ, ಬಾಣಗಳ ಸುರಿವು ಮಾತ್ರ ಕಾಣಿಸುತ್ತಿದ್ದಿತು. ಬ್ರಹ್ಮನು ರಕ್ಕಸನ ಬಾಣಗಳನ್ನು ತರಿತರಿದು ಬೇಸತ್ತು, ಅವನನ್ನು ಕಡಿದಿಕ್ಕಬೇಕೆಂದು ಪ್ರಯತ್ನಿಸಿದರೂ ಕಣ್ಣಿಗೆ ಕಾಣಿಸದೆ ಇರುವುದರಿಂದ ಉಪಾಯಗೆಟ್ಟು, ಶಿವಧ್ಯಾನ ಮಾಡಿ, ಅರಿವಿನಿಂದ ಎಚ್ಚೆತ್ತು, ಬತ್ತಳಿಕೆಯಲ್ಲಿದ್ದ ರುದ್ರಾಸ್ತ್ರವನ್ನು ತೆಗೆದುಕೊಂಡನು. ಅದರ ತೇಜಸ್ಸು ಹೊರಗೆ ಚೆಲ್ಲಿದ ಮಾತ್ರದಿಂದಲೇ ಮಾಯೆಯ ಕತ್ತಲೆಯು ಹರಿದುಹೋಯಿತು. ಬಿಲ್ಲಿನಲ್ಲಿ ಹೂಡಿದ ಮಾತ್ರದಿಂದ ಎಲ್ಲ ಕಡೆಯೂ ಲೋಕವು ಉರಿಯುವಂತಾಯಿತು. ಬಾಣವನ್ನು ಕಿವಿವರೆಗೆ ಸೆಳೆದ ಮಾತ್ರದಿಂದ ರಕ್ಕಸರೆಲ್ಲರೂ ಮೂರ್ಛೆಗೊಂಡರು. ಬಿಟ್ಟ ಉತ್ತರಕ್ಷಣದಲ್ಲೇ ಶತಮಾಯನ ತಲೆಯನ್ನು ಕತ್ತರಿಸಿ ರುಂಡಮುಂಡಗಳೆರಡನ್ನೂ ಹೊತ್ತುಕೊಂಡುಹೋಗಿ ಸಪ್ತಸಮುದ್ರಗಳಿಂದಾಚೆ ಮರುಭೂಮಿಯಲ್ಲಿಟ್ಟಿತು. ದೇವತೆಗಳು ದುಂದುಭಿಯನ್ನು ಬಾರಿಸಿ ಹೂಮಳೆಗರೆದರು. ಬ್ರಹ್ಮನು ಕ್ಷಣಕಾಲವೂ ನಿಂತಲ್ಲಿ ನಿಲ್ಲದೆ ದೈತ್ಯಸೇನೆಯಲ್ಲೆಲ್ಲ ರಥವನ್ನು ಹರಿದಾಡಿಸಿ, ಬಾಣಹತಿಯಿಂದ ಲಯಗೊಳಿಸುತಲಿದನು. ಅವನಿಗಿದಿರಾಗುವವರು ದೈತ್ಯರಲ್ಲಿ ಒಬ್ಬರೂ

ಇಲ್ಲದೆ ಉಳಿದವರೆಲ್ಲರೂ ಅಂಧಕನ ಬಳಿಗೆ ಓಡುತ್ತಿದ್ದರು. ಅವರನ್ನು ಶುಂಭಾಸುರನು ಕಂಡು, ಅವರಿಂದ ಶತಮಾಯನ ಮರಣವಾರ್ತೆಯನ್ನು ಕೇಳಿ, ಅತ್ಯಂತ ರೋಷವೇರಿ, ತನ್ನ ಸೇನೆಯನ್ನು ಬ್ರಹ್ಮನಮೇಲೆ ಸಾಗುವುದಕ್ಕೆ ಅಪ್ಪಣೆ ಮಾಡಿ, ರಥದಲ್ಲಿ ಬಿಲ್ಲು ಬಾಣಗಳನ್ನು ತುಂಬಿಕೊಂಡು ಏರಿ, ತಾನೇ ನಡೆದನು.— "ಎದೆಗೆಚ್ಚಿದ್ದವರು ಮುಂದೆ ನಿಲ್ಲಲಿ, ಅಂಜುಪುರಕರು ಹಿಂದೆಗೆಯಲಿ; ಕಡುಗಲಿಗಳು ಕಾದಾಡಲಿ;" ಎಂದು ಹೇಳುತ್ತಾ, ಬ್ರಹ್ಮನಮೇಲೆ ಬಿದ್ದನು. ಅವನ ಘೋರಮೂರ್ತಿಯನ್ನು ಕಂಡಮಾತ್ರದಿಂದಲೇ ದೇವತೆಗಳು ಎದೆಗೆಟ್ಟು ಹಿಂಗಾಲಾದರು. ಮೊದಲು ಶುಂಭನು ಬಿಟ್ಟ ಬಾಣದಿಂದಲೇ ಬ್ರಹ್ಮನು ಮೂರ್ಛೆಗೊಂಡು ಧೃತಿಗೆಟ್ಟು ಹಿಂದೆಗೆದೋಡಿದನು. ದಿಕ್ಪಾಲಕರು ಬೆದರಿದರು. ಉಳಿದ ದೇವತೆಗಳೆಲ್ಲ ಹೋ! ಎಂದು ಕೂಗಿ, ಬ್ರಹ್ಮನ ಬೆನ್ನಂಟಿ ಓಡಿದರು. ಹರಿಯು ಬ್ರಹ್ಮೇಂದ್ರಾದಿಗಳವಸ್ಥೆಯನ್ನು ನೋಡಿ, ಸೇನೆಯೊಡನೆ ತಾನೇ ಶುಂಭಾಸುರನಿದಿರಾದನು. ಆತನಾದರೋ ವಿಷ್ಣುವನ್ನು ಕುರಿತು— "ಎಲೋ ಹರಿಯೆ! ಇದುವರೆಗೆ ನಮ್ಮ ಸೇನೆಯಲ್ಲಿ ಆಗಿರುವ ನಷ್ಟವನ್ನೆಲ್ಲ ನಿನ್ನೊಬ್ಬನನ್ನು ಕೊಲ್ಲುವುದರಿಂದ ತುಂಬಿಸಿಕೊಳ್ಳದೆ ಬಿಡುವೆನೆ?" ಎಂದು ಹೇಳಿ ಗರ್ಜಿಸಿ, ಬಾಣಗಳನ್ನು ಪ್ರಯೋಗಿಸಿದನು. ಹರಿಯು ಅವನ್ನೆಲ್ಲ ಕತ್ತರಿಸಿ, "ಎಲೊ ಅಧಮನೆ! ನಾನಾರು ಬಲ್ಲೆಯಾ? ಗರುಡನಮೇಲೆ ಹಾವು ಸೆಣಸುವಂತೆ ದಾನವಾರಿಯಾದ ನನ್ನಮೇಲೆ ದಾನವನಾದ ನೀನು ಯುದ್ಧಕ್ಕೆ ನಿಲ್ಲಬಹುದೆ? ಪುಸಿದೇವತೆಗಳ ಮುಂದೆ ನಿನ್ನ ಜಂಭವನ್ನು ಕೊಚ್ಚಿಕೊಳ್ಳದೆ ನನ್ನಮುಂದೆ ಬಿಚ್ಚಿದರೆ ಸಾಗುವುದೇ?" ಎಂದು ಮೂದಲಿಸಿ, ಪ್ರತಿಬಾಣಗಳನ್ನು ದೈತ್ಯನಮೇಲೆ ಬಿಟ್ಟು, ಅವನ ರಥ ಸಾರಥಿಗಳನ್ನು ಕೆಡಹಿದನು. ಅದರಿಂದ ರಕ್ಕಸನು ಏಟನ್ನು ತಿಂದ ಹಂದಿಯಂತೆ ಕೆರಳಿ, ಧನುರ್ಬಾಣಗಳನ್ನು ಒಂದು ಕೈಯಲ್ಲಿ ಹಿಡಿದುಕೊಂಡು, ಭೂಮಿಗೆ ಧುಮುಕಿ, ಹರಿಯು ಕುಳಿತಿದ್ದ ರಥವನ್ನೇ ಎತ್ತಿ ಚಂಡನ್ನು ತಿರುಗಿಸುವಂತೆ ತಿರುಗಿಸಿ, ಆಕಾಶಕ್ಕೆ ಎಸೆದನು. ಅದು ಬುಗುರಿಯಂತೆ ತಿರುಗುತ್ತಾ ಮೇಲಿಂದ ಕೆಳಗೆ ಬೀಳುವುದಕ್ಕೆ ಮುಂಚೆ, ಹರಿಯು ರಥದಿಂದೀಚೆಗೆ ಹಾರಿ ಶುಂಭನ ಮೇಲೆ

ಬಿದ್ದನು. ಅದರಿಂದ ಇಬ್ಬರೂ ನೊಂದು ಮೂರ್ಛೆಗೊಂಡರು. ಕ್ಷಣ ಕಾಲದಲ್ಲಿ ಎಚ್ಚತ್ತು ಇಬ್ಬರೂ ಮತ್ತೆ ರಥಾರೂಢರಾಗಿ ಕಾಳಗಕ್ಕೆ ನಿಂತರು. ಬಾಣಕ್ಕೆ ಬಾಣ, ಏಟಿಗೆ ಏಟು, ಗಾಯಕ್ಕೆ ಗಾಯ, ಮೂರ್ಛೆಗೆ ಮೂರ್ಛೆ, ಮೂದಲೆಗೆ ಮೂದಲೆ, ಮುಬ್ಬೃಗೆ ನುಬ್ಬೃಯಾಗಿ ಸಮಯುದ್ಧವನ್ನು ಮಾಡಿದರು. ಎರಡು ನೀಲಗಿರಿಗಳು ಸೆಳಸುವುವೋ, ಪ್ರಳಯಕಾಲದ ಮೇಘಗಳೆರಡು ಕಾದಾಡುವುವೋ, ಎಂಬಂತೆ ಇಬ್ಬರೂ ಹಿಂದೆಗೆಯದೆ ರೋಷಾವೇಶದಿಂದ ಕಾದುತ್ತಿದ್ದರು. ಕಡೆಗೆ ಶುಂಭನು ನಿಶಿತಾಸ್ತ್ರವೊಂದನ್ನು ಬಿಟ್ಟು, ಹರಿಯನ್ನು ತಲೆತಿರುಗಿ ಬಿದ್ದು ಮೂರ್ಛೆಗೊಳ್ಳುವಂತೆ ಮಾಡಿದನು. ಬಳಿಕ ವಿಷ್ಣುವು ಸ್ವಲ್ಪಕಾಲಾನಂತರ ಎಚ್ಚತ್ತು, ರೋಷಾರುಣನೇತ್ರನಾಗಿ, ದಿವ್ಯಾಸ್ತ್ರವನ್ನು ತೆಗೆದು ಶುಂಭನಮೇಲೆ ಬಿಟ್ಟನು. ಅದರ ಹತಿಯಿಂದವನು ರಕ್ತವನ್ನು ಕಾರಿ ಭೂಮಿಗೆ ಬಿದ್ದನು. ನಿಶುಂಭಾದಿ ದೈತ್ಯರು ಓಡಿಬಂದು ವಿಷ್ಣುವನ್ನು ಮುತ್ತಿದರು. ಅಷ್ಟರಲ್ಲಿ ಶುಂಭನು ಮೂರ್ಛೆತಿಳಿದೆದ್ದು, ನೂರ್ಮಡಿ ಮುಳಿಸನ್ನು ತಾಳಿ, ಸಿಹ್ಮದಂತೆ ಗರ್ಜಿಸಿ, ಹರಿಯ ಮುಂಗಡೆಗೆ ಬಂದು, "ಇನ್ನೊಂದು ಕ್ಷಣವಾದರೂ ನನ್ನಿದಿರಿಗೆ ನಿಂತು ಬದುಕು, ನೋಡುತ್ತೇನೆ" ಎಂದು ಹೇಳುತ್ತ, ಕ್ರೂರವಾದ ಶಕ್ತ್ಯಾಯುಧವನ್ನು ತೆಗೆದು ಗರಗರನೆ ತಿರುಗಿಸಿ, ಆರ್ಭಟಿಸಿ, ವಿಷ್ಣುವಿನ ಮೇಲೆ ಎಚ್ಚನು. ಅದು ರಭಸದಿಂದ ಕಿಡಿಯನ್ನು ಕಾರುತ್ತ ಬಂದು, ಹರಿಯ ಎದೆಯನ್ನು ಸೀಳಿ, ರಕ್ತವನ್ನು ಸುರಿಸಿತು. ಇದರಿಂದ ಹರಿಯು ಬಲವಳಿದು ಮೂರ್ಛೆಗೊಂಡು ರಥದಲ್ಲಿ ಬಿದ್ದನು. ಇನ್ನಿದ್ದರೆ ಹರಿಯು ಉಳಿಯುವುದಿಲ್ಲವೆಂದು ಯೋಚಿಸಿ, ಅವನ ಸಾರಥಿಯು ರಥವನ್ನು ಬೇಗನೆ ತಮ್ಮ ಪಾಳೆಯಕ್ಕೆ ಸಾಗಿಸಿದನು. ಅದರೊಡನೆ ದೇವತಾಸೇನೆಯೂ ಹಿಂದಿರುಗಿತು. ರಾಕ್ಷಸರು ಕೋಲಾಹಲಮಾಡಿ ದೇವತೆಗಳನ್ನು ತರುಬಿಕೊಂಡು ಹೋದರು. ಓಡಲಾರದೆ ರಕ್ಕಸರ ಕೈಗೆ ಸಿಕ್ಕಿ ಒಂದುನೂರು ಪದ್ಮಸಂಖ್ಯೆಯಷ್ಟು ದೇವತೆಗಳು ಸತ್ತರು. ಕೆಲಕೆಲರು ಪ್ರಾಣಭೀತಿಯಿಂದ ನೀರನ್ನು ಹೊಕ್ಕು, ಬೆರಲನ್ನು ಬಾಯಿಗ್ಗಿಟ್ಟು, ಹುಲ್ಲನ್ನು ಕಚ್ಚಿ, ಹುತ್ತವನ್ನೇರಿ, ಕಾಲ್ಗೆ ಬಿದ್ದು, ದೈನ್ಯದಿಂದ ಹಲ್ಲನ್ನು ಬಿಟ್ಟು, ಕೊಲ್ಲಬೇಡಿ ಕೊಲ್ಲಬೇಡಿ

ರೆಂದು ಬೇಡಿ, ರಕ್ಕಸರ ದಸೆಯನ್ನು ಪಡೆದು, ತಲೆಯುಳುಹಿಕೊಂಡರು. ಅಷ್ಟರಲ್ಲಿ ಮುರಿದು ಬಂದು ಪಾಳಯಕ್ಕೆ ಬಿದ್ದ ದೇವಸೇನೆಯ ಗೋಳನ್ನೂ ರಕ್ಕಸರು ಅಟ್ಟಿಕೊಂಡು ಬರುತ್ತಿರುವುದನ್ನೂ ದಳಪತಿಯಾದ ಕುಮಾರಸ್ವಾಮಿಯು ಕಂಡು, ಕಡುಬೇಸರಿ ಎದ್ದು,— "ಹೊಡೆ ಬಾಯ್ಮೇಲೆ, ಬಡಿ ತಲೆಯ ಮೇಲೆ, ಗುದ್ದು ಕತ್ತಿನಮೇಲೆ, ಕೀಳು ಮೀಸೆಗಳ, ಸೀಳು ನಾಲಗೆಗಳ; ಈ ಸೊಣಜುಗಳು ಪ್ರಾಣದಾಸೆಗಾಗಿ ತಿರುಗಿ ಓಡಿಬರಬಹುದೆ? ಹೊಯ್ಯಾಡಿ ಸತ್ತಿದ್ದರೆ ಈ ಭಂಡರಿಂದ ಆಗುತ್ತಿದ್ದ ನಷ್ಟವೇನು? ತಿಂಬುಪ್ಪಿಗೆ ಎರಡು ಬಗೆಯುವ ಇಂಥ ದಾಂಡಿಗರು ಕೋಟಿಮಂದಿ ಯಿದ್ದರೆತಾನೇ ಫಲವೇನು? ಸುಡು ಇವರ ಪೌರುಷವನ್ನ" ಎಂದು ತಿರಸ್ಕರಿಸಿ, ತನ್ನ ಮಣಿರಥವನ್ನೇರಿ, ಧನುಸ್ಸಿಗೆ ಸಿಂಜಿನಿಯನ್ನು ತೊಡಿಸಿ, ಠಂಕಾರಮಾಡುತ್ತ ರಾಕ್ಷಸರ ಮೇಲೆ ಸಾಗಿದನು. ಭೇರಿಗಳು ಕಹಳೆಗಳು ಭೋರ್ಗರೆದುವು. ಮುಂದೆ ರಥಗಳ ಇಕ್ಕೆಲದಲ್ಲಿ ಲೋಕೈಕವೀರನ ಬಿರುದಾವಳಿಗಳನ್ನು ಉದ್ಘೋಷಿಸುತ್ತಿದ್ದರು. ಷಣ್ಮುಖನು ಶುಂಭನಿಗಿದಿರಾಗಿ ಬಾಣಗಳನ್ನು ಅವನಮೇಲೆ ಬಿಟ್ಟನು. ರಕ್ಕಸನು ಪ್ರತಿಬಾಣಗಳಿಂದ ಕತ್ತರಿಸಲು, ಕುಮಾರನು ಕಿಡಿಮಸಗಿ, "ಎಲೊ ಖೂಳನೆ! ಹರಿಬ್ರಹ್ಮರನ್ನೋಡಿಸಿದಂತೆ ಸದರವೆಂದು ನನ್ನ ಯುದ್ಧವನ್ನು ತಿಳಿಯಬೇಡ; ನಿನ್ನ ಹಿರಿಯರೆಲ್ಲ ನನ್ನೊಡನೆ ಕಾದಿ ಯಾವಗತಿಗೊಂಡರೆಂಬುದನ್ನು ವಿಚಾರಮಾಡಿ ತಿಳಿದುಕೊ; ಸುಮ್ಮನೆ ಕಾದಿ ಪ್ರಾಣವನ್ನೇಕೆ ಬಿಡುತ್ತೀಯೆ? ತಲೆತಪ್ಪಿಸಿಕೊಂಡು ಬಾಳು, ಹೋಗು" ಎಂದು ಮೂದಲಿಸಿ, ಮಸೆದ ಬಾಣಗಳನ್ನು ಬಿಟ್ಟು, ದೈತ್ಯನ ಹಯ ರಥ ಸಾರಥಿಗಳನ್ನೆಲ್ಲ ಕಡಿದುರುಳಿಸಿದನು. ಶುಂಭನು ವಿರಥನಾಗಿ ಗದೆಯನ್ನು ಹಿಡಿದು ತಿರುಹುತ್ತ ರಥವಬಳಿಗೆ ಬಂದು ಅಪ್ಪಳಿಸಲು, ತೇರು ನುಚ್ಚುನೂರಾಯಿತು. ಬೇರೊಂದು ರಥವನ್ನೇರಿ ಬಂದ ಕುಮಾರನು ಒಂದೇ ಬಾಣದಿಂದ ದನುಜನ ಗದೆಯನ್ನು ಖಂಡಿಸಿದನು. ಮತ್ತೆ ದೈತ್ಯನು ಕತ್ತಿಯನ್ನು ಝಳಪಿಸಿ ಬರಲು, ಅದನ್ನೂ ಕತ್ತರಿಸಿದನು. ಬಳಿಕ ದೈತ್ಯನು ತನ್ನಲ್ಲಿದ್ದ ಪರಶು ಮುಸಲ ತೋಮರ ಚಕ್ರ ಪರಿಘ ಮೊದಲಾದ ಆಯುಧಗಳನ್ನೆಲ್ಲ ಹಿಡಿಹಿಡಿದು ಬಂದನು. ಅವೆಲ್ಲವನ್ನೂ ಷಣ್ಮುಖನು

ಬಾಣಪ್ರಯೋಗದಿಂದ ತುಂಡುಮಾಡಿದನು. ಕಡೆಗೆ ಅಸುರನು ನಿರಾಯುಧನಾಗಿ ಬುದ್ಧಿಗೆಟ್ಟು ನಿಂತನು. ಅಷ್ಟರಲ್ಲಿ ಕುಮಾರನ ಬಾಣಗಳು ದೈತ್ಯನ ರೋಮಕೂಪಗಳಲ್ಲೆಲ್ಲ ನಟ್ಟು ಗಾಯಗೊಳಿಸಿ ರಕ್ತಾಭಿಷೇಕಮಾಡಿದುವು. ಅದರಿಂದ ಬಳಲುನೊಂದ ದಾನವನು ಮಹತ್ತಾಗಿ ಆರ್ಭಟಿಸಿ, ಒಂದೇಬಾರಿಗೆ ಕುಮಾರನನ್ನೆತ್ತಿ ನುಂಗುವೆನೆಂದು ಬಾಯ್ದೆರೆದು ಕೈಚಾಚಿ ಮೇಲೆ ಬೀಳಲು ಪ್ರಯತ್ನಿಸಿದನು. ಆಗ ಶಕ್ತ್ಯಾಯುಧವನ್ನು ಬಿಟ್ಟು ಒಂದೇ ಏಟಿಗೆ ಶುಂಭನ ತಲೆಯನ್ನು ತರಿದಿಕ್ಕಬೇಕೆಂದು ಷಣ್ಮುಖನಿಗೆ ತೋರಿದರೂ, ಆ ದೈತ್ಯನ ಪ್ರಾಣವು ಪಾರ್ವತಿಯ ಅಸ್ತ್ರಕ್ಕೆ ಬಲಿಯಾಗಬೇಕಾಗಿರುವ ನಿಯಮವನ್ನು ಆಲೋಚಿಸಿಕೊಂಡು ಶಾಂತನಾಗಿ, ಬೇರೆ ೬ ಬಾಣಗಳನ್ನು ತೆಗೆದು ಶುಂಭನ ಎದೆಗೆ ಬಿಟ್ಟು ರಕ್ತವನ್ನು ಸುರಿಸಿದನು. ಅದರಿಂದ ಪೂರ್ಣವಾಗಿ ಬಸವಳಿದ ದೈತ್ಯನು ಹೆಮ್ಮರವನ್ನು ಕಡಿದುರುಳಿಸಿದಂತೆ ಭೂಮಿಯ ಮೇಲೆ ಬಿದ್ದುಕೊಂಡನು. ಇವನು ಬಿದ್ದ ಸುದ್ದಿಯನ್ನು ಕೇಳಿ, ನಿಶುಂಭ, ಶರಭ, ಗಜಶಿರ, ಕಪಿಲ ಮೊದಲಾದ ದೈತ್ಯನಾಯಕರೆಲ್ಲ ಓಡಿಬಂದು ಶುಂಭನನ್ನು ಸುತ್ತಿ ಶೈತ್ಯೋಪಚಾರವನ್ನು ಮಾಡುತ್ತ, ತಮ್ಮ ಪಾಳಯಕ್ಕೆ ಸಾಗಿಸಿ, ಇತ್ತ ಸರ್ವರೂ ವೀರಾವೇಶದಿಂದ ಷಣ್ಮುಖನಮೇಲೆ ಸೆಣಸುವುದಕ್ಕೆ ನಿಂತರು. ಇವರೆಲ್ಲರೂ ಕುಮಾರಸ್ವಾಮಿಯಮೇಲೆ ಮುತ್ತಿದುದು ಸೂರ್ಯನನ್ನು ಕತ್ತಲೆಯು ಆವರಿಸಿದಂತಾಯಿತು. ಆನೆಯನ್ನು ನೊಳ್ಳೆಗಳು ಕವಿದಂತಾಯಿತು. ಪ್ರಳಯರುದ್ರನ ಪರಾವತಾರದಂತೆ ಭಯಂಕರನಾಗಿದ್ದ ಕುಮಾರಸ್ವಾಮಿಯು ಅವರೆಲ್ಲರಿಗೂ ಬಾಣಗಳನ್ನು ಪ್ರಯೋಗಿಸಿ, ಇದಿರಿಗೆ ಬಂದ ನಿಶುಂಭನನ್ನು ಹೊಡೆದು, ಬಲದಲ್ಲಿ ಮೇಲೆ ಬಿದ್ದ ಕುಂಭನನ್ನು ಬಡಿದು, ಎಡಗಡೆಗೆ ಬಂದ ಶರಭನನ್ನು ಸೀಳಿ, ಹಿಂಗಡೆ ಬಂದ ಕುಂಭನನ್ನು ಕೆಡಹಿ, ಮೇಲ್ಗಡೆಯಿಂದ ಕವಿದ ಶಬಲ ಶಂಖಶಿರ ಮೊದಲಾದವರನ್ನೆಲ್ಲ ಧರೆಗುರುಳಿಸಿ, ವಜ್ರನಾಭಾದಿಗಳಿಗೆ ಮೂರ್ಛೆಗೊಳಿಸಿ, ರಾಕ್ಷಸಸೈನ್ಯವನ್ನೆಲ್ಲ ನಿಮಿಷಮಾತ್ರದಲ್ಲಿ ಜರ್ಝರಗೊಳಿಸಿದನು. ಅವರಲ್ಲಿ ಸಾಯುವವರಿಗೆ ಕಡೆಯಿಲ್ಲದಂತೆಯೂ, ವಾಹನದಿಂದ ಕೆಳಗುರುಳುವವರಿಗೆ ತಡೆಯಿಲ್ಲದಂತೆಯೂ, ಮೂರ್ಛೆಗೊಳ್ಳುವವರಿಗೆ ಮಿತಿಯಿಲ್ಲದಂತೆಯೂ, ಕೈ ಕಾ

ಲ್ಗಳನ್ನು ಕಳೆದುಕೊಂಡು ಅರೆಜೀವವಾಗಿರುವವರಿಗೆ ಗಣನೆಯಿಲ್ಲದಂತೆಯೂ, ಎದೆಗೆಟ್ಟೋಡುವವರಿಗೆ ಧೈರ್ಯಗುಡುವವರಿಲ್ಲದಂತೆಯೂ ಆಯಿತು. ಆನೆ ಕುದುರೆ ಮೊದಲಾದ ತಮ್ಮ ತಮ್ಮ ವಾಹನಗಳೆಲ್ಲವನ್ನೂ ಅಲ್ಲಲ್ಲೇ ಬಿಟ್ಟು ಕಂಡಕಂಡಕಡೆಗೆ ರಾಕ್ಷಸರು ಓಡುತ್ತ ಗೋಳಿಟ್ಟರು. ಅಲ್ಲಲ್ಲಿಗೆ ದೇವತೆಗಳ ಕೈಗೆ ಸಿಕ್ಕಿ, "ನಿಮ್ಮ ಮನೆಯ ಜೀತವನ್ನು ಮಾಡಿಕೊಂಡಿರುತ್ತೇವೆ, ನಮಗೆ ಪ್ರಾಣದಾನ ಮಾಡಿರಿ; ನಾವು ಸಾಯುವವರೆಗೂ ಮತ್ತೆ ದೇವತೆಗಳಮೇಲೆ ಕೈಮಾಡುವುದಿಲ್ಲವೆಂದು ಶಪಥ ಮಾಡುತ್ತೇವೆ; ನಮ್ಮನ್ನು ರಕ್ಷಿಸಿರಿ" ಎಂದು ಬಗೆಬಗೆಯಾಗಿ ಬೇಡಿ, ಪ್ರಾಣವನ್ನುಳಿಸಿಕೊಂಡು ಹೋಗುತ್ತಿದ್ದರು. ರಕ್ಕಸರನ್ನು ಅಟ್ಟಿಕೊಂಡು ಅವರ ಪಾಳೆಯದವರೆಗೂ ದೇವಸೇನೆಯು ಹೋಗಿ, ಅಲ್ಲಿ ಸಿಕ್ಕಿಸಿಕ್ಕಿದುದನ್ನು ಸೂರೆ ಮಾಡಿಕೊಂಡು ಬಂದಿತು. ಇತ್ತ ಷಣ್ಮುಖನು ಜಯಭೇರಿಯ ಮಹಾವಾದ್ಯದೊಡನೆ ಬಿರುದಾವಳಿಗಳನ್ನು ಹೊಗಳಿಸಿಕೊಳ್ಳುತ್ತ, ಶಿವನ ಬಳಿಯಣ ತಮ್ಮ ಪಾಳೆಯಕ್ಕೆ ಹಿಂದಿರುಗಿದನು. ಎಂಬಲ್ಲಿಗೆ ಒಂಭತ್ತನೇ ಅಧ್ಯಾಯವು ಸಂಪೂರ್ಣವು.

---

## ೧೦ ನೇ ಅಧ್ಯಾಯವು.

### ಅಂಧಕಾಸುರ ಸಹ್ಮಾರವು.

ಸಿದ್ಧರಾಮೇಶನೆ! ಅಷ್ಟರಲ್ಲಿ ಸಂಧ್ಯಾಕಾಲವಾಯಿತು. ಅಂಧಕಾಸುರನ ಕಡೆಯ ಸೇನಾಪ್ರಮುಖರಲ್ಲಿ ಕಳೆದುಳಿದವರು ಅಹಂಕಾರವಡಗಿ ದುಗುಡದಿಂದ ತಮ್ಮ ತಮ್ಮ ಗೂಡಾರಗಳನ್ನು ಹೊಕ್ಕಿಕೊಂಡರು. ದೈತ್ಯೇಂದ್ರನು ಪರಿಮಿತವಾದ ಆಸ್ಥಾನದಲ್ಲಿ ಕುಳಿತು ತನ್ನ ಸೇನಾಪ್ರಮುಖರನ್ನೆಲ್ಲ ಬರಮಾಡಿದನು. ಅವರುಗಳು ತಲೆಯಮೇಲೆ ಮುಸುಕಿಟ್ಟು, ಕೈಯಲ್ಲಿ ಊರು ದೊಣ್ಣೆಗಳನ್ನು ಹಿಡಿದು, ಕುಂಟುತ್ತ, ಕೆಮ್ಮುತ್ತ, ನಡುಗುತ್ತ, ಬಿಸುಸುಯ್ದು, ನಾಚಿಕೆಯಿಂದ ತಲೆ ಬಗ್ಗಿಸಿಕೊಂಡು, ಒಬ್ಬರ ಮರೆಯಲೊಬ್ಬರು ಬಂದು, ಸದ್ದಿಲ್ಲದೆ ಕುಳಿತುಕೊಂಡರು. ತೆರೆಗಳಿಲ್ಲದ ಸಮುದ್ರದಂತೆಯೂ ಎಲೆಗಳಲ್ಲಾಡದ ಕಾನನದಂತೆಯೂ ರಾಕ್ಷಸಸಭೆಯು ನಿಶ್ಶಬ್ದವಾಗಿದ್ದಿತು. ಆಗ ದಾನವರಾಜನ

ಅಲ್ಲಿದ್ದ ಒಬ್ಬೊಬ್ಬರನ್ನಾಗಿ ಹೆಸರ ಹಿಡಿದು ಕರೆದು, ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು,– ನೀವು ನಡೆದುಹೋದ ಕಾರ್ಯಕ್ಕಾಗಿ ಯಾತಕ್ಕೆ ಚಿಂತಿಸುತ್ತೀರಿ? ಜಯಾಪಜಯಗಳು ಯಾರಿಗೆತಾನೇ ಸ್ಥಿರವು? ನಮ್ಮ ಪೂರ್ವದ ರಾಕ್ಷಸಶ್ರೇಷ್ಠರುಗಳು ಇದಕ್ಕಿಂತಲೂ ಅಧಿಕವಾದ ಪರಾಭವವನ್ನು ಹರಿಬ್ರಹ್ಮಾದಿಗಳಿಗುಂಟುಮಾಡಿಲ್ಲ? ಎಂದು ಮೊದಲಾಗಿ ಹೇಳಿ, ಸಮಾಧಾನಪಡಿಸಿ, ಆಪ್ತರಾದ ಜನಗಳನ್ನು ಕರೆದು, ಅವರೊಡನೆ– "ಹಿಂದಾದ ಜಯಾಪಜಯಗಳ ಮಾತು ಹಾಗಿರಲಿ; ಮುಂದೆ ಶತ್ರುಗಳನ್ನು ಗೆಲ್ಲುವುದಕ್ಕೆ ಉಪಾಯವೇನೆಂಬುದನ್ನು ನೀವೆಲ್ಲರೂ ಚೆನ್ನಾಗಿ ಆಲೋಚಿಸಿ ಹೇಳಿರಿ" ಎಂದು ಕೇಳಿದನು. ಅದನ್ನು ಕೇಳಿ ಅವರುಗಳು ಒಬ್ಬರೊಬ್ಬರ ಮುಖವನ್ನು ನೋಡುತ್ತಲಿರಲು, ಗಗನಮೂರ್ಧ್ನಿ ಯೆಂಬ ರಾಕ್ಷಸನು ಎದ್ದು ನಿಂತು– "ಜೀಯಾ! ಈ ನಿಮ್ಮ ಮಹಾಸಭೆಯಲ್ಲಿ ಇನ್ನೂ ಮಹಾವೀರಾಧಿವೀರಶ್ರೇಷ್ಠರುಗಳಿರುವರು; ಇವರ ಸಹಾಯವು ದೊರೆತಿರುವಾಗ ಶತ್ರುಜಯವು ತಮಗೆ ಅಸಾಧ್ಯವಲ್ಲ; ಆದರೆ, ನನ್ನ ಮನಸ್ಸಿಗೆ ತೋರಿದ ಒಂದು ಸಂಗತಿಯನ್ನು ಬಿನ್ನೈಸಿಕೊಳ್ಳುತ್ತೇನೆ;– ಇದುವರೆಗೂ ನಾವುಗಳು ದೇವತೆಗಳ ಮೇಲೆ ಹಗಲಿನಲ್ಲೇ ಯುದ್ಧವನ್ನು ಮಾಡುತ್ತಿದ್ದುದರಿಂದ ಅಪಜಯವನ್ನೇ ಪಡೆಯಬೇಕಾಯಿತು; ನಿಶಾಚರರಾದ ನಮಗೆ ರಾತ್ರಿ ಕಾಲವೇ ಕಾರ್ಯಸಿದ್ಧಿಗೆ ಪ್ರಶಸ್ತವಾದದ್ದು; ಅದುಕಾರಣ ಈ ರಾತ್ರಿಯೇ ನಾವು ಯುದ್ಧವನ್ನಾರಂಭಿಸಬೇಕು. ಈಗ ದೇವತೆಗಳೆಲ್ಲರೂ ಗೆದ್ದೆವೆಂಬ ಅಹಂಕಾರದಿಂದ ಮೈಮರೆತು ನಿದ್ರೆಯಲ್ಲಿದ್ದಾರೆ; ನಮ್ಮ ಸರ್ವಶಕ್ತಿಯನ್ನೂ ಉಪಯೋಗಿಸಿ ಕಾದಾಡಿದರೆ ಅವರನ್ನು ಈ ದಿನವೇ ನಿಜವಾಗಿಯೂ ಗೆಲ್ಲುವೆವು; ತಮ್ಮ ಚಿತ್ತಕ್ಕೆ ಸರಿದೋರಿದರೆ ಇದರಂತೆ ಮಾಡಬಹುದು" ಎಂದು ಅರಿಕೆ ಮಾಡಿದನು. ಕುಂಭ ಶರಭ ಮೊದಲಾದ ದೈತ್ಯನಾಯಕರು ಗಗನಮೂರ್ಧ್ನಿಯ ಅಭಿಪ್ರಾಯವೇ ನಮಗೂ ಸಮ್ಮತವೆಂದು ನುಡಿದರು. ಅದಕ್ಕೆ ಪ್ರಹ್ಲಾದನು ನಕ್ಕು– ತಿಳಿದೂ ತಿಳಿದು ಹೀಗೆ ಭ್ರಾಂತರಾಗಬಹುದೆ? ಪ್ರಭುವೆ! ಕಂಡೂ ಕಾಣದಂತೆ ಆಚರಿಸುವ ಕೋಣನಂತಹ ಈ ಜನಗಳನ್ನು ಬೋಧಿಸುವುದಕ್ಕೆ ಶಿವನಿಂದಲೂ ಆಗುವುದಿಲ್ಲ;

ಇದುವರೆಗೆ ನಮ್ಮ ಸೇನೆಯಲ್ಲಿ ಶತಮಾಯ, ಜಂಭ, ನಮುಚಿ, ಬಲ ಮೊದಲಾದ ವೀರಾಧಿವೀರ ರಾಕ್ಷಸರೆಷ್ಟೋ ಮಂದಿಗಳು ಹತರಾದರು; ಉಳಿದ ಸೇನೆಯು ಅಳಿಯುವದಕ್ಕೆ ಮಿತಿಯೇ ಇಲ್ಲ; ದೇವತೆಗಳ ಕಡೆಯಾದರೋ ಪ್ರಮುಖರಾದವರಲ್ಲಿ ಯಾರು ಸತ್ತಿದಾರೆ? ಬೆರಳು ಮಡಿಚಿ ಹೇಳು ನೋಡುವ! ಇದರಿಂದಲೇ ಜಯಾಪಜಯಲಕ್ಷ್ಮೀಕಟಾಕ್ಷವು ಎತ್ತೆತ್ತ ಹೇಗಿದೆ ಯೆಂಬುದು ನಿನಗೇ ಗೊತ್ತಾಗಬಹುದು; ಮುಂಗಾಣದ ಈ ನಿನ್ನ ಪರಿವಾರದ ಮದ್ಯಪಾಯಿಗಳ ಮಾತನ್ನು ನಂಬಿ, ಭ್ರಾಂತಿಯಿಂದ ಕೆಟ್ಟುಹೋಗದೆ, ಶಿವಪಾದವನ್ನು ಮರೆಹೊಕ್ಕು ಬಾಳು; ಎಂದು ಮೂರು ವೇಳೆ ಸಾರಿ ಸಾರಿ ನುಡಿದನು. ಆ ಮಾತು ಕಿವಿಗೆ ಬಿದ್ದ ಕೂಡಲೇ ಅಂಧಕನು ಕಿಡಿಕಿಡಿಯಾಗಿ, ಎಲೊ ಸುಂಠನೆ! ಮಹಾಪರಾಕ್ರಮಿ, ದೂರಾಲೋಚನಪರ, ಎಂದು ನಿನ್ನನ್ನು ಇಲ್ಲಿಗೆ ಮಂತ್ರಾಲೋಚನೆಗೆ ಕರೆದವರಾರು? ನಿನ್ನ ಯೋಗ್ಯತೆಗೆ ತಕ್ಕಮಾತನ್ನಾಡಿದೆ! ಸಾಕು ಬಾಯ್ಮುಚ್ಚು, ಎಂದು ತಿರಸ್ಕರಿಸಿ, ಗಗನಮೂರ್ಧ್ನಿಗೆ ಸೇನಾಧಿಪತಿಪಟ್ಟವನ್ನು ಕಟ್ಟಿ, ಆತನು ಯೋಚಿಸಿದಂತೆಯೇ ಯುದ್ಧಕಾರ್ಯವನ್ನಾಗಮಾಡುವುದಕ್ಕೆ ವೀಳೆಯವನ್ನು ಕೊಟ್ಟು ಕಳಿಸಿದನು. ರಾಕ್ಷಸಸೇನೆಯು ಆನೆಗಳ ಗಂಟೆಗಳನ್ನು ಕಿತ್ತು, ಪಂಜುಗಳನ್ನಾರಿಸಿ, ವಾದ್ಯಗಳನ್ನು ಬಿಸುಟು, ಸದ್ದು ಬೆಳಕಿಲ್ಲದಂತೆ ಗುಪ್ತವಾಗಿ ಸರ್ವಸನ್ನಾಹವನ್ನೂ ಮಾಡಿಕೊಂಡು, ಈ ದಿನ ಜಯಾಪಜಯಗಳೆರಡರಲ್ಲೊಂದನ್ನು ಸಂಪೂರ್ಣವಾಗಿ ಪಡೆದುಕೊಂಡುಬರುವುದೇ ಖಂಡಿತವೆಂದು ನಿರ್ಧರಿಸಿ, ಈಶ್ವರನ ಪಾಳೆಯದ ಸುತ್ತಲೂ ಮುತ್ತಿಗೆ ಹಾಕಿತು. ಮತ್ತು ಕಾವಲಿನವರಮೇಲೆ ಮಂಕುಬೂದಿಯನ್ನೂದಿ, ಬೇಲಿಗಳನ್ನೂ ಕಟ್ಟುಕಟ್ಟೆಗಳನ್ನೂ ಹಾದು ಪಾಳೆಯದ ಒಳಹೊಕ್ಕರು. ದೇವತೆಗಳೆಲ್ಲರೂ ನಿದ್ರಾಪರವಶರಾಗಿದ್ದರು. ಆಗ ದೈತ್ಯರು ಮನಸ್ಸಿಗೆ ತೋರಿದಂತೆ ದೇವತೆಗಳನ್ನು ಕತ್ತರಿಸುತ್ತ ಹೋದರು. ಮಲಗಿದ್ದವರನ್ನು ಹಾಗೆಯೇ ಕೊರಳನ್ನು ಕೊಯ್ದರು. ಕೆಲರ ತಲೆಯಮೇಲೆ ಕಲ್ಲುಗುಂಡುಗಳನ್ನು ಹಾಕಿದರು. ಕೆಲರ ಹೊಟ್ಟೆಯನ್ನು ತುಳಿದು ಸಾಯಿಸಿದರು. ಕೆಲರ ಕತ್ತನ್ನು ಕಿವುಚಿದರು. ಕೆಲರ ಎದೆಗೆ ಶೂಲವನ್ನು ನಟ್ಟರು. ಕೆಲರ ಗೂಡಾರಗಳಿಗೆ ಬೆಂಕಿಯನ್ನಿಟ್ಟ

ರು. ಮಲಗಿದ್ದವರನ್ನು ಮೆಟ್ಟಿ ತುಳಿದರು. ಓಡುವವರನ್ನು ಅಟ್ಟಿಗಾ ಲೊಟ್ಟು ಕಡಹಿ ತರಿದರು. ಹೀಗೆ ಗಣನಾತೀತವಾದವು ಕೊಲೆಗಳ ನ್ನು ಪರಿಪರಿಯಾಗಿ ಮಾಡಿದರು. ಇದರಂತೆಯೇ ಆನೆ ಕುದುರೆ ರಥಗ ಳನ್ನೂ ಹಾಳ್ಮಾಡಿದರು. ಈ ಬೊಬ್ಬಾಟವು ಶಿವನ ಪಾಳಯದಲ್ಲೆಲ್ಲ ತುಂಬಿತು. ಆ ಸೇನೆಯವರೆಲ್ಲರೂ ಎದ್ದು, ಹೋ ಹೋ! ಹಿಡಿ; ಹಿಡಿ; ಶತ್ರುಗಳು! ಶತ್ರುಗಳು! ಎಂದು ಅಬ್ಬರಿಸಿ, ತಮ್ಮ ತಮ್ಮಮೇಲೆಯೇ ತಾವು ಬಿದ್ದು, ಕಡಹಿ ತಲೆಗೆದರಿ ಭ್ರಾಂತರಾಗಿ ಓಡಿಯಾಡುತ್ತಿದ್ದರು. ಅವರವರಿಗೆ ಸಿಕ್ಕಿದ ವಾಹನಗಳನ್ನವರವರು ಹತ್ತಿ, ಸಿಕ್ಕಿದ ಆಯುಧಗ ಳನ್ನು ಹಿಡಿದು, "ಎಲ ಎಲಾ ಮೋಸಗಾರರಿರಾ! ಇಂಥ ಅವೇಳೆಯ ನ್ನು ಸಾಧಿಸಿ, ಕೊಲ್ಲುವುದಕ್ಕೆ ಬಂದಿರಾ? ಈ ಅಧರ್ಮವು ನಿಮ್ಮನ್ನು ನಿಪಾತಗೊಳಿಸದೆ ಬಿಡುವುದೆ?" ಎಂದು ಮೊದಲಾಗಿ ಹೇಳುತ್ತ, ರಾ ಕ್ಷಸರಮೇಲೆ ಬೀಳುವ ಸಂಭ್ರಮದಲ್ಲಿ, ಕತ್ತಲೆಯಿಂದ ಕಣ್ಗಾಣದೆ ತಮ್ಮ ವರನ್ನೇ ತಾವು ಕಾದುತ್ತಿದ್ದರು. ಅಷ್ಟರಲ್ಲಿ ಪ್ರಮಥಗಣರುದ್ರಗ ಣಾದಿಗಳೆಲ್ಲರೂ ಮಹಾಪ್ರಳಯಕಾಲದ ಮೇಘಗಳಂತೆ ಆರ್ಭಟಿಸಿಕೊಂ ಡೆದ್ದರು. ಚಾಮುಂಡಿ ವಾರಾಹಿ ಭೈರವಿ ದುರ್ಗಿ ಮೊದಲಾದ ಮಹಾಶಕ್ತಿ ಗಳೆಲ್ಲರೂ ಹಲ್ಗಡಿದು ಎದ್ದರು. ಎಲ್ಲ ಸೇನೆಯೂ ಕುಮಾರ ವೀರೇಶರ ಅಪ್ಪಣೆಯ ನೇರೆ ಅತಿ ರೌದ್ರಾವೇಶದಿಂದ ದಾನವರಮೇಲೆ ಬಿದ್ದಿತು. ಹಿಡಿ, ಬಾಚು, ನುಂಗು, ಕತ್ತರಿಸು, ಕೊಯ್, ನೂಕು, ಕಡಿ, ಕೊಚ್ಚು ಎಂದು ಮೊದಲಾಗಿ ಕೂಗುತ್ತ, ಅರಿತರಿದು ರಕ್ಕಸರನ್ನುರುಳಿಸುತ್ತ, ರಕ್ತವನ್ನು ಹರಿಸುತ್ತ, ಹೆಣಗಳನ್ನೊಟ್ಟುತ್ತ, ಅರುಬಿಕೊಂಡು ಹೋದ ರು. ರಾಕ್ಷಸರು ದೇವತೆಗಳ ಹೊಡೆತವನ್ನು ತಾಳಲಾರದೆ ಬೆನ್ನತೋರಿಸಿ ಓಡಹತ್ತಿದರು. ದೇವತೆಗಳು ಬಿಡದೆ ಅಟ್ಟಿಸಿಕೊಂಡು ಹೋಗಿ, ಅಲ್ಲೂ ಕಡಿಕಡಿದು ಕೊಲ್ಲುತ್ತ, ಮಹಾಲಯವನ್ನುಂಟುಮಾಡಿದರು. ವೀರಭದ್ರಸೇ ನೆಯ ಹಾವಳಿಯೂ, ಷಣ್ಮುಖನ ದಳದ ಉಪಟಲವೂ, ಗಣರಾಜನ ಬಲ ದ ಉಪದ್ರವವೂ, ಭೈರವನ ವಾಹಿನಿಯ ಕೋಲಾಹಲವೂ, ಶಕ್ತಿಗಳ ಅವಾಂತರವೂ, ದನುಜರನ್ನು ಎದೆಗೆಡಿಸಿ ಮೂಲೆಯನ್ನು ಹೊಕ್ಕಿಕೊಳ್ಳು ವಂತೆ ಮಾಡಿದುವು. ಎತ್ತ ನೋಡಿದರೂ ರಾಕ್ಷಸರ ಭೀಕರರೋದನಧ್ವನಿ

ಯೇ ಕೇಳಿಸುತ್ತಿದ್ದಿತು. ದೇವತೆಗಳು ದೈತ್ಯರ ಪಾಳೆಯವನ್ನು ಹೊಕ್ಕು, ಅಲ್ಲಿದ್ದ ಅವರ ಹೆಂಡಿರು ಮಕ್ಕಳು ಮರಿಗಳನ್ನೆಲ್ಲ ಸೂರೆ ಮಾಡಿ, ಗಡಾರಗಳಿಗೆ ಬೆಂಕಿಯಿಕ್ಕಿ, ಕಟ್ಟಿದ್ದ ಆನೆ ಕುದುರೆಗಳ ಹಗ್ಗಗಳನ್ನು ಕೊಯ್ದು, ಇದಿರುಬಿದ್ದವರನ್ನು ತರಿದು, ಕೋಲಾಹಲ ಮಾಡುತ್ತಿದ್ದರು. ತಲೆಯುಳುಹಿಕೊಂಡು ಹೋದ ರಾಕ್ಷಸರು ಅಂಧಕಾಸುರನೊಡನೆ ನಡೆದ ಸಂಗತಿಯನ್ನೆಲ್ಲ ಬಿನ್ನೈಸಿಕೊಂಡು ರೋದಿಸಿದರು. ಅವನ ಕಣ್ಣಿನಿಂದ ಕೋಪಾಗ್ನಿಯ ಕಿಡಿಗಳು ಸುರಿದುವು. ಮಾಡಿದ ಗರ್ಜನೆಯಿಂದ ದೇವತೆಗಳ ಬಲವೆಲ್ಲ ಗಡಗಡನೆ ಕಂಪಿಸಿತು. ರಥವನ್ನೇರಿ ತನ್ನ ಹತ್ತಿರದ ಸೈನ್ಯವೆಲ್ಲಕ್ಕೂ ಪ್ರಯಾಣಸೂಚನೆಯ ತುತ್ತುರಿಯನ್ನು ಹಿಡಿಸಿದನು. ವಾದ್ಯಗಳು ಮೊಳಗಿದುವು. ಮಾರುದೂರದಲ್ಲಿಯೇ ರಕ್ಕಸನ ಚತುರಂಗಸೈನ್ಯಕ್ಕೂ ದೇವಸೈನ್ಯಕ್ಕೂ ಮತ್ತೆ ಯುದ್ಧವು ಹತ್ತಿತು. ಒಬ್ಬರ ಮುಖವನ್ನು ಒಬ್ಬರು ಕಾಣದೆ ಎಡೆಬಿಡದಂತೆ ಇದಿರುಮುಖಕ್ಕೆ ಉಭಯಪಕ್ಷದ ವೀರರೂ ಬಾಣಗಳನ್ನು ಬಿಡುತ್ತಿದ್ದರು. ಸತ್ತವರಾರೋ ಉಳಿದವರಾರೋ ಒಬ್ಬರಿಗೂ ಗೊತ್ತಾಗಲಿಲ್ಲ. ಆಯುಧಗಳ ಪ್ರಹಾರದಿಂದ ಹುಟ್ಟಿದ ಬೆಳಕು ಬಿಡುವಿಲ್ಲದೆ ಮಿಂಚಿನಂತೆ ಹೊಳೆಯುತ್ತಿದ್ದಿತು; ವೀರನಾದವೇ ಮೇಘಗರ್ಜನೆಯಂತೆ ಕೇಳುತ್ತಿದ್ದಿತು; ರಕ್ತದ ಹಾರಾಟವೇ ಬಿರುಮಳೆಯಾಗಿದ್ದಿತು; ಕವಿದ ಕತ್ತಲೆಯೋ ಕಾರ್ಮುಗಿಲಿನಂತಿದ್ದಿತು: ಹಾರಿಯಾಡುವ ತಲೆಗಳೇ ಆಲಿಕಲ್ಲಿನಂತಿದ್ದುವು; ಇದರಿಂದ ಮಹಾಪ್ರಳಯ ವೃಷ್ಟಿಕಾಲದಂತೆ ಆ ಸಮಯವು ಭೀಕರವಾಗಿ ತೋರುತ್ತಿದ್ದಿತು. ಅಷ್ಟರಲ್ಲಿ ಉಭಯ ಸೇನೆಯವರೂ ಪಂಜುಗಳನ್ನು ಹತ್ತಿಸಿ ಬೆಳಕು ಮಾಡಿದರು. ಅಂಧಕಾಸುರನಿಗೂ ವೀರೇಶನಿಗೂ, ಗಗನಮೂರ್ಧ್ನಿಗೂ ಕುಮಾರಸ್ವಾಮಿಗೂ ಯುದ್ಧವು ನಡೆಯಿತು. ಅಂಧಕನು ವೀರೇಶನನ್ನು ಕುರಿತು– “ನೀನೆಯೊ ವೀರಭದ್ರನೆಂಬುವನು ? ಅಂಧಕಾಸುರನ ಬಾಣದ ಬಿಸಿಯು ಹೇಗಿದೆ ಯೆಂಬುದನ್ನು ತಿಳಿದುಕೊಂಡು ನಿಮ್ಮಪ್ಪನಿಗೆ ಹೋಗಿ ತಿಳಿಸು” ಎಂದು ಹೇಳಿ, ಮಹಾತೀಕ್ಷ್ಣಬಾಣಗಳನ್ನು ಒಂದೇಸಮನಾಗಿ ವೀರೇಶನಮೇಲೆ ಕರೆದನು. ಕಾಳೀಪತಿಯು ನಿಮಿಷಮಾತ್ರದಲ್ಲಿ ದನುಜನ ಬಾಣಗಳನ್ನು ಖಂಡಿಸಿ, “ಎಲೊ

ಮದಾಂಧನೆ! ನಮ್ಮಪ್ಪನ ಬಳಿಗೆ ಹೇಳಿಕೊಳ್ಳುವುದಕ್ಕೆ ನಾನು ಹೋಗುತ್ತೇನೋ? ಪರಲೋಕದಲ್ಲಿರುವ ನಿಮ್ಮಪ್ಪನ ಬಳಿಗೆ ನೀನು ಹೋಗುತ್ತೀಯೋ? ಅದು ಉತ್ತರಕ್ಷಣದಲ್ಲೇ ಗೊತ್ತಾಗುತ್ತದೆ; ಈ ನನ್ನ ಬಾಣದ ರುಚಿಯನ್ನು ನೋಡು" ಎಂದು ಹೇಳಿ, ೧೦ ಬಾಣಗಳನ್ನು ದೈತ್ಯನಮೇಲೆ ಪ್ರಯೋಗಿಸಿದನು. ಅವುಗಳನ್ನೆಲ್ಲ ಅಂಧಕನು ಮಧ್ಯದಲ್ಲೇ ಖಂಡಿಸಿ, ೨೦ ಬಾಣಗಳನ್ನು ಬಿಟ್ಟನು. ಅವನ್ನು ವೀರೇಶನು ಕತ್ತರಿಸಿ, ಪ್ರತಿಬಾಣಗಳನ್ನು ಬಿಟ್ಟನು. ಅವನ್ನು ರಾಕ್ಷಸನು ಕತ್ತರಿಸಿದನು. ಹೀಗೆ ಇಬ್ಬರೂ ಸಮನಾಗಿ ಕಾದುತ್ತಿರಲು, ವೀರಭದ್ರನು ಅತ್ಯಂತವಾಗಿ ಕೆರಳಿ, ಶಕ್ತ್ಯಾಯುಧವನ್ನು ತೆಗೆದು, ಗರಗರನೆ ತಿರುಗಿಸಿ ದೈತ್ಯೇಂದ್ರನ ಎದೆಗೆ ಗುರಿ ಕಟ್ಟಿ ಹೊಡೆದನು. ಗಿರಿಯಿಂದ ಸುರಿವ ನಿರ್ಝರದಂತೆ ಅವನೆದೆಯಿಂದ ಹೊರಟ ರಕ್ತಪ್ರವಾಹವು ಧೀಂಕಿಡುತ್ತಿದ್ದಿತು. ರಕ್ಕಸನು ಧೊಪ್ಪನೆ ಭೂಮಿಯಮೇಲೆ ಬಿದ್ದು ಮೂರ್ಛೆಗೊಂಡನು. ಅಂಧಕನ ಪ್ರಾಣವು ಶಿವನ ಬಾಣಕ್ಕೆ ಈಡಾಗಬೇಕಾಗಿರುವುದರಿಂದ, ನಾನು ಇವನನ್ನು ಕೊಂದು ಶಿವಾಗ್ರಹಕ್ಕೆ ಪಾತ್ರನಾಗಬಾರದೆಂದು ವೀರೇಶನು ಯೋಚಿಸಿ, ಹಾಗೆಯೇ ಅವನನ್ನುಳಿದು, ಉಳಿದ ರಾಕ್ಷಸರಮೇಲೆ ಬಿದ್ದು ತರಿತರಿದು ಕೆಡಹುತ್ತಿದ್ದನು. ಅತ್ತ ಗುಹನು ಗಗನಮೂರ್ಧ್ನಿಯನ್ನು ಅರೆಗಳಿಗೆಯೊಳಗಾಗಿ ತರಿದು ಪರಲೋಕಕ್ಕೆ ಕಳುಹಿಸಿದನು. ಈರ್ವರೂ ಶೌರ್ಯಾತಿರೇಕದಿಂದ ರಾಕ್ಷಸರ ಪಾಳೆಯವನ್ನೆಲ್ಲ ಕಲಕಾಡುತ್ತ ಲಯಗೊಳಿಸುತ್ತಿದ್ದರು. ಅಷ್ಟರಲ್ಲಿ ಅಂಧಕಾಸುರನು ಮೂರ್ಛೆ ತಿಳಿದೆದ್ದು, ವೀರೇಶನನ್ನು ಹುಡುಕಿಕೊಂಡು ಹಲ್ಗಡಿಯುತ್ತ ಹೊರಟನು. ಇದಿರಿಗೆ ಪರಶಿವನು ಕಾಣಿಸಿಕೊಂಡನು. ಒಡನೆಯೇ ಅಂಧಕನು ಶಿವನ ರಥದ ಮೇಲೆ ಬಾಣಜಾಲವನ್ನು ತುಂಬಿದನು. ಅದನ್ನು ಕಂಡು ಶಿವನು ಮಂದಹಾಸಗೊಂಡು, ಪಿನಾಕವೆಂಬ ಧನುಸ್ಸನ್ನು ಕೈಗೆ ತೆಗೆದುಕೊಂಡು, ಸಿಂಜಿನಿಯನ್ನು ಸೆಳೆದು ಧ್ವನಿ ಮಾಡಿ, ಒಂದೇ ಒಂದು ಬಾಣವನ್ನು ತೆಗೆದು ಹೂಡಿ ಬಿಟ್ಟನು. ಅದು ದೈತ್ಯನ ಬಾಣಗಳೆಲ್ಲವನ್ನೂ ಕಡಿದು ಕೆಡಹಿತು. ದೈತ್ಯನು ಮತ್ತೆ ರೋಷವೇರಿ, ಕೋಟ್ಯನುಕೋಟಿ ಬಾಣಗಳನ್ನು ಶಿವನಮೇಲೆ ಕರೆದನು. ಅವನ್ನೂ ಶಿವನು ಲೀಲಾಮಾತ್ರದಿಂದ ಖಂಡಿಸಿದ

ನು. ದಾನವೇಂದ್ರನು ಮತ್ತೂ ಕೋಪಗೊಂಡು, ನಿಶಿತವಾದ ಅಗಣಿತ
ಬಾಣಗಳನ್ನು ಸೆಳೆಸೆಳೆದು ಪ್ರಯೋಗಿಸಿದನು. ಅವುಗಳು ಕೆಂಪಗೆ ಕಾ
ದು ಕಿಡಿಗಳನ್ನು ಸುರಿಸುತ್ತ ಲೋಕಭೀಕರವಾಗಿ ಶಿವನ ರಥದ ಬಳಿಗೆ
ಬರುವುದರೊಳಗಾಗಿ, ಸಾವಿರಮಡಕೆಗಳಿಗೆ ಒಂದು ದೊಣ್ಣೆಯ ಪೆಟ್ಟನ್ನು
ಹಾಕಿದಂತೆ, ಶಂಕರನು ಪ್ರಯೋಗಿಸಿದ ಒಂದೇ ಒಂದು ಬಾಣವು
ರಕ್ಕಸನ ಬಾಣಗಳನ್ನೆಲ್ಲ ಖಂಡಿಸಿ, ಅವನ ಕೈ ಬಿಲ್ಲನ್ನೂ ಕವಚ
ಕುಂಡಲ ಬತ್ತಳಿಕೆಗಳನ್ನೂ ಕತ್ತರಿಸಿಹಾಕಿತು. ಆಗ ದೈತ್ಯನು ಹಲಗೆ
ಕತ್ತಿಗಳನ್ನು ಹಿಡಿದು ಭೂಮಿಗೆ ಧುಮಿಕಿ, ಶಿವನಮೇಲೆ ಬೀಳುವುದಕ್ಕೆ
ಬರುತ್ತಿರಲು, ಹರನು ತ್ರಿಶೂಲವನ್ನೆತ್ತಿ, ದೈತ್ಯನ ಎದೆಗೆ ತಿವಿದನು.
ಅದು ನಟ್ಟು ಬೆನ್ನಿನಿಂದ ಮೂಡಲು, ದೈತ್ಯನ ದೇಹಸಮೇತವಾಗಿ ಶೂ
ಲವನ್ನು ಶಂಕರನು ಮೇಲಕ್ಕೆತ್ತಿದನು. ರಕ್ತವು ಧಾರೆಯಾಗಿ ಮೇಲಿನಿಂ
ದು ಸುರಿಯುತ್ತಿದ್ದಿತು. ರಕ್ಕಸನು ಹಮ್ಮುಡುಗಿದನು. ಗಡಗಡನೆ ನಡು
ಗಿದನು. ಜ್ಞಾನೋದಯಗೊಂಡು, ಪ್ರಹ್ಲಾದನ ಮಾತನ್ನು ಸ್ಮರಿಸಿ, ಶಿ
ವಧ್ಯಾನ ಮಾಡತೊಡಗಿ, ಜಯ ಕಾಲಕಾಮಾರಿ! ಜಯಭಕ್ತರುಪಕಾರಿ!
ಜಯಭುಜಂಗಾಭರಣ! ಜಯ ಪಮಾನತಕರುಣ! ಜಯ ದುಷ್ಟಶಿಕ್ಷ
ಕಾ! ಜಯ ಶಿಷ್ಟರಕ್ಷಕಾ! ಜಯ ಪಾರ್ವತೀರಮಣ! ಜಯ ಜಯ
ನಮಸ್ತೆ ನಮಸ್ತೆ ನಮೋನಮಃ'' ಎಂದು ಕೊಂಡಾಡಿದನು. ಶಿವನು
ಅಂತ್ಯಕಾಲದಲ್ಲಿ ಅಂಧಕನಿಗೆ ಹುಟ್ಟಿದ ಶಿವಭಕ್ತಿಯನ್ನು ಕಂಡು ಸಂ
ತೋಷಿಸಿ, ಅವನ ದೀನಧ್ವನಿಗೆ ಮರುಗಿ, ಪ್ರಸನ್ನನಾಗಿ, "ನಿನ್ನಿಷ್ಟ
ವೇನು? ಬೇಡು'' ಎಂದನು. ಅದನ್ನು ಕೇಳಿ ದೈತ್ಯನು ಹರ್ಷಗೊಂ
ಡು, ಸ್ವಾಮೀ! ನನ್ನ ಈ ದೇಹವನ್ನು ತಮ್ಮ ಪಾದಸ್ಪರ್ಶದಿಂದ ಪರಿ
ಶುದ್ಧಿಗೊಳಿಸುವುದಕ್ಕಾಗಿ, ಇದರಮೇಲೆ ನಿಂತು ನಾಟ್ಯವನ್ನಾಡಿ, ಕೊನೆ
ಗೆ ನನಗೆ ಸ್ಥಿರವಾದ ಗಣಪದವಿಯನ್ನು ದಯೆಪಾಲಿಸಬೇಕು; ಎಂದುಬೇ
ಡಿದನು. ಭಕ್ತೇಷ್ಟಪ್ರದನೆಂಬ ಬಿರುದಾಂಕಿತನಾದ ಶಿವನು "ಹಾಗೆಯೇ
ಆಗಲಿ'' ಎಂದು ವರವಿತ್ತು, ನಾಟ್ಯಕ್ಕೆ ಅನುಗುಣವಾದ ವೇಷವನ್ನು
ಧರಿಸಿದನು. ಹುಲಿಯ ಚರ್ಮವನ್ನುಟ್ಟು ಆನೆಯ ಚರ್ಮವನ್ನು ಹೊದೆದು,
ಮರಿಹಾವುಗಳನ್ನು ಮುಡಿಗೆ ಕಟ್ಟಿ, ಅವುಗಳಾಭರಣವನ್ನೇ ಸರ್ವಾಂಗ

ದಲ್ಲೂ ಧರಿಸಿ, ವಿಭೂತಿಯನ್ನು ಉದ್ಧೂಳಿಸಿ, ತ್ರಿಶೂಲದಮೇಲಿದ್ದ ರಕ್ಕಸನ ದೇಹವನ್ನು ನೆಲದಮೇಲಿಳುಹಿ, ಅವನ ದೇಹವೆಂಬ ರಂಗಸ್ಥಲವನ್ನು ಮೆಟ್ಟಲನುವಾದನು. ಆಗ ನಂದೀಶನು ಮದ್ದಳೆಯನ್ನೂ, ಬ್ರಹ್ಮನು ತಾಳವನ್ನೂ, ಹರಿಯು ಮುಖವೀಣೆಯನ್ನೂ, ಇಂದ್ರನು ಉಪ್ಪಂಗವನ್ನೂ, ನಾರದನು ವೀಣೆಯನ್ನೂ, ತುಂಬುರನು ಗೆಜ್ಜೆಗೋಲನ್ನೂ ಹಿಡಿದು ಶಿವನ ಸುತ್ತಲೂ ನಿಂತು ಬಾಜಿಸುತ್ತಿದ್ದರು. ಅವರುಗಳ ಲಯಕ್ಕೆ ಸರಿಯಾಗಿ ಶಿವನು ಕುಣಿಯಲಾರಂಭಿಸಿದನು. ಆ ರಣಾಂಗಣದಲ್ಲಿದ್ದ ಸುರಾಸುರರೆಲ್ಲರೂ ಶಿವನ ಮಹಾನರ್ತನವನ್ನು ಪರಮಾಶ್ಚರ್ಯದಿಂದ ನೋಡುತ್ತಿದ್ದರು. ಶಿವನು ಮೊದಲು ಪುಷ್ಪಾಂಜಲಿಗರೆದು, ಧುತ ವಿಧುತ, ಆಧುತ ಮೊದಲಾದ ಅಗ್ರನರ್ತನಭೇದಗಳನ್ನು ಮುಗಿಸಿ, ಪತಾಕಾದಿಹಸ್ತಭಾವಗಳನ್ನೂ, ಕಂಪಿತ, ಉದ್ವಾಹಿತ ಮೊದಲಾದ ಕಟಿಭಂಗಿ ಭೇದಗಳನ್ನೂ, ಊರ್ಧ್ವ ವಿಸ್ತೃತ ಮೊದಲಾದ ಭುಜಭೇದಗಳನ್ನೂ, ನಾನಾ ಜಂಘಾಭೇದಗಳನ್ನೂ ತೋರಿಸಿ, ಸ್ಥಾಯಿ ಸಂಚಾರಾದಿಭಾವಗಳನ್ನು ಹಿಡಿದು, ಕಾಯಕ ವಾಚಕ ಅಹಾರ್ಯ ಸಾತ್ವಿಕ ಮೊದಲಾದ ಅಭಿನಯಗಳನ್ನು ಮಾಡಿ, ನವರಸವನ್ನು ಅನುಸರಿಸಿ, ಗಮಕ ತಿರುಗು ಬಿರುಗು ಜಿಡಗು ಬಿನ್ನಣಗಳನ್ನು ಪರಿಪರಿಯಾಗಿ ಪ್ರಸರಿಸಿ, ಅತಿ ಚಮತ್ಕಾರದಿಂದ ಭರತಶಾಸ್ತ್ರಮರ್ಮಗಳನ್ನೆಲ್ಲ ಲೋಕಕ್ಕೆ ವಿಸ್ತರಿಸಿ, ಮಹಾನಾಟ್ಯವನ್ನು ಮಾಡಿದನು. ಮುಡಿಯಲ್ಲಿದ್ದ ಗಂಗೆಯು ಜರ್ಝರಿತವಾಗಿ ದಿಙ್ಮಂಡಲಕ್ಕೆಲ್ಲ ಚೆಲ್ಲಿತು. ಸರ್ಪಗಳು ಕುಲುಕಾಡಿ ಕಾರಿದ ವಿಷವು ಅಗ್ನಿಕಣವನ್ನು ಸುರಿಸಿತು. ಸುರಿದ ಬೆವರು ಪ್ರವಾಹವಾಗಿ ಹರಿದಿತು. ಪದಹತಿಯಿಂದ ದಿಗ್ಗಜಗಳೂ ಕೂರ್ಮಶೇಷರೂ ತಲೆದಗ್ಗಿ ಬಿದ್ದುಕೊಂಡರು. ತಿರುವಿನ ರಭಸದಿಂದ ಹುಟ್ಟಿದ ಬಿರುಗಾಳಿಯು ಬಡಿತದಿಂದ ಕುಲಾಚಲಗಳು ಉರುಳಾಡಿದುವು. ನಕ್ಷತ್ರಗಳು ಉದುರಾಡಿದುವು. ಲೋಕವೆಲ್ಲ ಇದೇನೋ ಅವಾಂತರಪ್ರಳಯವುಂಟಾಯ್ತೆಂದು ಭಯಗೊಂಡಿತು. ಗಿರಿಜೆಯು ಪತಿಯ ಮಹಾನರ್ತನವನ್ನು ನೋಡಿ ವಿಸ್ಮಯಗೊಂಡಳು. ದೇವದುಂದುಭಿಯು ಮೊಳಗಿ ಪುಷ್ಪವೃಷ್ಟಿಯು ಕರೆಯಿತು. ಮನುಮುನಿಪ್ರಮಥಗಣಾದಿಗಳು ಜಯಜಯಧ್ವಾನವನ್ನು ಮಾಡಿದರು. ಆಗ

ಶಿವನು ಅಂಧಕಾಸುರನ ದೇಹದ ಮೇಲಿಂದ ಇಳಿದನು. ಅವನಿಷ್ಟಪ್ರಕಾರ ಗಣಪದವಿಯನ್ನು ಅನುಗ್ರಹಿಸಿದನು. ಸಕಲ ಸೇನಾಸಮೂಹದೊಡನೆ ಪಾರ್ವತೀಸಮೇತನಾಗಿ ಅತಿವೈಭವದಿಂದ ಕೈಲಾಸಕ್ಕೆ ತೆರಳಿದನು ಎಂಬಲ್ಲಿಗೆ ಹತ್ತನೇ ಅಧ್ಯಾಯವು ಸಂಪೂರ್ಣವು.

## ೧೧ ನೇ ಅಧ್ಯಾಯವು.

### ಕಾಲಹರಲೀಲೆ.

ಸಿದ್ಧರಾಮೇಶನೆ ಕೇಳು, ಪೂರ್ವದಲ್ಲಿ ಶ್ವೇತನೆಂಬ ರಾಜನೊಬ್ಬನು ಅತ್ಯಂತ ಭಾಗ್ಯಶಾಲಿಯಾಗಿ, ಅನೇಕ ರಾಷ್ಟ್ರದುರ್ಗಗಳನ್ನು ಜೈಸಿ, ರಾಜ್ಯವನ್ನಾಳಿಕೊಂಡಿರುತ್ತ, ಒಂದು ದಿವಸ ತನ್ನ ಚತುರಂಗಸೇನೆಯೊಡನೆ ಕೂಡಿ, ಮಹಾವಾದ್ಯವೈಭವದಿಂದ ಪಟ್ಟಣದ ಹೊರಗಣ ಬೈಲಿನಲ್ಲಿ ವಿನೋದಯುದ್ಧವನ್ನು ಮಾಡಿ ಬರುವುದಕ್ಕಾಗಿ ಅಂದಳವನ್ನೇರಿ ರಾಜವೀಧಿಯಲ್ಲಿ ಹೋಗುತ್ತಿದ್ದನು. ಆ ಪಟ್ಟಣದಲ್ಲಿದ್ದ ಒಬ್ಬ ವರ್ತಕನು ತನ್ನ ವ್ಯಾಪಾರಕ್ಕಾಗಿ ದ್ವೀಪಾಂತರಕ್ಕೆ ಹೋಗಿರಲು, ಅವನ ಪತ್ನಿಯು ರಾಜನ ಉತ್ಸವವನ್ನು ನೋಡುವುದಕ್ಕಾಗಿ ಮನೆಯ ಬಿಸಿಲುಪ್ಪರಿಗೆಯನ್ನೇರಿ ನಿಂತಿದ್ದಳು. ಆಕೆಯ ನವಯೌವನರೂಪವಿಲಾಸವಿಭ್ರಮಾದಿಗಳು ರಾಜನ ಕಣ್ಣಿಗೆ ಬಿದ್ದುವು. ಕೂಡಲೇ ಇವನ ಇಂದ್ರಿಯಗಳು ಮುಗ್ಧವಾದುವು. ಮನಸ್ಸು ಆಕೆಯಲ್ಲೇ ನಟ್ಟಿತು. ಕಾಮಬಾಣಪೀಡಿತನಾಗಿ, ಧೃತಿಗೆಟ್ಟು ಲಜ್ಜೆ ಬಿಟ್ಟು, ವಿರಹಾಕುಲನಾದನು. ಚತುರಂಗಸೇನೆಯೊಡನೆ ರಾಜದೇಹವು ಮಾತ್ರ ಹೋಗುತ್ತಿದ್ದಿತೇ ಹೊರತು ಮನೋವ್ಯಾಪಾರವೆಲ್ಲ ಅವಳಲ್ಲೇ ಲೀನವಾಗಿದ್ದಿತು. ಪಟ್ಟಣದ ಹೊರಗಣ ಬೈಲಿನಲ್ಲಿ ತನ್ನ ಸೇನೆಯು ವಿನೋದಯುದ್ಧವನ್ನು ಮಾಡುತ್ತಿದ್ದರೂ ರಾಜನು ಅದರಲ್ಲಿ ಮನಸ್ಸಿಲ್ಲದೆ ಚಿತ್ರಪ್ರತಿಮೆಯಂತೆ ಕುಳಿತಿದ್ದನು. ಅಲ್ಲಿಂದ ಹಿಂತಿರುಗಿ ಅರಮನೆಯ ಬಾಗಿಲಲ್ಲಿಳಿದು, ಪರಿವಾರದವನ್ನೆಲ್ಲ ಕೈಸನ್ನೆಯಿಂದಲೇ ಕಳಿಸಿ, ಆರತಿಯೆತ್ತುವ ಅಂಗನೆಯರನ್ನು ನೋಡಿ ಜಿಗುಪ್ಸೆಗೊಂಡು, ಒಳಹೊಕ್ಕು, ಮಲಗುವ ಮನೆಗೆ ಹೋಗಿ ಹಾಸುಗೆಯ ಮೇಲೆ ಮಲಗಿದನು. ಅಷ್ಟರಲ್ಲಿ ಸಂಧ್ಯಾಕಾಲವಾಯಿತು.

ಸೂರ್ಯನು ಮುಳುಗಿದನು. ರಾಜನ ಚಿತ್ತದಲ್ಲಿ ಮೋಹವು ಕವಿದಿರುವಂತೆ ಲೋಕವನ್ನೆಲ್ಲ ಕತ್ತಲೆಯು ಆವರಿಸಿತು. ಮದನನು ಲೋಕವಿಜಯಕ್ಕಾಗಿ ಧನುಸ್ಸಿನಲ್ಲಿ ಬಾಣಗಳನ್ನು ಹೂಡಿ ಹೊರಟನು. ದೊರೆಯು ಸ್ತ್ರೀವಿರಹಾಗ್ನಿಯಿಂದ ತಾಪಗೊಂಡು ಚಿಂತಿಸುತ್ತ, ತನಗೆ ಆಪ್ತಳಾದ ಸಖಿಯೊಬ್ಬಳನ್ನು ಕರೆದು, ಮೃದುವಾದ ಮಾತಿನಿಂದ– "ಎಲೆ ಸಖಿ, ನಿನ್ನಿಂದ ನನಗೆ ಒಂದು ಕಾರ್ಯವಾಗಬೇಕಾಗಿದೆ. ಇದುವರೆಗೆ ನಿನ್ನ ಆಪ್ತತನವು ನನ್ನ ಮನವುಟ್ಟಿರುವುದರಿಂದ ನಿನ್ನಿಂದಲೇ ಆ ಕೆಲಸವು ನೆರವೇರುವುದೆಂದು ನಂಬಿ ನಿನಗೆ ಹೇಳುತ್ತೇನೆ, ಆ ಕಾರ್ಯವನ್ನು ನೀನು ಮಾಡಿಕೊಟ್ಟರೆ ನನ್ನ ಪ್ರಾಣವು ಉಳಿಯುವುದು, ಇಲ್ಲದಿದ್ದರೆ ನನಗೆ ಮರಣವೇ ನಿಶ್ಚಯ; ಆ ಕಾರ್ಯವಾವುದೆಂದರೆ– ಈ ದಿನ ನಾನು ವೈಹಾಳಿಗೆ ಹೋಗುವಾಗ ರತ್ನವರ್ಮನೆಂಬ ವ್ಯಾಪಾರಿಯ ಹೆಂಡತಿಯು ಉಪ್ಪರಿಗೆಯ ಮೇಲೆ ನಿಂತಿದ್ದಳು; ಅವಳನ್ನು ನೋಡಿದಾಗಳಿಂದ ನನ್ನ ಮನಸ್ಸು ಅವಳಲ್ಲೇ ನಟ್ಟಿರುವುದು; ಆಕೆಯನ್ನು ಹೇಗಾದರೂ ಮಾಡಿ ನನ್ನ ಬಳಿಗೆ ನೀನು ಕರೆತಂದು ಬಿಡಬೇಕು" ಎಂದು ಕಣ್ಣೀರ್ತುಂಬಿ ಹೇಳಿದನು. ಸಖಿಯು– "ಬುದ್ಧಿ! ನನಗೆ ಇದಾವ ದೊಡ್ಡ ಕೆಲಸ? ತಮ್ಮ ಕೃಪೆಯೊಂದಿದ್ದರೆ ಈ ದಾಸಿಯು ನಿಮಿಷಮಾತ್ರದಲ್ಲಿ ಆ ಕಾರ್ಯವನ್ನು ನೆರವೇರಿಸಿಕೊಂಡು ಬರಬಲ್ಲಳು" ಎಂದು ಉತ್ತರ ಕೊಟ್ಟು, ರಾಜನಿಂದ ಸನ್ಮಾನಿತಳಾಗಿ ಹೊರಟಳು. ಕೂಡಲೆ ವ್ಯಾಪಾರಿಯ ಮನೆಗೆ ಉಪಾಯದಿಂದ ನುಗ್ಗಿ, ನಾನಾ ಚತುರೋಕ್ತಿಗಳಿಂದ ಆಕೆಯನ್ನು ಮರುಳುಗೊಳಿಸಿ, ಆ ರಾತ್ರಿಯೇ ಅರಮನೆಗೆ ಕರೆತಂದು, ದೊರೆಯ ಬಳಿಗೆ ಬಿಟ್ಟಳು. ರಾಜನು ಕಂಡು ಹಣಬಂದವನಂತಾಗಿ, ಝಗ್ಗನೆ ಎದ್ದು ರೋಮಾಂಚಿತನಾಗಿ, ಸಖಿಯನ್ನು ಶ್ಲಾಘಿಸಿ, ವಸ್ತ್ರಾಭರಣಗಳನ್ನಿತ್ತು ಸಂತೋಷಗೊಳಿಸಿ ಕಳಿಸಿಕೊಟ್ಟನು. ತನ್ನ ಮನಃಕಾಂತೆಯನ್ನು ಮೃದು ವಚನದಿಂದ ಮಾತನಾಡಿಸಿ, ಹಿಗ್ಗಿ, ಚುಂಬನಾಲಿಂಗನಸಂಭೋಗಾದಿಗಳಿಂದ ಪರಿತೃಪ್ತನಾಗಿ ಸುಖದಿಂದಿರುತಿದ್ದನು. ಒಂದು ದಿನ ನಾನಾವಿಧಪುಷ್ಪಮಾಲಿಕೆಗಳನ್ನು ತನ್ನ ಒಡಗಾತಿಯು ಕೈಗೆ ಎತ್ತಿ ಕೊಡುತ್ತಿರುವಾಗ್ಗೆ, ಅವರಲ್ಲಿ ಒಂದು ಸಂಪಗೆಯ ಹೂವು ಕೈತಪ್ಪಿ ನೆಲ

ಕ್ಕೆ ಬಿದ್ದುಹೋಗಲು, ಅದನ್ನು ದೊರೆಯು "ಶಿವಾರ್ಪಿತವಾಗಲಿ" ಎಂದು ನುಡಿದನು. ರಾಜನ ಕಾಮವ್ಯಾಪಾರವು ದಿನದಿನಕ್ಕೆ ಅಭಿವೃದ್ಧಿಗೊಂಡಿತು. ಕಣ್ಣಿಗೆ ಚೆನ್ನಾಗಿ ಕಂಡ ಪರದಾರೆಯರನ್ನೆಲ್ಲ ವ್ಯಭಿಚಾರದಿಂದ ಕೆಡಿಸುತ್ತಿದ್ದನು. ರಾಜ್ಯಭಾರವನ್ನೆಲ್ಲ ಇತರರಿಗೆ ಬಿಟ್ಟುಬಿಟ್ಟು, ತಾನು ಪರಸ್ವಾಪಹರಣ ಸಜ್ಜನಹಿಂಸೆ ಮೊದಲಾದ ಮಾಡಬಾರದ ಕೃತ್ಯಗಳನ್ನೆಲ್ಲ ಮಾಡುತ್ತಿದ್ದನು. ಹೀಗೆ ದುಷ್ಕೃತ್ಯದಲ್ಲೇ ತನ್ನ ಆಯುಃಕಾಲವನ್ನೆಲ್ಲ ಕಳೆದು, ಅಂತ್ಯಕಾಲವನ್ನು ಸಮೀಪಿಸಿದನು. ಊರ್ಧ್ವಶ್ವಾಸವು ಕಂಡಿರುವಾಗ ಯಮದೂತರು ಬಂದರು. ಅವನ ಸೂಕ್ಷ್ಮಶರೀರ (ಜೀವ) ವನ್ನು ಯಮಪಟ್ಟಣಕ್ಕೆ ಎಳೆದೊಯ್ದರು. ಯಮಧರ್ಮನ ಮುಂದೆ ಚಿತ್ರಗುಪ್ತರು ಶ್ವೇತನ ಅನಂತಪಾಪಾಚರಣೆಗಳನ್ನೆಲ್ಲ ವಿವರಿಸಿ ಹೇಳಿ, ಒಂದು ದಿನ ಹೂವೊಂದನ್ನು ಶಿವಾರ್ಪಿತವೆಂಬದಾಗಿ ನುಡಿದು ಆತನು ಮಾಡಿರುವ ಸದ್ಧರ್ಮದ ಸಂಗತಿಯನ್ನೂ ಬಿನ್ನೈಸಿದರು. "ಆ ಸದ್ಧರ್ಮಫಲಕ್ಕಾಗಿ ಈತನನ್ನು ಒಂದು ರಾತ್ರಿಯ ಮಟ್ಟಿಗೆ ರಂಭೆಯೊಡನೆ ಸುಖಪಟ್ಟಿರುವುದಕ್ಕಾಗಿ ಸ್ವರ್ಗಲೋಕಕ್ಕೆ ಕಳಿಸಿಕೊಟ್ಟು, ಮರುದಿನದಿಂದ ಇವನ ಪಾಪಗಳ ಫಲಾನುಭವಕ್ಕಾಗಿ ನರಕಗಳಲ್ಲಿ ಹಾಕಿರಿ" ಎಂದು ತೀರ್ಮಾನಿಸಿದನು. ದೂತರು ಶ್ವೇತನನ್ನು ರಂಭೆಯ ಬಳಿಗೆ ಕರೆದುಕೊಂಡು ಹೋಗಿ, ಆತನ ಚರಿತ್ರವನ್ನೂ ಯಮನಪ್ಪಣೆಯನ್ನೂ ತಿಳಿಸಿ, ಅವಳಲ್ಲಿ ಬಿಟ್ಟು, ಬೆಳಗ್ಗೆ ಇವನನ್ನು ನಮ್ಮ ವಶಕ್ಕೆ ಒಪ್ಪಿಸಬೇಕೆಂದು ಹೇಳಿ ಬಂದರು. ಅತ್ತ ರಂಭೆಗೆ ಶ್ವೇತನನ್ನು ನೋಡಿ ಮನಸ್ಸಿನಲ್ಲಿ ವ್ಯಸನವು ತೋರಿತು. ತನ್ನಲ್ಲಿ ಸುಖಪಟ್ಟವನನ್ನು ಮರುದಿವಸ ನರಕಕ್ಕೆ ಕಳಿಸಿ ಸಂಕಟಪಡಿಸುವುದು ಹೇಗೆ? ಎಂದು ಪರಿತಪಿಸಿದಳು. ಆದಕ್ಕಾಗಿ ಆ ಹತಭಾಗ್ಯನನ್ನು ದುಃಖವಿಮುಕ್ತನನ್ನಾಗಿ ಮಾಡುವುದಕ್ಕೆ ಉಪಾಯವನ್ನು ಯೋಚಿಸಿದಳು. ಶಿವಪೂಜೆಯಲ್ಲಿ ಅವನನ್ನು ತೊಡಗಿಸಿ ಯಮಬಾಧೆಗೆ ದೂರನನ್ನು ಮಾಡಬೇಕೆಂದು ನಿಶ್ಚೈಸಿದಳು. ಬಳಿಕ ಶ್ವೇತನು ಕುಳಿತಿದ್ದ ಮಂಚದ ಬಳಿಗೆ ಹೋಗಿ ನಿಂತು, ಕರುಣಾದೃಷ್ಟಿಯಿಂದವನನ್ನು ನೋಡಿದಳು. ಅಷ್ಟರಲ್ಲಿ ಕಾಮಾಂಧನಾದ ಶ್ವೇತನು ಆಕೆಯನ್ನು ಮೋಹಾತುರದಿಂದ ಆಲಿಂಗಿಸುವುದಕ್ಕೆ ಕೈ ನೀಡಿದನು.

ಆಕೆಯು ಅವನ ಕಾಮಚೇಷ್ಟೆಯನ್ನು ನೋಡಿ ನಕ್ಕಳು. ದೊರೆಯಾದರೋ ರಂಭೆಯನ್ನು ಕುರಿತು-ಎಲೆ ರಮಣಿ ! ನನ್ನನ್ನು ನೋಡಿ ಅದೇಕೆ ನಗುವೆ ? ನನ್ನಲ್ಲಿ ತಕ್ಕ ರೂಪ ಲಾವಣ್ಯ ವಿಭ್ರಮಾದಿಗಳಿಲ್ಲವೆಂದು ಯೋಚಿಸಿದೆಯೊ ? ಕಾಮಕಲಾಪ್ರೌಢಿಮೆಯಿಲ್ಲವೆಂದು ಬಗೆದೆಯೊ ? ನಿನ್ನ ಸಂಗಕ್ಕೆ ತಕ್ಕವನಲ್ಲವೆಂದು ತಿಳಿದೆಯೊ ? ಹೇಗೆ ? ನನ್ನೊಡನೆ ನೀನು ಕೂಡಿ ನೋಡಿದರೆ ನನ್ನ ಯೋಗ್ಯತೆಯು ಗೊತ್ತಾಗುವುದು ” ಎಂದು ಹೇಳಲು, ರಂಭೆಯು ಕಳೆಗುಂದಿದ ಮುಖದಿಂದ ಶ್ವೇತನನ್ನು ಕುರಿತು- ದೊರೆಯೆ ! ಕಟುಗನ ಕೈಯಲ್ಲಿರುವ ಕುರಿಯು ಉತ್ತರಕ್ಷಣದ ತನ್ನ ವಿಪತ್ತನ್ನರಿಯದೆ ಮಾರ್ಗದಲ್ಲಿ ಬಿದ್ದಿರುವ ಹುಲ್ಲು ಕಡ್ಡಿಯನ್ನು ಕಂಡು ಕತ್ತನ್ನು ಚಾಚಿ ನಾಲಗೆಯನ್ನು ನೀಡುತ್ತಿರುವಂತೆ, ನಾಳೆ ಬೆಳಗಾದ ಕೂಡಲೇ ನಿನಗೆ ಪ್ರಾಪ್ತವಾಗುವುದಕ್ಕಿರುವ ನರಕ ದುಃಖವನ್ನು ಯೋಚಿಸಿಕೊಳ್ಳದೆ ಈಗ ಕಾಮಕ್ರೀಡೆಗೆ ಆತುರಪಡುತ್ತಿರುವ ನಿನ್ನ ಅವಸ್ಥೆಯನ್ನು ನೋಡಿ ನಾನು ನಕ್ಕೆನು, ಎಂದಳು. ಶ್ವೇತನಾದರೋ-ಮುಂದೆ ಕಷ್ಟವು ಬರುವುದೆಂಬ ಭೀತಿಯಿಂದ ಕೈಗೆ ದೊರೆತ ಫಲವನ್ನನುಭವಿಸದೆ ಬಿಟ್ಟುಬಿಡುವುದು ಪುರುಷಲಕ್ಷಣವಲ್ಲ; ಭೂಲೋಕದ ನಾರೀಕುಲದೊಡನೆ ಸಂಭೋಗಿಸಿ ಅದರ ಸುಖಸಾರವನ್ನೆಲ್ಲ ತಿಳಿದಿರುವ ನಾನು, ಸ್ವರ್ಗಲೋಕದ ವಾರಾಂಗನೆಯರಲ್ಲಿ ಅಗ್ರಳೆಯಾದ ನಿನ್ನಲ್ಲೂ ಕೂಡಿ ಇಲ್ಲಿನ ಸುಖಾತಿಶಯವನ್ನು ತಿಳಿದುಬಿಟ್ಟರೆ, ಈ ಜನ್ಮವು ಸಾರ್ಥಕವಾಗುವುದೆಂದು ತಿಳಿದು ಆತುರಗೊಂಡಿರುವೆನು; ನೀನಾದರೊ ಇರುವ ಸ್ವಲ್ಪ ಕಾಲವನ್ನೂ ಹೀಗೆ ಕಾಡುಹರಟೆಯಿಂದ ಕಳೆಯುತ್ತಿರುವೆ; ಯಮನು ನೇಮಿಸಿದಷ್ಟು ಕೆಲಸವನ್ನು ಗಮ್ಮನೆ ಮಾಡು ” ಎಂದು ಹೇಳುತ್ತಿರಲು, ರಂಭೆಯು ಮತ್ತಷ್ಟು ವ್ಯಸನಪಟ್ಟು, ಅಯ್ಯೋ! ಭೂಪನೆ! ಭೂಲೋಕದಲ್ಲಿ ನೀನು ಆಚರಿಸದೆ ಇದ್ದ ಪಾಪವೇ ಇಲ್ಲ, ಹಾಗಿದ್ದರೂ ಒಂದು ದಿನ, ಭೂಮಿಗೆ ಬಿದ್ದು ಹೋದ ಹೂವನ್ನು ಶಿವಾರ್ಪಿತವೆಂದು ನೀನು ನುಡಿದ ಮಾತ್ರದಿಂದ ಒಂದು ರಾತ್ರಿ, ನನ್ನೊಡನೆ ಸುಖಿಸುವ ಫಲವು ನಿನಗೆ ದೊರೆಯಿತು. ಇನ್ನು ನಿನ್ನ ಆಯುಃಕಾಲವನ್ನೆಲ್ಲ ಶಿವಾರ್ಚನೆಯಲ್ಲೇ ಕಳೆದಿದ್ದರೆ, ಎಂಥ ಭೋಗಭಾಗ್ಯಾದಿಗಳು ದೊರೆಯುತ್ತಿದ್ದ

ವೆಂಬುದನ್ನು ನೀನೇ ಯೋಚಿಸು; ಈ ರಾತ್ರಿಯಲ್ಲಿ ೧ ಜಾವವು ಕಳೆದು ಹೋಗಿ ಇನ್ನು ಮೂರು ಜಾವಗಳುಳಿದಿರುವುವು. ಇದಿಷ್ಟನ್ನೂ ನೀನು ಕಳೆದುಬಿಟ್ಟರೆ, ಇನ್ನು ಅನಂತಕಾಲ ನಾನಾನರಕಗಳಲ್ಲಿ ನರಳಬೇಕಾಗುವುದು; ನಿನ್ನನ್ನು ಅಗ್ನಿಕುಂಡಗಳಲ್ಲಿ ಹಾಕಿ, ಉರಿಗಂಬವನ್ನು ತಬ್ಬಿಸಿ, ಕಲ್ಲಿನ ಗಾಣಗಳಲ್ಲಿ ಅರೆದು, ಉಕ್ಕಿನ ಸಲಾಕೆಗಳಿಂದ ಚುಚ್ಚಿ, ಕಾದ ಸೀಸವನ್ನು ಕುಡಿಸಿ, ಮುಳ್ಳಿನ ಬೇಲಿಯಮೇಲೆ ಹೊರಳಿಸಿ, ವಿಚಿತ್ರವಾಗಿ ಹಿಂಸೆ ಮಾಡುವರು. ಕ್ಷಣಕಾಲದ ನನ್ನ ಸುಖಕ್ಕೆ ಆಶಿಸಿ, ದೀರ್ಘಕಾಲ ಮಹಾದುಃಖವನ್ನು ಅನುಭವಿಸಬೇಕಾಗುವುದು. ನನ್ನಲ್ಲಿಗೆ ನೀನು ಬಂದವೇಳೆ ನೀನು ನನ್ನವನೇ ಆದೆ; ಅದುಕಾರಣ ನಿನ್ನ ಹಿತವೇದನ್ನು ಹಿತವೆಂದು ತಿಳಿದು, ಆಪ್ತವಚನವನ್ನು ಹೇಳುತ್ತೇನೆ ಕೇಳು; ನಿಕೃಷ್ಟವಾದ ಕಾಮವ್ಯಾಪಾರೇಚ್ಛೆಯನ್ನು ಬಿಟ್ಟು, ಶಿವಪೂಜೆಯನ್ನು ಇದೊಂದು ರಾತ್ರಿಯಾದರೂ ಮಾಡು, ನಿನಗೆ ಸಂಭವಿಸುವುದಕ್ಕಿರುವ ಮಹಾಬಾಧೆಯೂ ಅದರಿಂದ ತಪ್ಪುವುದು; ನನ್ನಂತಹ ಸೂಳೆಯರು ಸಾವಿರಾರು ಮಂದಿಗಳು ಸದಾ ನಿನ್ನ ಸೇವೆ ಮಾಡಿಕೊಂಡು ಕಾದು ಬಿದ್ದಿರುವಂತೆಯೂ ಆಗುವುದು; ಆಗ ಅನಂತವಾದ ಸುಖವನ್ನು ನೀನು ಅನುಭವಿಸಿಕೊಂಡಿರಬಹುದು, ಎಂದಳು. ಆಗ ಶ್ವೇತನ ಮನಸ್ಸಿನಲ್ಲಿ ವಿವೇಕಾಂಕುರವು ಸ್ವಲ್ಪ ಮೂಡಿದಂತಾಯಿತು. ಅದರಿಂದ ರಂಭೆಯನ್ನು ಕುರಿತು— ಈ ಸ್ವಲ್ಪ ಕಾಲದೊಳಗಾಗಿ ಅದು ಹೇಗೆ ಶಿವಾರಾಧನೆಯನ್ನು ಮಾಡಿ ಮೆಚ್ಚಿಸಿ ಮಹಾಫಲಗಳನ್ನು ಪಡೆವುದಕ್ಕಾಗುತ್ತೀತು? ಎಂದು ಕೇಳಿದನು. ಅದಕ್ಕಾರಂಭೆಯು— ದೊರೆಯೆ! ಶಿವನೊಲಿವುದಕ್ಕೆ ಹೆಚ್ಚು ಕಾಲವು ಬೇಕಿಲ್ಲ; ಅದಕ್ಕೊಂದು ಇತಿಹಾಸವನ್ನು ಹೇಳುತ್ತೇನೆ ಕೇಳು:— ಪೂರ್ವದಲ್ಲಿ ಒಬ್ಬ ಪಾಪಿಯು ಅಂತ್ಯಾವಸ್ಥೆಯಿಂದ ನರಳುತ್ತ ಒಂದು ಪಾಳ್ಗುಡಿಯಲ್ಲಿ ಬಿದ್ದಿದ್ದನು; ಅವನು ಸತ್ತರೆ ಹೆಣವನ್ನು ಕಿತ್ತು ತಿನ್ನಬೇಕೆಂದು ಒಂದು ನಾಯಿಯು ಕಾದುಕೊಂಡು ಮಗ್ಗುಲ ತಿಪ್ಪೆಗುಂಡಿಯಲ್ಲಿ ಮಲಗಿದ್ದಿತು; ಜೀವವು ಹೋಯಿತೋ ಏನೋ ಎಂದು ನೋಡುವುದಕ್ಕಾಗಿ ನಾಯಿಯು ಬಂದು, ಅವನ ದೇಹದಮೇಲೆ ನಡೆದು, ಹಣೆಯಮೇಲೆ ಕಾಲಿಟ್ಟು, ಉಸುರಾಡುತ್ತಿರುವುದನ್ನು ಪರೀಕ್ಷಿಸಿ ನೋಡಿಕೊಂಡು

ಹೋಯಿತು. ಆಗ ಅದರ ಕಾಲಲ್ಲಿ ಹತ್ತಿದ್ದ ಬೂದಿಯು ಸಾಯುತ್ತಿದ್ದವನ ಹಣೆಗೆ ಹತ್ತಿತು. ಅಷ್ಟರಲ್ಲಿ ಅವನೂ ಸತ್ತನು. ಯಮದೂತರು ಬಂದರು. ಶಿವದೂತರೂ ಬಂದರು. ಸಾಯುವಾಗ ಅವನ ಹಣೆಯಲ್ಲಿ ವಿಭೂತಿಯು ಕಾಣುತ್ತಿದ್ದುದರಿಂದ ಅವನನ್ನು ಹಿಡಿದುಕೊಂಡು ಹೋಗುವುದಕ್ಕೆ ನಿಮಗೆ ಅಧಿಕಾರವಿಲ್ಲವೆಂದು ಯಮದೂತರನ್ನು ತಳ್ಳಿ ಶಿವದೂತರು ಆತನನ್ನು ಕೈಲಾಸಕ್ಕೆ ತೆಗೆದುಕೊಂಡುಹೋದರು. ಮತ್ತು ಒಬ್ಬ ಬೇಡನು ಕಾಡಿನಲ್ಲಿ ಕ್ರೀಡಿಸುತ್ತಿದ್ದಾಗ, ರುದ್ರಾಕ್ಷಿಯ ಹಣ್ಣನ್ನು ಕಂಡು, ಅವನ್ನು ತಾನು ತಿಂದು, ಬೀಜಗಳನ್ನು ಸರ ಮಾಡಿ ತನ್ನ ನಾಯ ಕೊರಲಿಗೆ ಕಟ್ಟಿದ್ದನು. ಆ ನಾಯನ್ನು ಹಂದಿಯು ಕೊಲ್ಲಲು, ಶಿವದೂತರು ಬಂದು, ಕೊರಲಿನಲ್ಲಿ ರುದ್ರಾಕ್ಷಿಯುಳ್ಳ ಅದನ್ನು ಮುಟ್ಟುವುದಕ್ಕೆಯಮದೂತರಿಗೆ ಅಧಿಕಾರವಿಲ್ಲವೆಂದು ತಡೆದು, ತಾವೇ ಶಿವಪುರಿಗೆ ಎಳೆದೊಯ್ದರು. ಅದುಕಾರಣ, ವಿಭೂತಿ ರುದ್ರಾಕ್ಷಗಳೆಂಬ ಶಿವಲಾಂಛನವನ್ನು ಒಂದು ಬಾರಿ ಧರಿಸಿದರೂ ಅದರ ಫಲವು ಮಹತ್ತರವಾಗಿರುವುದು. ಇದಲ್ಲದೆ ಶಿವಮಂತ್ರಪ್ರಭಾವವನ್ನು ಕೇಳು—ಜೀವಾಂತ್ಯದವರೆಗೂ ಸದ್ಧರ್ಮದ ಗಂಧವನ್ನರಿಯದ ಅತಿ ಪಾಪಿಯಾದ ಒಕ್ಕಲಿಗನೊಬ್ಬನು ಕಡೆಗಾಲದಲ್ಲಿ ತನ್ನ ಮಗನನ್ನು ಕರೆದು, ಹದಕ್ಕೆ ಬಂದಿರುವ ತನ್ನ ಹೊಲವನ್ನು "ಹರಗಣ್ಣ" ಎಂದು ಬುದ್ಧಿ ಹೇಳಿ ಸತ್ತನು. ಅಂತ್ಯಕಾಲದಲ್ಲಿ ಅವನ ಬಾಯಲ್ಲಿ "ಹರ, ಗಣ" ಎಂಬ ಶಿವನಾಮೋಚ್ಚಾರವು ಕಂಡು ಬಂದುದರಿಂದ, ಅವನನ್ನು ಶಿವದೂತರು ಕೈಲಾಸಕ್ಕೆ ಕರೆದುಕೊಂಡುಹೋದರು. ಇದಲ್ಲದೆ ಸನಂದಮಹಾಮುನಿಯು ಯಮಲೋಕಕ್ಕೆ ಹೋಗಿ ಅಲ್ಲಿ ಪಂಚಾಕ್ಷರಿಮಹಾಮಂತ್ರವನ್ನುದ್ಘೋಷಿಸಲು, ಅದರ ಶ್ರವಣಮಾತ್ರದಿಂದಲೇ ನರಕಪೀಡಿತರಾಗಿದ್ದ ಜನಗಳೆಲ್ಲರೂ ಆ ಮಂತ್ರೋಚ್ಚಾರಣೆಯನ್ನು ಮಾಡಿ ಶಿವಲೋಕಕ್ಕೆ ತೆರಳಿದರು. ಮತ್ತು ಶಿವಪುಣ್ಯಕಾರ್ಯಪ್ರಭಾವವೊಂದನ್ನು ಹೇಳುತ್ತೇನೆ ಕೇಳು— ಒಬ್ಬ ಹಾರ್ವನು ಹೊಲತಿಯೊಡನೆ ಕೂಡಿ ಪಾಪಾಚರಣದಲ್ಲಿರುತ್ತಿರಲು, ಜಾತಿಯವರು ಅವನನ್ನು ಹೊರತೆಗೆದರು. ಅವನು ಆ ಚಂಡಾಲಿಯೊಡಗೂಡಿ ಕಾಡಿನಲ್ಲಿ ಮನೆಮಾಡಿಕೊಂಡಿದ್ದನು. ಆಕೆಯು ಸಾಯಲು, ಅವಳ ಹೊಟ್ಟೆಯಲ್ಲಿ ಹುಟ್ಟ

ದ್ದ ಹೆಣ್ಣುಮಕ್ಕಳನ್ನೇ ತಾನು ಕೂಡಿಕೊಂಡು, ಒಂದು ಹಾಳ್ಗುಡಿಯಲ್ಲಿ ವಾಸಿಸುತ್ತ ಕಾಲಯಾಪನೆ ಮಾಡುತ್ತಿದ್ದನು. ರಾತ್ರಿಗಾಲದಲ್ಲಿ ಕಳ್ಳರು ಬಿದ್ದು ಹೊಡೆಯುವರೆಂಬ ಭೀತಿಯಿಂದ ಆ ದೇವಾಲಯದಲ್ಲಿನ ದೀಪವು ಆರಿಹೋಗದಂತೆ ಬತ್ತಿಯನ್ನೆತ್ತಿ ಬೆಳಕನ್ನು ಮಾಡಿಕೊಂಡಿದ್ದನು. ಅಷ್ಟೊಂದು ಪಾಪಾಚಾರಿಯಾಗಿದ್ದರೂ ದೇವಾಲಯದಲ್ಲಿ ದೀಪವನ್ನುರಿಸಿದ ಪುಣ್ಯವಿಶೇಷದಿಂದ ಅವನ ಅಂತ್ಯಕಾಲದಲ್ಲಿ ಶಿವದೂತರಿಂದ ಕೈಲಾಸಕ್ಕೆ ಒಯ್ಯಲ್ಪಟ್ಟನು. ಮೃಕಂಡುಋಷಿಯ ಹನ್ನೆರಡು ವರ್ಷದ ಮಗನು ತನ್ನ ಆಯುಸ್ಸು ಅಲ್ಲಿಗೇ ತೀರಿಬಂದ ಸಮಯದಲ್ಲಿ, ಘನವಾದ ಭಕ್ತಿಯಿಂದ ಶಿವಾರ್ಚನೆಯನ್ನು ಮಾಡುತ್ತ ಕುಳಿತಿರಲು, ಯಮನು ಅವನನ್ನು ತನ್ನ ಲೋಕಕ್ಕೆ ಎಳೆದುಕೊಂಡು ಹೋಗಬೇಕೆಂದು ಬಂದು, ಪೂಜೆಯಲ್ಲಿದ್ದ ಋಷಿಪುತ್ರನನ್ನು ಸೆಳೆಯುವುದಕ್ಕಾಗಿ ಅವನ ಕೊರಲಿಗೆ ಪಾಶವನ್ನು ಎಸೆದನು; ಕುಮಾರನಾದರೊ ಭಯದಿಂದ ನಡುಗಿ, ಲಿಂಗವನ್ನು ತಬ್ಬಿ, ಶಿವದೋ! ಎಂದು ಕೂಗಿಕೊಂಡನು. ಆ ಕೂಡಲೇ ಪ್ರಪನ್ನರಕ್ಷಕನಾದ ಶಿವನು ಆ ಲಿಂಗದಲ್ಲೇ ಒಡೆದು ಮೂಡಿ, ಯಮನನ್ನು ಶೂಲದಿಂದಿರಿದು, ಭಕ್ತನನ್ನು ರಕ್ಷಿಸಿದನು. ಅದುಕಾರಣ, ಎಲೆದೊರೆಯೆ! ನೀನೂ ಕೂಡ ಭಕ್ತಿಯಿಂದ ಸ್ವಲ್ಪಕಾಲ ಶಿವಾರ್ಚನೆಯನ್ನು ಮಾಡಿದರೂ, ಯಮಭಯವನ್ನು ಗೆದ್ದು ಸುಖಪಡುವೆ" ಎಂದು ಹೇಳಲು, ಕಬ್ಬುನವು ಸಿದ್ಧರಸ ಸಂಪರ್ಕದಿಂದ ಸುವರ್ಣವಾಗುವಂತೆ, ರಂಭೆಯ ಉಪದೇಶವಚನಪ್ರಭಾವದಿಂದ ಶ್ವೇತನ ದುರ್ಮನಸ್ಸು ನಿರ್ಮಲವಾಯಿತು. ಸುರತೇಚ್ಛೆಯಳಿದು ಶಿವಪೂಜೇಚ್ಛೆಯು ಮೂಡಿತು. (ಸದ್ಬೋಧೆಯು ಯಾವ ಶ್ರೇಯಸ್ಸನ್ನು ತಾನೇ ಉಂಟುಮಾಡುವುದಿಲ್ಲ?) ಆ ಕೂಡಲೇ ಶ್ವೇತನು "ತಥಾಸ್ತು" ಎಂದನು. ರಂಭೆಯು ಪಾದ್ಯಾರ್ಘ್ಯಾಚಮನೀಯವಸ್ತ್ರಭಸಿತರುದ್ರಾಕ್ಷ ಗಂಧಮಾಲ್ಯಧೂಪದೀಪನೈವೇದ್ಯಾದಿ ಪರಿಕರಗಳನ್ನೆಲ್ಲ ಅಣಿಮಾಡಿಸಿದಳು. ಅವನ್ನೆಲ್ಲ ಶ್ವೇತನು ನೋಡಿ, "ರಂಭಾದೇವಿಯೆ! ಪಾಪಾತ್ಮನಾದ ನಿನ್ನನುಗ್ರಹದಿಂದ ನಾನು ಸುಕೃತಿಯಾದೆನು. ಶಿವಾರ್ಚನೆಯನ್ನು ಮಾಡುವ ಕ್ರಮವನ್ನೆಲ್ಲ ನನಗೆ ತೋರಿಸಿಕೊಟ್ಟು ಉದ್ಧರಿಸು" ಎಂದು ಪ್ರಾರ್ಥಿಸಿದನು. ಆಕೆಯು ಆತನಿಗೆ ಮಂತ್ರೋಪದೇಶಪೂರ್ವ

ವಾಗಿ ಹಸ್ತಕ್ಕೆ ಶಿವಲಿಂಗವನ್ನು ಕೊಟ್ಟು, ದೀಕ್ಷೆಗೊಳಿಸಿ, ಪೂಜಾಧಿಕಾರವನ್ನಿತ್ತು, ಕ್ರಮವಾಗಿ ಸಾಂಗಶಿವಾರ್ಚನೆಯನ್ನು ಮಾಡಿಸಿದಳು. ಒಂದೊಂದುಪಚಾರಗಳನ್ನು ಮಾಡುತ್ತ ಬಂದಂತೆ ಆ ಶ್ವೇತನ ಮನಸ್ಸಿನ ಭಕ್ತಿಯು ಒಂದೊಂದು ಮೆಟ್ಟಲಾಗಿ ಏರುತ್ತ ದೃಢಗೊಂಡಿತು. ಸಕಲೋಪಚಾರಗಳನ್ನೂ ಮುಗಿಸಿ ಮಹಾಮಂಗಳಾರ್ತಿಯನ್ನು ಮಾಡುವ ಹೊತ್ತಿಗೆ ಬೆಳಗಿನ ಕೋಳಿಗಳು ಕೂಗಿದುವು. ಅರುಣೋದಯವಾಯಿತು. ಶ್ವೇತನು ಆನಂದಬಾಷ್ಪಗಳಿಂದ ಕೂಡಿ ಮೈಮರೆದು ಶಿವನಿಗೆ ಪುಷ್ಪಾಂಜಲಿಯನ್ನು ಸಮರ್ಪಿಸುತ್ತಿದ್ದನು. ಅಷ್ಟರಲ್ಲಿ ಯಮದೂತರು ಬಾಗಿಲಿಗೆ ಬಂದು, ನಿನ್ನಲ್ಲಿ ಬಿಟ್ಟಿದ್ದವನನ್ನು ಕಳುಹಿಕೊಡು, ಎಂದು ರಂಭೆಯನ್ನು ಕೇಳಿದರು. ಆಕೆಯು ಶಿವಪೂಜಾಗಾರದಲ್ಲಿ ಶ್ವೇತನಿರುವನೆಂದು ಹೇಳಿ ಅದರ ಬಾಗಿಲನ್ನು ತೋರಿಸಿದಳು. ಅದರೊಳಗೆ ಶ್ವೇತನು ಶಿವಾರ್ಚನಾಲೋಲನಾಗಿರುವುದನ್ನು ದೂತರು ಕಂಡು, ಒಳಹೊಗುವುದಕ್ಕೆ ಅಂಜಿ, ಹಿಂದೆಗೆದು ಯಮನ ಬಳಿಗೆ ಓಡಿಹೋಗಿ, "ಜೀಯಾ ! ಪಾಪಿಷ್ಠನಾದ ಶ್ವೇತನನ್ನು ನಿನ್ನಪ್ಪಣೆಯ ಮೇರೆ ರಂಭೆಯ ಮನೆಗೆ ನೆನ್ನೆ ಕಳುಹಿದ್ದು, ಈಗ ಕರೆತರುವುದಕ್ಕೆ ಹೋಗಿರುವಲ್ಲಿ, ಆತನು ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಶಿವಪೂಜಾಲೋಲನಾಗಿ ಕುಳಿತಿದ್ದುದನ್ನು ಕಂಡೆವು; ಅದೇನು ಮಾಯೆಯೊ ! ನಮಗೆ ತಿಳಿಯದು, ಅವನನ್ನು ಹಿಡಿಯಲು ಧೈರ್ಯವಿಲ್ಲದೆ ಓಡಿಬಂದೆವು" ಎಂದು ಬಿನ್ನೈಸಿದರು. ಅಂತಕನು ಕೇಳಿ ಹಲ್ಗಡಿದು, ಆಹಾ ! ಇದೆಲ್ಲ ರಂಭೆಯ ಕುಚೇಷ್ಟೆ ! ಅವನು ತಪ್ಪಿಸಿಕೊಂಡರೆ, ಆ ಮಾಯೆಗಾರ್ತಿಯನ್ನೇ ಎಳೆದು ತಂದು ಅವಳಹಂಕಾರವನ್ನು ಇಳುಹುತ್ತೇನೆ ! ಎಂದು ಗರ್ಜಿಸಿ, ದಂಡವನ್ನು ಹೆಗಲಮೇಲಿಟ್ಟು ದೂತರನ್ನು ಕೂಡಿಕೊಂಡು, ಅಮರಾವತಿಯಲ್ಲಿರುವ ರಂಭೆಯ ಮನೆಗೆ ಬಂದನು. ಎಲೆ ಸೂಳೆ ! ಏನು ಕೆಲಸವನ್ನು ಮಾಡಿದೆ ? ನಿನ್ನ ಬಳಿಯಲ್ಲಿ ಬಿಟ್ಟಿದ್ದ ಪಾಪಿಯನ್ನು ಏಕೆ ಕಳುಹಲೊಲ್ಲೆ ? ಎಂದು ಮೊರೆದು ಕೇಳಿದನು. ಆಕೆಯಾದರೋ– ಯಮರಾಜನೆ ! ನನ್ನ ತಡೆಯೇನೂ ಇಲ್ಲ; ಅದೋ ಆ ಮನೆಯಲ್ಲಿ ಶ್ವೇತನಿರುವನು; ಕರೆದುಕೊಂಡು ಹೋಗು; ಎಂದು ನುಡಿದಳು. ಆಗ ಅಂತಕನು ಹೂಂಕರಿಸಿಕೊಂಡು ಶಿವಾಗಾರದ

ಕಡೆಗೆ ನುಗ್ಗುತ್ತಿರಲು, ರಂಭೆಯು– ಯಮಧರ್ಮನೆ! ಶಿವಾರಾಧಕರಮೇಲೆ ನೀನು ಕೈಮಾಡಬಹುದೆ? ಹಿಂದೆ ಮಾರ್ಕಂಡೇಯನನ್ನು ನೀನು ಸೆಳೆದಾಗ ಶಿವನು ಎಚ್ಚರಿಸಿದುದನ್ನು ಮರೆತುಬಿಟ್ಟೆಯಾ? ಎಂದು ಹೇಳಲು, ಕೃತಾಂತನು ಕೆಂಗಣ್ಣನ್ನು ಬಿಟ್ಟು, "ನೀನೂ ನಿನ್ನ ಶಿವನೂ ಮಾಡುವುದನ್ನು ನೋಡಿಕೊಳ್ಳುತ್ತೇನೆ" ಎಂದು ತಿರಸ್ಕರಿಸಿ, ಒಳನುಗ್ಗಿ ಆರ್ಭಟಿಸಿ, ಪೂಜೆಯಲ್ಲಿದ್ದ ಶ್ವೇತನ ಕೊರಲಿಗೆ ಪಾಶವನ್ನಿಟ್ಟು ಸೆಳೆವನು. ಶ್ವೇತನು ಕಣ್ಣನ್ನು ಬಿಟ್ಟು, ಇದಿರಿಗೆ ನಿಂತಿದ್ದ ಯಮನ ಭೀಕರಾಕೃತಿಯನ್ನೂ ತನ್ನನ್ನು ಸೆಳೆಯುತ್ತಿರುವುದನ್ನೂ ನೋಡಿ ಹೆದರಿ, ಶಿವನೇ! ಭಕ್ತವತ್ಸಲನೇ! ಮೃತ್ಯುಂಜಯನೇ! ರಕ್ಷಿಸು ರಕ್ಷಿಸು!! ಎಂದು ಮೊರೆಯಿಟ್ಟನು. ಪ್ರಪನ್ನರಕ್ಷಕನಾದ ಶಿವನು ಆ ಆರ್ತಧ್ವನಿಯು ಮುಗಿಯುವಷ್ಟರಲ್ಲೇ ಶ್ವೇತನ ಕರಕಮಲದ ಇಷ್ಟಲಿಂಗದಿಂದಲೇ ಆವಿರ್ಭವಿಸಿದನು. ವಿಷ್ಣುಬ್ರಹ್ಮಾದಿಗಳೂ ಪ್ರಮಥರುದ್ರಗಣರೂ ಒಡನೆಯೇ ಸಿದ್ಧರಾದರು. ಜಡೆಮುಡಿಯೂ, ದೇವಗಂಗೆಯೂ, ರುಂಡಾಭರಣವೂ, ಭುಜಗಮಾಲೆಯೂ, ಪರಶಿವನಲ್ಲೊಪ್ಪಿರಲು, ತನ್ನ ಬಲಗೈಯನ್ನು ಶ್ವೇತನ ಶಿರಸ್ಸಿನಮೇಲಿಟ್ಟು ತಡವಿ, ಮತ್ತೊಂದು ಬಲಗೈಯಿಂದ ಶೂಲವನ್ನು ಮೇಲಕ್ಕೆತ್ತಿದನು. ಆ ಮಹಾತೇಜೋಮೂರ್ತಿಯನ್ನು ಕಂಡಮಾತ್ರದಿಂದಲೇ ಯಮನು ಕಣ್ಣನ್ನು ಮುಚ್ಚಿ ಗಡಗಡನೆ ನಡುಗಿಹೋದನು. ಶಿವನು ಕೋಪದಿಂದ ಅಗ್ನಿನೇತ್ರವನ್ನು ಸ್ವಲ್ಪಮಾತ್ರವೇ ತೆರೆದು ಯಮನನ್ನು ನೋಡಿದ ಕೂಡಲೇ ಧಗ್ಗನೆ ಉರಿದು ಕ್ಷಣಕಾಲದಲ್ಲಿ ಕರಿಗೊರಡಾಗಿ ನಿಂತನು. ಆಗ ಶಂಕರನು ಸಕಲ ದೇವತೆಗಳನ್ನೂ ಕುರಿತು– "ನನ್ನ ಭಕ್ತರೇ ನನಗೆ ಪ್ರಾಣವು, ಅಂಥವರ ಮೇಲೆ ಈ ಯಮನು ಕೈಮಾಡಿದುದರಿಂದ ಆ ದ್ರೋಹವೇ ಇವನನ್ನು ಕೊಂದಿತು. ಇದನ್ನು ನೋಡಿ ಎಲ್ಲರೂ ಎಚ್ಚೆತ್ತು ನಡೆಯಬೇಕು" ಎಂದು ಅಪ್ಪಣೆ ಮಾಡಿ, ರಂಭೆಯನ್ನು ಕರೆದು, ನೀನೇ ಸದ್ಭಕ್ತೆಯೆಂದು ನುಡಿದು ಅನುಗ್ರಹಿಸಿದನು. ಆಗ ಬಳಿಯಲ್ಲಿದ್ದ ಬ್ರಹ್ಮನು ಶಿವನ ಮುಂಗಡೆಗೆ ಬಂದು ವಂದಿಸಿ, ದೇವಾಧಿದೇವನೆ! ಯಮಧರ್ಮನು ಭಕ್ತದ್ರೋಹದಿಂದ ಅಳಿದುಹೋದಬಳಿಕ ಇನ್ನು ಜಗತ್ತಿನಲ್ಲಿ ಪಾಪಾಚಾರಿಗಳನ್ನು ಶಿಕ್ಷಿಸುವವರಿಲ್ಲದಂತಾ

ಯಿತು, ಪಾಪಕ್ಕೆ ಜನರು ಹೆದರದಂತೆಯೇ ಆಗುವುದು; ಅದುಕಾರಣ
ಯಮನು ಮಾಡಿದ ತಪ್ಪನ್ನು ಈ ಬಾರಿಗೆ ಕ್ಷಮಿಸಿ, ದುಷ್ಟಶಿಕ್ಷಣೆಗಾಗಿ
ಆತನನ್ನು ಪುನಃ ಉದ್ಧರಿಸಿ, ಮತ್ತೆ ಇಂತಹ ಭಕ್ತದ್ರೋಹವನ್ನು ಎಂ
ದಿಗೂ ಮಾಡದಂತೆ ಎಚ್ಚರಿಸಿ ಬುದ್ಧಿಕಲಿಸಿ ಕಾಪಾಡಬೇಕೆಂದು ಬೇಡಿದ
ನು. ಆಗ ಶಂಕರನು ದಯೆಗೊಂಡು ಯಮನಿಗೆ ಪ್ರಾಣದಾನವನ್ನು ಮಾ
ಡಿದನು. ಮಲಗಿದ್ದವನೇಳುವಂತೆ ಅಂತಕನು ಎದ್ದು ಶಿವನ ಪಾದಕ್ಕೆ ನಮ
ಸ್ಕರಿಸಿ, ಪ್ರಭುವೆ! ಮೂರ್ಖನಾದ ನನ್ನ ಸರ್ವಾಪರಾಧವನ್ನೂ ಕ್ಷಮಿ
ಸಬೇಕೆಂದು ಬೇಡಿದನು. ಪರಶಿವನಾದರೋ ಮುಂದೆ "ಇನ್ನೆಂದೂ ನನ್ನ
ಲಾಂಛನವನ್ನು ಧರಿಸಿದ ಭಕ್ತರಮೇಲೆ ನೀನು ಕೈಮಾಡಕೂಡದು" ಎಂ
ದು ಬುದ್ಧಿ ಹೇಳಿ, ಅವನ ಪಟ್ಟಣಕ್ಕೆ ಹೋಗುವುದಕ್ಕೆ ಅಪ್ಪಣೆಯಿತ್ತು,
ಶ್ವೇತನನ್ನು ಜತೆಯಲ್ಲಿ ಕರೆದುಕೊಂಡು ಸಕಲಪರಿವಾರದೊಡನೆ ಕೈಲಾಸ
ಕ್ಕೆ ದಯಮಾಡಿದನೆಂಬಲ್ಲಿಗೆ ಹನ್ನೊಂದನೇ ಅಧ್ಯಾಯವು ಸಂಪೂರ್ಣವು.

## ೧೨ ನೇ ಅಧ್ಯಾಯವು.

### ಸುಖಾವಹಮೂರ್ತಿ ಲೀಲೆ.

ಸಿದ್ಧರಾಮೇಶನೆ, ಪೂರ್ವದಲ್ಲಿ ಒಂದುವೇಳೆ ಕಾಲಯೋಗದಿಂದ ೧೨
ವರ್ಷಗಳ ಅನಾವೃಷ್ಟಿಯು ಸಂಭವಿಸಿತು. ಅದನ್ನು ಮುಂದಾಗಿಯೇ
ಶಾಸ್ತ್ರಶೋಧನೆಯಿಂದ ತಿಳಿದಿದ್ದ ಗೌತಮಮಹರ್ಷಿಯು ನಿವಾರ
ಣೋಪಾಯಕ್ಕಾಗಿ ದಂಡಕಾರಣ್ಯದಲ್ಲಿ ಶಿವನನ್ನು ಕುರಿತು ಘೋರತಪ
ಸ್ಸನ್ನಾಚರಿಸಿದನು. ಅದನ್ನು ಶಂಕರನು ತಿಳಿದು, ಗೌತಮನ ಮನೋಭ
ಕ್ತಿದಾರ್ಢ್ಯವನ್ನು ಜಗತ್ತಿಗೆ ತೋರ್ಪಡಿಸಬೇಕೆಂದು ಯೋಚಿಸಿ, ವಿಷ್ಣು
ವನ್ನು ಕರೆದು- "ನೀನು ಹೋಗಿ ಗೌತಮನ ಮುಂದೆ ನಿಂತು, ನಿನ್ನನ್ನೇ
(ವಿಷ್ಣುವನ್ನೇ) ಜಗತ್ಕರ್ತೃವೆಂದು ವಾದಿಸಿ, ಸಾಧಿಸಿಕೊಂಡು ಬಾ"
ಎಂದನು. ಹಾಗೆ ಮಾಡುವುದು ನನ್ನಿಂದ ಅಸಾಧ್ಯವೆಂದು ಹರಿಯು ನುಡಿ
ಯಲು, ಅದಕ್ಕೆ ಶಿವನು ನಕ್ಕು, ಹರಿಬ್ರಹ್ಮರೊಡನೆ ತಾನೂ ವೈಷ್ಣವ
ವೇಷವನ್ನು ಧರಿಸಿಕೊಂಡು, ದಂಡಕಾರಣ್ಯದ ತ್ರಿಯಂಬಕ ಪರ್ವತಕ್ಕೆ
ಬಂದರು. ಕಪಟರೂಪಿನ ಹರನು ಗೌತಮನ ಇದಿರಿಗೆ ನಿಂತು, ಮುನಿನಾ

ಥನೆ, ನೀನು ಯಾರನ್ನು ಕುರಿತು ತಪಸ್ಸನ್ನಾಚರಿಸುವೆ? ಎಂದು ಕೇಳಲು, ನಾನು ಪರಶಿವನನ್ನು ಕುರಿತು ತಪಸ್ಸನ್ನು ಮಾಡುವೆನೆಂದನು. ಅದಕ್ಕೆ ಕಪಟವೈಷ್ಣವನು ನಕ್ಕು, ಓಹೋ! ಋಷಿಯೆ, ನಿನಗೆ ಶಿವನು ವರವನ್ನು ಕೊಡುವನೆ? ಚೆನ್ನಾಯಿತು! ನಿನಗೇಕೆ ಇಂತಹ ಅಜ್ಞಾನ? ದಿಗಂಬರನೂ ಭೂತಿಬಡುಕನೂ ಮಸಣಗಾಹಿಯೂ ತಿರುಕನೂ ಮೂಳೆಮಾಲೆಯವನೂ ಆದ ಅವನು ತನಗೇ ಇಲ್ಲದ್ದನ್ನು ಇತರರಿಗೆ ಹೇಗೆ ಕೊಟ್ಟಾನು? ವಿಷ್ಣುವಾದರೋ ಜಗದ್ರಕ್ಷಣಕರ್ತೃ, ಲಕ್ಷ್ಮೀಪತಿ, ಪೀತಾಂಬರಧಾರಿ, ಜ್ಞಾನರೂಪ, ಅಚ್ಯುತ, ಪರಮಪುರುಷ, ಸಾತ್ವಿಕ, ಕೌಸ್ತುಭಧಾರಿ, ಬ್ರಹ್ಮಾದಿಸುರಾಧಿಪ; ಮತ್ತು ಲೋಕವೆಲ್ಲವೂ ವಿಷ್ಣುಮಯವಾದದ್ದು; ಹರನು ರಾಮಮಂತ್ರವನ್ನು ಪಾರ್ವತಿಗುಪದೇಶಿಸಲು, ಆಕೆಯು ಕಾಶಿಯಲ್ಲಿ ಸಾಯುವವರ ಕಿವಿಯಲ್ಲೆಲ್ಲ ಅದನ್ನು ಪದೇಶಿಸಿ ಎಲ್ಲರನ್ನೂ ಮುಕ್ತರಾಗುವಂತೆ ಮಾಡುತ್ತಿರುವಳು. ವೇದವ್ಯಾಸನು ಕಾಶಿಯಲ್ಲಿ ಕೈಯೆತ್ತಿ ಕೇಶವನಿಗಿಂತಲೂ ದೊಡ್ಡದೈವವಿಲ್ಲವೆಂದು ಸಾರಿ ನುಡಿದಿರುವನು. ಹರಿಯು ತನ್ನ ನಾಭಿಕಮಲದಿಂದ ಬ್ರಹ್ಮನನ್ನು ಪಡೆದನು. ಕ್ರೂರರಾಕ್ಷಸರನ್ನೆಲ್ಲ ಕೊಂದಿರುವನು. ದುಷ್ಟನಿಗ್ರಹಶಿಷ್ಟಪರಿಪಾಲನಸಮರ್ಥನು. ಇಂಥ ವಿಷ್ಣುವನ್ನು ಭಜಿಸಿದರೆ ನಿನ್ನ ಇಷ್ಟಾರ್ಥ ಸಿದ್ಧಿಯಾಗುವುದು. ಹರನನ್ನು ಭಜಿಸುವುದು ಹುಚ್ಚುತನವೇ ಸರಿ. ಬಿಡು; ಎಂದು ಜರೆದನು. ಆ ಶಿವದೂಷಣೆಯನ್ನು ಮುನಿಯು ಕೇಳಿ, ಮನದಲ್ಲಿ ನೊಂದು, ಕೋಪವೇರಿ, “ಎಲೊ ಮೂಢಬುದ್ಧಿಯ ವೈಷ್ಣವನೆ! ಶಿವನ ಮಾಹಾತ್ಮ್ಯವನ್ನು ತಿಳಿಯದ ನೀನು ಅಜ್ಞನೊ ನಾನು ಅಜ್ಞನೊ? ಕೇಳು—ಹರನು ಸಕಲದೇವಾಧಿದೇವನು, ಅತ್ಯತಿಷ್ಠದ್ದಶಾಂಗುಲನು, ‘ಏಕಮೇವಾದ್ವಿತೀಯಂಬ್ರಹ್ಮ, ಏಕಏವರುದ್ರೋನದ್ವಿತೀಯಾಯತಸ್ಥೇ’ ಎಂಬ ಶ್ರುತಿವಚನಗಳಿಂದ ತಾನೊಬ್ಬನೇ ಬ್ರಹ್ಮವೆಂದು ಪ್ರತಿಪಾದಿತನಾಗಿರುವನು. ಅವನಿಗೆ ಹರಿಯು ಸಮನೂ ಅಲ್ಲದಿರುವಾಗ್ಗೆ, ಅಧಿಕನೆಂಬ ಮಾತು ಮೊಲದ ಕೋಡಿನಂತೆಯೇ ಸರಿ. ಅದು ಹಾಗಿರಲಿ. ನಿನ್ನ ಮಾತಿನಂತೆ ಹರಿಯು ಜ್ಞಾನರೂಪನಾದರೆ, ಭೃಗುಮುನಿಯ ಪತ್ನಿಯನ್ನು ಅಜ್ಞಾನದಿಂದ ಅದೇತಕ್ಕೆ ಕೊಂದ

ನು ? ಅವನು ಅಚ್ಯುತನಾದರೆ ಹತ್ತಾವೃತ್ತಿ ಹುಟ್ಟಿ ಸತ್ತುದೇಕೆ ? ಪುರುಷೋತ್ತಮನಾಗಿದ್ದರೆ ಕಳ್ಳತನದಿಂದ ಅನ್ಯಸ್ತ್ರೀಯರನ್ನು ಬಯಸುವುದೇಕೆ ? ಜಗತ್ತೆಲ್ಲ ವಿಷ್ಣುಮಯವಾಗಿದ್ದರೆ ಅವನ ಹೆಂಡತಿಯನ್ನು ರಾಕ್ಷಸನು ಕದ್ದುಹೋದಾಗ ಇವನೇನು ಮಾಡುತ್ತಿದ್ದನು? ಅವನು ರಕ್ಷಾಕರ್ತನಾದರೆ, ಅವನ ಮಗನನ್ನೇ ಶಿವನು ಸುಟ್ಟಾಗ ಅದೇಕೆ ಉಳುಹಿಕೊಳ್ಳಲಿಲ್ಲ? ಲಕ್ಷ್ಮಿಯು ಅವನಿಗೇ ಹೆಂಡತಿಯಾಗಿದ್ದರೆ, ಅವಳು ಜಗತ್ತಿನ ದೊರೆಗಳನ್ನೆಲ್ಲ ಸೇರಿರುವುದಕ್ಕೆ ಕಾರಣವೇನು ? ಅವನೇ ಜಗತ್ತಿಗೆ ಕರ್ತನಾಗಿದ್ದರೆ, ಆತನೇ "ಮಮಕರ್ತಾಮಹೇಶ್ವರಃ" ಎಂದು ಅದು ಹೇಗೆ ನುಡಿದನು ? ರಾಮಮಂತ್ರವು; ಶಿವನ ನಾಮವು, ಆ ಹೆಸರನ್ನೇ ಪ್ರೇಮಕ್ಕಾಗಿ ಜಮದಗ್ನಿಯೂ ದಶರಥನೂ ತಮ್ಮ ತಮ್ಮ ಮಕ್ಕಳಿಗೆ ಪರಶುರಾಮ, ರಾಮ, ಎಂದು ಕರೆದುಕೊಂಡರು. ಆ ರಾಮಮಂತ್ರವನ್ನು ಕಾಶಿಯಲ್ಲಿ ಪಾರ್ವತಿಯು ಮೃತರಾಗುವವರ ಕಿವಿಯಲ್ಲಿ ಉಪದೇಶಿಸುವುದರಿಂದ ಅವರೆಲ್ಲರೂ ಶಿವಲೋಕವನ್ನು ಹೊಂದುತ್ತಾರೆಯೇ ಹೊರತು ವೈಕುಂಠವನ್ನು ಹೊಂದುವುದಿಲ್ಲ. ಇದರಿಂದಲೇ ರಾಮಮಂತ್ರವು ತಾರಕ ಬ್ರಹ್ಮವಾಚಕವೆಂದು ಗೊತ್ತಾಗುತ್ತದೆ. ಕಾಶಿಯಲ್ಲಿ ವೇದವ್ಯಾಸನು ಕೈಯೆತ್ತಿ ಕೇಶವನೇ ದೊಡ್ಡವನೆಂದು ಸಾರಿದನೆಂಬದಾಗಿ ನೀನು ಹೇಳುತ್ತೀಯೆ, ಅದರಿಂದ ಆ ವ್ಯಾಸನ ಅವಸ್ಥೆ ಯೇನಾಯ್ತೆಂಬುದನ್ನು ಮಾತ್ರ ಹೇಳದೆ ನೀನು ಮುಚ್ಚುತ್ತೀಯೆ, ನುಡಿಯಬಾರದ ಮಾತನ್ನು ಆತನು ನುಡಿದದರಿಂದಲೇ ನಂದೀಶನಿಂದ ಆತನಭುಜಸ್ತಂಭನವಾಯಿತು. ಹರಿಯು ರಾವಣ ಭಸ್ಮಾಸುರ ಮೊದಲಾದ ರಾಕ್ಷಸರನ್ನು ಕೊಲ್ಲುವುದಕ್ಕೆ ಪರಶಿವನು ಅವನಿಗೆ ಕೊಟ್ಟಿದ್ದ ವರಪ್ರಭಾವವೇ ಕಾರಣವಲ್ಲದೆ, ಅಂಥ ಮಹಾದನುಜರನ್ನು ಕೊಲ್ಲುವ ಶಕ್ತಿಯು ಹರಿಬ್ರಹ್ಮರಿಗೆಲ್ಲಿ ಬಂದಿತು ? ಇದಕ್ಕೆ ಹರಿಯ ಮಗ ಮನ್ಮಥನೂ, ಬ್ರಹ್ಮನ ತಲೆಯೂ ಸಾಕ್ಷಿಗಳು. ಉಪಮನ್ಯುವು ಶಿವಾನುಗ್ರಹದಿಂದ ಕ್ಷೀರಸಾಗರವನ್ನು ಪಾನಮಾಡುತ್ತಿರುವಾಗ, ಅದರೊಳಗಿದ್ದ ನಾರಾಯಣನು ಗಂಟಲಲ್ಲಿ ಸಿಕ್ಕಿಕೊಳ್ಳಲಾಗಿ, ಋಷಿ ಕುಮಾರನು ಉಗುಳಲು, ಕೆಳಗೆ ಬಿದ್ದ ಹರಿಯು ಮತ್ತೆ ಎದ್ದು ಬಂದು, ಋಷಿಯನ್ನು ಸ್ತೋತ್ರ ಮಾಡಿ, ಬೇಡಿ, ಆತನಿಂದ ಶಿವ

ದೀಕ್ಷೆಯನ್ನು ಪಡೆದುಕೊಂಡನು. ದಧೀಚಿಗೂ ಕ್ಷುವನಿಗೂ ಯುದ್ಧಸಂ
ಭವಿಸಿದಾಗ, ತನ್ನ ಭಕ್ತನಾದ ಕ್ಷುವನಿಗೆ ಬೆಂಬಲನಾಗಿ ಹೋದ ಗೋವಿಂ
ದನು ಋಷಿಯಮೇಲೆ ಚಕ್ರವನ್ನು ಬಿಟ್ಟು ಹಾಳ್ಮಾಡಿಕೊಂಡು ತಲೆಯ
ನ್ನು ಕೆದರಿ ಓಡಿದನು. ಮತ್ತು ಭೃಗುಮುನಿಯು ತನ್ನ ಪತ್ನಿಯನ್ನು
ಕೊಂದ ಹರಿಯು ಎದೆಯಮೇಲೆ ಝಾಡಿಸಿ ಒದೆದುದರಿಂದ ಆ ಸ್ಥಲದಲ್ಲಿ
ಉಳಿದ ಕಲೆಯಾಗಲು, ಅದರಿಂದ ಅವನು ಶ್ರೀವತ್ಸಲಾಂಛನನೆನಿಸಿಕೊ
ಳ್ಳುತ್ತಿರುವನು. ನಿನ್ನ ಮಾಧವನು ತಾರಕನೊಡನೆ ಕಾದಿ ಓಡಿ ಸಮುದ್ರ
ವನ್ನು ಹೊಕ್ಕಿಕೊಂಡನು. ಜಲಂಧರನೊಡನೆ ಕಾದಲು, ಅವನು ಇವನ
ನ್ನು ರಥಸಮೇತನಾಗಿ ತೆಗೆದು ಬಾಗುರಿಯಂತೆ ಆಕಾಶಕ್ಕಿಟ್ಟನು. ಬಳಿಕ
ಸೆರೆಯಲ್ಲಿಯೂ ಹಾಕಿಕೊಂಡನು. ಗಣಪತಿಯು ಹರಿಬ್ರಹ್ಮರಿಗೆ ಕೊಟ್ಟ
ಶಾಪದಿಂದ ಒಬ್ಬರಹೊಟ್ಟೆಯನ್ನೊಬ್ಬರು ಹೊಕ್ಕು, ಬ್ರಹ್ಮನು ಹರಿಯ
ನಾಭಿಕಮಲದಿಂದಾಚೆಗೆ ಬಂದುದರಿಂದ ಅವನಿಗೆ ಸರಸಿಜೋದ್ಭವನೆಂತ
ಲೂ, ಬ್ರಹ್ಮನ ಗುದಸ್ಥಾನದಿಂದ ವಿಷ್ಣುವು ಜನಿಸಿದ ಕಾರಣ, ಇವನಿಗೆ
ಅಧೋಕ್ಷಜನೆಂತಲೂ ಹೆಸರಾಯಿತು. ಹರಿಬ್ರಹ್ಮರು ವಾದ ಮಾಡಿ, ಮ
ಧ್ಯದಲ್ಲಿ ಉದ್ಭವಿಸಿದ ಲಿಂಗದ ಪಾದ ಶಿರಸ್ಸುಗಳನ್ನು ಕಾಣುವುದಕ್ಕಾಗಿ
ಹಂದಿ ಹಕ್ಕಿಗಳಾಗಿ ಹೋಗಿ, ಕಾಣಲಾರದೆ ಹೋದರು. ಶಿವನ ಕೈಯ
ಲ್ಲಿದ್ದ ಭಿಕ್ಷಾಪಾತ್ರೆಗೆ ಹರಿಯು ತನ್ನ ಹಣೆಯನ್ನು ಕೊರೆದು ರಕ್ತವನ್ನು
ಸುರಿಸಿ ತೃಪ್ತಿಗೊಳಿಸಲಾರದೆ ಹೋದನು. ಹರಿಯು ಶಿವನನ್ನು ತಪಸ್ಸಿ
ನಿಂದ ಮೆಚ್ಚಿಸಿ ಜಲಂಧರನ ವಧೆಗಾಗಿ ಶಿವನು ನಿರ್ಮಿಸಿದ್ದ ಚಕ್ರವನ್ನು
ಪಡೆದುಕೊಂಡನು. ಮಹಾಜಲಪ್ರಳಯದಲ್ಲಿ ನಾರಾಯಣನು ಆಲದೆಲೆ
ಯಮೇಲೆ ಮಲಗಿ ತೇಲುತ್ತಿದ್ದರೆ, ಶಿವನು ಆ ಮಹಾಜಲವನ್ನು ಮಲ್ಲಿಕಾ
ಕುಸುಮದಂತೆ ಜಡೆಯಲ್ಲಿ ಧರಿಸಿಕೊಂಡನು. ಜಗತ್ತನ್ನೆಲ್ಲ ಆವರಿಸಿದ ಮ
ಹಾವಿಷವು ವಿಷ್ಣುಬ್ರಹ್ಮೇಂದ್ರಾದಿಗಳನ್ನೆಲ್ಲ ಸುಟ್ಟು ದಿಗಂತಕ್ಕೆ ಓಡಿಸಲು
ಅವನ್ನು ಶಂಭುವು ಲೀಲಾಮಾತ್ರದಿಂದ ನೀಲಮಣಿಯಂತೆ ಹಿಡಿದು ಕಂ
ದಲ್ಲಿ ಧರಿಸಿದನು. ನಿಮ್ಮ ವೈಕುಂಠನು ಸಹಾಯವಾಗಿ ನಿಂತು, ಹರನಿ
ಅಗ್ರಭಾಗವನ್ನು ಕೊಡದೆ ಮಾಡಿಸಿದ್ದ ದಕ್ಷಯಾಗವನ್ನು ಶಿವನು ತನ್ನ
ಮಗನನ್ನು ಕಳಿಸಿ ಹಾಳ್ಮಾಡಿ, ಅಲ್ಲಿದ್ದವರೆಲ್ಲರಿಗೂ ಭಂಗಗೊಳಿಸಿದನ

ಜಗತ್ಕಂಟಕರಾಗಿದ್ದ ತಾರಕಾಕ್ಷ ಜಲಂಧರ ಅಂಧಕಾಸುರ ಗಜಾಸುರ ವ್ಯಾಘ್ರಾಸುರ ಮೊದಲಾದವರನ್ನೆಲ್ಲ ಶಿವನು ಸಂಹಾರಗೊಳಿಸಿ ದೇವತೆಗಳನ್ನುದ್ಧರಿಸಿರುವುದರಿಂದ ದುಷ್ಟನಿಗ್ರಹ ಶಿಷ್ಟಪರಿಪಾಲನೆಗೆ ಆತನೇ ಸಮರ್ಥನಾಗಿರುವನು. ಮತ್ತು ಆತನು ವಿಷ್ಣುಬ್ರಹ್ಮೇಂದ್ರಾದಿಪಶುಗಳಗೆಲ್ಲ ಪತಿಯಾಗಿರುವನು. ಅಲ್ಲದೆ ಬ್ರಹ್ಮನು "ಸರ್ವಸ್ಯಗಾತ್ರಸ್ಯಶಿರಃಪ್ರಧಾನಂ" ಎಂಬಂತೆ ದೇಹಕ್ಕೆಲ್ಲ ಮುಖ್ಯವಾದ ತನ್ನ ಶಿರಸ್ಸನ್ನೂ, ಹರಿಯು "ಸರ್ವೇಂದ್ರಿಯಾಣಾಂನಯನಂಪ್ರಧಾನಂ" ಎಂಬಂತೆ ಇಂದ್ರಿಯಗಳಲ್ಲಿ ಮುಖ್ಯವಾದ ತನ್ನ ಕಣ್ಣನ್ನೂ ಶಿವನಿಗೆ ಸಮರ್ಪಿಸಿ, ಶಿಷ್ಯರೂ ಭಕ್ತರೂ ಆಗಿರುವರು. ಇದರಿಂದಲೇ ನಿನ್ನ ವಿಷ್ಣುವಿನ ಪೂಜಕತ್ವವೂ ಶಿವನ ಪೂಜ್ಯತ್ವವೂ ಗೊತ್ತಾಗುವುದಿಲ್ಲವೆ ? ಮತ್ತು ನಿನ್ನ ಹರಿಯು ಭೃಗುವಿನ ಶಾಪದಿಂದ ದಶಾವತಾರವನ್ನೆತ್ತಿದನು. ಮೊದಲನೇ ಮತ್ಸ್ಯಾವತಾರದಿಂದ ಸಮುದ್ರವನ್ನು ಹೊಕ್ಕು ಸೋಮುಕಾಸುರನನ್ನು ಕೊಂದು ಅಹಂಕರಿಸಲು, ಶಿವನು ಅವನನ್ನು ಸೀಳಿ, ಬೆನ್ನಮೂಳೆಯನ್ನು ಧರಿಸಿ ಕಂಕಾಳಧರನಾದನು. ಸಮುದ್ರಮಥನಕಾಲದಲ್ಲಿ ಹರಿಯು ೨ ನೇ ಕೂರ್ಮಾವತಾರವನ್ನು ಮಾಡಿ ಅಹಂಕರಿಸಲು, ಹರನು ಅದನ್ನು ಕೊಂದು, ಬೆನ್ನಿನ ಓಟೆಯನ್ನು ತನ್ನ ಅಸ್ಥಿಮಾಲೆಯ ಮಧ್ಯದಲ್ಲಿ ಧರಿಸಿಕೊಂಡನು. ೩ ನೇ ವರಾಹಾವತಾರದಲ್ಲಿ ಭೂಮಿಯನ್ನು ಕದ್ದು ಹೋಗಿದ್ದ ಹಿರಣ್ಯಾಕ್ಷನನ್ನು ಕೊಂದು, ಭೂಮಿಯನ್ನುದ್ಧರಿಸಿ, ಮದದಿಂದ ಲೋಕಕಂಟಕನಾಗಿರಲು, ಶಿವನು ಆ ಹಂದಿಯನ್ನು ಕೊಂದು, ಕೋರೆಯನ್ನು ಕೈಯಲ್ಲಿ ಆಯುಧವಾಗಿ ಹಿಡಿದನು. ೪ ನೇ ನೃಸಿಂಹಾವತಾರದಿಂದ ಹಿರಣ್ಯಕಶಿಪುವನ್ನು ಕೊಂದು ರಕ್ತಪಾನ ಮಾಡಿ ಮೆರೆಯುತ್ತಿರಲು, ಶರಭಾವತಾರದಿಂದ ಹರನು ಅವನನ್ನು ಕೊಲ್ಲಿಸಿ ಚರ್ಮವನ್ನು ಹೊದೆದನು. ೫ ನೇ ವಾಮನಾವತಾರದಿಂದ ವಿಷ್ಣುವು ಬಲಿಚಕ್ರವರ್ತಿಯನ್ನು ಸಂಹರಿಸಿ, ಲೋಕವನ್ನೆಲ್ಲ ತುಂಬಿಕೊಂಡು ಬೆಳೆಯಲು, ಅವನನ್ನು ಶಂಕರನು ಕೊಂದು, ಬೆನ್ನಿನ ಮೂಳೆಯನ್ನು ಕೈಯಲ್ಲಿ ಹಿಡಿದುಕೊಂಡನು. ೬ ನೇ ಅವತಾರದಲ್ಲಿ ಹರಿಯು ಜಮದಗ್ನಿಗೆ ಮಗನಾಗಿ ಪರಶುರಾಮನಾಗಿ ಹುಟ್ಟಿ, ಕ್ಷತ್ರಿಯ ಕುಲವನ್ನು ನಿರ್ಮೂಲ ಮಾಡಿ, ರಘುರಾಮನೊಡನೆ ವಾದವ

ನ್ನು ಮಾಡಿ ಸೋತು, ಭೂಮಿಯನ್ನೆಲ್ಲ ಬ್ರಾಹ್ಮಣರಿಗೆ ದಾನ ಮಾಡಿ, ತನ್ನ ಮಾತೃಹತ್ಯದೋಷನಾಶಕ್ಕಾಗಿ ಭೂಪ್ರದಕ್ಷಿಣೆಯನ್ನು ಮಾಡಿ, ರಾಮೇಶಲಿಂಗಾರಾಧನೆಯನ್ನೆಸಗಿ ಧನ್ಯನಾದನು. ೭ ನೇ ರಾಮಾವತಾರದಲ್ಲಿ ದಶರಥನಿಗೆ ಮಗನಾಗಿ ಜನಿಸಿ, ವನವಾಸಮಾಡಿ, ಹೆಂಡಿತಿಯನ್ನು ಕಳೆದುಕೊಂಡು, ರಾವಣವಧೆಯಿಂದ ಜನಿಸಿದ ಬ್ರಹ್ಮಹತ್ಯವನ್ನು ಕಳೆದುಕೊಳ್ಳುವುದಕ್ಕಾಗಿ ಸೇತುಮಧ್ಯದಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿ ಕೃತಾರ್ಥನಾದನು. ೮ ನೇ ಅವತಾರದಲ್ಲಿ ಕೃಷ್ಣನೆಂಬ ಹೆಸರಿನಿಂದ ವಸುದೇವನಿಗೆ ಮಗನಾಗಿ, ಗೊಲ್ಲರಲ್ಲಿಂದು, ಹಾಲ್ಮೊಸರು ಬೆಣ್ಣೆಯನ್ನು ಕದ್ದು ತಿಂದು, ದನಗಳನ್ನು ಕಾದು, ಗೋಪಸ್ತ್ರೀಯರೊಡನೆ ಹಾದರ ಮಾಡಿ, ಅನೇಕ ರಾಕ್ಷಸರಿಗೆ ಸೋತು, ಕೆಲವರನ್ನು ಗೆದ್ದು, ಜರಾಸಂಧನಿಗೆ ಹೆದರಿಕೊಂಡು ಸಮುದ್ರದಲ್ಲಿ ಅವಿತು, ಅರ್ಜುನನ ಹತ್ತಿರ ಬಂಡಿ ಹೊಡೆಯುವ ಊಳಿಗದಲ್ಲಿದ್ದು ಜೀವಿಸಿ, ಬಳಕ ಶಿವನನ್ನು ಕುರಿತು ತಪಸ್ಸನ್ನಾಚರಿಸಿ, ಮನ್ಮಥನೆಂಬ ಮಗನನ್ನು ಪಡೆದು, ಕಡೆಗೆ ೧೬ ಸಾವಿರ ಗೊಲ್ಲ ಹೆಂಡಿತಿಯರ ಕಣ್ಣೆದಿರಿಗೇ ಬೇಡನಿಂದ ಮೃತನಾಗಿ ಹೋದನು; ಅವನಹೆಣವನ್ನು ಸುಡಲಾಗಿ, ಅರೆಬೆಂದುಳಿದ ಮೋಟುಗಳನ್ನು ಜಗನ್ನಾಥದಲ್ಲಿಟ್ಟು ಈಗಳೂ ಪೂಜಿಸುತ್ತಿರುವರು. ೯—೧೦ ನೇ ಅವತಾರಗಳಲ್ಲಿ ಬುದ್ಧ ಕಲ್ಕಿ ಯೆಂಬ ಹೆಸರನ್ನು ತಾಳಿ ವೇದಶಾಸ್ತ್ರವನ್ನು ಜಗತ್ತಿನಲ್ಲಿ ಹರಡುತ್ತಿರುವನು. ಇನ್ನು ಕೆಲಕಾಲದಮೇಲೆ ಸಾಯುವನು. ಹೀಗೆ ಎಷ್ಟೋ ಜನ್ಮಾಂತರಗಳನ್ನೆತ್ತಿ ಅಳಿದ ನಿಮ್ಮ ಹರಿಯನ್ನು ಪರಾತ್ಪರನೂ ನಿತ್ಯನೂ ಸರ್ವಜ್ಞನೂ ಸರ್ವಮಯನೂ ಆದ ಮಹಾದೇವನೊಡನೆ ಸರಿಯೆಂದಾದರೂ ಹೇಳುವುದಕ್ಕೆ ನಿನ್ನ ಬಾಯಿ ಹೇಗೆ ಬರುವುದು ? ಹರಿಬ್ರಹ್ಮೇಂದ್ರಾದಿಗಳೂ ಸಿದ್ಧವಿದ್ಯಾಧರಕಿನ್ನರಕಿಂಪುರುಷಾದಿಗಳೂ ಇತರ ಮನುಮುನಿಗಳು ಸಹ ಶಿವನಿಂದಲೇ ಮುಕ್ತರಾಗುವುದಕ್ಕಾಗಿ ಅವರವರ ಹೆಸರಿನಮೇಲೆ ಲಿಂಗಪ್ರತಿಷ್ಠೆಗಳನ್ನು ಮಾಡಿ ಆರಾಧಿಸಿರುವುದು ಕಾಶಿ ಮೊದಲಾದ ದಿವ್ಯಕ್ಷೇತ್ರಗಳಲ್ಲೆಲ್ಲ ಈಗಳೂ ಪ್ರತ್ಯಕ್ಷಪ್ರಮಾಣವಾಗಿರುವುದು" ಎಂದುಮೊದಲಾಗಿ ಗೌತಮನು ನುಡಿದನು. ಆಗವೈಷ್ಣವನು— ಈ ಪುರಾಣದ ಕಥೆಗಳೆಲ್ಲ ಬೇಕಿಲ್ಲ; ಹರಿಯೇ ದೊಡ್ಡವನೆಂಬ ವಿಷಯದ

ನ್ನು ಸಾಧಿಸುವುದಕ್ಕೆ ಪ್ರತ್ಯಕ್ಷಪ್ರಮಾಣವಾಗಿ ನಾನು ಹಣೆಯಲ್ಲಿ ಕಣ್ಣನ್ನು ತೋರಿಸುತ್ತೇನೆ ನೋಡು, ಎಂದು ತೋರಿಸಲು, ಋಷಿಯು— ಇದಾವ ಮಹಾಘನತೆಯು ? ಶಿವನೇ ಸರ್ವೋತ್ತಮನೆಂಬುದಕ್ಕೆ ಪ್ರತ್ಯಕ್ಷಪ್ರಮಾಣವಾಗಿ ಅಂಥ ಮೂರನೇ ಕಣ್ಣನ್ನು ನನ್ನ ಪಾದದಲ್ಲಿ ತೋರಿಸುತ್ತೇನೆ ನೋಡು, ಎಂದು ಕಾಲಿನಲ್ಲಿ ಕಣ್ಣನ್ನು ತೋರಿಸಲು, ಶಿವನು ಅವನ ದೃಢಭಕ್ತಿಯನ್ನು ಹರಿಬ್ರಹ್ಮರಿಗೆ ತೋರಿಸಿ, ತಾನು ಮೆಚ್ಚಿ, ತನ್ನ ಕಪಟವೇಷವನ್ನುಳಿದು, ನಿಜರೂಪವನ್ನು ಧರಿಸಿದನು. ಆಗ ಋಷಿಯು ತನ್ನ ಉಪಾಸ್ಯದೇವತೆಯನ್ನು ಕಂಡು, ಆನಂದಗೊಂಡು, ದೀರ್ಘದಂಡವಾಗಿ ಭಕ್ತಿಯಿಂದ ನಮಸ್ಕರಿಸಿ, ತಾನು ತಿಳಿಯದೆ ವಾಗ್ವಾದ ಮಾಡಿದ ಅಪರಾಧವನ್ನು ಕ್ಷಮಿಸೆಂದು ಬೇಡಿದನು. ನಿನ್ನ ನಿಜಭಕ್ತಿಯ ಪರೀಕ್ಷಾರ್ಥವಾಗಿ ಇದು ನಾನು ಮಾಡಿದ ವಿನೋದವಾದುದರಿಂದ, ನಿನ್ನ ಮಾತು ನನಗೆ ಎಷ್ಟೋ ಮೆಚ್ಚುಗೆಯನ್ನುಂಟುಮಾಡಿತೆಂದು ಶಿವನು ಹೇಳಿ, ತಲೆದಡವಿ, ಎತ್ತಿ, ನಿನ್ನಿಷ್ಟಾರ್ಥವೇನೆಂದು ಕೇಳಲು, "ಶಿವನೇ! ಮಳೆಯಾಗದಿದ್ದರೂ ಬಿತ್ತಿದ ಭೂಮಿಯಲ್ಲಿ ಬೆಳೆಸು ಚೆನ್ನಾಗಿ ಆಗುವಂತೆ ವರವನ್ನು ಕೊಡಬೇಕು" ಎಂದು ಋಷಿಯು ಪ್ರಾರ್ಥಿಸಿದನು. ಹಾಗೆಯೇ ಆಗಲಿ ಯೆಂದು ವರವಿತ್ತು ಶಿವನು ಅಂತರ್ಧಾನಗೊಂಡನು. ಕಾಲಕ್ರಮದಿಂದ ಶನಿಯು ರೋಹಿಣೀ ಶಕಟವನ್ನು ಭೇದಿಸಲಾಗಿ ೧೨ ವರ್ಷದ ಬರವು ಬಿದ್ದಿತು. ಮಳೆಯು ಸುದ್ದಿಯೇ ಅಡಗಿತು. ಬೆಳಗಿನ ಹೊತ್ತು ಮಂಜು ಸುರಿವುದು, ಮಧ್ಯಾಹ್ನ ಮೋಡವು ಮುಸುಕುವುದು, ರಾತ್ರಿಯಾದಕೂಡಲೇ ಆಕಾಶವು ನಿರ್ಮಲವಾಗುವುದು, ಈರೀತಿಯಾಗುತ್ತಬಂದುದರಿಂದ ಗಿಡ ಮರ ಬಳ್ಳಿಗಳೆಲ್ಲ ಎಲೆಯುದುರಿ ಒಣಗಿಹೋದುವು. ಕೆರೆ ಕಟ್ಟೆ ಬಾವಿ ಹೊಳೆಗಳೆಲ್ಲ ಬತ್ತಿದುವು. ಎಲ್ಲೆಲ್ಲೂ ಪ್ರಾಣಿಗಳು ಆಹಾರವಿಲ್ಲದೆ ಬಡವಾಗಿ ಸಾಯುತ್ತಿದ್ದುವು. ಆಗ ದಾರುವನದಲ್ಲಿದ್ದ ಎಂಭತ್ತೆಂಟು ಸಾವಿರಮಂದಿ ಋಷಿಗಳೆಲ್ಲ, ಗೌತಮನು ಶಿವವರದಿಂದ ಧಾನ್ಯಸಮೃದ್ಧಿಯನ್ನು ಪಡೆದಿರುವ ವಾರ್ತೆಯನ್ನು ಕೇಳಿ, ಆತನಾಶ್ರಮಕ್ಕೆ ಬಂದರು. ಅವರೆಲ್ಲರನ್ನೂ ಗೌತಮನು ಅನ್ನಪಾನಾದಿಗಳಿಂದ ಸತ್ಕರಿಸಿ ಇಟ್ಟುಕೊಂಡನು. ೧೨ ವರ್ಷಗ

ಳು ಕಳೆದ ನಂತರ ಲೋಕದಮೇಲೆ ಸುಭಿಕ್ಷೆಯುಂಟಾಯಿತು. ಆಗ ತಮ್ಮ ತಮ್ಮ ಸ್ಥಲಕ್ಕೆ ಹೊರಟುಹೋಗಬೇಕೆಂದು ಋಷಿಗಳು ಗುಜುಗೂಪಲುಗೊಂಡರು. ಶಾಂಡಿಲ್ಯಮುನಿಯು ಅವರ ಮಾತನ್ನು ಕೇಳಿ– "ಇದುವರೆಗೂ ನಮ್ಮನ್ನು ತಾಯ್ತಂದೆಗಿಂತಲೂ ಹೆಚ್ಚಾಗಿ ಸಾಕಿದ ಗೌತಮಮಹರ್ಷಿಯೊಡನೆ ಈ ಸಂಗತಿಯನ್ನು ಹೇಳಿ ಅವನಪ್ಪಣೆಯನ್ನು ಪಡೆಯದೆ ಹೋಗುವುದು ನಮಗೆ ಧರ್ಮವಲ್ಲ; ಅನ್ನದಾನದ ಮುಂದೆ ಯಾವ ದಾನವೂ ಅಲ್ಲ; ಅಂಥ ವೀರಕ್ಷಾಮದಲ್ಲಿ ಇಷ್ಟೊಂದು ಜನಗಳನ್ನು ಸಾಕುವುದೆಂದರೇನು ಸಾಮಾನ್ಯವೆ? ಈ ಸಂದರ್ಭದಲ್ಲಿ ಅನ್ನದಾನವಿಷಯಕವಾದ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿರಿ– ಒಂದಾನೊಂದು ಕಾಲದಲ್ಲಿ ಗುಣನಿಧಿಯೆಂಬ ರಾಜನೊಬ್ಬನು ಅರಣ್ಯದಲ್ಲಿ ಬೇಂಟೆಯಾಡುತ್ತಿರಲು, ಒಂದು ಸಿಹ್ಮವು ಹೊದರಿನಿಂದ ಈಚೆಗೆ ಬಂದಿತು. ಅದನ್ನು ದೊರೆಯು ಬೆನ್ನಟ್ಟಿದನು; ಅಷ್ಟರಲ್ಲಿ ಪೂರ್ವಶಾಪಬಲದಿಂದ ಸಿಹ್ಮವು ಬಯಲಾಯಿತು. ಈ ಆಶ್ಚರ್ಯವನ್ನು ಕಂಡು ದೊರೆಯು ಕುದುರೆಯಿಂದಿಳಿದು ನೋಡುವಷ್ಟರಲ್ಲಿ ಆ ಕುದುರೆಯೂ ಅದೃಶ್ಯವಾಯಿತು. ಇದರಿಂದ ಮತ್ತೂ ವಿಸ್ಮಿತನಾದನು. ನಡೆದುಹೋಗುವುದಕ್ಕೆ ಸಾಗದೆ, ಆಹಾರವಿಲ್ಲದೆ ವನಾಂತರದಲ್ಲಿ ಬಳಲುತ್ತಿದ್ದ ಈ ದೊರೆಯನ್ನು ಒಬ್ಬ ಬೇಡನು ಕಂಡು, ಮರುಗಿ ಕರೆದುಕೊಂಡುಹೋಗಿ, ಉಣಬಡಿಸೆಂದು ಹೆಂಡತಿಗೆ ಹೇಳಲು, ಮುಂದೆ ಅವನು ತಂದುಕೊಟ್ಟದ್ದ ಬಿದಿರಕ್ಕಿಯನ್ನು ಆಕೆಯು ಬೋನಮಾಡಿ ಜೇನನ್ನೂ ಅವನ್ನೂ ರಾಜನಿಗೆ ಬಡಿಸಿ ತೃಪ್ತಿಪಡಿಸಲು, ಸತಿಪತಿಗಳು ಅವನನ್ನು ಮಂಚದಮೇಲೆ ಮಲಗಿಸಿ, ತಾವು ಉಪವಾಸವಾಗಿ ಮಂಚದ ಕೆಳಗೆ ಮಲಗಿದರು. ರಾತ್ರಿ ಒಂದು ಹುಲಿಯು ಬಂದು ಆ ಗಂಡಹೆಂಡಿರನ್ನು ಕೊಂದು ತಿಂದುಹೋಯಿತು. ಬೆಳಗಾದಮೇಲೆ ದೊರೆಯು ಎದ್ದು ಮಂಚವನ್ನಿಳಿದು ಸತ್ತು ತುಂಡಾಗಿ ಬಿದ್ದಿರುವ ಗಂಡಹೆಂಡಿರನ್ನು ನೋಡಿ, ಅತ್ಯಂತವಾಗಿ ಶೋಕಿಸಿ, ಆ ಶರೀರದ ತುಂಡುಗಳನ್ನೆಲ್ಲ ಒಟ್ಟಸಂಸ್ಕರಿಸಿ ಹೋದನು. ಅಷ್ಟರಲ್ಲಿ ಅವನ ಸೇನೆಯೆಲ್ಲ ತಡಕಿಕೊಂಡು ಬರಲು, ರಾಜನು ಅವರೊಡನೆಕೂಡಿ ಪಟ್ಟಣಕ್ಕೆಹೋಗಿ ಸುಖವಾಗಿರುತ್ತ ಒಂದು ದಿನ ತನ್ನ ಪುರೋಹಿತನನ್ನು ಕರೆದು, ದಾನಗಳೊಳಗೆಲ್ಲ ಉತ್ತ

ಮವಾದುದು ಯಾವುದು? ಎಂದು ಕೇಳಲು, ಅನ್ನದಾನವೇ ಮುಖ್ಯವೆಂದು ಪುರೋಹಿತನು ಹೇಳಿ, ಅದಕ್ಕೊಂದು ಪೂರ್ವ ಚರಿತ್ರವನ್ನು ಹೇಳಿದನು, ಹೇಗೆಂದರೆ— "ಗಂಗಾವತಿಯೆಂಬ ಪಟ್ಟಣದಲ್ಲಿ ಅನಂತಭಟ್ಟನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಪ್ರತಿದಿನವೂ ಊಟ ಮಾಡುವಾಗ ಹೊರಗೆಬಂದು, ಯಾರಾದರೂ ಅನ್ನಾರ್ಥಿಗಳಾದ ಬ್ರಾಹ್ಮಣರಿದ್ದಾರೆಯೋ ಎಂದು ನೋಡಿ, ಇದ್ದರೆ ಅವರನ್ನು ಕರೆದು ಪಙ್ತಿಯಲ್ಲಿ ಕುಳ್ಳಿರಿಸಿಕೊಂಡು ಭೋಜನ ಮಾಡುತ್ತಿದ್ದನು. ಒಂದು ದಿನ ಪದ್ಧತಿಯಂತೆ ಹೊರಗೆ ಬಂದು ನೋಡುವಲ್ಲಿ, ಮಳೆಯಿಂದ ನೆನೆದು ಕಟಕಟನೆ ನಡುಗುತ್ತಾ ತನ್ನ ಜಗತಿಯಮೇಲೆ ನಿಂತಿರುವ ಒಬ್ಬನನ್ನು ಕಂಡು, ನೀನಾರೆಂದು ಕೇಳಿದನು. ಉತ್ತರವು ಬರದಿರಲು, ಮತ್ತೊಂದುವೇಳೆ ಕೇಳಿದನು. ಅದಕ್ಕಾ ಮನುಷ್ಯನು— ತಾನು ಚಂಡಾಲನೆಂತಲೂ, ಕಟ್ಟಿಗೆಯನ್ನು ಮಾರುವುದಕ್ಕಾಗಿ ಬಂದು, ಅದು ಮಾರದಿರಲು ಮಳೆಯಿಂದ ನೆನೆದು ಇಲ್ಲಿ ಹೊರಟು ನ್ನು ಒರಗಿಳಿ ಅನ್ನವಿಲ್ಲದೆ ಸಂಕಟಗೊಂಡು ನಿಂತಿರುವೆನೆಂತಲೂ, ತನ್ನ ಮನೆಯು ದೂರದಲ್ಲಿರುವುದರಿಂದ ಹೋಗಲಾರೆನೆಂತಲೂ, ಸ್ವಲ್ಪ ಚೇತರಿಸಿಕೊಂಡು ಹೋಗುವವರೆಗೂ ಅಪ್ಪಬೇಕೆಂತಲೂ ವಿನಯದಿಂದ ಬೇಡಿಕೊಂಡನು. ಆಗ ಬ್ರಾಹ್ಮಣನು— ಅಯ್ಯಾ! ನೀನು ಚಂಡಾಲನಾದರೇನಾಯ್ತು? ಹೆದರಬೇಡ; ನಾವು ನಿನ್ನನ್ನು ದಂಡಿಸುವುದಿಲ್ಲ, ಈ ಕಟ್ಟಿಗೆಯ ಕ್ರಯವೇನು ಹೇಳು, ಎಂದು ಕೇಳಿ, ಅವನು ಕೇಳಿದಂತೆ ಹಾಗದಹಾನನ್ನು ಕೊಟ್ಟು ತೆಗೆದುಕೊಂಡು, ಬೆಂಕಿಯನ್ನು ತರಿಸಿಕೊಟ್ಟು, ಅದರಲ್ಲಿ ಕಾಸಿಕೊಳ್ಳೆಂದು ಹೇಳಲು, ಹೊಲೆಯನು ಪರಮಾಶ್ಚರ್ಯಪಟ್ಟು ಬೆಂಕಿಯಿಂದ ಕಾಸಿ ಸೇಕ ಮಾಡಿಕೊಂಡನು. ಆಗ ಅವನ ಹೊಟ್ಟೆಯ ಹಸಿವು ಹೆಚ್ಚಾಯಿತು. ಅದರಿಂದ ನರಳುತ್ತಾ ಅನ್ನವನ್ನು ಬೇಡಿದನು. ಬ್ರಾಹ್ಮಣನು ಮರುಗಿ, ಒಳಹೋಗಿ, ಅನ್ನ ತುಪ್ಪ ತೊವೆ ಕಾಯಿಪಲ್ಯ ಉಪ್ಪಿನಕಾಯಿಗಳನ್ನೆಲ್ಲ ಒಂದು ಹೊಸಮಡಕೆಯಲ್ಲಿಬಡಿಸಿ ತಂದು ಕೊಡಿಸಿದನು. ಅದನ್ನು ಚಂಡಾಲನು ಉಂಡು ತೃಪ್ತಿಪಟ್ಟು, ಉಳಿದನ್ನವನ್ನೂ ಕಟ್ಟಿಗೆಯ ಮಾರಿದ ಕ್ರಯವನ್ನೂ ಹೆಂಡತಿಗೆ ತಂದುಕೊಟ್ಟು, ಅನ್ನವನ್ನಿಕ್ಕಿದ ಬ್ರಾಹ್ಮಣನನ್ನು ಕುರಿತು ಅವಳೊಡನೆ ಕೊಂಡಾಡುತ್ತಿದ್ದನು.

ಅತ್ತ ಗಂಗಾವತೀಪಟ್ಟಣಕ್ಕೆ ಒಂದು ಯೋಜನದಲ್ಲಿ ದಮಯಂತಿಪುರವೆಂಬ ಊರಿದ್ದಿತು. ಅದರಲ್ಲಿರುವ ಸರ್ವಜ್ಞನೆಂಬ ಬ್ರಾಹ್ಮಣನ ಮಗನನ್ನು ಒಂದು ಬ್ರಹ್ಮರಾಕ್ಷಸನು ಹಿಡಿದುಕೊಂಡಿದ್ದಿತು. ಯಾವ ಯಾವ ಮಂತ್ರತಂತ್ರೌಷಧಗಳಿಂದಲೂ ಬಿಡದೆ ಇದ್ದಿತು. ಈ ವರ್ತಮಾನವನ್ನು ಗಂಗಾವತೀಪಟ್ಟಣದ ಅನಂತಭಟ್ಟನು ಕೇಳಿ, ಅಲ್ಲಿಗೆ ಬರಲು, ಹುಡುಗನ ಮೈಮೇಲಿದ್ದ ಬ್ರಹ್ಮರಾಕ್ಷಸನು ಭಯಭಕ್ತಿಯಿಂದ ಈತನಿಗೆ ಕೈಮುಗಿದಿತು. ನೀನಾರು? ಅದೇಕೆ ಕೈಮುಗಿದೆ? ಎಂದು ಭಟ್ಟನು ಕೇಳಲು, "ಬ್ರಾಹ್ಮಣೋತ್ತಮನೆ! ನಾನು ಹಿಡಿದುಕೊಂಡಿರುವ ಈ ಹುಡುಗನೂ ನಾನೂ ಪೂರ್ವಜನ್ಮದಲ್ಲಿ ಜತೆಯಾಗಿ ಓದುತ್ತಿದ್ದೆವು; ಇವನಿಗಿಂತಲೂ ನನ್ನಲ್ಲಿ ವಿದ್ಯೆಯು ಹೆಚ್ಚಾಗಲು, ಇವನು ಅದನ್ನು ನೋಡಿ ಸೈರಿಸದೆ, ನನ್ನ ತಲೆಯಮೇಲೆ ಕಲ್ಲನ್ನೆತ್ತಿಹಾಕಿ ಕೊಂದನು; ಅದುಕಾರಣ ಈ ದುರಾತ್ಮನನ್ನು ನಾನು ಹಿಡಿದು ಕೊಲ್ಲಬೇಕೆಂದಿರುವೆನು; ಆದರೆ ನೀನು ಹೊಲೆಯನಿಗೆ ಅನ್ನದಾನವನ್ನು ಮಾಡಿರುವ ಪುಣ್ಯಫಲವನ್ನು ನನಗೆ ಕೊಟ್ಟುಬಿಟ್ಟರೆ ಈತನನ್ನು ಬಿಟ್ಟು ಹೋಗುವೆನು" ಎಂದು ಬ್ರಹ್ಮರಾಕ್ಷಸನು ನುಡಿದನು. ತಂದೆಯಾದ ಸರ್ವಜ್ಞನು ಅದನ್ನು ಕೇಳಿ, ಹೆಂಡತಿಯಸಮೇತನಾಗಿ ಅನಂತಭಟ್ಟನ ಪಾದಕ್ಕೆ ಬಿದ್ದು, ಬ್ರಾಹ್ಮಣೋತ್ತಮನೇ! ಒಬ್ಬ ಚಂಡಾಲನಿಗೆ ಅನ್ನದಾನವನ್ನು ಮಾಡಿದುದರಿಂದಲೇ ಇಂತಹ ಪ್ರಭಾವವು ನಿನಗುಂಟಾಗಿರುವುದು; ಇನ್ನು ಒಂದು ಬ್ರಾಹ್ಮಣಕುಟುಂಬವನ್ನು ರಕ್ಷಿಸಿದರೆ ಎಂತಹ ಪುಣ್ಯವುಂಟಾಗಬಹುದು! ಅದುಕಾರಣ, ರಾಕ್ಷಸನು ಕೇಳುವ ದಾನವನ್ನು ಮಾಡಿ ನಮ್ಮವಂಶವನ್ನುದ್ಧರಿಸಬೇಕೆಂದು ಬೇಡಿಕೊಂಡನು. ಆಗ ಭಟ್ಟನು ಅನ್ನದಾನದ ಫಲವನ್ನು ರಾಕ್ಷಸನಿಗೆ ಧಾರೆಯೆರೆದು ಕೊಟ್ಟನು. ಅದರಿಂದ ಬ್ರಹ್ಮರಾಕ್ಷಸನ ಪಿಶಾಚತ್ವವು ಕಳೆದುಹೋಗಿ, ಸದ್ಬ್ರಾಹ್ಮಣನಾಗಿ, ಮಣಿರಥವನ್ನೇರಿ ಸ್ವರ್ಗಕ್ಕೆ ಹೋದನು. ಇತ್ತ ಬ್ರಾಹ್ಮಣಪುತ್ರನು ಸುಖವಾಗಿ ಬಾಳಿದನು." ಎಂದು ಪುರೋಹಿತನು ಹೇಳಲಾಗಿ, ದೊರೆಯು– ಪುರೋಹಿತರೆ! ಬರಿಯ ಕಥೆಯನ್ನು ಹೇಳುವರೆ ಫಲವೇನು? ಅನ್ನದಾನಪ್ರಭಾವವಿಷಯವಾಗಿ ಪ್ರತ್ಯಕ್ಷಪ್ರಮಾಣವನ್ನು ನನಗೆ ತೋರಿಸಿದರೆ ಒಪ್ಪುತ್ತೇನೆ, ಎಂದನು. ಪುರೋಹಿತನಾದ

ರೂ—ಅದಕ್ಕೆ ನಾಳೆಯೇ ದೃಷ್ಟಾಂತವನ್ನು ತೋರಿಸುತ್ತೇನೆಂದು ಹೇಳಿ, ಮನೆಗೆ ಬಂದು, ಉಪಾಯವನ್ನು ಕಾಣದೆ ಚಿಂತೆಯಿಂದ ಮಂಚದ ಮೇಲೆ ಮಲಗಿದನು. ಸ್ವಪ್ನದಲ್ಲಿ ಪರಮೇಶನು ಬಂದು, ನಿಮ್ಮ ದೊರೆಗೆ ಇಂದಿಗೆಂಟುದಿನಕ್ಕೆ ಸತ್ಪುತ್ರನು ಜನಿಸುವನು. ಅವನೇ ಅನ್ನದಾನದ ಮಹಿಮೆಯನ್ನು ಹೇಳುವನು, ಎಂದು ಉಪದೇಶಿಸಿ ಬಯಲಾದನು. ಬ್ರಾಹ್ಮಣನು ಎಚ್ಚತ್ತು, ಶಿವಕಾರುಣ್ಯವನ್ನು ನೆನೆದು ಸಂತೋಷಿಸಿ, ಬೆಳಗಾದ ಕೂಡಲೇ ದೊರೆಯ ಬಳಿಗೆ ಹೋಗಿ, ಪ್ರಭುವೆ! ಇಂದಿಗೆಂಟುದಿನಕ್ಕೆ ತಮ್ಮ ಪಟ್ಟಮಹಿಷಿಯರ ಗರ್ಭದಲ್ಲಿ ಪುತ್ರರತ್ನ ಜನನವಾಗುವುದು; ಆ ಬಾಲಕನ ಮುಖದಿಂದಲೇ ತಮಗೆ ಅನ್ನದಾನಪ್ರಭಾವವು ಗೊತ್ತಾಗುವುದು ಎಂದು ಬಿನ್ನೈಸಿದನು. ಅದನ್ನು ಕೇಳಿ, ದೊರೆಯು ಹೆಂಡತಿಯೊಡನೆ ತಿಳಿಸಿ, ೮ ದಿವಗಳಿಗೆ ಸರಿಯಾಗಿ ಬ್ರಾಹ್ಮಣನ ಮಾತಿನಂತೆಯೇ ಪುತ್ರೋದಯವಾಗಲು ಹರ್ಷಗೊಂಡನು. ಆಗಲೇ ಪುರೋಹಿತನನ್ನು ಬರಮಾಡಿ, ಶಿಶುವಿನ ಇದಿರಿಗೆ ನಿಂತುಕೊಳ್ಳಲು, ಅದು ತೊದಲು ನುಡಿಯಿಂದಲೇ ತನ್ನ ತಂದೆಯನ್ನು ಕುರಿತು— “ಪ್ರಭುವೆ! ಶಬರನಾಗಿದ್ದ ನಾನು ನಿನಗೆ ಒಂದು ಪಡಿ ಬಿದಿರಕ್ಕಿಯ ಅನ್ನವನ್ನು ಇಕ್ಕಿದುದರ ಫಲದಿಂದ, ನಿನ್ನ ಹೊಟ್ಟೆಯಲ್ಲಿ ರಾಜಕುಮಾರನಾಗಿ ಹುಟ್ಟಿದೆನು; ಇನ್ನು ಅನ್ನದಾನದ ಮಹಿಮೆಯನ್ನೇನು ಹೇಳಲಿ? ” ಎಂದಿತು. ಆಗ ದೊರೆಯು ಆಶ್ಚರ್ಯಪಟ್ಟು, ಪುರೋಹಿತನಿಗೆ ಧನಕನಕಮಣಿಭೂಷಣಾದಿಗಳನ್ನಿತ್ತು ಮನ್ನಿಸಿದನು” ಎಂದು ಶಾಂಡಿಲ್ಯನು ಅನ್ನದಾನಪ್ರಭಾವವನ್ನು ಹೇಳಿದನು. ಅದರಮೇಲೆ, ಗೌತಮನೊಡನೆ ಹೇಳಿಬಿಟ್ಟು ಹೋಗುವುದೇ ಸರಿ ಯೆಂದು ಕೆಲವರು ಒಪ್ಪಿ, ಆತನಲ್ಲಿಗೆ ಹೋಗಿ ಕೇಳುವಲ್ಲಿ, ಇನ್ನು ಕೆಲಕಾಲವಿದ್ದು ದಯೆಮಾಡಿಸಬೇಕೆಂದು ಗೌತಮನು ತಡೆದನು. ಆಗ ಆ ಬ್ರಾಹ್ಮಣರೆಲ್ಲ “ಹೀಗಾದರೆ ಈತನು ನಮ್ಮನ್ನು ಬಿಟ್ಟುಕೊಡುವುದಿಲ್ಲ; ಇವನಮೇಲೆ ಒಂದು ದೋಷವನ್ನು ಹೊರಿಸಿ ತಪ್ಪಿಸಿಕೊಂಡು ಹೋಗಬೇಕು; ಎಂದು ಯೋಚಿಸಿ, ಮಾಯೆಯ ಗೋವನ್ನೊಂದನ್ನು ನಿರ್ಮಿಸಿ, ಗೌತಮನ ಮುಂಗಡೆಗೆ ಕರೆದುಕೊಂಡುಹೋದರು. ಅದು ಅಸ್ಥಿಚರ್ಮಮಾತ್ರಾವಶಿಷ್ಟವಾಗಿ

ಬಡವಾಗಿದ್ದಿತು. ಅದನ್ನು ಋಷಿಯು ನೋಡಿ ಕನಿಕರದಿಂದ ಸಾಕಬೇಕೆಂದು ಯೋಚಿಸಿ, ಮೈದಡಹುವುದಕ್ಕಾಗಿ ಕೈಯನ್ನು ಅದರಮೇಲೆ ಇಟ್ಟಕೂಡಲೇ ಅದು ಭೂಮಿಯಮೇಲೆ ಬಿದ್ದು ಸತ್ತಿತು. ಗೌತಮನು ಪಶ್ಚಾತ್ತಾಪಪಟ್ಟನು. ಉಳಿದವರೆಲ್ಲ "ಓಹೋ! ಗೌತಮನು ಗೋವಧೆಯನ್ನು ಮಾಡಿದನು! ಇಂಥ ಪಾಪಿಯ ಮನೆಯಲ್ಲಿ ನಾವು ಅನ್ನವನ್ನು ಪರಿಗ್ರಹಿಸುವುದು ಹೇಗೆ?" ಎಂದು ಕೂಗುತ್ತ, ಹೊರಟುಹೋಗುತ್ತಿದ್ದರು. ಋಷಿವರ್ಯನು ಅವರ ಬಳಿಗೆ ಹೋಗಿ, ಕಾಲನ್ನು ಕಟ್ಟಿ, ಹೋಗಬೇಡಿರಿ, ಹೋಗಬೇಡಿರಿ, ಈ ನನ್ನ ಅಪರಾಧಕ್ಕೆ ಪ್ರಾಯಶ್ಚಿತ್ತವೇನು? ಹೇಳಿರಿ, ಎಂದು ಕೇಳಿಕೊಂಡನು. ಶಿವನ ಜಡೆಯಲ್ಲಿರುವ ಗಂಗೆಯನ್ನು ಬರಮಾಡಿ, ಹಸುವು ಸತ್ತ ಬಳಿಯಲ್ಲಿ ಹರಿಸಿದರೆ, ಪಾಪವು ಹೋಗುವುದೆಂದು ಅವರು ನುಡಿದು, ತಮ್ಮಾಶ್ರಮಕ್ಕೆ ತೆರಳಿದರು. ಇತ್ತ ಗೌತಮನು ಶಿವನನ್ನು ಕುರಿತು ತಪಸ್ಸನ್ನು ಮಾಡಿ ಮೆಚ್ಚಿಸಿ, ಅವನ ಶಿರಸ್ಸಿನ ಗಂಗೆಯ ಹನಿಯೊಂದನ್ನು ಪಡೆಯಲು, ಅದು ಭೂಮಿಗೆ ಬಿದ್ದು ಪ್ರವಾಹವಾಗಿ ಹರಿದು ಬಂದಿತು. ನನಗೆ ಗೋಹತ್ಯದೋಷವು ಏನುಕಾರಣ ಬಂದಿತೆಂದು ಶಿವನನ್ನು ಋಷಿಯು ಕೇಳಲು, ನೀನು ಕ್ಷಾಮದಲ್ಲಿ ಅನ್ನವನ್ನು ಕೊಟ್ಟು ದಾರುವನದ ಮುನಿಗಳನ್ನು ಕಾಪಾಡಿದ ಉಪಕಾರಕ್ಕೆ ಅವರು ಮಾಡಿದ ಅಪಕಾರರೂಪವಾದ ಕಪಟವೇ ಇದು ಎಂದು ಹೇಳಿ, ಶಿವನು ಅಂತರ್ಹಿತನಾದನು. ಆಗ ಗೌತಮನು ಆ ಋಷಿಗಳಮೇಲೆ ಕೋಪಗೊಂಡು "ಎಲೈ ಮಾಯಾವಿಗಳಿರಾ! ಯಾವ ಕಾರಣದಿಂದ ನೀವು ಮೋಸಗೊಳಿಸಿ ಕಪಟದಿಂದ ಹೋದಿರೋ ಆ ಕಾರಣದಿಂದ ನೀವು ಭೂಲೋಕದಲ್ಲಿ ವೇದಬಾಹ್ಯರಾಗಿ ಜನಿಸಿ, ಮೋಹಶಾಸ್ತ್ರಗಳನ್ನು ಕಲಿತು, ಶಿವಭಕ್ತ ಶಿವಚಿಹ್ನೆಗಳಲ್ಲಿ ದ್ವೇಷಿಗಳಾಗಿ, ಶಿವದ್ರೋಹಿಗಳಾಗಿ, ಕಪಟಮಂತ್ರತಂತ್ರನಿಪುಣರಾಗಿ, ಜಗದ್ವಂಚಕರಾಗಿ, ಪಾಷಂಡಿಗಳಾಗಿ, ಅನೃತವಂಚನೆಗಳಿಂದ ಹೊಟ್ಟೆ ಹೊರೆಯುವ ಮಹಾಪಾಪಿಗಳಾಗಿ, ಕೊನೆಗೆ ನರಕವನ್ನು ಹೊಂದಿರಿ" ಎಂದು ಶಾಪಕೊಟ್ಟನು. ಅತ್ತ ಗಂಗೆಯನ್ನು ಹಿಡಿಕೊಂಡುಬಂದು, ಹಸುವು ಸತ್ತಿದ್ದ ಸ್ಥಳದಮೇಲೆ ಸಾಗಿಸಿದನು. ಗೌತಮನು ತಂದು

ದರಿಂದ ಆ ನದಿಗೆ ಗೌತಮಿ ಯೆಂದು ಹೆಸರಾಯಿತು. ಗೋವನ್ನು ಸೋಂಕಿದುದರಿಂದ ಗೋದಾವರಿಯೆನಿಸಿತು. ಬಳಿಕ ಶಿವನು ತನ್ನ ಭಕ್ತನಾದ ಗೌತಮನು ದಾರುವನದ ಋಷಿಗಳಿಗೆ ಕೊಟ್ಟ ಶಾಪವನ್ನು ತಪ್ಪದೆ ನಡೆಯುವಂತೆ ಮಾಡಬೇಕೆಂದು ಯೋಚಿಸಿ, ವಿಷ್ಣುವನ್ನು ಕರೆದು, ನೀನು ಭೂಲೋಕದಲ್ಲಿ ಮೋಹಶಾಸ್ತ್ರಗಳನ್ನು ಬಿತ್ತರಿಸು ಹೋಗು, ಎಂದು ಆಜ್ಞಾಪಿಸಲು, ಅದೇ ಮೇರೆ ನಾರಾಯಣನು ಪಾಂಚರಾತ್ರ ವೈಖಾನಸ ಕಾಪಾಲ ಲಾಕುಳ ವಾಮ ಭೈರವ ಮೊದಲಾದ ಅನೇಕ ಮೋಹಶಾಸ್ತ್ರಗಳನ್ನು ರಚಿಸಿ, ಜನಗಳಿಗೆ ಬೋಧಿಸಿದನು. ದಾರುವನದ ಋಷಿಗಳೆಲ್ಲ ಭೂಮಿಯಲ್ಲಿ ಹುಟ್ಟಿ, ಅವರೆಲ್ಲರ ವಂಶದವರೂ ಆ ಮೋಹಶಾಸ್ತ್ರಗಳಂತೆ ಆಚರಿಸಿ ನರಕಗಾಮಿಗಳಾದರು. ಆದರೆ, ಅತ್ರಿ ಕಶ್ಯಪ ಆಂಗಿರಸ ಕೌಶಿಕ ಭರದ್ವಾಜಾದಿ ಕೆಲವು ಮುನಿಗಳು ಮಾತ್ರ ಹರಿಯ ಮೋಹಶಾಸ್ತ್ರದಸ್ವರೂಪವನ್ನು ತಿಳಿದು, ಅದಕ್ಕೆ ಒಲಿಯದೆ, ಶಿವನನ್ನು ಕುರಿತು ತಪಸ್ಸನ್ನಾಚರಿಸಿದರು. ಅದಕ್ಕೆ ಪ್ರತ್ಯಕ್ಷನಾಗಿ ನಿಮ್ಮಿಷ್ಟವೇನೆಂದು ಸ್ವಾಮಿಯು ಕೇಳಲು, ದೇವೋತ್ತಮನೆ! ನಮ್ಮ ಒಡನಾಡಿಗಳೆಲ್ಲ ಮೋಹಶಾಸ್ತ್ರಧ್ಯಯನದಿಂದ ಭಕ್ತಿದೂರರಾಗಿ ಗತಿಬಾಹಿರರಾಗಿ ಕೆಟ್ಟುಹೋಗುತ್ತಿರುವರು; ಸಚ್ಛಾಸ್ತ್ರಬೋಧೆಯಿಂದ ಅವರನ್ನುದ್ಧರಿಸಬೇಕು ಎಂದು ಬೇಡಿದರು. ಅದಕ್ಕೆ ಶಿವನು— ನನ್ನ ಅವತಾರನಾದ ವೃಷಭೇಶನನ್ನು ಶ್ರೀಶೈಲಕ್ಕೆ ಕಳುಹಿಕೊಡುತ್ತೇನೆ, ಆತನು ಶೈವಾಗಮರಹಸ್ಯವನ್ನು ಬೋಧಿಸುತ್ತಾನೆ, ಹೋಗಿರಿ, ಎಂದು ಹೇಳಿ ಕಳುಹಿಕೊಟ್ಟನು. ಮತ್ತು ತಾನು ಒಂದು ಶಿರಸ್ಸು ಎರಡು ಭುಜಗಳು ಮೂರು ಕಣ್ಣುಗಳನ್ನು ಧರಿಸಿ, ಶುದ್ಧಸ್ಫಟಿಕವರ್ಣದಿಂದ ಸುಖಾವಹಮೂರ್ತಿಯಾಗಿ ಕುಳಿತು, ವೃಷಾಧಿಪತಿಗೆ ಶಿವತತ್ತ್ವೋಪದೇಶವನ್ನು ಮಾಡಿ, ಇದರ ರಹಸ್ಯಾರ್ಥವನ್ನು ನೀನು ಜಗತ್ತಿಗೆ ಬೋಧಿಸು ಎಂದು ಹೇಳಿ ಕಳುಹಿಕೊಟ್ಟನು. ಆತನು ಶಿವನ ಪ್ರೇರಣೆಯ ಮೇರೆ ಮೇದಿನಿಯಲ್ಲಿ ಅವತರಿಸಿ, ಅಜ್ಞಾನಿಗಳಾದ ಜನಗಳಿಗೆಲ್ಲ ಶೈವೋಪದೇಶವನ್ನು ಮಾಡಿ, ಶಿವಭಕ್ತಿಯನ್ನು ವೃದ್ಧಿಪಡಿಸಿ, ಕೈಲಾಸವನ್ನು ಸೇರಿದನು; ಎಂದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ನಿರವಿಸಿ,

## ಚಂಡವರಪ್ರದಾನ.

ಬಳಿಕ ಶಿವನ ಚಂಡವರಪ್ರದಾನ ಲೀಲೆಯನ್ನು ವಿವರಿಸತೊಡಗಿದನೆಂತೆಂದರೆ— ಶ್ರೀಶೈಲದ ನೆರೆಯ ಪಟ್ಟಣವೊಂದರಲ್ಲಿದ್ದ ಒಬ್ಬನೊಬ್ಬ ಶಿವದ್ವಿಜನಿಗೆ ಚಂಡನೆಂಬ ಪುತ್ರನಿದ್ದನು. ಆತನು ಪ್ರತಿ ದಿನವೂ ತನ್ನ ಮನೆಯ ದನಗಳನ್ನು ಕಾಡಿಗೆ ಅಟ್ಟಿಕೊಂಡುಹೋಗಿ ಮೇಯಿಸಿ ಬರುತ್ತಿದ್ದನು. ಹೀಗಿರುವಲ್ಲಿ ಜನಗಳು ದೇವಾಲಯದಲ್ಲಿ ಶಿವಲಿಂಗಕ್ಕೆ ಅಭಿಷೇಕವನ್ನು ಮಾಡಿ ಪೂಜಿಸುವುದನ್ನು ಇವನು ಕಂಡು, ತಾನೂ ಹಾಗೆಯೇ ಪೂಜಿಸಬೇಕೆಂದು ಯೋಚಿಸಿ, ಹೊಳೆಯ ದಡದಲ್ಲಿನ ಮಳಲನ್ನು ಲಿಂಗದಂತೆ ಗಡ್ಡೆ ಮಾಡಿ, ತನ್ನ ಹಸುಗಳ ಹಾಲನ್ನೆಲ್ಲ ಕರೆದು ಆ ಲಿಂಗಕ್ಕೆ ಅಭಿಷೇಕಿಸಿ, ಅಡವಿಯ ಹೂವು ಪತ್ರೆಗಳನ್ನು ಎತ್ತಿ ತಂದು ಲಿಂಗಕ್ಕೆ ಧರಿಸಿ ನಮಸ್ಕರಿಸಿ, ಸುತ್ತಲೂ ಆನಂದದಿಂದ ಕುಣಿದಾಡಿ ಬಳಿಕ ಮನೆಗೆಹೋಗುತ್ತಿದ್ದನು. ನಿತ್ಯವೂ ಹೀಗೆ ಮಾಡುತ್ತಿರಲು, ಮನೆಗೆ ಬಂದ ಹಸುಗಳನ್ನು ಕರೆದಾಗ ಕೆಚ್ಚಲಲ್ಲಿ ಹಾಲೇ ಇಲ್ಲದಿರುವುದನ್ನು ತಾಯ್ತಂದೆಗಳು ನೋಡಿ, ಇದಕ್ಕೆ ಕಾರಣವೇನೆಂದು ಚಿಂತೆಪಡುತ್ತಿದ್ದರು. ಒಂದು ದಿನ ಇದೇನು ಸಂಗತಿಯೋ ನೋಡಿ ತಿಳಿಯಬೇಕೆಂದು, ತಂದೆಯು ಗುಟ್ಟಾಗಿ ಮಗನ ಹಿಂದೆಯೇ ಕಾಡಿಗೆ ಹೋದನು. ಎಂದಿನಂತೆ ಮಗನು ಮಳಲ ಲಿಂಗದ ಆರಾಧನೆಯನ್ನು ಮಾಡುತ್ತಿದ್ದುದನ್ನು ನೋಡಿ, ಪ್ರತಿದಿನವೂ ಹಾಲನ್ನು ಹೀಗೆಯೇ ಹಾಳ್ಮಾಡುತ್ತಿದ್ದನೆಂದು ಯೋಚಿಸಿ, ಸಿಟ್ಟುಗೊಂಡು ಬಂದು, ಅವನು ಪೂಜಿಸುತ್ತಿದ್ದ ಲಿಂಗವನ್ನು ರಝಾಡಿಸಿ ಕಾಲಿನಿಂದೊದೆದನು. ಮಗನು ಬಲುಸಿಟ್ಟುಗೊಂಡು, ಪರವಶನಾಗಿ "ಛೀ ಶಿವದ್ರೋಹಿ! ಸಾಯಿ! ಸಾಯಿ" ಎಂದು ಹೇಳುತ್ತ, ಕೈಯಲ್ಲಿದ್ದ ಕೊಡಲಿಯಿಂದ ಒಂದೇಪೆಟ್ಟಿಗೆ ತಂದೆಯ ತಲೆಯನ್ನು ಕಡಿದುರುಳಿಸಿದನು. ಆಗ ಮಗನ ನಿಜಭಕ್ತಿಗೆ ಶಂಕರನು ಮೆಚ್ಚಿ, ಪಾರ್ವತೀಸಮೇತನಾಗಿ ಆ ಲಿಂಗದಿಂದಲೇ ಉದ್ಭವಿಸಿ ನಿಂತನು. ಸಕಲ ಪ್ರಮಥರೂ ಜತೆಯಲ್ಲೇ ನಿಂತಿದ್ದರು. ಅಂತರಿಕ್ಷದಿಂದ ಪೂಮಳೆಯು ಕರೆದು ದೇವದುಂದುಭಿಯು ಮೊಳಗಿತು. ಆ ಸಮೂಹವನ್ನು ಬಾಲಕನು ನೋಡಿ, ಸಂತೋಷದಿಂದ ಕಣ್ಣೀರ್ದುಂಬಿ, ಅಡ್ಡಬಿದ್ದು ಕೈಕಟ್ಟಿ ನಿಂತನು. ಶಿವನು ತನ್ನ ಅನ್ಯ

ತರಹಸ್ತವನ್ನು ಚಂಡನ ತಲೆಯಮೇಲಿಟ್ಟು, ತನ್ನ ತಾಂಬೂಲಪ್ರಸಾದವನ್ನು ತೆಗೆದು ಅವನಿಗೆ ಕೊಟ್ಟನು. ಅದನ್ನು ಸೇವಿಸಿದ ಕಾರಣದಿಂದ ಚಂಡನು ಮಹಾತೇಜೋಮೂರ್ತಿಯಾಗಿ ನಿಂತನು. ಹರಿಬ್ರಹ್ಮಾದಿಗಳೆಲ್ಲರೂ ಆತನ ಸುಕೃತವಿಶೇಷವನ್ನು ಕುರಿತು ಕೊಂಡಾಡಿದರು. ಆಗ ಪ್ರಸಾದಶಕ್ತಿಯಿಂದ ಚಂಡೇಶನ ರೋಮಕೂಪಗಳಿಂದ ಕೆಲವು ಗಣಾಧೀಶರು ಉದಿಸಿದರು. ಅವರು ಗದ್ಯಪದ್ಯಾತ್ಮಕಸ್ತೋತ್ರಗಳಿಂದ ಶಿವನನ್ನು ಕೊಂಡಾಡಿದರು. ಅದಕ್ಕೆ ಮೆಚ್ಚಿದ ಪರಮೇಶನು ಅವರನ್ನು ತನ್ನ ಸ್ತುತಿಪಾಠಕರನ್ನಾಗಿ ಮಾಡಿಟ್ಟುಕೊಂಡನು. ಚಂಡೇಶನನ್ನು ಕುರಿತು ನಿನ್ನಿಷ್ಟಾರ್ಥವೇನೆಂದು ಕೇಳಲು– " ಸಕಲ ದೇವಾಲಯಗಳಲ್ಲಿರುವ ಲಿಂಗಗಳನ್ನೂ ಆರಾಧಿಸುವ, ಮತ್ತು ಆ ಲಿಂಗಪ್ರಸಾದವನ್ನು ಪಡೆಯುವ ಸ್ವಾಮ್ಯವನ್ನು ನನಗೂ ನನ್ನ ಕುಲದವರಿಗೂ ದಯಪಾಲಿಸಬೇಕು; ನಿನ್ನನ್ನು ಪೂಜಿಸುವ ನಿನ್ನ ಪ್ರಸಾದವನ್ನು ಸೇವಿಸುವ ಸುಖಕ್ಕಿಂತಲೂ ದೊಡ್ಡಸೌಖ್ಯವು ಬೇರೊಂದಿಲ್ಲ " ವೆಂದು ಚಂಡೇಶನು ಕೇಳಿಕೊಂಡನು. ಅದರಂತೆಯೇ ಆಗಲಿ ಎಂದು ಶಿವನು ವರವಿತ್ತು ಅಂತರ್ಹಿತನಾದನು. ಎಂಬಲ್ಲಿಗೆ ಹನ್ನೆರಡನೇ ಅಧ್ಯಾಯವು ಸಂಪೂರ್ಣವು.

## ೧೩ ನೇ ಅಧ್ಯಾಯವು.

### ಕಿರಾತರುದ್ರಲೀಲೆ.

ಎಲೈ ಸಿದ್ಧರಾಮೇಶನೆ ಕೇಳು, ಪೂರ್ವದಲ್ಲಿ ಚಂದ್ರವಂಶದೊಳಗೆ ಹುಟ್ಟಿದ ಪಾಂಡುರಾಯನಿಗೆ ಧರ್ಮರಾಜ ಭೀಮ ಅರ್ಜುನ ನಕುಲ ಸಹದೇವರೆಂಬ ೫ ಮಂದಿ ಮಕ್ಕಳಾಗಿ, ಅವರು ರಾಜ್ಯವನ್ನಾಳಿಕೊಂಡಿರುವಲ್ಲಿ, ಅವರಿಗೂ ದಾಯಾದರಿಗೂ ಕಲಹವು ಹುಟ್ಟಿ, ಪಾಂಡವರು ಜೂಜಿನಲ್ಲಿ ತಮ್ಮ ರಾಜ್ಯಕೋಶಗಳನ್ನೆಲ್ಲ ಸೋತು ಅರಣ್ಯವಾಸಕ್ಕೀಡಾದರು. ಒಂದು ದಿನ ಅವರಿದ್ದ ಕಾಡಿಗೆ ವೇದವ್ಯಾಸಮಹರ್ಷಿಯು ಬಂದು, ಹಿರಿಯನಾದ ಧರ್ಮರಾಯನನ್ನು ಕುರಿತು– " ನೃಪತಿಯೆ! ನಿಮಗೆ ಶತ್ರುಜಯದಿಂದ ರಾಜ್ಯಸಂಪತ್ತು ಮೊದಲಿನಂತೆ ದೊರೆಯಬೇಕಾದರೆ, ಶಿವನಿಂದ ಪಾಶುಪತಾಸ್ತ್ರವನ್ನು ಪಡೆದು ಬರಬೇಕು " ಎಂದು ಹೇಳಿದನು. ಅದಕ್ಕಾ

ಧರ್ಮರಾಜನು— ಋಷಿವರ್ಯರೆ! ಒಳ್ಳೆಯ ಭಗೀರಥಪ್ರಯತ್ನವನ್ನು ಹೇಳಿದಿರಿ! ಶಿವನೆಂದರೇನು? ನಾವೆಂದರೇನು? ನಮಗೆ ಆತನು ಬಾಣವನ್ನನುಗ್ರಹಿಸುವುದೆಂದರೇನು? ಎಂದು ಆಶ್ಚರ್ಯದಿಂದ ನುಡಿದನು. ಆಗ ಋಷಿಯು— ಅಯ್ಯಾ! ಶಿವನು ಇತರರಿಗೆ ದುರ್ಲಭನಾದರೂ ಭಕ್ತರಿಗೆ ಸುಲಭನು; ಘನಕೃಪಾಕರನು; ಅವನನ್ನು ಮೆಚ್ಚಿಸಿ ಅಸ್ತ್ರವನ್ನು ಪಡೆದು ಬರುವುದಕ್ಕೆ ನಿಮ್ಮೈವರಲ್ಲಿ ಈ ಅರ್ಜುನನನ್ನು ಕಳುಹಿಕೊಡಿ, ಎಂದು ಹೇಳಿ, ಧರ್ಮರಾಯನಿಗೆ ಶಿವಮಂತ್ರೋಪದೇಶವನ್ನು ಮಾಡಿ, ತೆರಳಿದನು. ಇತ್ತ ಧರ್ಮರಾಜನು ಅದೇ ಮಂತ್ರವನ್ನು ಅರ್ಜುನನಿಗೆ ಉಪದೇಶಿಸಿ, ತಪಶ್ಚರ್ಯಕ್ಕಾಗಿ ಅವನನ್ನು ಕಳಿಸಿಕೊಟ್ಟನು. ಆತನು ಇಂದ್ರಕೀಲಪರ್ವತದ ಅರಣ್ಯಕ್ಕೆ ಹೋಗಿ, ಪ್ರಶಸ್ತವಾದ ಸ್ಥಾನವನ್ನು ಹುಡುಕಿ, ನಿರ್ಮಲವಾದ ಕೊಳವೊಂದರಲ್ಲಿ ಮಿಂದು, ನಾರುಮಡಿಯನ್ನುಟ್ಟು, ವಿಭೂತಿರುದ್ರಾಕ್ಷಿಗಳನ್ನು ಧರಿಸಿ, ಹೆಗಲಿಗೆ ಬಿಲ್ಲುಬತ್ತಳಿಕೆಗಳನ್ನು ಸೇದಿಕಟ್ಟಿ, ಭೂಮಿಯಮೇಲೆ ಪಾದದ ಹೆಬ್ಬೆರಲನ್ನು ಮಾತ್ರ ಊರಿ ನಿಂತು, ಭುಜಗಳನ್ನು ಮೇಲಕ್ಕೆತ್ತಿ ಕೈಮುಗಿದು, ಮನಸ್ಸಿನಲ್ಲಿ ಶಿವಮೂರ್ತಿಯನ್ನು ನೆಲೆಗೊಳಿಸಿ, ತಪಸ್ಸನ್ನಾಚರಿಸುತ್ತಿದ್ದನು. ಕೆಲದಿನ ಗಡ್ಡೆಗೆಣಸನ್ನೂ, ಕೆಲದಿನ ತರಗೆಲೆಗಳನ್ನೂ, ಕೆಲದಿನ ಜಲಾಹಾರ ವಾಯ್ವಾಹಾರಗಳನ್ನೂ ಮಾಡುತ್ತಿದ್ದು, ಕಡೆಗೆ ನಿರಾಹಾರಿಯಾಗಿ ಉಗ್ರತಪಸ್ಸಿನಲ್ಲಿದ್ದನು. ಆಗ ಅರ್ಜುನನ ತಂದೆಯಾದ ದೇವೇಂದ್ರನು ತನ್ನ ಮಗನ ತಪೋದಾರ್ಢ್ಯವನ್ನು ಪರೀಕ್ಷಿಸುವುದಕ್ಕಾಗಿ ಬ್ರಾಹ್ಮಣವೇಷದಿಂದ ಬಂದು, ಅವನಿದಿರಿಗೆ ನಿಂತು, ಇದೇನಯ್ಯ ತಪಸ್ವಿ! ನಿನ್ನ ವೇಷದ ವೈಚಿತ್ರ್ಯ? ನಿನ್ನ ಧನುರ್ಬಾಣಗಳೆತ್ತ? ನಿನ್ನ ಭಸ್ಮರುದ್ರಾಕ್ಷಿಗಳೆತ್ತ? ನಿನ್ನ ಶಾಂತಿಯೆತ್ತ? ಈ ವೇಷದ ಕ್ರೂರತೆಯೆತ್ತ? ಎಂದು ಹಾಸ್ಯ ಮಾಡಲು, ಅರ್ಜುನನು ಕಣ್ದೆರೆದು, ಅಯ್ಯ! ನಿಮ್ಮ ಚಿತ್ತದಲ್ಲಿ ಶಿವಧ್ಯಾನವು ದೃಢವಾಗಿರುವಾಗ, ಹೊರಗಿನ ವೇಷವನ್ನು ಕಟ್ಟಿಕೊಂಡೇನು? ಎಂದನು. ಅದಕ್ಕೆ ಕಪಟವೇಷದ ಇಂದ್ರನು— ಅಯ್ಯಾ! ಮಹಾಮಹಾಯೋಗಿಗಳ ತಪಸ್ಸಿಗೂ ಗೋಚರಿಸದ ಶಿವನನ್ನು ನೀನು ಮೆಚ್ಚಿಸಿಕೊಳ್ಳುವೆನೆಂಬುದು, ಹೆಳವನು ಮರದ ತುದಿಯ ಹಣ್ಣನ್ನು ಬಯಸಿ ಪಡೆಯುತ್ತೇನೆಂದು ಪ್ರಯತ್ನಿಸು

ವಂತೆ ಆಶ್ಚರ್ಯಕರವಾಗಿದೆ ಎನ್ನಲು, ತಪಸ್ವಿಯು— ಅಹುದು, ಶಿವನು ಇತರರಿಗೆ ದುರ್ಲಭನೇ ಆದರೂ ಭಕ್ತರಿಗೆ ದುರ್ಲಭನಲ್ಲ; ನನ್ನ ದೃಢಭಕ್ತಿಯಿಂದ ಅವನ ಪಾದವನ್ನು ಹಿಡಿಯಬಲ್ಲೆನು; ಒಂದುವೇಳೆ ನನ್ನ ಭಕ್ತಿಗೆ ಆತನು ಮೆಚ್ಚದಿದ್ದರೆ, ಅವನ ಪಾದಕ್ಕೆ ನನ್ನ ಪ್ರಾಣವನ್ನು ಇಲ್ಲಿಯೇ ಸಮರ್ಪಿಸುವೆನು; ಎಂದು ಪ್ರತಿಜ್ಞಾಪೂರ್ವಕವಾಗಿ ನುಡಿಯಲು, ಅದಕ್ಕೆ ಇಂದ್ರನು ಮೆಚ್ಚಿ, ಸಂತೋಷದಿಂದ ನಿಜರೂಪವನ್ನು ತೋರಿಸಿ, ನಿನಗೆ ತಪಸ್ಸಿದ್ಧಿಯಾಗಲಿ ಎಂದು ಆಶೀರ್ವದಿಸಿ, ಸ್ವರ್ಗಕ್ಕೆ ತೆರಳಿದನು. ಇತ್ತ ಪಾರ್ಥನ ತಪಸ್ತೇಜಸ್ಸು ವನಾಂತರವನ್ನೆಲ್ಲ ಮುಸುಗಿ ಉರಿಸುತ್ತ ಬಂದಿತು. ಖಗ ಮೃಗ ಭುಜಗ ತರು ಪಾಷಾಣಗಳೆಲ್ಲ ಬೆಂದುವು. ಆ ವನಾಂತರದಲ್ಲಿ ತಪಸ್ಸುಮಾಡುತ್ತಿದ್ದ ಋಷಿಗಳೆಲ್ಲ ಉರಿಗೆ ಬೆದರಿ, ಗಗನದಲ್ಲಿ ಹೋಗುತ್ತಿದ್ದ ನಾರದನನ್ನು ಕಂಡು, ನಮಗೊದಗಿರುವ ವಿಪತ್ತನ್ನು ಪರಿಹರಿಸಿಕೊಡಬೇಕೆಂದು ಬೇಡಿದರು. ಶಿವನಿಗೆ ಇದನ್ನರುಹಿ ಪರಿಹಾರಮಾಡಿಸಿಕೊಡುತ್ತೇನೆಂದು ಆತನು ನಂಬುಗೆಗೊಟ್ಟು, ಕೈಲಾಸಕ್ಕೆ ಹೋದನು. ಅದರಂತೆ ಶಂಕರನನ್ನು ಕಂಡು ಮಣಿದು, "ಜಗದೀಶನೆ! ಇಂದ್ರಕೀಲದಲ್ಲಿ ಒಬ್ಬನು ತಪಸ್ಸನ್ನಾಚರಿಸುತ್ತಿರುವನು; ಅವನನ್ನು ನೋಡಿದರೆ ಋಷಿಯಂತೆಯೂ ಕಾಣುವುದಿಲ್ಲ; ಏಕೆಂದರೆ—ಬೆನ್ನಿನಲ್ಲಿ ಬಿಲ್ಲು ಬಾಣ ಬತ್ತಳಿಕೆಗಳು ತೋರುತ್ತಿರುವುವು; ಇಂಥವನು ಉಗ್ರತಪಸ್ಸಿನಲ್ಲಿ ಕುಳಿತಿರುವುದರಿಂದ ಅದರ ಜ್ವಾಲೆಯು ವನಾಂತರವನ್ನೆಲ್ಲ ಸುತ್ತಿರುವುದು; ಅಲ್ಲಿರುವ ಋಷಿಗಳ ಜಪತಪೋವ್ರತಾದಿಗಳೆಲ್ಲ ನಿಂತುಹೋಗಿರುವುವು; ಈ ಚೋದ್ಯವನ್ನು ಕಂಡು ಸ್ವಾಮಿಗೆ ಬಿನ್ನೈಸುವುದಕ್ಕಾಗಿ ಬಂದೆನು" ಎಂದು ಹೇಳಿದನು. ಶಿವನು ಅದನ್ನು ಕೇಳಿ ನಕ್ಕು, "ಮುನಿಪನೆ! ಆತನು ನಮ್ಮ ಪರಮಭಕ್ತನು, ಆತನಿಂದ ಇತರರಿಗೆ ಯಾವ ಉಪಹತಿಯೂ ಉಂಟಾಗುವುದಿಲ್ಲ; ನಾವು ಅಲ್ಲಿಗೆ ಬಂದು, ಆ ತಪೋವನವನ್ನೆಲ್ಲ ಋಷಿಗಳಿಗೆ ಬಿಡಿಸಿಕೊಡುತ್ತೇವೆ; ನೀನು ಹೋಗಿ ಭಯಪಟ್ಟಿರುವ ಆ ತಪಸ್ವಿಗಳಿಗೆಲ್ಲ ಧೈರ್ಯವನ್ನು ಹೇಳು" ಎಂದು ಅಪ್ಪಣೆ ಮಾಡಿ ಕಳಿಸಿ, ನಂದೀಶನನ್ನು ಕರೆದು, ಬೇಟೆಗೆ ಹೋಗುವುದಕ್ಕಾಗಿ ನಮ್ಮ ಪ್ರಮಥರನ್ನೆಲ್ಲ ಸಿದ್ಧರಾಗುವಂತೆ ತಿಳಿಸು, ಎಂದು ಆಜ್ಞೆ ಕೊಟ್ಟು, ತಾನು

ಬೇಡನ ವೇಷವನ್ನು ಧರಿಸಿದನು.— ತೊಡೆಗೆ ಚೆಲ್ಲಣವನ್ನಿಕ್ಕಿ ದಟ್ಟಿಯನ್ನು ಕಟ್ಟಿದನು. ಗುಂಜಿಯ ಆಭರಣಗಳನ್ನು ಧರಿಸಿ, ಹಣೆಗೆ ಕಸ್ತೂರಿಯ ತಿಲಕವನ್ನಿಕ್ಕಿದನು. ಕೆರವನ್ನು ಮೆಟ್ಟಿ ಬಿಲ್ಲುಬಾಣಗಳನ್ನು ಪಿಡಿದನು. ಪ್ರಮಥರೆಲ್ಲರೂ ತಕ್ಕ ವೇಷದಿಂದ ಬಲೆ ಬಡಿಕೋಲು ಗಾಣ ಕಲ್ಲಿ ಮೊದಲಾದುವುಗಳನ್ನು ಹಿಡಿದು ನಾಯಿಗಳೊಡನೆ ಕೂಡಿಕೊಂಡು ಬಂದರು. ಪಾರ್ವತಿಯೂ ಪ್ರಮಥರ ಹೆಂಡಿತಿಯರೂ ಬೇಡಿತಿಯರಾಗಿ, ಚಿಗುರುಡೆ, ದಂತದಬಳೆ, ಮುತ್ತುಗುಂಜಿಗಳ ಹಾರ, ಇವುಗಳನ್ನು ತೊಟ್ಟು ಸಿದ್ಧರಾದರು. ಶಿವನಿಗೆ ವೇದಪುರಾಣಶಾಸ್ತ್ರಗಳೇ ನಾಯಿ ನಿಡುಗೋಲು ಕವಣೆ ಕತ್ತಿ ಬಲೆ ಮೊದಲಾದ ಉಪಕರಣಗಳಾದುವು. ಸಕಲ ಪರಿವಾರದೊಡನೆ ಶಿವನು ಇಂದ್ರಕೀಲದ ಕಡೆಗೆ ಪ್ರಯಾಣಗೊಂಡನು. ಆ ಅರಣ್ಯವು ಗಿರಿನದಿಗಳಿಂದಲೂ, ಹುಲಿ ಕರಡಿ ಸಿಹ್ಮ ಶರಭ ಶಾರ್ದೂಲಾದಿಮೃಗಗಳಿಂದಲೂ, ನಾನಾಪಕ್ಷಿಗಳಿಂದಲೂ ಅಲ್ಲಿಗಲ್ಲಿಗೆ ತೋರುವ ಬೇಡರ ಹಟ್ಟಿಗಳಿಂದಲೂ ಶೋಭಿಸುತ್ತಿದ್ದಿತು. ಋಷಿಗಳು ತಪಸ್ಸನ್ನಾಚರಿಸುತ್ತಿರುವ ಆಶ್ರಮಗಳು ತೋರುತ್ತಿದ್ದುವು. ಆ ಅರಣ್ಯದಲ್ಲಿ ಕಿರಾತವೇಷದ ರುದ್ರನ ಕಡೆಯ ಪರಿವಾರದವರು, ಬಲೆಗಳನ್ನು ಬೀಸಿ, ಹಕ್ಕಿಗಳನ್ನು ಹಿಡಿಯುತ್ತಲೂ, ಬಡಿಕೋಲಿನಿಂದ ಕುಟ್ಟಿ ಹೊದರುಗಳಿಂದ ಮೃಗಗಳನ್ನೀಚೆಗೆ ಹೊರಡಿಸುತ್ತಲೂ, ಓಡುತ್ತಿರುವ ಮೃಗಗಳಿಗೆ ಬಾಣಗಳನ್ನು ಗುರಿ ಕಟ್ಟಿ ಹೊಡೆಯುತ್ತಲೂ, ಕವಣೆಗಳನ್ನು ಬೀಸಿ ಹಾರುವ ಹಕ್ಕಿಗಳನ್ನು ಕೆಡಹುತ್ತಲೂ, ಹುಲಿಗಳನ್ನು ಕೆಣಕಿ ಭಲ್ಲೆಗಳಿಂದಿರಿಯುತ್ತಲೂ, ಹಂದಿಗಳನ್ನು ನಿಡಿಗತ್ತಿಗಳಿಂದ ಕಡಿಯುತ್ತಲೂ, ಮೃಗಗಳು ಹೋದ ಸ್ಥಲವನ್ನು ಅವುಗಳ ಹೆಜ್ಜೆಯ ಗುರ್ತಿನಿಂದ ತಿಳಿಯುತ್ತಲೂ ಬರುತ್ತಿದ್ದರು. ಇವರ ಗಾವಳಿಯಿಂದ ಅಲ್ಲಿನ ಮೃಗಗಳಲ್ಲಿ ಕೆಲವು ತಮ್ಮ ತಮ್ಮ ಮರಿಗಳನ್ನು ಅಲ್ಲಲ್ಲೇ ಬಿಟ್ಟು ಓಡಿದುವು. ಮತ್ತೆ ಕೆಲವು ಗುಹಾಂತರಗಳಲ್ಲೇ ಅಡಗಿದುವು. ಕೆಲವು ಓಡುತ್ತಿರುವಾಗ ಸಿಕ್ಕಿ ಹತವಾದುವು. ಕೆಲವು ಬಲೆಗೆ ಸಿಕ್ಕಿ ಬಿದ್ದು ಅರಚುತ್ತಿದ್ದುವು. ಹೀಗೆ ಕಪಟಕಿರಾತರು ವನವನ್ನೆಲ್ಲ ತಿರುಗಿ ಬೇಂಟೆಯಾಡಿಕೊಂಡು ಬರುತ್ತಿರಲು, ಒಂದಾನೊಂದು ಗುಹಾಂತರದಲ್ಲಿ ಅಡಗಿ

ಕೊಂಡಿದ್ದ ಹಂದಿಯ ಆಕಾರದ ಮೂಕಾಸುರನೆಂಬ ದೈತ್ಯನು ಇವರ ಕೋಲಾಹಲವನ್ನು ಕೇಳಿ ಕೆರಳಿ, ಈಚೆಗೆ ಬಂದನು. ಬ್ರಹ್ಮನು ಸಿಡಿಲಿನಿಂದ ಅದರ ಕೋರೆದಾಡೆಯನ್ನೂ, ಮಿಂಚಿನ ಜ್ವಾಲೆಯಿಂದ ಅದರ ಕಣ್ಣುಗಳನ್ನೂ, ಉಕ್ಕಿನ ಸಲಾಕಿಗಳಿಂದ ಅದರ ರೋಮಗಳನ್ನೂ, ಕಗ್ಗಲ್ಲಿನ ಗುಂಡನ್ನು ಕಡೆದು ಅದರ ಶರೀರವನ್ನೂ, ನಿರ್ಮಿಸಿರುವನೋ ಎಂಬಂತೆ ಭೀಕರವಾದ ಆಕೃತಿಯ ಹಂದಿಯು ತೋರುತ್ತಿದ್ದಿತು. ಅದು ಕಿರಾತರನ್ನು ಕಂಡಕೂಡಲೇ ಮಹಾರೋಷದಿಂದ ಅಟ್ಟಿಕೊಂಡುಬಂದಿತು. ಇವರೆಲ್ಲರೂ ಗಡಗಡನೆ ನಡುಗಿ ದಿಕ್ಕುದಿಕ್ಕಿಗೆ ಓಡಿ ಮುಗ್ಗರಿಸಿ, ಮರಗಳನ್ನೇರಿ, ಚೀರುತ್ತ, ಹಾರುತ್ತ, ಕೆಲರು ಶಿವನಬಳಿಗೋಡಿದರು. ಅನೇಕರು ಅದರ ಕೋರೆದಾಡೆಯ ಏಟಿನಿಂದ ತೊಡೆ ಸೀಳಿ ಕಾಲ್ಮುರಿದು ಗಾಯಗೊಂಡು ರಕ್ತ ಸುರಿದು ನಿಶ್ಚೇತನರಾಗಿ ಬಿದ್ದರು. ಶಿವನು ಹಂದಿಯ ಹಾವಳಿಯನ್ನು ಕೇಳಿ, ಘುಡುಘುಡಿಸುತ್ತಿದ್ದ ಅದರಿದಿರಿಗೆ ಹೋಗಿ, ಬಿಲ್ಲಿಗೆ ಬಾಣವನ್ನು ಹೂಡಿ, ಅದರಮೇಲೆ ಪ್ರಯೋಗಿಸಿದನು. ಅದು ನಟ್ಟ ಬಾಣದ ಸಹಿತ ಗರಗರನೆ ತಿರುಗುತ್ತ ಓಡಿ, ತಪಸ್ಸಿನಲ್ಲಿ ನಿಂತಿದ್ದ ಅರ್ಜುನನ ಮುಂಗಡೆಗೆ ಹೋಗಿ, ಆರ್ಭಟಿಸಿ ಬಿದ್ದಿತು. ಆ ಶಬ್ದದಿಂದ ಪಾರ್ಥನು ಕಣ್ದೆರೆದು ನೋಡುವಲ್ಲಿ, ಭೀಕರಾಕೃತಿಯ ಹಂದಿಯು ಕಂಡಿತು. ಕೂಡಲೇ ಬೆನ್ನಿನ ಬಿಲ್ಲು ಬಾಣಗಳನ್ನು ತೆಗೆದು ಹಂದಿಯನ್ನೆಚ್ಚನು. ಅದು ತಗಲಿದ ಕೂಡಲೇ ರಕ್ತವನ್ನು ಕಾರಿ ಪ್ರಾಣವನ್ನೀಗಿತು. ಶಿವನ ಕಡೆಯವನಾಗಿ ಬಂದ ಬೇಡನೊಬ್ಬನು ಆ ಹಂದಿಯ ಹಿಂಗಡೆಯೇ ಹೋಗಿ, ಅದು ಸತ್ತು ಬಿದ್ದುದನ್ನು ಕಂಡು, ತಮ್ಮ ಬೇಂಟೆ ಯೆಂದು ಹಿಡಿದು ಎಳೆಯುವುದಕ್ಕೆ ತೊಡಗಿದನು. ಅದನ್ನು ಅರ್ಜುನನು ಕಂಡು, ಎಲೊ ಪುಳಿಂದನೆ, ನನ್ನ ಬಾಣದಿಂದ ಬಿದ್ದ ಹಂದಿಯನ್ನು ನೀನೇಕೆ ಹಿಡಿಯುವೆ ? ಎನ್ನಲು, ಬೇಡನು– “ಇದು ನಮ್ಮ ಸ್ವಾಮಿಯ ಏಟನ್ನು ತಿಂದು ಇಲ್ಲಿಗೆ ಓಡಿಬಂದು ಸತ್ತು ಬಿದ್ದಿರುವುದು; ಅದುಕಾರಣ ಒಡೆಯನಪ್ಪಣೆಯ ಮೇರೆ ನಾನು ತೆಗೆದುಕೊಂಡು ಹೋಗುತ್ತೇನೆ” ಎಂದನು. ಫಲ್ಗುನನು ಕೆರಳಿ “ನಿಮ್ಮ ಒಡೆಯನನ್ನೇ ಬರಹೇಳು, ಎದೆಗೆಚ್ಚಿದ್ದರೆ ತೆಗೆದುಕೊಂಡು ಹೋಗಲಿ; ಅವನ ಪೌರುಷವನ್ನು ನಾನು ನೋಡುತ್ತೇನೆ” ಎಂದ

ನು. ಆ ಸುದ್ದಿಯನ್ನು ಬೇಡನು ಶಿವನಿಗೆ ತಿಳಿಸಲು, ಪರಶಿವನೇ ಅರ್ಜುನನ ಬಳಿಗೆ ಬಂದನು. ಎಲೆ ತಪಸ್ವಿಯೆ! ಅದೇನು ನುಡಿದೆ? ಹಂದಿಯನ್ನು ಏತಕ್ಕೆ ಕೊಡಲಿಲ್ಲ? ಎಂದು ಕೇಳಿದನು. ಪಾರ್ಥನಾದರೊ ಕಿರಾತನ ಬಿರುಮಾತನ್ನು ಸೈರಿಸದೆ, ಎಲೊ ಹುಲುಬೇಡ! ನಿನ್ನ ಶೌರ್ಯವನ್ನು ನಮ್ಮ ಮುಂದೆ ತೋರಿಸುವುದಕ್ಕೆ ಬಂದೆಯೊ? ನನ್ನ ಬಾಣದೇಟಿನಿಂದ ಹಂದಿಯು ಸತ್ತು ನನ್ನಿದಿರಿಗೆ ಬಿದ್ದಿದ್ದರೂ, ಕೀಟಲೆಗಾಗಿ ನಿನ್ನ ಏಟಿನಿಂದ ಸತ್ತಿತೆಂದು ಹೇಳುತ್ತ, ಕಾಲ್ಕೆರೆದು ಜಗಳಕ್ಕೆ ಬಂದಿರುವೆಯೊ? ಜೋಕೆ, ಸುಮ್ಮನೆ ಹೋಗು, ಇಲ್ಲದಿದ್ದರೆ ನನ್ನ ಶೌರ್ಯವನ್ನು ನೋಡು, ಎಂದು ಹೇಳಿ, ಬಾಣವನ್ನು ಶಿವನಮೇಲೆ ಪ್ರಯೋಗಿಸಿದನು. ಅವು ಆತನ ದೇಹಕ್ಕೆ ಸೋಂಕದೆ, ಪ್ರತಿಯೊಂದೂ ಪ್ರದಕ್ಷಿಣೆಗೊಂಡು ಹೊರಹೋಗುತ್ತಿದ್ದುವು. ಈ ಚಮತ್ಕಾರವನ್ನು ಅರ್ಜುನನು ನೋಡಿ, ಇದು ಕಿರಾತನ ಮಾಯಗಾರಿಕೆಯೆಂದು ತಿಳಿದು, ಸಿಟ್ಟೈದು, ತೀಕ್ಷ್ಣವಾದ ಬಾಣಗಳನ್ನಾಯ್ದು ಕಿರಾತನ ಮೇಲೆ ಬಿಟ್ಟು, ಆರ್ಭಟಿಸುತ್ತಿದ್ದನು. ಒಂದು ಬಾಣವಾದರೂ ಅವನಿಗೆ ಸೋಂಕಲಿಲ್ಲ. ಅರ್ಜುನನು ಮತ್ತೆ ಮತ್ತೆ ಕೆರಳಿ, ಎರಡು ಕೈಗಳಿಂದಲೂ ಬಾಣಗಳನ್ನು ಸೆಳೆದು ಬಿಟ್ಟು ವನಾಂತರವನ್ನೆಲ್ಲ ತುಂಬಿಸಿದನು. ಆಗ ಕಿರಾತನ ಮಗ್ಗುಲಲ್ಲಿದ್ದ ವೀರಭದ್ರನು ಕೆರಳಿ ಕತ್ತಿಯನ್ನು ಹಿರಿದನು. ಷಣ್ಮುಖನು ಬಿಲ್ಲನ್ನು ಧ್ವನಿಮಾಡಿದನು. ಗಣಪತಿಯು ಕೊಡಲಿಯನ್ನು ಜಳಪಿಸಿದನು. ಪ್ರಮಥಸಮೂಹವೆಲ್ಲ ಆಯುಧಗಳನ್ನೆತ್ತಿ, ತಪಸ್ವಿಯನ್ನು ನಿಮಿಷಮಾತ್ರದಲ್ಲಿ ಪರಲೋಕಕ್ಕೆ ಕಳುಹುತ್ತೇವೆ ಅಪ್ಪಣೆ ಮಾಡಿರಿ ಎಂದು ಶಿವನನ್ನು ಬೇಡುತ್ತ ಘುಡಘುಡಿಸಿದರು. ಅವರೆಲ್ಲರನ್ನೂ ಕಪಟಕಿರಾತನು ಕಣ್ಸನ್ನೆಯಿಂದ ಸುಮ್ಮನಿರಿಸಿ, ಒಂದು ಬಾಣವನ್ನು ಬಿಟ್ಟು ಪಾರ್ಥನ ಸಕಲ ಬಾಣಗಳನ್ನೂ ಖಂಡಿಸಿ, ಎಲೆ ಬಡತಮ್ಮಡಿಯೆ! ನಿನ್ನ ಬಿಲ್ಲುಗಾರಿಕೆ ಸಾಕು, ನಮ್ಮ ಹಂದಿಯನ್ನು ಬಿಟ್ಟುಕೊಡು, ಎಂದನು. ಆ ಮಾತಿಗೆ ಫಲ್ಗುಣನು ಮತ್ತಷ್ಟು ರೋಷಗೊಂಡು, ನನ್ನ ಬಾಣಗಳನ್ನೆಲ್ಲ ತರಿವುದಕ್ಕೆ ಈ ಶಬರನಿಗೆ ಸಾಮರ್ಥ್ಯವೆಲ್ಲಿ ಬಂದಿತು! ಇವನೇನು ಶಿವನೊ! ಷಣ್ಮುಖನೊ! ರಾಮನೊ! ಪರಶುರಾಮನೊ! ದ್ರೋಣನೊ! ಭೀ

ಪ್ನನೊ ! ಕರ್ಣನೊ ! ಎಂದು ಮನಸ್ಸಿನಲ್ಲಿ ಯೋಚಿಸುತ್ತ, ಭಲರೇ ಪುಳಿಂದನೆ! ನಿನ್ನ ಬಾಣವಿದ್ಯಾಚಾತುರ್ಯಕ್ಕೆ ಮೆಚ್ಚಿದೆ! ನಿನ್ನಂಥ ಬೇಡನನ್ನು ನಾನು ಎಲ್ಲಿಯೂ ಕಾಣಲಿಲ್ಲ! ಶಕ್ತಿಯಿದ್ದರೆ ಈ ಏಟುಗಳನ್ನು ತಾಳಿಕೊ, ಎಂದು ಹೇಳಿ, ಸಿಹ್ಮಗರ್ಜನೆಯನ್ನು ಮಾಡಿ, ಬಿಡುವಿಲ್ಲದಂತೆ ಬಾಣದ ಮಳೆಯನ್ನು ಸುರಿಸುತ್ತಿದ್ದನು. ಕಿರಾತನು ಅವೆಲ್ಲವನ್ನೂ ಬಿಲ್ಲಿನಿಂದೀಚೆಗೆ ಬರುವುದರೊಳಗಾಗಿ ತರಿದಿಕ್ಕುತ್ತಿದ್ದನು. ಹೀಗೆಯೇ ಪಾರ್ಥನು ಬಿಡುವ ಬಾಣಗಳಿಗೂ ಶಿವನು ಕಡಿಯುವುದಕ್ಕೂ ಲೆಕ್ಕವಿಲ್ಲದಂತಾಯಿತು. ಅರ್ಜುನನು ಮಂತ್ರಾಸ್ತ್ರಗಳನ್ನು ಬಿಟ್ಟನು. ಅವನ್ನೂ ಕಿರಾತನು ಖಂಡಿಸಿದನು. ಅರ್ಜುನನು ಬೇಸತ್ತು, ಬತ್ತಳಿಕೆಯಲ್ಲಿದ್ದ ಅಂಬುಗಳನ್ನೆಲ್ಲ ಹುಡುಕಿ ಹುಡುಕಿ ತೆಗೆದು ಎಚ್ಚು ಬರಿಗೈಯಾದನು. ಕಿರಾತನಾದರೊ– ಹಿಂದಿರುವ ತನ್ನ ಹೆಂಡತಿಗೆ ಕಣ್ಸನ್ನೆಯಿಂದ ಅರ್ಜುನನ ಶೌರ್ಯವನ್ನೆಲ್ಲ ತೋರಿಸಿ, ಹುಸಿನಗೆ ನಗುತ್ತ, ಎಲಾ ತಮ್ಮಡಿ! ನಿನ್ನ ಶೌರ್ಯವೆಲ್ಲ ತಗ್ಗಿತೆ? ಬಾಣಗಳೆಲ್ಲ ಮುಗಿದುವೆ? ಹಮ್ಮೆಲ್ಲ ಉಡುಗಿತೆ? ಕಿರಾತನ ಶಕ್ತಿಯನ್ನು ನೋಡಿದೆಯಾ? ಎಂದು ಹಂಗಿಸಿದನು. ಆಗ ಅರ್ಜುನನು ಕಿಡಿಕಿಡಿಯಾಗಿ, ಎಲೊ ಬೇಡನೆ! ವೀರಾಧಿವೀರಕ್ಷತ್ರಿಯವಂಶಜನಾದ ನಾನು ಕಾರ್ಯಾರ್ಥವಾಗಿ ತಪಸ್ಸಿನಲ್ಲಿದ್ದ ಮಾತ್ರದಿಂದಲೇ ತಮ್ಮಡಿಯಾಗಿ ಹೋದೆನೊ? ಬೇಡನಾದ ನೀನು ನಿನ್ನ ಕುಲದ ಕೀಳ್ತನವನ್ನು ನೋಡಿಕೊಳ್ಳದೆ ಅಹಂಕಾರದಿಂದ ಗಳಹುವೆಯಾ? ಎಂದು ತಿರಸ್ಕರಿಸಲು, ಕಿರಾತನು ನಕ್ಕು, ಎಲೊ ಮೂಢನೆ! ನಾವೇನೊ ಬೇಡರೆಂಬುದು ನಿಜ. ಲೋಕವೆಲ್ಲ ಕಾಣುವಂತೆ ಕಾಡಿನಲ್ಲಿ ನಿಂತು ತಪಸ್ಸನ್ನು ಮಾಡಿ ಬೇಡುತ್ತಿರುವ ನೀನು ಬೇಡನಲ್ಲವೊ? ಲೆಕ್ಕಕ್ಕೆ ಒಂದು ಬಾಣವಾದರೂ ಬತ್ತಳಿಕೆಯಲ್ಲಿಲ್ಲದಿರುವ ನೀನು ಅದೆಂತಹ ಕ್ಷತ್ರಿಯ? ಅದೆಂತಹ ವೀರ? ಎಂದು ಜರೆಯಲು, ಅರ್ಜುನನು ಕಡುಸಿಟ್ಟುಗೊಂಡು, ಕೈಯಲ್ಲಿದ್ದ ಬಿಲ್ಲಿನಿಂದಲೇ ಕಿರಾತನನ್ನಪ್ಪಳಿಸಿದನು. ಅದನ್ನು ಬೇಡನು ಹಾಗೆಯೇ ಹಿಡಿದು ಕಿತ್ತುಕೊಂಡನು. ಪಾರ್ಥನು ಕತ್ತಿಯಿಂದ ಶಿವನನ್ನು ಹೊಡೆಯುವುದಕ್ಕೆ ಕೈಯೆತ್ತಿದನು. ಪುಳಿಂದನು ಅದನ್ನೂ ಸೆಳೆದುಕೊಂಡನು. ಬಳಿಕ ಕಲ್ಲುಗಳಿಂದಲು ಗುಂಡುಗಳಿಂದಲೂ ಮರದ ಕೊಂಬುಗಳಿಂದಲೂ

ವ್ಯಾಧನನ್ನು ಹೊಡೆಯಲುಪಕ್ರಮಿಸಿದನು. ಅವನ್ನೆಲ್ಲ ಕೈದೊಣ್ಣೆಯಿಂದಲೇ ಶಿವನು ಓರೆನೂಕಿ, ತಪಸಿಯೆ! ಇನ್ನಾವ ಆಯುಧಗಳಿವೆಯೊ? ಎಲ್ಲವನ್ನೂ ತೆಗೆ, ಎಂದು ಹಾಸ್ಯಮಾಡಿದನು. ಫಲ್ಗುನನು "ಧೈರ್ಯವಿದ್ದರೆ ಮಲ್ಲಯುದ್ಧಕ್ಕೆ ನಿಲ್ಲು" ಎಂದು ತೊಡೆ ತಟ್ಟಿ ನಿಂತನು. ಶಿವನು ಪಾರ್ವತಿಯ ಮುಖವನ್ನು ನೋಡಿ ನಗುತ್ತ, ದೇವಿಯೆ! ಇವನು ತರಗೆಲೆ ಗಾಳಿಗಳನ್ನಾಹಾರಮಾಡಿಕೊಂಡು ಎಷ್ಟೋ ಕಾಲವಿದ್ದು ಬಳಿಕ ನಿರಾಹಾರಿಯಾಗಿಯೂ ತಪಸ್ಸನ್ನು ಮಾಡುತ್ತಿದ್ದನು. ಈ ಹಂದಿಯ ಸಂಬಂಧದಿಂದ ನನ್ನ ಮೇಲೆ ಕಾದಾಡಬೇಕಾಯಿತು. ಆದರೂ ದೇಹಶಕ್ತಿ ಗುಂದದೆ ನನ್ನೊಡನೆ ಇದುವರೆಗೆ ಹೋರಾಡಿದುದನ್ನು ನೋಡ . ಇಂತಹ ಕಲಿತನವು ಜಗತ್ತಿನಲ್ಲಿ ಈ ಲೋಕೈಕವೀರನೊಬ್ಬನಿಗಲ್ಲದೆ ಮತ್ತಿನ್ನಾರಿಗಿರುವುದು? ಇನ್ನೂ ಇವನ ಶೌರ್ಯವನ್ನು ನೋಡುತ್ತಿರು, ಎಂದು ಹೇಳಿ, ಬಿಲ್ಲುಬಾಣಗಳನ್ನು ಒಬ್ಬನ ಕೈಗೆ ಕೊಟ್ಟು, ಭುಜಗಳನ್ನು ತಟ್ಟಿ, ಪಾರ್ಥನಿಗೆ ಎದೆಗೊಟ್ಟು ನಿಂತನು. ಇಬ್ಬರಿಗೂ ಕೈಕೈ ಕೂಡಿತು. ಎದೆಗಳು ಸೇರಿದುವು. ಹಾವುಗಳಂತೆ ಸೇರಿ ಹೆಣಗಾಡಿದರು. ಗರಗರನೆ ತಿರುಗಿದರು. ಮಂಡಿಯೂರಿ ಬೆನ್ನಿಗೆ ಕೈಕೊಟ್ಟು ಜಗ್ಗಿದರು. ಕೊರಳನ್ನು ಸೆಳೆದು ರಟ್ಟೆಯನ್ನು ತೊಡೆಗೆ ಸೇರಿಸಿದರು. ಎತ್ತಿ ಕುಸುರಿದರು. ಒಬ್ಬರನ್ನೊಬ್ಬರು ಮೇಲ್ಕೀಳು ಮಾಡಿದರು. ಪಟ್ಟನ್ನು ಬಿಡಿಸಿಕೊಂಡು ದೂರವಾಗಿ ಸಿಡಿದು, ತೊಡೆ ತಟ್ಟಿ ಮತ್ತೆ ನಡುವಿಗೆ ನುಗ್ಗಿದರು. ಅಪ್ಪಳಿಸಿದರು. ಒಬ್ಬರನ್ನೊಬ್ಬರು ಮುಷ್ಟಿಗಳಿಂದ ಹೊಡೆದರು. ಬೆವರು ಹರಿದಾಡಿತು. ತಲೆಯು ಕೆದರಿತು. ಮೈ ಮಣ್ಣಾಯಿತು. ಇವರೀರ್ವರ ಮಹಾಯುದ್ಧವನ್ನು ನೋಡಿ ದೇವತೆಗಳೂ ಪ್ರಮಥರೂ ಪರಮಾಶ್ಚರ್ಯಗೊಂಡರು. ಆಗ ಅರ್ಜುನನು ಕಡುಬೇಸತ್ತು, ಕೋಪವು ಮಿತಿಮೀರಿ, ಇದೋ ಬೇಡನೆ! ಇದೇ ನಿನಗೆ ಕೊನೆಯೇಟು, ನನ್ನ ಬಾಣಗಳನ್ನೆಲ್ಲ ನುಂಗಿದ ನಿನ್ನ ರೋಗಕ್ಕೆ ಇದೇ ಮದ್ದು, ನನ್ನ ದಿವ್ಯಾಸ್ತ್ರವನ್ನು ಖಂಡಿಸಿದ ಶೌರ್ಯಕ್ಕೆ ಇದೇ ಮೃತ್ಯು, ನಿನ್ನ ಅಹಂಕಾರವಚನಗಿರಿಗೆ ಇದೇ ವಜ್ರ, ಎಂದು ಹೇಳುತ್ತ, ಬಲವಾಗಿ ಮುಷ್ಟಿಯಿಂದ ಶಿವನ ಎದೆಗೆ ತಿವಿದು, ಆರ್ಭಟಿಸಿದನು. ಶಿವನು ಲೀಲೆಯಿಂದ ಒಂದೇಟನ್ನಪ್ಪಳಿಸಲು, ಎದೆ ಮೇಲಾಗಿ ಭೂ

ಮಿಯ ಮೇಲೆ ಅರ್ಜುನನು ಬಿದ್ದನು. ಅಂಗುಷ್ಠದಿಂದ ತುಳಿದ ಮಾತ್ರ ದಿಂದಲೇ ರಕ್ತವನ್ನು ಕಾರಿ ಕಣ್ಣುಗುಡ್ಡೆಯನ್ನು ತೇಲಿಸಿ ಮೂರ್ಛಾಗತ ನಾದನು. ಕರುಣಾಕರನಾದ ಶಿವನು ತನ್ನ ಭಕ್ತನಿಗುಂಟಾದ ಆ ಅವಸ್ಥೆ ಯನ್ನು ನೋಡಿ, ಅಯ್ಯೋ! ಹೊಡೆದೆನೆಲ್ಲ! ಎಂದು ಮರುಗಿದನು. ಅಷ್ಟರಲ್ಲಿ ಧನಂಜಯನಿಗೆ ಎಚ್ಚರುಂಟಾಯಿತು. ಆದರೇನು? ಶಕ್ತಿ ಯು ತಗ್ಗಿತು; ಉತ್ಸಾಹವು ಕುಗ್ಗಿತು. ಶೌರ್ಯರಸವು ಬತ್ತಿತು; ಮು ಖವು ಬೆಮರೇರಿತು; ಚಿಂತೆಯು ಹೆಚ್ಚಿತು; ಬೇಡನಿಗೆ ತಾನು ಸೋತು ಹೋಗಬೇಕಾಯ್ತಲ್ಲ! ಎಂಬ ಕೊರೆತವು ಹುಟ್ಟಿತು; ಅಯ್ಯೋ! ನಾನು ಯಾವ ಜನ್ಮದಲ್ಲಿ ಏನು ಪಾಪವನ್ನು ಮಾಡಿದ್ದೆನೊ! ಶಿವನಿಂದೆ ಶಿವಭಕ್ತದ್ರೋಹಗಳನ್ನು ಮಾಡಿದ್ದೆನೋ! ಶಿವವ್ರತವನ್ನು ಕೆಡಿಸಿ ದ್ದೆನೋ! ಶಿವಮತವನ್ನು ದೂಷಿಸಿದ್ದೆನೋ? ಶಿವಭಕ್ತರಿಗೆ ಕೇ ಡೋಪಧೆಯನ್ನು ಮಾಡಿದ್ದೆನೋ! ಕಾಣೆನೆಲ್ಲ! ಅಂತಹ ಯಾವ ಪಾಪ ವನ್ನೋ ಮಾಡಿದ್ದುದರಿಂದಲೇ ಈ ಸಾಮಾನ್ಯಮನುಷ್ಯನಿಂದ ನಾನು ಪರಾಭವಗೊಳ್ಳಬೇಕಾಯಿತು; ಎಲ್ಲಿಯ ಅರ್ಜುನ! ಎಲ್ಲಿಯ ಬೇಡ! ಇದೇನು ಜಗದಾಶ್ಚರ್ಯ! ಇದುವರೆಗೂ ಜಗತ್ತಿನಲ್ಲೆಲ್ಲ ಹರಡಿಕೊಂಡಿದ್ದ ನನ್ನ ಪರಾಕ್ರಮದ ಕೀರ್ತಿಯು ಈಗ ಹಾಸ್ಯಾಸ್ಪದವಾಗುವಂತಾಯ್ತಲ್ಲ! ಅಯ್ಯೋ! ಇದೆಲ್ಲಿಯ ಹಾವಿ! ನಾನೇಕೆ ನೋಡಿದೆ! ಬಾಣವನ್ನೇಕೆ ಬಿ ಟ್ಟೆ! ಈ ಶಬರನೆಲ್ಲಿಬಂದ! ನಾನು ಬಂದು ಕಾರ್ಯವೇನು! ಆದ ಪರಿ ಣಾಮವೇನು? ನಾನು ಸ್ವಪ್ನವನ್ನೇನಾದರೂ ಕಾಣುತ್ತಿರುವೆನೊ? ನಾನೇ ಬೇಡನೊ? ಈತನೇ ಅರ್ಜುನನೊ? ಇದೇನು ವಿಚಿತ್ರ! ಎಂದು ಪರಿಪರಿಯಾಗಿ ಹಂಬಲಿಸುತ್ತ, ಕಡೆಗೆ ನಾನು ಮಾಡುತ್ತಿದ್ದ ತಪ ಶ್ಚರಣವನ್ನು ಬಿಟ್ಟು ಈ ದುರ್ವ್ಯಾಜ್ಯಕ್ಕೆ ಮನಸ್ಸನ್ನು ಕೊಟ್ಟ ಶಿವಾ ಪರಾಧದಿಂದಲೇ ಇಂತಹ ಕೇಡುಂಟಾಯ್ತೆಂದು ಯೋಚಿಸಿ, ತತ್ಪರಿಹಾರ ಕ್ಕಾಗಿ ಶಿವಕಟಾಕ್ಷವನ್ನು ಪಡೆದು, ಬಳಿಕ ಬೇಡನನ್ನು ಸೋಲಿಸಬೇಕೆಂ ದು ನಿರ್ಧರಿಸಿದನು. ಅಲ್ಲೇ ಮಳಲಿನಲ್ಲಿ ಒಂದು ಲಿಂಗವನ್ನು ಮಾಡಿದ ನು. ಪರಿಪರಿಯ ಹೂವುಗಳನ್ನೆತ್ತಿ ತಂದು ಭಕ್ತಿಯಿಂದರ್ಚಿಸಿದನು. ಶಿವಮಂತ್ರೋಚ್ಚಾರಣೆಯಿಂದ ಪ್ರದಕ್ಷಿಣ ಮಾಡಿ ನಮಸ್ಕರಿಸಿ, ಜಯ

ಮೃತ್ಯುಂಜಯ! ಜಯ ಭವಭಂಜನ! ಜಯ ಕರುಣಾಕರ! ಜಯ
ಶಿವಶಂಕರ! ಎಂದು ಮೊದಲಾಗಿ ಸ್ತೋತ್ರ ಮಾಡಿ, "ಹರನೇ! ನಿನ್ನ
ಪಾದಸೇವಕನಾದ ನನ್ನನ್ನು ಹುಲುಬೇಡನೊಬ್ಬನು ಗೆಲ್ಲಬಹುದೆ? ನನ
ಗಾದ ಪರಾಭವವು ಒಡೆಯನಾದ ನಿನಗಲ್ಲವೆ? ಅದುಕಾರಣ ಈತನನ್ನು
ಸೋಲಿಸುವ ಶೌರ್ಯವನ್ನು ನನಗೆ ಕೊಟ್ಟು ಕಾಪಾಡು" ಎಂದು ಪ್ರಾ
ರ್ಥಿಸಿ, ಬೇಡನ ಕಡೆಗೆ ತಿರುಗಿನೋಡಿ, ಎಲೊ ನೀಚನೆ! ಇನ್ನು ನಿನ್ನ
ಪೌರುಷವನ್ನು ತೋರಿಸು, ನೋಡುತ್ತೇನೆ! ಈಗ ನನ್ನೊಡೆಯನ
ಅನುಗ್ರಹವು ಉಂಟಾಗಿರುವುದು; ನೀನಲ್ಲ, ನಿನ್ನಮೇಲಣ ಯಾವ
ದೈವವನ್ನು ಕರೆದುಕೊಂಡುಬಂದರೂ, ಎಲ್ಲರನ್ನೂ ಕ್ಷಣಾರ್ಧದಲ್ಲಿ ಸಹ್ಮರಿ
ಸುವೆನು; ಇತ್ತ ಬಾ, ಎಂದು ತೋಳ್ತಟ್ಟಿ ಗರ್ಜಿಸುತ್ತಿರುವಲ್ಲಿ, ಬೇಡ
ನ ತಲೆಯಮೇಲಿರುವ ಪುಷ್ಪಗುಚ್ಛವನ್ನು ನೋಡಿದನು. ತಾನು ಮಳ
ಲಲಿಂಗದ ಶಿರಸ್ಸಿನಮೇಲೆ ಧರಿಸಿದ ಕುಸುಮಗುಚ್ಛದಂತೆಯೇ ಅದು ಕಂಡಿ
ತು. ಇದೇನೆಂದು ಅರ್ಜುನನು ಆಶ್ಚರ್ಯಗೊಂಡನು. ಪರೀಕ್ಷಿಸಬೇಕೆಂದು
ಮತ್ತೆ ಬೇರೆ ಬೇರೆ ಜಾತಿಯ ಹೂವುಗಳನ್ನು ಲಿಂಗಕ್ಕೆ ಅಲಂಕರಿಸಿದ
ನು. ಕಣ್ಣು ಮುಚ್ಚಿ ಬಿಡುವುದರೊಳಗೆ ಅವೆಲ್ಲ ಕಿರಾತನ ಮಂಡೆಯ
ಮೇಲೆಯೇ ತೋರುತ್ತ, ಲಿಂಗಶಿರಸ್ಸು ಶೂನ್ಯವಾಗಿರುತ್ತಿದ್ದಿತು. ಆಗ
ಅರ್ಜುನನು, ಓಹೊ! ಇವನೇ ಶಿವನೆಂದು ತಿಳಿದು ದಿಗಿಲು ಬಿದ್ದನು.
ಶಿವನನ್ನು ಮೆಚ್ಚಿಸಿಕೊಳ್ಳುವುದಕ್ಕಾಗಿ ಬಂದ ನಾನು ಆವನಿಗೇ ವಿರುದ್ಧ
ವಾಗಿ ನಿಂತು ಕಾದಾಡಿದೆನಲ್ಲ! ಎಂದು ಪರಿತಪಿಸಿದನು. ಗಡಗಡನೆ ನಡು
ಗುತ್ತ ಅಡ್ಡಬಿದ್ದು, ಎದ್ದು ಕೈಮುಗಿದು ನಿಂತು, ಮದ್ಗುರುವೆ! ಪ್ರ
ಭುವೆ! ನಾನು ಅರಿಯದೆ ಮಾಡಿದ ಶತಾಪರಾಧವನ್ನು ಕ್ಷಮಿಸು; ಮ
ತ್ತನಾಗಿ ನಾನು ಆಚರಿಸಿದ ತಪ್ಪನ್ನು ಸೈರಿಸು, ಅಜ್ಞನಾದ ನನ್ನನ್ನು
ಕಾಪಾಡು, ಭಕ್ತವತ್ಸಲಾ! ದಯಾನಿಧೆ! ಎಂದು ಬಗೆಬಗೆಯಾಗಿ ಕಣ್ಣೀ
ರ್ದುಂಬಿ ದೀನಸ್ವರದಿಂದ ಬೇಡಿದನು. ಆಗ ಇದಿರಾಗಿದ್ದ ಕಿರಾತನೇ
ಭಕ್ತನ ಮೇಲಣ ಪ್ರೀತಿಯಿಂದ— ಪಂಚವದನ, ದಶಭುಜ, ಚಂದ್ರರೇಖೆ,
ಜಟಾಗಂಗೆ, ತ್ರಿಶೂಲ, ಮೃಗವರಾಭಯಹಸ್ತ, ಭುಜಗಹಾರಕುಂಡಲ,
ಮೊದಲಾದುವುಗಳನ್ನು ಧರಿಸಿ, ಪ್ರಸನ್ನವದನನಾಗಿ, ಪಾರ್ವತೀಸಮೇತ

ನಾಗಿ, ವೃಷಭವನ್ನೇರಿ, ಪ್ರತ್ಯಕ್ಷನಾದನು. ನಂದಿ ಗುಹ ಗಣಪ ವೀರೇಶಾ
ದಿಗಳು ನಿಜರೂಪವನ್ನು ಧರಿಸಿದರು. ದೇವದುಂದುಭಿಯು ಶಬ್ದವಾಯಿತು.
ಪುಷ್ಪವೃಷ್ಟಿಯು ಕರೆಯಿತು. ಪಾರ್ಥನು ಮಹಾದೇವದೇವೋತ್ತಮನ
ನಿಜರೂಪವನ್ನು ಕಂಡು, ಪರಮಾನಂದಗೊಂಡು, ಬಾಷ್ಪಗಳನ್ನು ಸುರಿ
ಸುತ್ತ, ರೋಮಾಂಚವನ್ನೈದಿ, ದೀರ್ಘವಾಗಿ ನಮಸ್ಕರಿಸಿ, ಭಯಭಕ್ತಿ
ಯಿಂದ "ರುದ್ರಾಯ ಗಿರಿಶಾಯ ಶರ್ವಾಯ ಕರುಣಾಸಮುದ್ರಾಯ ಸೋ
ಮಾಯ ಭೀಮಾಯ ಮೃತ್ಯುಂಜಯಾಯ ಪರಮೇಶಾಯ ತೇ ನಮೋ
ನಮಃ" ಎಂದು ಮೊದಲಾಗಿ ಸ್ತುತಿಸುತ್ತಿದ್ದನು. ಶಿವನು ಪಾರ್ಥನನ್ನು
ಪ್ರೇಮದಿಂದ ತೆಗೆದು ಬಿಗಿದಪ್ಪಿ, ಕುವರನೆ! ನೀನು ಬಿಟ್ಟ ಬಾಣಗಳೆಲ್ಲ
ವೂ ನನಗೆ ಪುಷ್ಪಾರ್ಚನೆಯು, ನೀನು ಆಡಿದ ಮೂದಲೆಗಳೆಲ್ಲ ನನ್ನ ಮಂ
ತ್ರೋಚ್ಚಾರಣಗಳು, ನಿನ್ನ ಮುಷ್ಟಿಘಾತವು ನನ್ನ ಪಾದಪೂಜೆಯು,
ಎಂದು ತಿಳಿದಿರುವೆನು; ಅದಕ್ಕಾಗಿ ನೀನು ಮನಸ್ಸಿನಲ್ಲಿ ಕೊರಗಬೇಡ;
ಇದೋ ನೀನು ಕಳೆದುಕೊಂಡ ಬಿಲ್ಲು ಬಾಣಗಳನ್ನು ತೆಗೆದುಕೊ ಎಂದು
ಅವನ ಕೈಗೆ ಕೊಟ್ಟು, ನಿನ್ನಿಷ್ಟಾರ್ಥವೇನು ? ಬೇಡು, ಎಂದನು. ಅ
ರ್ಜುನನಾದರೋ—"ದೇವಾ! ಶತ್ರುವಿಜಯಕನಾದ ಮಹಾಪಾಶುಪತಾಸ್ತ್ರ
ವನ್ನು ಕರುಣಿಸಬೇಕು" ಎಂದು ಬೇಡಿದನು. ಶಿವನು ಅವನಿಷ್ಟದಂ
ತೆಯೇ ಮಂತ್ರೋಪದೇಶಪೂರ್ವಕವಾಗಿ ಶಿವಾಸ್ತ್ರವನ್ನು ದಯಪಾಲಿಸಿ,
ಜಯಶೀಲನಾಗು ಎಂದು ಆಶೀರ್ವದಿಸಿದನು. ಬಳಿಕ ಪಾರ್ಥನು ಪಾರ್ವ
ತಿಯ ಪಾದಾರವಿಂದಕ್ಕೆ ಮಣಿದು, ಜಗನ್ಮಾತೆ ! ಕರುಣಾಕರೆ ! ಭವಾನಿ!
ಸರ್ವಮಂಗಳೆ ! ಪರಾತ್ಪರೆ ! ಪಾಹಿ, ಎಂದು ಮೊದಲಾಗಿ ಸ್ತುತಿಸಲು,
ಶಂಕರಿಯು ಅವನ ತಲೆಯನ್ನು ಹಿಡಿದೆತ್ತಿ, "ಭಕ್ತನೆ ! ನಿನ್ನ ದೃಢಭಕ್ತಿಗೆ
ಮೆಚ್ಚಿದೆನು; ಇದೋ ಈ ಅಂಜನಾಸ್ತ್ರವನ್ನು ನಿನಗೆ ಕೊಡುವೆನು;
ಇದು ಒಂದಾಗಿದ್ದರೂ ಬಿಲ್ಲಿನಲ್ಲಿ ತೊಡುವಾಗ ಹತ್ತು, ಬಿಡುವಾಗ ನೂ
ರು, ಹೊರಗೆ ಹೋಗುವಾಗ ಸಾವಿರ, ಶತ್ರು ಬಾಣಗಳನ್ನು ಕಡಿವಾಗ
ಲಕ್ಷ, ಅವುಗಳ ಸಮೀಪಕ್ಕೆ ಹೋಗುವಾಗ ಕೋಟಿ, ನಡುವಾಗ ಗಣನಾ
ತೀತವಾಗಿ ಹಬ್ಬಿ, ಲಯಗೊಳಿಸಿ, ಮತ್ತೆ ಹಿಂತಿರುಗಿ ನಿನ್ನ ಬಳಿಗೇ ಬಂ
ದು, ಒಂದಾಗಿ ನಿಲ್ಲುವುದು" ಎಂದು ಹೇಳಿ ಕೈಗೆ ಕೊಟ್ಟು, ಯುದ್ಧಾಂಗ

ಣದಲ್ಲಿ ಜಯಶೀಲನಾಗು, ಎಂದು ಹರಸಿದಳು. ಪಾರ್ಥನು ಧನ್ಯನಾದೆನೆಂದು ಜಗತ್ಪಿತರುಗಳಿಗೆ ವಂದಿಸಿದನು. ಶಿವನು ಸಕಲಪರಿವಾರದೊಡನೆ ಕೈಲಾಸಕ್ಕೆ ಪ್ರಯಾಣಗೊಂಡನು. ಎಲೆ ಸಿದ್ಧರಾಮೇಶನೆ! ಇದುವರೆಗೆ ಹೇಳಿದುವೇ ಪರಶಿವನ ಪಂಚವಿಂಶತಿ ಲೀಲೆಗಳ ವಿವರಣವು, ಎಂದು ಚೆನ್ನಬಸವೇಶನು ನಿರವಿಸಿದನೆಂಬಲ್ಲಿಗೆ ಹದಿಮೂರನೇಅಧ್ಯಾಯವು ಸಂಪೂರ್ಣವು.

೪ ನೇ ಕಾಂಡವು ಮುಗಿದುದು.

ಮಂಗಳವಾಗಲಿ.

---

## ೫ ನೇ ಕಾಂಡವು.

---

ಶ್ರೀ ಶಿವಾಯನಮಃ.

### ಸೋಮಸೂರ್ಯಾನ್ವಯವಂಶವಿವರಣವು.

ಪೂರ್ವೋಕ್ತವಾದ ಅರ್ಜುನನ ವೃತ್ತಾಂತವನ್ನು ಕೇಳಿದ ಸಿದ್ಧರಾಮೇಶನು ಚೆನ್ನಬಸವೇಶ್ವರನನ್ನು ಕುರಿತು— ಗುರುವೆ, ಅರ್ಜುನನು ಪಾಶುಪತಾಸ್ತ್ರವನ್ನು ಪಡೆದ ಬಳಿಕ ಎಲ್ಲಿಗೆ ಹೋದನು? ಏನನ್ನು ಮಾಡಿದನು? ಅವನ ಪೂರ್ವಾಪರವೇನು? ದಯೆಯಿಟ್ಟು ಬೋಧಿಸಬೇಕು. ಎಂದು ಬೇಡಿದನು. ಆಗಳಾಚೆನ್ನಬಸವೇಶನು ಹೇಳತೊಡಗಿದನೆಂತಂದರೆ— ಎಲೆ ಸಿದ್ಧರಾಮೇಶನೆ, ಚತುರ್ಮುಖಬ್ರಹ್ಮನ ಅಂಗದಿಂದ ನವಬ್ರಹ್ಮರು ಹುಟ್ಟಿದ ಸಂಗತಿಯನ್ನು ಹಿಂದೆಯೇ ವಿವರಿಸಿರುವೆನಷ್ಟೆ; ಆ ನವಬ್ರಹ್ಮರಲ್ಲಿ ಒಬ್ಬನಾದ ಅತ್ರಿಮಹರ್ಷಿಯಿಂದ ಚಂದ್ರನು ಹುಟ್ಟಿದನು. ಅವನ ಪಾರಂಪರ್ಯಕ್ಕೇ ಚಂದ್ರವಂಶವೆಂದು ಹೆಸರು. ಚಂದ್ರನಿಂದ ಬುಧನು ಹುಟ್ಟಿದನು. ಅವನಿಗೆ ಪುರೂರವನು ಮಗನು. ಪುರೂರವನಿಗೆ ಊರ್ವಶಿಯ ಹೊಟ್ಟೆಯಲ್ಲಿ ಆಯು, ಮಾಯು, ಅಮಾಯು, ವಿಶ್ವಾಯು, ಶ್ರುತಾಯು, ಶತಾಯು, ದಿವ್ಯಾಯು ಎಂದು ಏಳು ಮಂದಿ ಮಕ್ಕಳು

ಹುಟ್ಟಿದರು. ಅವರಲ್ಲಿ ಹಿರಿಯನಾದ ಆಯುವಿಗೆ ಪ್ರಭೆ ಯೆಂಬ ಪತ್ನಿ
ಯಲ್ಲಿ ನಹುಷ ಮೊದಲಾದ ಐದು ಮಂದಿ ಮಕ್ಕಳು ಜನಿಸಿದರು.
ನಹುಷನಿಗೆ ವಿರಜೆ ಯೆಂಬುವಳ ಹೊಟ್ಟೆಯಲ್ಲಿ ಹುಟ್ಟಿದ ಯತಿ, ಯ
ಯಾತಿ, ಸಂಯಾತಿ, ಆಯಾತಿ, ಅಶ್ವಕ, ವಿಜಾತಿ, ಎಂಬ ಆರು ಮಂದಿಗ
ಳು ಜನಿಸಿದರು. ಅವರಲ್ಲಿ ಹಿರಿಯನಾದ ಯತಿಯು ಮೋಕ್ಷಾರ್ಥಿಯಾ
ಗಿ ವೈರಾಗ್ಯದಲ್ಲಿದ್ದನು. ಎರಡನೇ ಯಯಾತಿಯು ಎಲ್ಲರಿಗಿಂತಲೂ ಪ್ರ
ಬಲಕೀರ್ತಿಯಾಗಿ ರಾಜ್ಯವನ್ನಾಳಿದನು. ಇವನು ಶುಕ್ರಾಚಾರ್ಯನ ಮಗ
ಳಾದ ದೇವಯಾನಿಯನ್ನೂ ವೃಷಪರ್ವನ ಮಗಳಾದ ಶರ್ಮಿಷ್ಠೆ ಯೆಂಬು
ವಳನ್ನೂ ಕೂಡ ಮದುವೆಯಾದನು. ದೇವಯಾನಿಯು ಹೊಟ್ಟೆಯಲ್ಲಿ
ಯದು, ತುರ್ವಸು, ಎಂಬುವರೂ, ಶರ್ಮಿಷ್ಠೆಯಲ್ಲಿ ದ್ರುಹ್ಯು, ಅನು, ಪೂ
ರು, ಎಂಬ ಮಕ್ಕಳೂ ಹುಟ್ಟಿದರು. ಯಯಾತಿಯು ತನಗೆ ಅವಿಧೇ
ಯರಾಗಿದ್ದ ಉಳಿದ ನಾಲ್ಕು ಮಂದಿಗಳನ್ನೂ ಬಿಟ್ಟು, ಕನಿಷ್ಠನಾದ
ಪೂರುವಿಗೆ ತನ್ನ ರಾಜ್ಯಾಭಿಷೇಕ ಮಾಡಿದನು. ಉಳಿದ ನಾಲ್ಕು ಮಂದಿ
ಗಳನ್ನೂ ನಾಲ್ಕು ದಿಕ್ಕಿನ ರಾಜ್ಯಗಳಿಗಧಿಪತಿಗಳನ್ನು ಮಾಡಿದನು. ಬ
ಳಿಕ ಚಂದ್ರವಂಶದಲ್ಲಿ ಆ ಯದು ಪೂರುಗಳಿಂದ ಯಾದವ ಪೌರವ ಎಂದು
ಎರಡು ಶಾಖೆಗಳುಂಟಾದುವು. ಕೌರವ ಸಂತತಿಯು ಹೇಗೆಂದರೆ—
ಮೇಲೆ ಹೇಳಿದ ಪೂರುವಿಂದ ಜನಮೇಜಯನು, ಅವನಿಂದ ಪ್ರಜಿಹ್ವನು,
ಅವನಿಂ ಸಂಯಾತಿ, ಅವನಿಂ ಹಂಪಾತಿ, ಅವನಿಂದ ಸಾರ್ವಭೌಮ, ಅವ
ನಿಂ ಅಯುತಾನೀಕ, ಅವನಿಂದ ಕ್ರೋಧ, ಆತನಿಂದ ದೇವಾತಿ, ಅವನಿಂ
ರುಚಿಕ, ಆತನಿಂದ ಋಕ್ಷ, ಅವನಿಂ ಮತಿವರ, ಅವನಿಂದ ತ್ರಸ್ಯು,
ಅವನಿಂ ಇಲ, ಅವನಿಂದ ದುಷ್ಯಂತ, ಅವನಿಂ ಭರತ, ಅವನಿಂ ಭುಮ
ನ್ಯು, ಅವನಿಂ ಸುಹೋತ್ರ, ಅವನಿಗೆ ಹಸಿ, ಅವನಿಗೆ ವಿರೋಚನ, ಅವ
ನಿಂದ ಅಜಾಮಿಳ, ಅವನಿಂ ಸಂವರಣ, ಆತನಿಗೆ ತಪತಿಯೆಂಬ ಹೆಂಡತಿ
ಯಲ್ಲಿ ಕುರು, ಅವನಿಂದ ಪರೀಕ್ಷಿತ, ಅವನಿಂದ ಭೀಮಸೇನ, ಅವನಿಂದ
ಪ್ರತೀಪ, ಅವನಿಗೆ ಶಂತನು ಮಗನಾಗಿ ಹುಟ್ಟಿದನು. ಆ ಶಂತನಿಗೆ ಪ್ರ
ಭಾಸನೆಂಬ ವಸುವು ವಸಿಷ್ಠನ ಶಾಪದಿಂದ ಮಗನಾಗಿ ಹುಟ್ಟಿದನು.
ಆ ಮಗನಿಗೆ ತಂದೆಯು ಭೀಷ್ಮನೆಂದು ಹೆಸರಿಟ್ಟನು. ಈತನು ಪರಾ

ಕ್ರಮಶಾಲಿಯಾಗಿ ರಾಜ್ಯವನ್ನಾಳುತ್ತಿದ್ದನು. ಅದ್ರಿಕೆ ಯೆಂಬ ದೇವನಾರಿಯೊಬ್ಬಳು ಬ್ರಹ್ಮನ ಶಾಪದಿಂದ ಹೆಣ್ಣುಮೀನಾಗಿ ಗಂಗಾನದಿಯಲ್ಲಿ ವಿಹರಿಸುತ್ತಿದ್ದಳು. ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ಒಬ್ಬ ವಸುವಿನ ಇಂದ್ರಿಯವು ಗಂಗಾನದಿಯಲ್ಲಿ ಬೀಳಲು, ಅದನ್ನು ಈ ಮತ್ಸ್ಯವು ನುಂಗಿ ಗರ್ಭವನ್ನು ಧರಿಸಿತು. ಬೆಸ್ತನೊಬ್ಬನು ಬಂದು ಬೀಸಿದ ಬಲೆಗೆ ಆ ಮೀನು ಸಿಕ್ಕಿತು. ಅದನ್ನು ಮನೆಗೆ ತಂದು ಸೀಳುವಲ್ಲಿ ಹೆಣ್ಣು ಗಂಡು ಕೂಸುಗಳೆರಡಿದ್ದುವು. ಬೇಡನು ಅವನನ್ನು ದೊರೆಗೊಪ್ಪಿಸಲು, ಆತನು ಗಂಡುಕೂಸನ್ನು ತಾನಿಟ್ಟುಕೊಂಡು, ಅದಕ್ಕೆ ಮತ್ಸ್ಯರಾಜನೆಂದು ಹೆಸರನ್ನು ಕರೆದು, ಹೆಣ್ಣನ್ನು ಬೆಸ್ತನಿಗೆ ಕೊಟ್ಟುಬಿಟ್ಟನು. ಆ ಕೂಸಿಗೆ ಮತ್ಸ್ಯಗಂಧಿ ಯೆಂದು ಅವನು ಹೆಸರನ್ನು ಕರೆದನು. ನದೀತೀರದಲ್ಲಿ ಪರಾಶರಮಹರ್ಷಿಯು ಈಕೆಯೊಡನೆ ಕೂಡಲು, ವೇದವ್ಯಾಸನು ಅವಳ ಗರ್ಭದಲ್ಲಿ ಜನಿಸಿದನು. ಈ ಮತ್ಸ್ಯಗಂಧಿಯು ಕಾಡಿನಲ್ಲಿ ವಿಹರಿಸಿಕೊಂಡಿರಲು, ಶಂತಚಕ್ರವರ್ತಿಯು ಬೇಟೆಯಾಡುತ್ತಿದ್ದು ಇವಳನ್ನು ಕಂಡು ಮೋಹಿಸಿ ಕರೆಯಲು, ಆಕೆಯು ಒಲ್ಲದೆ ತಿರಸ್ಕರಿಸಿದಳು. ಬಳಿಕ ಭೀಷ್ಮನು ಆಕೆಯನ್ನು ಶಂತನಿಗೆ ವಶಮಾಡಿಕೊಟ್ಟನು. ಅವಳ ಹೊಟ್ಟೆಯಲ್ಲಿ ಚಿತ್ರಾಂಗದ ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರು ಶತ್ರುಗಳಿಂದ ಹತರಾದ ನಂತರ, ಅವರ ಹೆಂಡತಿಯರು ವೇದವ್ಯಾಸನಿಂದ ಗರ್ಭವನ್ನು ಧರಿಸಿ, ಧೃತರಾಷ್ಟ್ರ, ಪಾಂಡು, ವಿದುರ, ಎಂಬ ಮೂರು ಮಂದಿ ಮಕ್ಕಳನ್ನು ಹೆತ್ತರು. ಧೃತರಾಷ್ಟ್ರನಿಗೆ ಕೌರವ ಮೊದಲಾದ ನೂರು ಮಂದಿ ಮಕ್ಕಳು ಹುಟ್ಟಿದರು. ಪಾಂಡುವಿಗೆ ಧರ್ಮರಾಜ ಮೊದಲಾದ ಐದು ಮಂದಿ ಮಕ್ಕಳು. ಋಷಿಯ ಶಾಪದಿಂದ ಪಾಂಡುರಾಜನು ಸಾಯಲು, ಕೌರವರಿಗೂ ಪಾಂಡವರಿಗೂ ಮತ್ಸರವು ಬೆಳೆದು, ಕೌರವರು ಕಪಟದಿಂದ ರಚಿಸಿದ್ದ ಅರಗಿನ ಮನೆಯಿಂದ ಪಾಂಡವರು ತಪ್ಪಿಸಿಕೊಂಡು, ಅರಣ್ಯದಲ್ಲಿ ವಾಸವಾಗಿದ್ದು, ಅಲ್ಲಿ ಹಿಡಿಂಬನೆಂಬ ರಾಕ್ಷಸನನ್ನು ಕೊಂದು, ಬ್ರಾಹ್ಮಣಾಗ್ರಹಾರವನ್ನು ಲಯಗೊಳಿಸುತ್ತಿದ್ದ ಬಕಾಸುರನನ್ನು ಸಹ್ಮರಿಸಿ, ದ್ರೌಪದಿಯನ್ನು ಮದುವೆಯಾಗಿ ಬಂದು, ಕೌರವರನ್ನು ಸೋಲಿಸಿ, ಇಂದ್ರಪ್ರಸ್ಥಪಟ್ಟಣವನ್ನು ಪಡೆದು

ರಾಜ್ಯವನ್ನಾಳುತ್ತಿದ್ದು, ಕಡೆಗೆ ಕೌರವನೊಡನೆ ಜೂಜಾಡಿ, ರಾಜ್ಯವನ್ನೆಲ್ಲ ಸೋತು, ಮತ್ತೆ ೧೨ ವರ್ಷಗಳವರೆಗೆ ಅರಣ್ಯವಾಸವನ್ನೂ ೧ ವರ್ಷ ಅಜ್ಞಾತವಾಸವನ್ನೂ ಮಾಡಿ, ಅವರಲ್ಲಿ ೩ ನೆ ಯವನಾದ ಅರ್ಜುನನೇ ಶತ್ರುವಿಜಯಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡಿ ಪಾಶುಪತಾಸ್ತ್ರವನ್ನು ಪಡೆದನು. ಬಳಿಕ ಪಾಂಡವರು ಕೌರವರ ಮೇಲೆ ಯುದ್ಧ ಮಾಡಿದರು. ದುಷ್ಟನಿಗ್ರಹವನ್ನು ಮಾಡಿ ಭೂಭಾರವನ್ನು ತಪ್ಪಿಸುವುದಕ್ಕಾಗಿ ವಿಷ್ಣುವೇ ಮನುಜಾಕಾರನಾಗಿ ಅವತರಿಸಿದ್ದ ದ್ವಾರಕೆಯ ಕೃಷ್ಣನು ಅರ್ಜುನನಿಗೆ ಸಾರಥಿಯಾಗಿ ನಿಂತನು. ಆ ಮಹಾಯುದ್ಧದಲ್ಲಿ ಪಾಂಡವರು ತಮ್ಮ ಅಣ್ಣ ಗುರು ತಾತ ಮೊದಲಾದ ಹಿರಿಯರನ್ನೆಲ್ಲ ಕೊಂದು ಗೆದ್ದರು. (ಲೋಕದಲ್ಲಿ ಹೊನ್ನು ಹೆಣ್ಣು ಮಣ್ಣಿನ ಆಸೆಯು ಯಾವ ಕೃತ್ಯವನ್ನು ತಾನೇ ಮಾಡಿಸುವುದಿಲ್ಲ?) ಹೀಗೆ ಭೂಮಿಯಾಸೆಗಾಗಿ ಪಾಂಡವರು ಕಷ್ಟಪಟ್ಟರು. ಇನ್ನು ಹೆಣ್ಣಿನಾಸೆಗಾಗಿ ಕಷ್ಟಪಟ್ಟವರ ಕಥೆಯನ್ನು ಕೇಳು— ಬ್ರಹ್ಮನ ಪುತ್ರನಾದ ಮರೀಚಿಬ್ರಹ್ಮನಿಂದ ಕಶ್ಯಪನು ಹುಟ್ಟಿದನಷ್ಟೆ. ಅವನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೊಳಗೆ ವಿವಸ್ವತನೆಂಬುವನೊಬ್ಬನಿದ್ದನು. ಅವನಿಗೆ ಹುಟ್ಟಿದ ೮ ಮಂದಿ ಮಕ್ಕಳಲ್ಲಿ ವೈವಸ್ವತಮನುವು ಹಿರಿಯನು. ಅವನಿಗೆ ಇಕ್ಷ್ವಾಕು ಮೊದಲಾದ ೯ ಮಂದಿ ಮಕ್ಕಳು. ಹಿರಿಯ ಇಕ್ಷ್ವಾಕುವಿಗೆ ನಿಮಿ ವಿಕುಕ್ಷಿಗಳೆಂಬ ಮಕ್ಕಳಾದರು. ವಿಕುಕ್ಷಿಯ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಲ್ಲಿ ಕಕುತ್ಸ್ಥನು ಹಿರಿಯನು. ಅವನಿಗೆ ಸುಯೋಧನನೆಂಬ ಮಗನು. ಅವನಿಗೆ ಪೃಥುವೆಂಬ ಸುತನು. ಅವನಿಗೆ ವಿಶ್ವಕನು. ಅವನಿಂದ ಆರ್ದ್ರಕನು. ಅವನಿಂದ ಯುವನಾಶ್ವನು, ಅವನಿಂ ಶ್ಯಾವಸ್ತಿಯು, ಅವನಿಂದ ಬೃಹದಶ್ವನು, ಅವನಿಂ ಕುವಲಾಶ್ವನು, ಅವನಿಂ ದಂಧುಮಾರನು, ಅವನಿಂ ದೃಢಾಶ್ವನು, ಅವನಿಗೆ ಪ್ರಮೋದನು, ಅವನಿಂದ ಹರ್ಯಶ್ವನು, ಅವನಿಗೆ ನಿಕುಂಭನು, ಅವನಿಂ ಸಂಹತಾಶ್ವನು, ಅವನಿಂದ ಕೃಶಾಶ್ವ ರಣಾಶ್ವರೂ, ರಣಾಶ್ವನಿಗೆ ಯುವನಾಶ್ವನೂ, ಅವನಿಂದ ಮಾಂಧಾತನೂ, ಅವನಿಂದ ಅಂಬರೀಷ, ಪುರುಕುತ್ಸ, ಮುಚುಕುಂದ, ಎಂಬ ಮೂವರೂ ಮಕ್ಕಳಾಗಿ ಹುಟ್ಟಿದರು. ಪುರುಕುತ್ಸನ ಸಂತತಿಯಲ್ಲಿ ಸತ್ಯವ್ರತನು ಹುಟ್ಟಿದನು. ಅವನಿಗೆ ತ್ರಿಶಂ

ಕುವು ಜನಿಸಿದನು. ಅವನಿಂದ ಸತ್ಯವ್ರತೆಯೆಂಬ ಹೆಂಡತಿಯಲ್ಲಿ ಹರಿಶ್ಚಂದ್ರನು ಹುಟ್ಟಿದನು. ಅವನಿಗೆ ಲೋಹಿತಾಶ್ವನು, ಅವನಿಂದ ಹರಿತನು, ಅವನಿಗೆ ದುನ್ಧುವು, ಅವನಿಗೆ ವಿಜಯ ಸುತೇಜರೂ, ಅವರಲ್ಲಿ ವಿಜಯನಿಗೆ ರುಚಕನೂ, ಅವನಿಗೆ ವೃಕನೂ, ಅವನಿಗೆ ಬಾಹುವೂ, ಅವನಿಂದ ಸಗರನೂ ಹುಟ್ಟಿದರು. ಅವನಿಗೆ ಪ್ರಭೆ ಭಾನುಮತಿಯರೆಂಬ ಇಬ್ಬರು ಹೆಂಡತಿಯರು. ಬಡಬಾಗ್ನಿಯ ಅನುಗ್ರಹದಿಂದ ಪ್ರಭೆಯಲ್ಲಿ ೬೦ ಸಾವಿರ ಮಕ್ಕಳನ್ನೂ, ಭಾನುಮತಿಯಲ್ಲಿ ಅಸಮಂಜಸನೆಂಬ ವಂಶೋದ್ಧಾರಕನಾದ ಮಗನೊಬ್ಬನನ್ನೂ ಪಡೆದನು. ಅಸಮಂಜಸನಿಗೆ ಅಂಶುಮಾನೆಂಬ ಮಗನಾದನು. ಅವನಿಗೆ ದಿಲೀಪನು, ಅವನಿಂದ ಭಗೀರಥನು ಜನಿಸಿದರು. ಇವನ ವಂಶದಲ್ಲಿ ಹುಟ್ಟಿದ ದೀರ್ಘಬಾಹು (ಅಥವಾ ಸ್ಥೂಲಬಾಹು) ಎಂಬುವನಿಗೆ ಅಜಮಹಾರಾಜನು ಮಗನಾದನು. ಅವನ ಮಗನು ರಘುವು, ಅವನಿಗೆ ಅಜನು ಪುತ್ರನು. ಅವನಿಂದ ದಶರಥನು ಹುಟ್ಟಿದನು. ಅವನಿಗೆ ರಾಮ ಲಕ್ಷ್ಮಣ ಭರತ ಶತ್ರುಘ್ನರೆಂಬ ನಾಲ್ಕು ಮಕ್ಕಳಾದರು. ಹಿರಿಯನಾದ ರಾಮನು ಬಾಲಲೀಲೆಯನ್ನು ಕಳೆದು ತಾಟಕಿ ಯೆಂಬ ರಾಕ್ಷಸಿಯನ್ನು ಕೊಂದು, ಭೂಪುತ್ರಿಯಾದ ಸೀತೆಯನ್ನು ಮದುವೆಯಾಗಿ ಬರುತ್ತಿರುವಾಗ ಪರಶುರಾಮನು ಅಡ್ಡಗಟ್ಟಲು, ಅವನ ಬಿಲ್ಲನ್ನು ಕಿತ್ತು, ಪುರವನ್ನು ಹೊಕ್ಕು, ತನ್ನ ಪಟ್ಟಾಭಿಷೇಕಸಮಯದಲ್ಲಿ ತಂದೆಯಾಜ್ಞೆಯ ಪಾಲನೆಗಾಗಿ ವನಕ್ಕೆ ಹೋಗಿ, ತನ್ನ ತಮ್ಮಂದಿರು ಕರೆದರೂ ಪಟ್ಟಣಕ್ಕೆ ಬರದೆ, ಹಿರಿಯ ತಮ್ಮನಾದ ಲಕ್ಷ್ಮಣನೊಡನೆಯೂ ಹೆಂಡತಿಯೊಡನೆಯೂ ವನವಾಸಮಾಡಿಕೊಂಡಿರುತ್ತ, ಅಲ್ಲಿ ಶೂರ್ಪನಖಿಯೆಂಬ ರಾಕ್ಷಸಿಯ ಮೂಗನ್ನು ಕೊಯ್ದು, ಖರ ದೂಷಣ ತ್ರಿಶಿರಾದಿ ರಾಕ್ಷಸರನ್ನು ಕೊಂದು, ಹೊಂಬಣ್ಣದ ಜಿಂಕೆಯೊಂದನ್ನು ಕಂಡು, ಅದರ ಬೆನ್ನಟ್ಟಿ ಹೋದಾಗ, ತನ್ನ ಪತ್ನಿಯನ್ನು ರಾಕ್ಷಸನೊಬ್ಬನು ಕದ್ದೊಯ್ಯಲು, ಹಿಂದಿರುಗಿ ಬಂದು ಸೀತೆಯನ್ನು ಕಾಣದೆ, ಅತಿಶಯವಾಗಿ ರೋದಿಸಿ, ಹಂಬಲಿಸಿ, ಅಲ್ಲಲ್ಲಿ ಹುಡುಕಿ, ಬಳಿಕ ಹನುಮಂತನು ದೊರೆಯಲು, ಆ ದೂತನ ಮುಖದಿಂದ ಸೀತೆಯು ರಾವಣನ ಅಧೀನದಲ್ಲಿರುವಳೆಂದು ತಿಳಿದು, ಸುಗ್ರೀವನ ಸಹಾಯದಿಂದ ಸಮುದ್ರಕ್ಕೆ ಸೇತುವನ್ನು ಕಟ್ಟಿ, ದಾಂಟಿ, ಲಂಕೆಗೆ

ಹೋಗಿ, ರಾವಣ ಕುಂಭಕರ್ಣಾದಿರಾಕ್ಷಸರನ್ನೆಲ್ಲ ಸಂಹರಿಸಿ, ರಾವಣನ ತಮ್ಮನಾದ ವಿಭೀಷಣನಿಗೆ ಅಲ್ಲಿಯ ಪಟ್ಟವನ್ನು ಕಟ್ಟಿ, ಹೆಂಡತಿಯನ್ನು ಕರೆದುಕೊಂಡು ಬಂದನು. ಹೆಣ್ಣಿಗಾಗಿ ಕಷ್ಟಪಟ್ಟವನೇ ಇವನು. ಎಂದು ಚೆನ್ನಬಸವೇಶನು ನುಡಿಯಲು, ಸಿದ್ಧರಾಮೇಶನು— ಎಲೆ ಗುರುವೆ ಇವೆರಡು ವಂಶದವರಲ್ಲಿ ಅತಿ ದಾನಧರ್ಮಪರೋಪಕಾರಗಳನ್ನು ಮಾಡಿ ಭೂಮಿಯನ್ನು ಆಳಿದವರಾರು? ಚಕ್ರವರ್ತಿಗಳಾಗಿದ್ದವರಾರು? ಅವರಲ್ಲಿ ಸತ್ಕೀರ್ತಿವಂತರಾರು ? ಕೆಟ್ಟವರಾರು ! ಅದನ್ನು ನಿರೂಪಿಸಬೇಕೆಂದು ಕೇಳಿಕೊಳ್ಳಲು, ಚೆನ್ನಬಸವೇಶನು— ಅಯ್ಯಾ ! ಅವರಲ್ಲಿ ಹರಿಶ್ಚಂದ್ರ, ನಳ, ಪುರೂರವ, ಸಗರ, ಪುರುಕುತ್ಸ, ಕಾರ್ತವೀರ್ಯ, ಎಂಬ ಈ ಆರುಮಂದಿಗಳೇ ಚಕ್ರವರ್ತಿಗಳು; ಸುಹೋತ್ರ, ಮರುತ್ವಂತ, ಭರತ, ಗಯ, ಶಶಿಬಿಂದು, ಅಂಬರೀಷ, ದಿಳೀಪ, ರಘು, ರಾಮ, ಭಗೀರಥ, ರಂತಿದೇವ, ಯಯಾತಿ,ನಹುಷ, ದಂತಿ, ಪೃಥು, ಮಾಂಧಾತ, ಎಂಬ ೧೬ ಮಂದಿಗಳು ಮಹಾರಾಜರು; ಜನಕ,ದಶರಥ,ಶಂತನು, ಮೊದಲಾದವರು ಸಹಸ್ರಮಂದಿ ರಾಜರುಗಳು; ಈ ಭೂತಲದಲ್ಲಿ ನಳನೂ ಧರ್ಮರಾಯನೂ ಜೂಜಾಡಿಯೂ, ಯಾದವರು ಮದ್ಯಪಾನದಿಂದಲೂ, ಕೀಚಕ ವಾಲಿ ರಾವಣರು ಪರಸ್ತ್ರೀವ್ಯಾಮೋಹದಿಂದಲೂ, ದಶರಥ ಪಾಂಡು ಭೂಪಾಲರು ಬೇಂಟೆಯ ವ್ಯಸನದಿಂದಲೂ, ದಕ್ಷನೂ ಬ್ರಹ್ಮನೂ ಶಿಶುಪಾಲನೂ ಪರದೂಷಣೆಯಿಂದಲೂ, ಚಂದ್ರನೂ ತ್ರಿಶಂಕುವೂ ಗುರುದ್ರೋಹದಿಂದಲೂ ಕೆಟ್ಟರು. ಮಾಂಧಾತನು ಬೇಡಿದವರಿಗೆ ಕೊಟ್ಟೂ, ಕರ್ಣನು ಯುದ್ಧಾಂಕಣದಲ್ಲಿ ಕೃಷ್ಣನಿಗೆ ವಜ್ರಕವಚವನ್ನು ಕೊಟ್ಟೂ, ಗರುಡನು ಕಚ್ಚಿಕೊಂದ ಹಾವಿಗೆಪ್ರಾಣವನ್ನು ಕೊಟ್ಟುದರಿಂದ ಜೀಮೂತವಾಹನನೂ, ಇಂದ್ರನಿಗೆ ಬೆನ್ನಮೂಳೆಯನ್ನು ಕೊಟ್ಟುದರಿಂದ ದಧೀಚಿಯೂ, ವಾಮನಮೂರ್ತಿಗೆ ಭೂದಾನವನ್ನು ಮಾಡಿದುದರಿಂದ ಬಲಿಯೂ, ಕೀರ್ತಿಪುರುಷರಾದರು. ಅಷ್ಟೇ ಹೊರತು ಭಕ್ತಿಯಿಂದ ಇವರಾರೂ ಮೋಕ್ಷವನ್ನು ಪಡೆದವರಲ್ಲ. ಎಂದು ಚೆನ್ನಬಸವೇಶನು ನುಡಿದನೆಂಬಲ್ಲಿಗೆ ಒಂದನೇ ಅಧ್ಯಾಯವು ಸಂಪೂರ್ಣವು.

## ೨ ನೇ ಅಧ್ಯಾಯವು.

### ಶೈವಶರಣರ ಕಥೆಗಳು.

ಬಳಿಕ ಸಿದ್ಧರಾಮೇಶನು ಚೆನ್ನಬಸವೇಶ್ವರನನ್ನು ಕುರಿತು– ತಾವು ದೇವಾಸುರಮನುಷ್ಯರಲ್ಲಿ ಮುಕ್ತಿಯನ್ನು ಪಡೆಯದೆ ಕೆಟ್ಟವರ ಚರಿತ್ರವನ್ನು ವಿವರಿಸಿದಿರಿ; ಶೈವಮಾರ್ಗಾಚರಣದಿಂದ ಮುಕ್ತರಾದವರುಗಳ ಚರಿತ್ರವನ್ನು ಕೃಪೆ ಮಾಡಿ ವಿವರಿಸಿರಿ, ಎಂದು ಬಿನ್ನೈಸಲು, ಚೆನ್ನಬಸವೇಶನು ಹೇಳಲುಪಕ್ರಮಿಸಿದನೆಂತೆಂದರೆ– ಇಂದ್ರದ್ಯುಮ್ನನೆಂಬ ವಿಷ್ಣುಭಕ್ತರಾಜನೊಬ್ಬನು ಹರಿಯನ್ನೇ ಧ್ಯಾನಿಸುತ್ತಿದ್ದನು. ಅವನ ಬಳಿಗೆ ಮಹಾಶಿವಭಕ್ತನಾದ ಅಗಸ್ತ್ಯರ್ಷಿಯು ಬರಲು, ದೊರೆಯು ಅವನನ್ನು ಕಂಡರೂ ಪ್ರತ್ಯುತ್ಥಾನಮಾಡದೆ ಅಲಕ್ಷೀಕರಿಸಿದುದರಿಂದ, "ನೀನು ಮದಗಜವಾಗಿ ಹುಟ್ಟು" ಎಂದು ಋಷಿಯು ಶಾಪವನ್ನು ಕೊಟ್ಟನು. ಅದರಂತೆ ಹುಟ್ಟಿದ ಆನೆಯು ಒಂದು ಕೊಳಕ್ಕೆ ಬಂದು, ನೀರನ್ನು ಕುಡಿಯುತ್ತಿರುವಲ್ಲಿ ಒಳಗಿದ್ದ ಮೊಸಳೆಯು ಆನೆಯ ಕಾಲನ್ನು ಕಚ್ಚಿ ಎಳೆಯುತ್ತಿರಲು, ಗಜವು ಹೆದರಿ "ಹರೀ!" ಎಂದು ಕೂಗಿಕೊಂಡಿತು. ವಿಷ್ಣುವು ಅಲ್ಲೇ ಪ್ರತ್ಯಕ್ಷನಾಗಿ, ಚಕ್ರವನ್ನು ಬಿಟ್ಟು ಮೊಸಳೆಯನ್ನು ಕತ್ತರಿಸಿದನು. ಆನೆಯು ಮೇಲಕ್ಕೆ ಬಂದು ವಿಷ್ಣುವಿನ ಪಾದಕ್ಕೆ ನಮಸ್ಕರಿಸಿ, ನನಗೆ ಮೋಕ್ಷವನ್ನು ಕೊಡೆಂದು ಬೇಡಿತು. ಹರಿಯು– ಅದು ನನ್ನಿಂದಾಗದು; ನಾಗಕನ್ನಿಕೆಯರಿಗೆ ವರವನ್ನು ಕೊಟ್ಟ ಶಿವಲಿಂಗವೊಂದಿರುವುದು; ರಾಜಹಂಸನೆಂಬ ಗುರುವಿನ ದೇಹದಮೇಲೆ ಜೇಡರ ಹುಳುವು ಹರಿಯುತ್ತಿರಲು, ಅವನ್ನು ಗುಣಗರ್ಭನೆಂಬ ಶಿಷ್ಯನು ನೋಡಿ, ತೆಗೆದು ಭೂಮಿಯಮೇಲಿಟ್ಟನು; ಅದನ್ನು ಗುರುವು ಕಂಡು, ನೀನೂ ಜೇಡರ ಹುಳುವಾಗೆಂದು ಶಿಷ್ಯನಿಗೆ ಶಪಿಸಿದನು; ಅದರಂತೆ ಜೇಡನಾಗಿರುವ ಹುಳುವು ಮುಕ್ತಿಪ್ರಾಪ್ತಿಗಾಗಿ ಆ ಲಿಂಗವನ್ನು ಸೇವಿಸುತ್ತಿರುವುದು, ನೀನೂ ಅಲ್ಲಿಗೆ ಹೋಗಿ ಸೇವಿಸು, ಮೋಕ್ಷವು ಸಿದ್ಧವಾಗುವುದು, ಎಂದು ನುಡಿದು ಅಂತರ್ಧಾನಗೊಂಡನು. ಅದರಂತೆಯೇ ಆನೆಯು ಅಲ್ಲಿಗೆ ಹೋಗಿ ಲಿಂಗವನ್ನಾರಾಧಿಸುತ್ತಿದ್ದಿತು. ಜೇಡನು ಬೆಳಗಾಗುವುದರೊಳಗೆ ಲಿಂಗದ ಮೇಲ್ಗಡೆಯಲ್ಲೆಲ್ಲ ಹಂದರದಂತೆಯೂ ತೇರಿನಂತೆಯೂ

ಗೋಪುರದಂತೆಯೂ ತನ್ನ ನೂಲಿನಿಂದ ನೇದು ಅಲಂಕರಿಸುತ್ತಿದ್ದಿತು. ಆನೆಯು ನುಗ್ಗಿ ಅದೆಲ್ಲವನ್ನೂ ಕಿತ್ತುಹಾಕುತ್ತಿದ್ದಿತು. ಇದರಿಂದ ಜೇಡನು ಕೋಪಿಸಿ, ಆನೆಯ ಸೊಂಡಿಲಿನಲ್ಲಿ ನುಗ್ಗಿ, ಮಿದುಳನ್ನು ಕೆರೆದು ಹಾಕಲು, ಆನೆಯೂ ಸತ್ತಿತು; ಜೇಡನೂ ಸತ್ತಿತು. ಆಗ ಶಿವನು ಅವೆರಡರ ಭಕ್ತಿಗೂ ಮೆಚ್ಚಿ ಪ್ರತ್ಯಕ್ಷನಾಗಿ, ನಿಮ್ಮಿಷ್ಟವೇನೆಂದು ಕೇಳಲು, ಸ್ವಾಮಿಾ! ನಮ್ಮ ಹೆಸರಿನ ಜ್ಞಾಪಕಾರ್ಥವಾಗಿ ನೀನು "ತಿರುಕಾಳಹಸ್ತೀಶ್ವರ" ನೆಂಬ ಹೆಸರಿನಿಂದ ವಿಖ್ಯಾತನಾಗಿ, ನಮಗೆ ಮೋಕ್ಷವನ್ನು ಕೊಡಬೇಕೆಂದು ಬೇಡಿದುವು. ಆಗ ಶಂಕರನು ಎಲೈ ಕರಿಯೆ! ನೀನು ಕರಿಕಾಲಚೋಳನಾಗಿ ಹುಟ್ಟು; ಎಲೈ ಕಾಳನೆ! ನೀನು ಕಳಚಂಗನಾಗಿ ಹುಟ್ಟು, ಆ ಜನ್ಮದಲ್ಲಿ ನಿಮ್ಮಿಬ್ಬರಿಗೂ ಮೋಕ್ಷವನ್ನು ಕೊಡುತ್ತೇನೆ, ಎಂದು ಅವೆರಡಕ್ಕೂ ಅಪ್ಪಣೆ ಮಾಡಿದನು. ಅದರಂತೆಯೇ ಅವೆರಡೂ ಚೋಳರಾಜರಾಗಿ ಹುಟ್ಟಿದುವು. ಶಿವಾರ್ಚನೆಗಾಗಿ ಎತ್ತಿಟ್ಟಿದ್ದ ಹೂವನ್ನು ಮೂಸಲಾಗಿ, ನಾಗಕನ್ಯೆಯರ ಶಾಪದಿಂದ ಮಣ್ಣಿನ ಮಳೆಯು ಸುರಿದು, ಅದರಿಂದ ಸತ್ತ ಚೋಳರಾಜನ ಪತ್ನಿಯ ಹೊಟ್ಟೆಯಲ್ಲಿ ಕರಿಕಾಲಚೋಳನು ಹುಟ್ಟಿದನು. ತನ್ನ ಯೌವನದಶೆಯಲ್ಲಿ ಅತ್ಯಂತ ಪ್ರಬಲನಾಗಿ ಸಕಲ ರಾಜರನ್ನೂ ಬರಮಾಡಿಕೊಂಡು ಉಕ್ಕಿಬರುತ್ತಿರುವ ಕಾವೇರೀನದಿಗೆ ಕಟ್ಟೆಯನ್ನು ಕಟ್ಟಿಸುವ ಕಾರ್ಯವನ್ನು ಜರಗಿಸುತ್ತಿದ್ದನು. ಆಗ ಮುಕ್ಕಣ್ಣಚೋಳನೆಂಬ ಅರಸು ಮಾತ್ರ ಅಲ್ಲಿಗೆ ಬರದಿರಲು, ಅವನ ಭಾವಚಿತ್ರವನ್ನು ಬರೆಯಿಸಿ, ಅದರೊಳಗಣ ಕಣ್ಣನ್ನು ತಿವಿಯಲಾಗಿ, ಆ ರಾಜನ ಕಣ್ಣು ಗುಡ್ಡೆಯು ಇದ್ದ ಕಡೆಯಲ್ಲೇ, ಒಡೆದುಹೋಯಿತು. ಇದರಿಂದ ಆತನು ಭೀತನಾಗಿ, ಕರಿಕಾಲಚೋಳನ ಬಳಿಗೆ ಬಂದು, ತನ್ನಪರಾಧಕ್ಕೆ ಕ್ಷಮೆಯನ್ನು ಕೇಳಿಕೊಳ್ಳಲು, ಮುನ್ನಿನಂತೆ ಅವನಿಗೆ ಕಣ್ಣನ್ನು ಕೊಟ್ಟು ಕಟ್ಟೆಯ ಕೆಲಸವನ್ನು ಮಾಡಿಸುತ್ತಿದ್ದನು. ಅತ್ತ ಪ್ರಭಾಕರಚೋಳನೆಂಬ ರಾಜನು ಪ್ರತಿ ದಿನವೂ ಭಂಗಾರದ ಸಾವಿರ ಬಟ್ಟಲುಗಳಲ್ಲಿ ಷಡ್ರಸಾನ್ನಗಳನ್ನು ತುಂಬಿ ಸೂರ್ಯನ ಬಳಿಗೆ ಕಳಿಸಿಕೊಡುತ್ತಿದ್ದನು. ಆತನು ಅದನ್ನೆಲ್ಲ ಉಂಡು ಬಟ್ಟಲುಗಳನ್ನು ಹಿಂದಿರುಗಿ ಕಳಿಸಿಕೊಡುತ್ತಿದ್ದನು. ಅಂತಹ ಪ್ರಭಾಕರಚೋಳನನ್ನು

ಕಟ್ಟೆಯ ಕೆಲಸದ ಬಳಿಗೆ ಬರಮಾಡುವುದಕ್ಕಾಗಿ ಕರಿಕಾಲಚೋಳನು ಹೇಳಿ ಕಳಿಸಲಾಗಿ, ಅವನು ತಿರಸ್ಕರಿಸಿದನು. ಅದನ್ನು ಈತನು ಕೇಳಿ ಶಾಪವನ್ನು ಕೊಡಲಾಗಿ, ಸೂರ್ಯನ ಬಳಿಗೆ ಹೋಗುತ್ತಿದ್ದ ಬಟ್ಟಲುಗಳು ಎಂದಿನಂತೆ ಹೋಗದೆ ನಿಂತುಬಿಟ್ಟುವು. ಆಗ ಸೂರ್ಯನು ತಡೆಯಾಗಿರುವುದರ ಕಾರಣವನ್ನು ತಿಳಿದು, ಪ್ರಭಾಕರಚೋಳನ ಬಳಿಗೆ ತಾನೇ ಇಳಿದು ಬಂದು, "ಅಯ್ಯಾ! ನೀನು ಶಿವಭಕ್ತರೊಡನೆ ವಿರೋಧವನ್ನು ಕಟ್ಟಿಕೊಳ್ಳಬಹುದೆ? ಅದರಿಂದಲೇ ಈ ಆಹಾರದ ಬಟ್ಟಲುಗಳು ನನ್ನ ಬಳಿಗೆ ಬರದಂತಾದುವು; ಈಗಳೇ ನೀನು ಕರಿಕಾಲಚೋಳನ ಬಳಿಗೆ ಹೋಗಿ, ಕಟ್ಟೆಯ ಕೆಲಸವನ್ನು ಮುಗಿಸಿ ಬಾ" ಎಂದು ಹೇಳಿ ಕಳುಹಿಕೊಟ್ಟನು. ಅದೇ ಕಟ್ಟೆಗೆ ಮಣ್ಣನ್ನು ಏರು ಹಾಕುವುದಕ್ಕಾಗಿ ಆ ಪೂರಿನ ಪಿಟ್ಟವ್ವೆ ಯೆಂಬುವಳ ಮನೆಯಲ್ಲಿ ಗುಡದಿಕ್ಕಿಲ್ಲದಿರಲು, ಶಿವನು ಅವಳ ಮನೆಗೆ ಹೋಗಿ, ಆಕೆಯಿಂದ ಕೂಲಿಗಾಗಿ ಆಹಾರವನ್ನು ಪಡೆದು, ಮಣ್ಣನ್ನು ಹೊತ್ತು ಅವಳನ್ನು ಕೈಲಾಸಕ್ಕೆ ಕರೆದುಕೊಂಡು ಹೋದನು. ಆ ಸಂದರ್ಭದಲ್ಲಿ ಶಿವನು ಕೂಲಿಗಾರರಿಗೆ ಸರಿಯಾಗಿ ಕೆಲಸ ಮಾಡದೆ ಇರಲು, ರಾಜನ ಕಡೆಯ ಭಟರು ಬಂದು ತಾಡಿಸಲಾಗಿ, ಆ ಪೆಟ್ಟುಗಳೆಲ್ಲವೂ ರಾಜನ ಪರಿವಾರದವರಿಗೆಲ್ಲ ತಗಲುತ್ತಿರಲು, ಆಗ ಈತನೇ ಶಿವನೆಂದು ತಿಳಿದು, ದೊರೆಯು ಶಂಕರನನ್ನು ಸ್ತೋತ್ರ ಮಾಡಿ ಮೆಚ್ಚಿಸಿ, ತನ್ನ ರಾಜ್ಯದಲ್ಲಿ ಹೊನ್ನಿನ ಮಳೆಯು ಸುರಿವಂತೆ ಮಾಡಬೇಕೆಂತಲೂ, ತನ್ನ ಮನೆಯಲ್ಲಾದ ನೈವೇದ್ಯಪದಾರ್ಥಗಳನ್ನು ಪ್ರತಿದಿನವೂ ನೀನು ಸಲಿಸಬೇಕೆಂತಲೂ ಪ್ರಾರ್ಥಿಸಲು, ಅದರಂತೆಯೇ ಆಗಲಿ ಎಂದು ಶಿವನು ವರವಿತ್ತನು. ಕರಿಕಾಲಚೋಳನು ಕಳಿಸಿಕೊಟ್ಟ ಷಡ್ರಸಾನ್ನವನ್ನು ಪರಿಗ್ರಹಿಸಿ ಶಂಕರನು ತೆರೆಯ ಮರೆಯಲ್ಲಿ ಸವಿಯುತ್ತಿದ್ದನು. ಒಂದಾನೊಂದು ದಿನ ಆಹಾರವನ್ನು ಸಲಿಸದೆ ಶಿವನು ಸುಮ್ಮನಿರಲು, ದೊರೆಯು ಆ ಸಂಗತಿಯನ್ನು ತಿಳಿದು, ದೇವಾಲಯಕ್ಕೆ ಬಂದು, ಕತ್ತಿಯನ್ನು ಹಿಡಿದು ನಿಂತು, ಅದೇಕೆ ಸವಿಯುವುದಿಲ್ಲವೆಂದು ಶಿವನನ್ನು ಕೇಳಲು, ನಾನು ಈ ದಿನ ಮಾದರ ಚೆನ್ನಯ್ಯನೊಡನೆ ಭುಂಜಿಸಿ ಬಂದೆನಾದ ಕಾರಣ ಹೊಟ್ಟೆಯು ತುಂಬಿ, ಇಲ್ಲಿನ ಉಪಹಾರಗಳನ್ನು ಸವಿಯುವುದಕ್ಕಾಗಲಿಲ್ಲವೆಂದು

ಶಂಕರನು ನುಡಿದನು. ನಿನ್ನೊಡನೆ ಊಟ ಮಾಡಿದ ಚೆನ್ನಯ್ಯನೆಂಬ ಆ ಮಹಾತ್ಮನಾರು? ತೋರಿಸಬೇಕೆಂದು ಕೇಳಲು, ಪರಶಿವನು ಈತನನ್ನು ಚೆನ್ನಯ್ಯನ ಮನೆಗೆ ಕರೆದುಕೊಂಡು ಹೋಗಿ ತೋರಿಸಿದನು. ಕರಿಕಾಲನು ಆತನನ್ನು ಕಂಡು ಪಾದಕ್ಕೆ ನಮಸ್ಕರಿಸಿ ಪರಿಪರಿಯಾಗಿ ಸ್ತುತಿಸಿದನು. ಪರಮೇಶನು ಆ ಇರ್ವರಿಗೂ ಕೈಲಾಸವಾಸವನ್ನು ದಯಪಾಲಿಸಿದನು.

ಅತ್ತ ಕಳಚುಂಗಪೆರುಮಾಳೆಂಬ ರಾಜನ ಹೆಂಡತಿಯಾದ ಚೊಲ್ಲಡಿನಾಚಿಯೆಂಬುವಳು ದೇವಾಲಯದಲ್ಲಿ ಶಿವಪೂಜೆಗಾಗಿ ಇಟ್ಟಿದ್ದ ಹೂವನ್ನು ಕಂಡು ತೆಗೆದುಕೊಂಡು ಮೂಸಿ ನೋಡಲು, ತಮ್ಮಡಿಯು ಆಕೆಯ ಅಪರಾಧಕ್ಕಾಗಿ ಅವಳ ಮೂಗನ್ನು ಕತ್ತರಿಸಿದನು. ದೊರೆಗೆ ಈ ಸುದ್ದಿಯು ಮುಟ್ಟಲು, ಮೊದಲು ಹೂವನ್ನು ತೆಗೆದುಕೊಂಡುದು ಹಸ್ತವಾದುದರಿಂದ ಅದನ್ನು ಮೊದಲು ಶಿಕ್ಷಿಸದೆ, ೨ ನೇ ಅಪರಾಧವನ್ನು ಮಾಡಿದ ಮೂಗನ್ನು ಕತ್ತರಿಸಿದುದು ಸರಿಯಲ್ಲನೆಂದು ಹೇಳಿ, ಆಕೆಯ ಕೈಯನ್ನು ತಾನು ಕತ್ತರಿಸಿದನು. ಆಗ ಚಂದ್ರಶೇಖರನು ಆ ಮೂವರಿಗೂ ಕೈಲಾಸ ಪದವಿಯನ್ನು ಕರುಣಿಸಿದನು.

ಸತ್ಯೇಂದ್ರಚೋಳನೆಂಬ ರಾಜನಿಗೆ ಮಂತ್ರಲಕ್ಷ (ರಾಜಶೇಖರ) ನೆಂಬ ಮಗನಿದ್ದನು. ಅವನು ಮಂತ್ರಿಯ ಮಗನಾದ ಮಿತವಚನನೆಂಬ ತನ್ನ ಮಿತ್ರನೊಡನೆ ಹೊಸಕುದುರೆಯನ್ನೇರಿ, ರಾಜವೀಧಿಯಲ್ಲಿ ಉತ್ಸವಗೊಂಡು ಬರುತ್ತಿದ್ದನು. ಆಗ ತಿರುಕುಳನಾಚಿಯೆಂಬ ಭಕ್ತೆಯ ಮಗನಾದ ಶಂಕರನೆಂಬ ಸಣ್ಣ ಹುಡುಗನು ಬೀದಿಯಲ್ಲಾಡುತ್ತಿರಲು, ದೊರೆಮಗನ ಹಿಂದೆ ಬರುತ್ತಿದ್ದ ಮಂತ್ರಿಮಗನ ಕುದುರೆಯ ಕಾಲಿನ ಏಟನಿಂದ ಆ ಹುಡುಗನ ಕತ್ತು ಮುರಿದುಹೋಗಲು, ಅವನು ಸತ್ತನು. ನೀರಿಗೆ ಹೋಗಿದ್ದ ತಾಯಿಯು ಬಂದು, ಮಗನ ಅಳವನ್ನು ನೋಡಿ ಪ್ರಲಾಪಿಸಿ, ಮುಂಡವನ್ನು ಹಿಡಿದು ದೊರೆಯ ಬಳಿಗೆ ಬಂದು ದೂರನ್ನು ಹೇಳಿಕೊಳ್ಳಲು, ರಾಜನು ಮಗನನ್ನೂ ಮಂತ್ರಿಸುತನನ್ನೂ ಕರೆಸಿ ನಿಜಸ್ಥಿತಿಯನ್ನು ವಿಚಾರಿಸುವಲ್ಲಿ, ಮಿತವಚನನು ತನ್ನ ಪರಾಧವೆಂದು ಒಪ್ಪಿಕೊಂಡರೂ, ಮಂತ್ರಲಕ್ಷನು- ತನ್ನ ಮಾತಿನಮೇರೆಗೆ ಕುದುರೆಯ ಸ್ವಾರಿಗೆ ಬಲಾತ್ಕಾರದಿಂದ ಮಂತ್ರಿಪುತ್ರನು ಬಂದ ಕಾರಣದಿಂದಲೂ, ಅವನಿಗಾದ ತಪ್ಪು ತ

ನ್ನದೆಂದು ಮೊದಲೇ ತಾನು ಮಾತು ಕೊಟ್ಟಿದ್ದುದರಿಂದಲೂ, ಈ ಅಪರಾಧದ ಶಿಕ್ಷೆಯು ತನಗಾಗಬೇಕೆಂದು ರಾಜಪುತ್ರನು ನುಡಿದನು. ಹಾಗಾದರೆ ಮಗನ ಶಿರಸ್ಸನ್ನೇ ಕತ್ತರಿಸಿ ತಲೆಯನ್ನು ತಂದು ತೋರಿಸಬೇಕೆಂದು ಸತ್ಯೇಂದ್ರನು ಅಪ್ಪಣೆ ಮಾಡಿದನು. ಅವನು ತನ್ನ ಮಗನು ಮಾಡಿದ ತಪ್ಪಿಗಾಗಿ ದೊರೆಯು ಮಗನನ್ನು ಕೊಲ್ಲಿಸಿ, ಅದನ್ನು ನೋಡಿಕೊಂಡಿರುವುದಕ್ಕಿಂತಲೂ ತನ್ನ ತಲೆಯನ್ನೇ ಮೊದಲು ತರಿದುಕೊಳ್ಳುವುದು ಲೇಸೆಂದು ಯೋಚಿಸಿ, ರಾಜಪುತ್ರನ ಶಿರಶ್ಛೇದನಕ್ಕಾಗಿ ಬೇರೊಬ್ಬ ದೂತನನ್ನು ನೇಮಿಸಿ, ತನ್ನ ಮನೆಯಲ್ಲಿ ತಾನು ಶಿರಶ್ಛೇದನವನ್ನು ಮಾಡಿಕೊಂಡನು. ಮಂತ್ರಲಕ್ಷನು ಶಿವಮಂತ್ರಸ್ಮರಣ ಮಾಡುತ್ತಿರುವ ತನ್ನ ಕೊರಲನ್ನು ಕತ್ತರಿಸಿ ದೂತನ ಕೈಗೆ ಕೊಟ್ಟನು. ಅವನ ಮುಂಡವನ್ನು ದೊರೆಯ ಬಳಿಗೆ ತಂದು ಇಡಲು, ತನ್ನ ಮಗನು ಅದು ಹೇಗೆ ಶಿರಸ್ಸನ್ನು ಕತ್ತರಿಸಿಕೊಂಡನೆಂದು ರಾಜನು ಕೇಳುವಲ್ಲಿ, ದೂತನು—ಇದೋ ಹೀಗೆ ಕತ್ತರಿಸಿಕೊಂಡನೆಂದು ಹೇಳಿ ತೋರಿಸುತ್ತ ತನ್ನ ಕತ್ತನ್ನೂ ಕತ್ತರಿಸಿ ಮುಂದಿಟ್ಟನು. ತನ್ನ ಮಗನ ೧ ತಲೆಗೆ ೨ ತಲೆಗಳು ಬಿದ್ದುದನ್ನು ತಿರುಕುಳನಾಚಿಯು ಕಂಡು, ಹೆಚ್ಚಿನ ತಲೆಗೆ ತನ್ನ ತಲೆಯನ್ನು ಒಪ್ಪಿಸಬೇಕೆಂದು ಯೋಚಿಸಿ, ತಾನೂ ಕೊರಲನ್ನು ಕೊಯ್ದು ಮುಂಡವನ್ನು ಮುಂದಿಟ್ಟಳು. ಅಷ್ಟು ಹೊತ್ತಿಗೆ ಮಂತ್ರಿಯ ಶಿರಸ್ಸೂ ಅಲ್ಲಿಗೆ ಬಂದಿತು. ೫ ಶಿರಸ್ಸುಗಳೂ ಪಂಚಾಕ್ಷರವನ್ನು ಜಪಿಸುತ್ತಿದ್ದುವು. ಮಂತ್ರಿಯು ತನ್ನ ಕತ್ತನ್ನು ನಿಷ್ಕಾರಣವಾಗಿ ಕತ್ತರಿಸಿಕೊಂಡನಾದಕಾರಣ, ಅವನ ಶಿರಸ್ಸಿಗೆ ತನ್ನ ತಲೆಯು ಸಮನಾಗಲಿ ಎಂದು ಹೇಳಿ ದೊರೆಯು ತನ್ನ ಕೊರಲನ್ನು ಕತ್ತರಿಸಿ ಮುಂದಿಟ್ಟನು. ಅಷ್ಟರಲ್ಲಿ ಮಿಕವಚನನು ಅಲ್ಲಿಗೆ ಬಂದು, ಈ ಅನರ್ಥಕ್ಕೆಲ್ಲ ತನ್ನ ಕುದುರೆಯು ತುಳಿದುದೇ ಮೂಲವಾದುದರಿಂದ, ನಾನು ಮೊದಲೇ ಸಾಯದಿದ್ದುದು ನನ್ನ ತಪ್ಪು ಎಂದು ಯೋಚಿಸಿ, ತನ್ನ ಶಿರಸ್ಸನ್ನೂ ಕಡಿದಿಕ್ಕಿದನು. ಈ ಸುದ್ದಿಯು ರಾಣಿವಾಸಕ್ಕೆ ಮುಟ್ಟಲು, ರಾಜನ ಹೆಂಡಿತಿ ಅಮೃತವತಿಯೂ, ಯುವರಾಜನ ಹೆಂಡಿತಿ ಸರ್ವಮಂಗಳೆಯೂ, ಪತಿನೋಹಿಮಂತ್ರಿಯ ಪತ್ನಿಯೂ, ಅವಳ ಸೊಸೆಯೂ ಸಹ ಬಂದು ತಮ್ಮತಮ್ಮ ಗಂಡಂದಿರ ಶಿರಸ್ಸಿನ ಮುಂದೆ

ನಿಂತು, ತಮ್ಮ ಕುತ್ತಿಗೆಗಳನ್ನು ಕತ್ತರಿಸುತ್ತಿರುವಷ್ಟರಲ್ಲಿ, ಪರಶಿವನು ಪ್ರತ್ಯಕ್ಷನಾಗಿ, ಎಲ್ಲರಿಗೂ ಪ್ರಾಣ ದಾನ ಮಾಡಿ ಕೈಲಾಸಕ್ಕೆ ಕರೆದು ಕೊಂಡು ಹೋದನು.

ಕರವೂರೆಂಬ ಪಟ್ಟಣದಲ್ಲಿ ಧರ್ಮಚೋಳನೆಂಬ ರಾಜನಿದ್ದನು. ಅವನಿಗೆ ಭೀಮಚೋಳನೆಂಬ ಮಗನಿದ್ದನು. ಅವನು ಒಂದು ದಿನ ರಥವನ್ನೇರಿ ಹೋಗುತ್ತಿರಲು, ಅದರ ಚಕ್ರಕ್ಕೆ ಒಂದು ಎಳೆಗರುವು ಸಿಕ್ಕಿ ಸತ್ತಿತು. ಅದನ್ನು ದೊರೆಯು ಕೇಳಿ, ಮಗನನ್ನು ಕರೆತರಿಸಿ, ಅವನಪರಾಧಕ್ಕಾಗಿ ಅವನ ಕತ್ತನ್ನೇ ಛೇದಿಸಿದನು. ಆಗ ಶಿವನು ಪ್ರತ್ಯಕ್ಷನಾಗಿ ನಿನ್ನ ಇಷ್ಟವೇನೆಂದು ಕೇಳಲು, ನತ್ತ ಕರುವಿಗೆ ಪ್ರಾಣದಾನಮಾಡೆಂದು ಪ್ರಾರ್ಥಿಸಲು, ಹರನು ಆತನ ಮನೋಭಾವಕ್ಕೆ ಸಂತೋಷಿಸಿ, ರಾಜಪುತ್ರನಿಗೂ ಕರುವಿಗೂ ಪ್ರಾಣದಾನಮಾಡಿ, ಎಲ್ಲರನ್ನೂ ಕೈಲಾಸಕ್ಕೆ ಕರೆದೊಯ್ದನು.

ಉತ್ತುಂಗಚೋಳನೆಂಬ ರಾಜನು ಶಿವನ ವರದಿಂದ ಐವಡಿಚೋಳನೆಂಬ ಮಗನನ್ನು ಪಡೆದಿದ್ದನು. ಅವನು ಒಂದು ದಿನ ಬೀದಿಯಲ್ಲಿ ಆಡುತ್ತಿರುವಾಗ ಮದವೇರಿದ ಆನೆಯು ಓಡಿಬರುತ್ತಿರಲು, ಅದನ್ನು ತನ್ನ ಅಂಗುಷ್ಠದಿಂದ ಮೆಟ್ಟಿ ಕೊಂದು ಉರುಳಿಸಲು, ಈತನ ಶೌರ್ಯವನ್ನು ಉಳಿದ ರಾಜರೆಲ್ಲರೂ ಕೇಳಿ ಭಯಪಟ್ಟು ಪಲಾಯನಗೊಂಡರು. ಇದನ್ನು ಚೋಳನು ಕೇಳಿ, ನಾನು ಅವರನ್ನೋಡಿಸಿ ಮಹಾಪರಾಧ ಮಾಡಿದೆನೆಂದು ಬಗೆದು, ತತ್ಪರಿಹಾರಕ್ಕಾಗಿ ಒಂದು ಕೋಟಿ ಶಿವಲಿಂಗವನ್ನು ಪ್ರತಿಷ್ಠಿಸಿ ಕೈಲಾಸವನ್ನು ಪಡೆದನು.

ರಾಜೇಂದ್ರಚೋಳನೆಂಬ ರಾಜನು ಚೋಳದೇಶದ ಪಾಂಡ್ಯದೇಶದ ಇತರ ರಾಜರನ್ನೆಲ್ಲ ಕೂಡಿಕೊಂಡು ಪ್ರತಿ ದಿನವೂ ದೇವೇಂದ್ರನ ಸಭೆಗೆ ಹೋಗಿಬರುತ್ತಿರಲು, ಒಂದು ದಿನ ಸಭೆಯಿಂದ ಬರುವಾಗ ಬಾಗಿಲಲ್ಲಿ ಬಿಟ್ಟಿದ್ದ ಹಾವುಗೆಗಳಮೇಲೆ ತನ್ನ ಕುದುರೆಯನ್ನು ದಾಟಿಸಿಕೊಂಡು ಬಂದನು. ಇವನ ಅಹಂಕಾರವನ್ನು ದೇವೇಂದ್ರನು ಕಂಡು, ಅವನ ರಾಜ್ಯದಲ್ಲಿ ಮಳೆಯನ್ನೇ ಹುಯ್ಯದಂತೆ ನಕ್ಷತ್ರಗಳಿಗೆ ಕಟ್ಟುಮಾಡಿದನು. ತನ್ನ ದೇಶದಲ್ಲಿ ಅನಾವೃಷ್ಟಿಯುಂಟಾದುದನ್ನು ರಾಜೇಂದ್ರನು ಕಂಡು, ಅಮರಾವತಿಗೆ ಹೋಗಿ ಎಲ್ಲ ನಕ್ಷತ್ರಗಳನ್ನೂ ಇಂದ್ರನನ್ನೂ ಹಿಡಿತಂದು ಸೆರೆ

ಯಲ್ಲಿಟ್ಟನು. ಆಗ ಇಂದ್ರನ ದಂಡು ದೊರೆಯ ಮೇಲೆ ಮುತ್ತಿತು. ಆಗ ಚೊಕ್ಕನಯ್ನಾರೆಂಬ ಶರಣನು ತನ್ನ ಕ್ರಿಯಾಸಿದ್ಧಿಯಿಂದ ನರಿಯ ಹಿಂಡನ್ನು ಕುದುರೆಗಳನ್ನು ಮಾಡಿಕೊಡಲು, ಅವುಗಳ ಸಹಾಯದಿಂದ ರಾಜೇಂದ್ರಚೋಳನು, ದೇವಸೇನೆಯನ್ನೆಲ್ಲ ಸೋಲಿಸಿದನು. ಇಂದ್ರನು ನಾಚಿ, ಎಂದಿನಂತೆ ಅವನ ರಾಜ್ಯದಲ್ಲಿ ಮಳೆ ಹುಯ್ದುಕೊಂಡಿರುವಂತೆ ನಕ್ಷತ್ರಗಳಿಗೆ ಬೆಸಸಿದನು. ಇದೇ ರಾಜೇಂದ್ರಚೋಳನು ರೇವಣಸಿದ್ಧೇಶನಿಗೆ ತನ್ನ ಕುಮಾರಿಯನ್ನು ಕೊಟ್ಟು, ಶಿವಭಕ್ತರಿಗೆ ತನ್ನ ರಾಜ್ಯಸಂಪತ್ತನ್ನೆಲ್ಲ ದಾನ ಮಾಡಿ, ಕೈಲಾಸವನ್ನು ಹೊಂದಿದನು. ಪಾಂಡ್ಯಭೂಪನು ತನ್ನ ರಾಷ್ಟ್ರವನ್ನು ಚೊಕ್ಕನೈನಾರರ ಸೇವೆಗಾಗಿ ಒಪ್ಪಿಸಿ, ಶಿವಲೋಕವನ್ನು ಹೊಕ್ಕನು.

ತಿರುನೀಲಕಂಠನೆಂಬ ಶರಣನು ಜಡೆಯನೈನಾರರಿಗೂ ಯಸ್ಯಜ್ಞಾನಿದೇವಿಗೂ ಮಗನಾಗಿ ಹುಟ್ಟಿ, ನರಸಿಂಗಮೊನೆಯಾರರಿಗೂ ಸಾಬಿದೇವಿಗೂ ಸಾಕುಮಗನಾಗಿ, ಶಂಕಿಲೆ ಪರವೆ ಯೆಂಬ ಭಕ್ತೆಯರನ್ನು ವರಿಸಿ, ಆ ಪರವೆಯೆಂಬ ಮೋಹಪತ್ನಿಯ ಕುಚಕಲಶದಲ್ಲಿ ಶಿವನನ್ನು ನೆನೆದು ಮಾತನಾಡಿಸಿ, ದಿನ ಪ್ರೊಂದಕ್ಕೆ ಒಂದು ಬೊಗಸೆಯ ಹೊನ್ನನ್ನು ಶಂಕರನಿಂದ ಪಡೆಯುತ್ತ, ಸೋಮಾಸಿಮಾರಯ್ಯನ ಪೂಜಾಕಾರ್ಯಕ್ಕಾಗಿ ಶಿವನನ್ನು ಅವನ ಮನೆಗೆ ಕಳಿಸಿಕೊಟ್ಟು, ಪೆರುಮಾಳಿಯಕುರುಂಬರನ್ನು ಜತೆಯಲ್ಲಿ ಕೂಡಿಕೊಂಡು ಕೈಲಾಸವನ್ನು ಸೇರಿದನು.

ಚೇರಮರಾಜನು, ಶರಣರಲ್ಲಿ ವಿಧೇಯತೆಯಿಲ್ಲದ ನಂಬ್ಯಣ್ಣನನ್ನು ಶಿವನು ಕೈಲಾಸಕ್ಕೆ ಕರೆದುಕೊಂಡುಹೋದನೆಂಬ ಸುದ್ದಿಯನ್ನು ಕೇಳಿ, ತನ್ನ ಬೊಕ್ಕಸವನ್ನೆಲ್ಲ ತಿರುನೀಲಕಂಠರಿಗೆ ಒಪ್ಪಿಸಿ, ಕೈಲಾಸಕ್ಕೆ ದಾಳಿಯಿಟ್ಟು ನಡೆದು ಶಿವನನ್ನು ಮೆಚ್ಚಿಸಿ ಸಾಲೋಕ್ಯವನ್ನು ಪಡೆದನು.

ಮೊನೆಯಾಧರನೆಂಬ ಚೋಳನು ರಾಜ್ಯವನ್ನಾಳುಕೊಂಡಿರುವಾಗ, ಒಬ್ಬ ಜಂಗಮನು ತನ್ನ ಪತ್ನಿಯು ಅಳಿದ ಶೋಕದಿಂದ, ತಾನೂ ಮೃತನಾಗುವುದಕ್ಕೆ ಸಿದ್ಧನಾಗಿರಲು, ದೊರೆಯು ಆ ವಾರ್ತೆಯನ್ನು ಕೇಳಿ ಮರುಗಿ, ತನ್ನ ಸತಿಯನ್ನೇ ಆ ಜಂಗಮನಿಗೆ ಒಪ್ಪಿಸಿ, ವಸ್ತ್ರಾಭರಣಾದಿಗಳನ್ನಿತ್ತು, ಸೇವಿಸಿ, ಶಿವಾನುಗ್ರಹದಿಂದ ಕೈಲಾಸವನ್ನು ಸೇರಿದನು.

ಕೈವಲ್ಯಚೋಳನೆಂಬ ಭೂಪತಿಯು ಶತ್ರುಗಳಮೇಲೆ ದಂಡೆತ್ತಿ ಹೋಗಿ ಮೂರು ವರ್ಷ ಕಾದಾಡುತ್ತಿರಲು, ತನ್ನ ದೇಶಕ್ಕೆ ಕ್ಷಾಮವು ತಟ್ಟಿತು. ಆಗ ಅವನ ಪ್ರಜೆಯಾದ ಶ್ರೀಮಂತಸೆಟ್ಟಿಯೊಬ್ಬನು ತನ್ನಲ್ಲಿದ್ದ ದ್ರವ್ಯವನ್ನೆಲ್ಲ ಪ್ರಜೆಗಳಿಗೆ ಕೊಟ್ಟು ಕಾಪಾಡಲು, ಅದನ್ನು ದೊರೆಯು ಕಂಡು, ಆ ಸೆಟ್ಟಿಗೇ ತನ್ನ ರಾಜ್ಯಪಟ್ಟವನ್ನು ಕಟ್ಟಿ, ನೀನೇ ಈ ದೇಶವನ್ನೆಲ್ಲ ಸಲಹಿಕೊಂಡಿರೆಂದು ಬಿನ್ನೈಸಲು, ಅವನು ನನಗೆ ಬೇಡವೆಂದು ತಿರಸ್ಕರಿಸಿದನು. ಶಂಕರನು ಅವರೀರ್ವರಿಗೂ ಸಾಲೋಕ್ಯಪದವಿಯನ್ನು ದಯೆಪಾಲಿಸಿದನು.

ಮನುಜೇಂದ್ರಚೋಳನೆಂಬ ನರಪತಿಯು, ಪೂಸಲನೆಂಬ ಭಕ್ತೋತ್ತಮನು ತನ್ನ ಮನಸ್ಸಿನಲ್ಲೇ ದೇವಾಲಯವನ್ನು ನಿರ್ಮಿಸಿ, ಅಲ್ಲಿಗೆ ಶಿವನನ್ನು ಬಿಜಯಮಾಡಿಸಿ, ಆರಾಧಿಸುತ್ತಿರುವುದನ್ನು ತಿಳಿದು, ತಾನೂ ಅಸದೃಶವಾದ ಶಿವಾಲಯವನ್ನು ಕಟ್ಟಿಸಿ, ಲಿಂಗವನ್ನು ಪ್ರತಿಷ್ಠಿಸಿ, ಮಜ್ಜನಕ್ಕೆ ಎಣ್ಣೆಯನ್ನು ತೆಗೆವುದಕ್ಕಾಗಿ ಎಳ್ಳನ್ನು ಒಣಹಾಕಿರಲು, ಮುನಿರಾಜನೊರ್ವನು ಬಂದು ಆ ಎಳ್ಳನ್ನು ತಿಂದನು. ಕಾವಲುಗಾರರು ಆತನನ್ನು ಹಿಡಿತಂದು ದೊರೆಯ ಮುಂದೆ ನಿಲ್ಲಿಸಿ, ಅವನ ತಪ್ಪನ್ನು ಬಿನ್ನೈಸಲು, ಅದೇತಕ್ಕೆ ಹೀಗೆ ಮಾಡಿದೆ ಯೆಂದು ದೊರೆಯು ಕೇಳುವಲ್ಲಿ— ಸದಾಶಿವನಿಗೆ ಮಗನಾಗಿ ಹುಟ್ಟುವುದಕ್ಕೋಸುಗ ಹೀಗೆ ಮಾಡಿದೆನೆಂದು ಹೇಳಿದನು. ಹಾಗಾದರೆ ನಾನೂ ಶಿವಭಕ್ತರ ಮಗನಾಗಿ ಹುಟ್ಟುವುದಕ್ಕೆ ಇದು ಒಳ್ಳೆಯ ಉಪಾಯವೆಂದು ದೊರೆಯು ಯೋಚಿಸಿ, ಅವನ ಬಾಯೊಳಗಿದ್ದ ಎಳ್ಳಿನ ಕಾಳನ್ನೇ ತೆಗೆದುಕೊಂಡು ತಾನು ತಿಂದನು. ಇವರೀರ್ವರೂ ಎಳ್ಳನ್ನು ಕಿತ್ತಾಡುವಾಗ ಚೆಲ್ಲಿದ ಕಾಳನ್ನು ಶಿವನು ಭಕ್ತವೇಷದಿಂದ ಬಂದು ಆಯ್ದು ತಿನ್ನುತ್ತಿರಲು, ಇವರಿಬ್ಬರೂ—ಅದೇಕೆ ಎಳ್ಳನ್ನಾರಿಸಿಕೊಂಡು ತಿನ್ನುತ್ತೀಯೆ ? ಎಂದು ಆತನನ್ನು ಕೇಳಲು, ಭಕ್ತೋತ್ತಮರಾದ ನಿಮ್ಮಿಬ್ಬರಿಗೂ ಮಗನಾಗಿ ನಾನು ಹುಟ್ಟುವುದಕ್ಕಾಗಿ ತಿನ್ನುತ್ತೇನೆ, ಎಂದು ಉತ್ತರ ಕೊಟ್ಟು, ಅವರೀರ್ವರ ಭಕ್ತಿಗೂ ಮೆಚ್ಚಿ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದುಕೊಂಡು ಹೋದನು.

ವೀರಚೋಳನೆಂಬ ಭೂಪಾಲನು ಪ್ರತಿ ದಿನವೂ ಸಾವಿರ ತಾವರೆ

ಹೂವುಗಳಿಂದ ಶಿವನನ್ನು ಪೂಜಿಸುತ್ತ, ಒಂದುದಿನ ಒಂದು ಹೂವು ಸಾಲ ದಿರಲು, ತನ್ನ ಕೊರಳನ್ನೇ ಕತ್ತರಿಸಿ, ಶಿರಃಕಮಲವನ್ನು ಸ್ವಾಮಿಗೆ ಅ ರ್ಚಿಸಿ, ಶಿವಪುರವನ್ನು ಪಡೆದನು.

ಪಗಲ್ಚೋಳನು ತನ್ನ ಶತ್ರುಗಳ ಹೆಣವನ್ನು ಹೇರಿ ತಂದ ಬಂಡಿ ಯಲ್ಲಿ, ರಕ್ತದಿಂದ ಜಡೆ ಕಟ್ಟಿದ್ದ ಮುಡಿಯ ತಲೆಯೊಂದನ್ನು ಕಂಡು, ಅ ದು ಜಂಗಮನ ಶಿರಸ್ಸೆಂದು ತಿಳಿದು, ಅದನ್ನು ಕತ್ತರಿಸಿದ ಅಪರಾಧಕ್ಕಾ ಗಿ ತನ್ನ ತಲೆಯನ್ನೇ ಕಡಿದು ಶಿವನ ಮೆಚ್ಚುಗೆಯಿಂದ ಕೈಲಾಸವನ್ನು ಪಡೆ ದನು. ವೀರಪಾಂಡ್ಯನು, ಶಿವನಿಗೆ ಪರ್ವತರಾಜನು ತನ್ನ ಮಗಳನ್ನು ಕೊಟ್ಟನೆಂಬ ಸುದ್ದಿಯನ್ನು ಕೇಳಿ, ತಪಸ್ಸಿನಿಂದ ತನ್ನ ಹೆಂಡಿತಿಯ ಗರ್ಭದಲ್ಲಿ ಪಾರ್ವತಿಯನ್ನು ಮಗಳಾಗಿ ಪಡೆದು, ಈಶ್ವರನಿಗೆ ಮದುವೆ ಮಾಡಿಕೊಟ್ಟು, ತನ್ನ ರಾಜ್ಯಕೋಶವನ್ನೆಲ್ಲ ಶಿವಶರಣರಿಗೆ ದಾನ ಮಾಡಿ, ಕೈಲಾಸವನ್ನು ಸೇರಿದನು.

ನೃಪಕುಲೋತ್ತುಂಗಚೋಳನು ತನ್ನ ಪಟ್ಟಣದಲ್ಲಿ ಒಬ್ಬ ರೋಗಿ ಯೂ ಇರದಂತೆ ಮಾಡಿರಬೇಕೆಂಬ ನಿಯಮವುಳ್ಳವನಾಗಿರಲು, ಒಂದು ದಿನ ಕುಷ್ಠರೋಗದ ಜಂಗಮನೊಬ್ಬನು ಬಂದುದನ್ನು ಕಂಡು, ತನ್ನ ವ್ರತ ಕ್ಕೆ ಭಂಗವಾಯ್ತೆಂದು ಚಿಂತಿಸಿ, ತನ್ನ ತಲೆಯನ್ನೇ ಕತ್ತರಿಸಿಕೊಂಡು ಶಿವಾನುಗ್ರಹದಿಂದ ಶಿವಲೋಕವನ್ನು ಪಡೆದನು.

ಶ್ರೀ ಕಾಳಿಯೆಂಬ ಪಟ್ಟಣದಲ್ಲಿ ಜನಿಸಿದ್ದ ತಿರುಜ್ಞಾನಸಂಬಂಧಿಗ ಳು ಉತ್ತುಂಗಚೋಳರಾಜನಿಗೆ ಗುರುವಾಗಿದ್ದರು. ಈ ಚೋಳನ ಮ ಗಳಾದ ಮಂಗಾಯಕ್ಕರಸಿಯು, ಜೈನಮತದವನಾದ ಮಧುರೆಯ ಕೂ ನಪಾಂಡ್ಯನಿಗೆ ಹೆಂಡಿತಿಯಾಗಿರಲು, ಒಂದಾನೊಂದು ವೇಳೆ ಆಕೆಯು ತ ನ್ನ ತೌರುಮನೆಯ ಗುರುವಾದ ತಿರುಜ್ಞಾನಸಂಬಂಧಿಗಳನ್ನು ತನ್ನ ಗಂ ಡನ ಪಟ್ಟಣಕ್ಕೆ ಬರಮಾಡಲು, ಈ ಗುರು ಅಲ್ಲಿನ ಜೈನರನ್ನೆಲ್ಲ ಸಭೆಯ ಲ್ಲಿ ವಾದದಿಂದ ಜೈಸಿದನು. ವಿಧೇಯರಾದವರಿಗೆಲ್ಲ ಶಿವದೀಕ್ಷೆಯನ್ನು ಮಾ ಡಿದನು. ಪ್ರತಿಭಟಿಸಿದವರನ್ನೆಲ್ಲ ದೊರೆಯ ಮಂತ್ರಿಯಾದ ಕುಲಚ್ಚರಿ ಯರು ಶೂಲಕ್ಕೆತ್ತಿಸಿದನು. ರಾಜನೂ ಶಿವದೀಕ್ಷೆಗೊಂಡನು. ದೊರೆಯ ಕೂನಾಗಿದ್ದ ಬೆನ್ನು ಗುರುವಿನ ಅನುಗ್ರಹದಿಂದ ನೆಟ್ಟಗಾಯಿತು. ಬಳಿ

ಕ ಪಾಂಡ್ಯನು ತನ್ನ ಹೆಂಡಿತಿಯ ಹೊಟ್ಟೆಯಲ್ಲಿ ಮಗಳನ್ನು ಪಡೆದು ಅವಳನ್ನು ಶಿವನಿಗೆ ಸಮರ್ಪಿಸಿ, ತಿರುಜ್ಞಾನಸಂಬಂಧಿಗಳೂ ತಾನೂ ತನ್ನ ಹೆಂಡತಿಯು ಸಹ ಕೈಲಾಸವನ್ನು ಹೊಂದಿದರು.

ತಿರುವಾವಲೂರಿನಲ್ಲಿದ್ದ ತಿರುವಲಿನಾಚಿಯೆಂಬ ಭಕ್ತೆಯು, ತನ್ನ ತಮ್ಮನಾದ ಪಾರ್ಶ್ವನಾಥಪಂಡಿತನೆಂಬುವನಿಗೆ ಉದರಶೂಲರೋಗವು ಪ್ರಾಪ್ತವಾಗಿದ್ದಾಗ್ಗೆ, ಶಿವಭಕ್ತಿಮಾರ್ಗವನ್ನು ಹೇಳಿ, ವಿಭೂತಿರುದ್ರಾಕ್ಷಧಾರಣಗಳಿಂದ ಆ ರೋಗವನ್ನು ಹೋಗಲಾಡಿಸಿ, ತನ್ನ ಗುರುವಾದ ವಾಗೀಶನೈನಾರಿಗೆ ತಮ್ಮನನ್ನು ಶಿಷ್ಯನನ್ನಾಗಿ ಮಾಡಿ, ಶಿವದೀಕ್ಷೆಗೊಳಿಸಿದಳು. ಆತನು ತಿರುವಾಕರೀಶ್ವರನೆಂಬ ಹೆಸರಿನಿಂದ ಶಿವಭಕ್ತನಾಗಿದ್ದು ಕಡೆಗೆ ಅಕ್ಕನೊಡನೆ ಕೈಲಾಸವನ್ನು ಹೊಂದಿದನು.

ಸೌಂದರನಂಬ್ಯಣ್ಣನು ಭಕ್ತರಲ್ಲಿ ಅಹಂಕಾರವನ್ನು ತೋರಿಸಿದ ಕಾರಣ, ವೀರಮಿಂಡದೇವನು ಆತನಿಗೆ ಬಹಿಷ್ಕಾರವನ್ನು ಕೊಟ್ಟನು. ಶಿವನ ಉಪದೇಶದಿಂದ ನಂಬ್ಯಣ್ಣನು ಶಿವಶರಣರನ್ನು ಸ್ತೋತ್ರಮಾಡಲು, ಅವರಿಬ್ಬರನ್ನೂ ಶಿವನು ತನ್ನ ಲೋಕಕ್ಕೆ ಕರೆದೊಯ್ದನು. ನಂಬ್ಯಣ್ಣನು ಸೂಳೆಯ ಮನೆಗೆ ಶಿವನನ್ನು ದೂತನನ್ನಾಗಿ ಮಾಡಿ ಕಳಿಸಿಕೊಟ್ಟದ್ದನಾದಕಾರಣ, ಅವನು ಪರಮಪಾತಕಿ ಯೆಂದು ಆವನ ದರ್ಶನವನ್ನು ಮಾಡದೆ ಇದ್ದ ಕಲಿಕಾಮರು, ಶಿವನು ಬೋಧನೆಯನ್ನು ಮಾಡಿದರೂ ತಮ್ಮ ಶೂಲರೋಗಚಿಕಿತ್ಸೆಗಾಗಿ ಸುಂದರನನ್ನು ಬರಮಾಡಿಕೊಳ್ಳದೆ ಪ್ರಾಣವನ್ನೇ ಕಳೆದುಕೊಂಡು ಕೈಲಾಸವನ್ನು ಪಡೆದರು.

ತಿರುನೀಲಕಂಠರು ತನ್ನ ಪತ್ನಿಯೊಡನೆ ೪೦ ವರ್ಷಗಳ ವರೆಗೆ ಮಾತನಾಡದಿರಲು, ಶಿವನು ಜಂಗಮವೇಷದಿಂದ ಬಂದು, ಒಂದುಭಿಕ್ಷಾಪಾತ್ರೆಯನ್ನು ಕೊಟ್ಟು ಹೋಗಿ, ಅದನ್ನಿಲ್ಲದಂತೆ ಮಾಡಿ, ಮತ್ತೆ ಬಂದು ಕೇಳಿ, ಕಡೆಗೆ ಗಂಡಹೆಂಡಿರನ್ನು ಒಂದುಗೂಡಿಸಿ, ಅಂತ್ಯದಲ್ಲಿ ಶಿವಲೋಕವನ್ನಿತ್ತನು. ಒಂದು ಕೌಪೀನವನ್ನು ಜಂಗಮವೇಷದ ಶಿವನು ತನ್ನಲ್ಲಿ ಇಟ್ಟು ಹೋಗಿದ್ದು, ಅದು ಮಾಯವಾಗಲು, ಅಮರನೀತಿಗಳು ಕೌಪೀನದ ತೂಕಕ್ಕೆ ತನ್ನನ್ನೂ ತನ್ನ ಸತೀಸುತಾದಿಗಳನ್ನೂ ತೂಗಿ ಕೊಟ್ಟು ಶಿವನ ಮೆಚ್ಚುಗೆಯನ್ನು ಪಡೆದರು. ಕರವೂರಿನ ಇರಿವತ್ತನೆಂಬ ಶರ

ಣನು ಭಕ್ತನನ್ನು ವಧಿಸಿದ ಆನೆಯನ್ನು ಕೊಂದು, ಮರಳಿ ಪ್ರಾಣವನ್ನು ಕೊಟ್ಟು ಶಿವಲೋಕವನ್ನೈದಿದನು. ಅಪ್ಪಾವಗೆಯನಾರು ಕೇಳಿದ ಜಂಗ ಮನಿಗೆ ತನ್ನ ಹೆಂಡತಿಯನ್ನು ಕೊಟ್ಟು, ಶಿವಾನುಗ್ರಹವನ್ನು ಪಡೆದರು. ತಿರುಕುರುಪೆತ್ತೊಂಡರೆಂಬಶರಣರು ಜಂಗಮವೇಷದ ಶಿವನಬಟ್ಟೆಯನ್ನು ಸಂಧ್ಯಾಕಾಲದೊಳಗೇ ಒಗೆದು ಮಡಿ ಮಾಡಿ ಕೊಡುತ್ತೇನೆಂದು ತೆಗೆದು ಕೊಂಡು, ದೊಡ್ಡಮಳೆಯಿಂದ ಆ ಅವಧಿಯೊಳಗೆ ತಂದುಕೊಡಲಿಕ್ಕಾಗದಿರ ಲು, ತನ್ನ ತಲೆಯನ್ನೇ ಕಲ್ಲಿನಮೇಲೊಗೆದು, ಶಿವನ ಮೆಚ್ಚಿಗೆಯನ್ನು ಪಡೆ ದರು. ತಿರುಮೂಲರೆಂಬ ಶರಣರು, ಗೋಪಾಲಕನೊಬ್ಬನು ಅಳಿದಿದ್ದುದ ರಿಂದ ಸುತ್ತಲೂ ಬಳಸಿ ವ್ಯಸನಪಡುತ್ತಿದ್ದ ಗೋವುಗಳನ್ನು ನೋಡಿ ಮ ರುಗಿ, ಪರಕಾಯಪ್ರವೇಶವಿದ್ಯೆಯಿಂದ ಆ ಗೊಲ್ಲನ ಶವದಲ್ಲಿ ಪ್ರವೇಶಿಸಿ, ಎ ದ್ದು, ಕಡೆಗೆ ತಪಶ್ಚರ್ಯೆಯಿಂದ ಶಿವಲೋಕವನ್ನು ಪಡೆದರು. ತಿರುನಾಳ್ಪೋ ವರೆಂಬ ಶರಣರು ತಮ್ಮ ಚಂಡಾಲಜನ್ಮಸಂಬಂಧದಿಂದ ಚಿದಂಬರನಾಥಾಲ ಯಪ್ರವೇಶಕ್ಕೆ ಅವಕಾಶವಿಲ್ಲದಿರಲು, ಶಿವನಪ್ಪಣೆಯಮೇರೆ ಅಗ್ನಿಪ್ರವೇಶ ದಿಂದ ಪರಿಶುದ್ಧರಾಗಿ, ಶಿವದರ್ಶನ ಮಾಡಿ, ಕೈಲಾಸವನ್ನು ಹೊಂದಿದರು. ಇಳೆಯಾಂಡಗುಡಿಮಾರರು ನಡುರಾತ್ರಿಯಲ್ಲಿ ತನ್ನ ಮನೆಗೆ ಬಂದ ಜಂಗ ಮನಿಗೆ ಗದ್ದೆಯಲ್ಲಿ ಮಳೆ ನೀರಿನ ಮೇಲೆ ತೇಲುತ್ತಿದ್ದ ಮೊಳೆತ ಬತ್ತವ ನ್ನಾದು ತಂದು, ಅಡಿಗೆ ಮಾಡಿಕ್ಕಿಸಿ, ತೃಪ್ತಿಪಡಿಸಿದರು. ಶಿವಚಿಹ್ನಧಾರಿಗ ಳನ್ನೆಲ್ಲ ಶಿವನೆಂಬ ಭಾವದಿಂದ ಕಾಣುತ್ತಿದ್ದ ಸೇದಿರಾಜನು ಕಪಟಜಂಗ ಮನು ತನ್ನನ್ನು ಕತ್ತರಿಸುತ್ತಿದ್ದರೂ ತಲೆಯೊಡ್ಡಿದನು. ಏನಾಧಿನಾಥ ನು ತನ್ನ ಶತ್ರುರಾಜನು ಜಂಗಮವೇಷದಿಂದ ಬರಲು, ಅವನ ಪಾದಕ್ಕೆ ಮಣಿದು, ಆ ಕಪಟಜಂಗಮನ ಕತ್ತಿಯೇಟಿನಿಂದಲೇ ಮೃತನಾದನು. ಕೊಳಲನ್ಯನಾರು ಕಕ್ಕೆಯಮರವನ್ನೇ ಶಿವನೆಂದು ಭಾವಿಸಿದನು. ವಲ ಗಾಂಡಮೂರ್ತಿಯು ಮೊಳಕೈಯಿಂದ ಶ್ರೀಗಂಧವನ್ನು ತೇದು ಶಿವನಿಗೆ ಸ ಮರ್ಪಿಸಿದನು. ಕಾರಿಕಾಲ್ಯೆ ಎಂಬ ಊರಿನಲ್ಲಿದ್ದ ಪುನೀತವತಿಯು ಜಿನ ನಾದ ತನ್ನ ಗಂಡನಿಗೆ ಶಿವದತ್ತವಾದ ಮಾವಿನ ಹಣ್ಣನ್ನು ಕೊಟ್ಟು ಶಿವ ಭಕ್ತನನ್ನು ಮಾಡಿದಳು. ಚಂಡೇಶನು ಲಿಂಗದ್ರೋಹಿಯಾದ ತಂದೆಯ ಕಾಲನ್ನು ಕಡಿದುಹಾಕಿದನು. ನಕ್ಕನಯ್ನಾರ ಹೆಂಡತಿ ನೀಲಕ್ಕನು ಲಿಂ

ಗದಮೇಲಣ ಜೇಡರ ಹುಳುವನ್ನು ಉರುಬಿ ನೂಕಿದಳು. ಕಣ್ಣಪ್ಪನು ಶಿವಲಿಂಗಕ್ಕೆ ತನ್ನ ಕಣ್ಣನ್ನೇ ಕಿತ್ತು ಅರ್ಪಿಸಿದನು. ನಾಟ್ಯನಮಿತ್ತಾಂಡಿಯು ಶಿವನ ದೇಹವಕ್ರತೆಯನ್ನು ಪರಿಹರಿಸುವುದಕ್ಕೆ ತನುವನ್ನೇ ಸಮರ್ಪಿಸಿದನು. ರುದ್ರಪಶುಪತಿಯು ಶಿವನ ಕಂಠದ ವಿಷವನ್ನು ನೋಡಿ ಭಯಪಟ್ಟು ಪ್ರಾಣವನ್ನು ಕಳೆದುಕೊಳ್ಳಲು ಸಿದ್ಧನಾದನು. ವಾಯಿನಾರ್‌ಶರಣರು ಮಾನಸಪೂಜೆಯನ್ನು ಮಾಡಿದರು. ಕಲಿಯನ್ನೈನಾರು ಜೆಡೆಯನ್ನು ಹೊತ್ತಿಸಿ ದೀಪವನ್ನು ಬೆಳಗಿದರು. ಕಲಿಕಂಬರು, ಜಂಗಮವೇಷಧಾರಿಯಾದವನನ್ನು ಪೂರ್ವಭಾವದಿಂದ ದಾಸಿಯ ಮಗನೆಂದು ತಿಳಿದು ಆತನ ಕಾಲನ್ನು ತೊಳೆಯದೆ ಹೋದ ತನ್ನ ಹೆಂಡತಿಯ ಕೈಯನ್ನು ಕತ್ತರಿಸಿದರು. ಕಲಿಚೆತ್ತಿಯಾಂಡರು ಶಿವದೂಷಣೆಯನ್ನು ಮಾಡಿದವರ ಜಿಹ್ವಾಛೇದನವನ್ನು ಮಾಡುತ್ತಿದ್ದರು. ಅರಿವಾಳಯ್ಯನು ೭ ದಿನದವರೆಗೂ ಶಿವನೈವೇದ್ಯವು ದೊರೆಯದೆ ಇದ್ದು, ಕಡೆಗೆ ದೊರೆತ ಅರೆಮಾನವೂ ತರುವಾಗ ಸುರಿದುಹೋಗಲು, ತನ್ನ ತಲೆಯನ್ನೇ ಕತ್ತರಿಸಿಕೊಂಡನು. ಕೊಂಗುಲಿಯಕಲಯನಾರು ಶಿವನಿಗೆ ಸಮರ್ಪಿಸುವ ಧೂಪಕ್ಕಾಗಿ ಉರುಗಿದ್ದ ಲಿಂಗವನ್ನು ನೇರ ಮಾಡಿದನು. ಸಿರಿಯಾಳಸೆಟ್ಟಿಯು ಜಂಗಮವೇಷದ ಶಿವನಿಗೆ ತನ್ನ ಮಗನನ್ನೇ ಕತ್ತರಿಸಿ ಅಟ್ಟಿಕ್ಕಿದನು. ಅದರಂತೆಯೇ ಮನುಚೋಳನೂ ಶಿವನಿಗಾಗಿ ತನ್ನ ಮಗನನ್ನು ಕೊಂದು ಬೇಯಿಸಿಕ್ಕಿದನು. ನಮಶ್ಶಿವಾಯರು ಶಿವಮಂತ್ರಪ್ರಭಾವವನ್ನು ಮೆರೆದರು. ಮಾನಕಂಜರನು ಜಂಗಮನಿಗೆ ತನ್ನ ಸತಿಯ ಮುಡಿಯನ್ನು ಕತ್ತರಿಸಿ ಒಪ್ಪಿಸಿದನು. ಸಾಕ್ಯತೊಂಡನು ಕಲ್ಲಿಗೆ ಪ್ರತಿಯಾಗಿ ತನ್ನ ಶಿರವನ್ನು ಕಡಿದು, ಅದರಿಂದ ಶಿವನನ್ನು ಆರಾಧಿಸಿದನು. ನಮಿನಂದಿಯು ಶಿವನಿಗೆ ಪ್ರತಿ ದಿನವೂ ಸಾವಿರ ದೀಪಗಳನ್ನು ಬೆಳಗುವ ವ್ರತವನ್ನು ಹಿಡಿದು, ಕಡೆಗೆ ಸಾಗದಿರಲು, ತನ್ನ ಪ್ರಾಣತ್ಯಾಗಕ್ಕೆ ಸಿದ್ಧನಾದನು. ಕಡವಲನಂಬಿಯು ತನ್ನ ದೇಹವನ್ನೇ ದೀಪಸ್ತಂಭವನ್ನು ಮಾಡಿ ಉರಿಸಿದನು. ಕೊಲ್ಪುಲಿಯಾಂಡರು ಶಿವಾಲಯವನ್ನು ಕಟ್ಟಿಸಿ, ನೈವೇದ್ಯಕ್ಕಾಗಿಟ್ಟದ್ದ ಧಾನ್ಯವನ್ನು ತಿಂದ ಸತೀಸುತಾದಿಗಳನ್ನು ಕತ್ತರಿಸಿದರು. ನೆಳ್ಳಾಕರು ಕಿರೀಟಕ್ಕೆ ಪ್ರತಿಯಾಗಿ ಶಿವಪಾದವನ್ನೇ ಧರಿಸಿದರು. ಎಡಗಣೆಯ

ಪೆರುಮಳೆಯರು ಜಂಗಮರಿಗೆ ಕೇಳುವುದನ್ನೆಲ್ಲ ನೀಡಿ, ಪ್ರತಿಭಟಿಸಿದವರನ್ನು ಗೆದ್ದು, ಸಕಲಸಿದ್ಧಿಸಂಪನ್ನರಾಗಿದ್ದರು. ಕಡವೂರ ಕಾರಿಯರು ರಾಜಸಭೆಯಲ್ಲಿ ಹಾಸ್ಯಗಾರರಾಗಿದ್ದು ಸಂಪಾದಿಸಿದ ಹಣದಿಂದ ಶಿವನ ಭಕ್ತರ ಸೇವೆಯನ್ನು ಮಾಡಿಕೊಂಡಿದ್ದರು. ಅಚ್ಯುತಭಕ್ತನು ಜೂಜಿನ ಕಾಯಕದಲ್ಲಿದ್ದನು. ಗೊಲ್ಲಾಳನು ಶಿವದ್ರೋಹಿಯಾದ ತಂದೆಯ ತಲೆಯನ್ನು ಕೊಡಲಿಯಿಂದ ಕಡಿದನು. ಚಿರುಪುಲಿಯಿರಿತ್ತಾಂಡಿಯರು ಪ್ರತಿದಿನವೂ ಜಂಗಮಾರಾಧನೆಯಿಲ್ಲದೆ ಭುಂಜಿಸದ ವ್ರತದಿಂದಿರುತ್ತ, ೮೦ ದಿನಗಳವರೆಗೂ ಜಂಗಮರು ಸಿಕ್ಕದಿರಲು ಉಪವಾಸವಾಗಿಯೇ ಇದ್ದರು. ಇರಿವತ್ತಾಂಡಾರಿ ಯೆಂಬ ಹುಟ್ಟುಕುರುಡಭಕ್ತನು ಶಿವನ ಮಜ್ಜನದ ನೀರಿಗಾಗಿ ಬಾವಿಯನ್ನಗೆಯುತ್ತಲಿದ್ದು, ಅದಕ್ಕೆ ವಿಘ್ನವನ್ನಾಚರಿಸಿದ ಜೈನರನ್ನೆಲ್ಲ ಶಿವಾನುಗ್ರಹದಿಂದ ಕುರುಡರನ್ನು ಮಾಡಿದನು. ಅತಿಭಕ್ತನು ಬಲೆಯ ಕಾಯಕವನ್ನು ಮಾಡುತ್ತ, ಮೊದಲು ಸಿಕ್ಕಿದ ಮೀನನ್ನು ಶಿವಾರ್ಪಿತ ಮಾಡಿ, ಬಳಿಕ ಸಿಕ್ಕಿದುವನ್ನು ಹಿಡಿದು ಮಾರಿ ಬಂದ ಹಣದಿಂದ ಜಂಗಮಸೇವೆಯನ್ನು ಮಾಡುತ್ತಿದ್ದನು. ಇವರೆಲ್ಲರೂ ಮೇಲ್ಕಂಡ ಆ ಆ ಕ್ರಿಯೆಗಳಿಂದ ಶಿವನನ್ನು ಮೆಚ್ಚಿಸಿ ಕೈಲಾಸವನ್ನು ಪಡೆದರು. ಮತ್ತು ಮಳೆಯರಾಜನು ತನ್ನ ಸಕಲ ರಾಜ್ಯದೊಡನೆಯೂ, ಮಲ್ಲಣನು ಘನಭಕ್ತಿಯಿಂದ ತನ್ನ ಕಾಂತೆಯಾದ ಮಲ್ಲಣಿಯೊಡನೆಯೂ, ಓಹಿಲಯ್ಯನು ಧೂಪವನ್ನರ್ಪಿಸುವ ಭಕ್ತಿಯಿಂದ ಸ್ಥೂಲದೇಹಸಮೇತನಾಗಿಯೂ, ಕೈಲಾಸವನ್ನು ಪಡೆದರು. ನಲುವಡಿಗೆ ಯೆಂಬ ಊರಿನಲ್ಲಿ ಕುಷ್ಠರೋಗಿಣಿಯಾಗಿದ್ದ ಮಾದರಗುಡ್ಡವ್ವೆಯು ತನ್ನನ್ನು ಪರವಾದಿಗಳು ಓಡಿಸಲು, ಆಕೆಯು ಸೌರಾಷ್ಟ್ರಸೋಮನಾಥನ ಅನುಗ್ರಹದಿಂದ ನೀರೋಗಿಣಿಯಾದಳು. ಕಾಳಿಂಗರಾಜನು ಗೋಡೆಯ ಮೇಲೆ ಬರೆದಿದ್ದ ಹುಲಿಯನ್ನು ನೋಡಿ, ಹೆದರಿ ಪ್ರಾಣನನ್ನು ಬಿಡಲು, ಚೆನ್ನವ್ವೆಯು ಸತ್ತ ಆತನ ಹೆಣವನ್ನೇ ಮದುವೆಯಾಗಿ, ಬಸವನ ನೋಂಪಿಯನ್ನು ಮಾಡಿ, ಶಿವಾನುಗ್ರಹದಿಂದ ಗಂಡನ ಪ್ರಾಣವನ್ನು ಪಡೆದು ಮುತ್ತೈದೆಯಾಗಿದ್ದು, ಕಡೆಗೆ ಪತಿಯೊಡನೆ ಶಿವಲೋಕವನ್ನೈದಿದಳು. ಉದ್ಭಟಾಚಾರ್ಯನು ಮೃತನಾಗಲು, ಆತನನ್ನು ಸುಟ್ಟ ಹೊಗೆಯ

ನೋಂಕಿನಿಂದ ಅನೇಕ ಪಿಶಾಚಗಳು ತಮ್ಮ ನೀಚಜನ್ಮವನ್ನು ಕಳೆದುಕೊಂಡುವು. ಹೊಗೆ ದೊರೆಯದೆ ಉಳಿದಿದ್ದ ಒಂದು ಪಿಶಾಚವು ಉದ್ಭಟಾರ್ಯನ ಶಿಷ್ಯನಾದ ಭೋಜನನ್ನು ಬೇಡಿ, ಗುರುವಿನ ಮೂಳೆಯನ್ನು ಹೊತ್ತಿಸಿ ಹೊಗೆಯನ್ನುಂಟುಮಾಡಿಸಿ, ಅದರ ನೋಂಕಿನಿಂದ ತಮಗೆ ವಾಸವಾಗಿದ್ದ ಆಲದಮರದ ಸಮೇತವಾಗಿ ರಾಜ ಮಂತ್ರಿ ಪ್ರಮುಖರೆಲ್ಲರನ್ನೂ ಕೂಡಿ ಕೈಲಾಸವನ್ನು ಸೇರಿತು. ಹೀಗೆಯೇ ಗಣಸಿಂಗಯ್ಯ, ಸಾತ್ವಿಕಸಂಗಯ್ಯ, ದೇವರಸ, ಪಡಿಹಾರಿಬಸವಯ್ಯ, ಕಾಮಲದೇವಿ, ದೇವಯ್ಯ, ರೇವಯ್ಯ, ಮೇಳಗೆಯ ಸಂಗವ್ವೆ, ಕನ್ನಮರಸಿ, ಹೂವಿನ ಬಾಚಿದೇವ, ಒಹಿಲಯ್ಯ, ಬೊಪ್ಪಿದೇವಿ, ಬೊಮ್ಮಿಸೆಟ್ಟಿ, ಇವರು ಕೇರಸಗಣಂಗಳು; ನಾನಾಪವಾಡಗಳಿಂದ ಶಿವಲೋಕವನ್ನು ಪಡೆದವರು. ಶಿವನಪ್ಪಣೆಯಮೇರೆ ಪಾರ್ವತಿಯು ಷೋಡಶಕಲೆಗಳಿಂದ ಕೂಡಿ, ಗುಡ್ಡಾಪುರದಲ್ಲಿ– ಹೊನ್ನಯ್ಯ, ಕಿನ್ನರಬ್ರಹ್ಮಯ್ಯ, ಪಾಂಡ್ಯರಾಯ, ಬೀರಿದೇವಯ್ಯ, ಬೀಚಯ್ಯ, ಹಂದಯ್ಯ, ಕಿನ್ನರಬ್ರಹ್ಮಯ್ಯ, ಗುಡ್ಡವ್ವ, ಹೂವಿನ ಬಾಚಿದೇವಯ್ಯ, ಕೆಂದುಲಿಗೆ ನಾಗಯ್ಯ, ಉಘೇನಾಗಯ್ಯ, ಬಾಚಲದೇವಿ, ಕೇತಲದೇವಿ, ಕಾಲವ್ವೆ, ಚಿಕ್ಕುಲಿಗೆ ನಾಚಯ್ಯ, ಪಡಿಹಾರಿ ಸೋಮಯ್ಯ, ಎಂಬ ಹೆಸರಿನಿಂದ ಷೋಡಶಗಣಂಗಳಾಗುದಿಸಿರಲು, ಅತ್ತ ಅಣವೂರಿನಲ್ಲಿ ಪರಸಮಯಿಗಳು ಬ್ರಹ್ಮೇಶನನ್ನು ಕಿತ್ತು, ವಿಷ್ಣುವಿಗ್ರಹವನ್ನು ಪ್ರತಿಷ್ಠಿಸಿರುವ ಸಂಗತಿಯನ್ನು ಶಿವನು ಚಿಕ್ಕುಲಿಗೆ ನಾಚಯ್ಯನ ಸ್ವಪ್ನದಲ್ಲಿ ಬಂದು ತಿಳಿಸಲು, ಆತನು ಗುಡ್ಡಾದೇವಿಗೆ ವಿಜ್ಞಾಪಿಸಲಾಗಿ, ಆಕೆಯು ಎಲ್ಲರೊಡನೆ ಕೂಡಿ ಹೋಗಿ, ಅಲ್ಲಿ ಶಿವಮೂರ್ತಿಯನ್ನು ಪ್ರತಿಷ್ಠಿಸಿ, ಪರಮತಸ್ಥರನ್ನು ಜೈಸಿದಳು. ಗಂಟೆಯ ಮೈಲಿದೇವಿ, ಕಾಮಲದೇವಿ, ಬೊಪ್ಪಲದೇವಿ, ಚೋಳವ್ವೆ, ಬೀಚಲದೇವಿ, ಕನ್ನಮ್ಮರಸಿ, ದೋರಿದೇವಯ್ಯ, ಸಿಂಗರಾಜ, ಎಂಬಿವರು ದಶಗಣಂಗಳು, ಶಿವಾನುಗ್ರಹಕ್ಕೆ ಪಾತ್ರರಾಗಿ ನಾನಾಪವಾಡಗಳನ್ನು ಮೆರೆದವರು.

ಎಂದು ಚೆನ್ನಬಸವೇಶನು ನಿರೂಪಿಸಿದ ನೆಂಬಲ್ಲಿಗೆ ಎರಡನೇ ಅಧ್ಯಾಯವು ಸಂಪೂರ್ಣವು.

## ೩ ನೇ ಅಧ್ಯಾಯವು.

### ಸಾನಂದಗಣೇಶನ ಚರಿತ್ರವು.

ಎಲೈ ಸಿದ್ಧರಾಮೇಶನೆ; ಪೂರ್ಣ್ವಿತ್ತನೆಂಬ ಋಷಿಗೆ ಶಿವಾನುಗ್ರಹದಿಂದ ಒಬ್ಬ ಮಗನು ಹುಟ್ಟಲು, ಆತನಿಗೆ ಸಾನಂದನೆಂಬ ಹೆಸರನ್ನು ಕರೆದನು. ಆ ಕುಮಾರನು ಶಿವಭಕ್ತಿಜ್ಞಾನಗಳೇ ಈ ಆಕೃತಿಯಿಂದ ಬೆಳೆಯುತ್ತಿರುವಂತೆ ದಿನದಿನಕ್ಕೆ ಪ್ರವೃದ್ಧಮಾನನಾದನು. ಶೈಶವವು ಕಳೆದ ಬಳಿಕ ಮಗನಿಗೆ ವಿದ್ಯಾಭ್ಯಾಸಕ್ಕೆ ಹಾಕಿ ಉಚಿತಕಾಲದಲ್ಲಿ ತಂದೆಯು ಶೈವಮಂತ್ರೋಪದೇಶವನ್ನು ಮಾಡಿಸಿದನು. ಮಗನು ಬರಬರುತ್ತಾ ಸಕಲ ವೇದಾಗಮಪುರಾಣೇತಿಹಾಸಾದಿಗಳನ್ನೆಲ್ಲ ಓದಿ ಸರಮಜ್ಞಾನಿಯಾಗಿ, ವೈರಾಗ್ಯವು ಬಲಿದು, ದಂಡ ಕಮಂಡಲು ಕಾಷಾಯಾಂಬರ ವಿಭೂತಿರುದ್ರಾಕ್ಷಧಾರಿಯಾಗಿ ಅಪರಶಿವನಂತೆ ತೋರುತ್ತಿದ್ದನು. ಈ ಋಷಿಯು ದೃಢವಾದ ತಪಶ್ಚರ್ಯದಿಂದ ಪರಶಿವನನ್ನು ಮೆಚ್ಚಿಸಿದನು. ಸ್ವಾಮಿಯು ಪ್ರತ್ಯಕ್ಷನಾಗಿ ಅವನಿಷ್ಟಪ್ರಕಾರ ಶಿವಮಂತ್ರವನ್ನು ತಾನೇ ಉಪದೇಶಿಸಿ, ಗಣಪದವಿಯನ್ನು ಕೊಟ್ಟು, ಅವನಿಗೆ ಸಂಚಾರಕ್ಕಾಗಿ ಪುಷ್ಪವಿಮಾನವನ್ನೂ, ಓಲಗದವರನ್ನೂ ಅನುಗ್ರಹಿಸಿ, ತೆರಳಿದನು. ಇತ್ತ ಸಾನಂದಗಣೇಶನು ಸದಾ ತನ್ನ ಬಳಿಯಲ್ಲಿ ಋಷಿಸ್ತೋಮವನ್ನು ಕೂಡಿಕೊಂಡು, ತತ್ತ್ವಾರ್ಥವಿಚಾರದಿಂದ ಕಾಲವನ್ನು ಕಳೆಯುತ್ತಿದ್ದನು. ಒಂದು ದಿನ, ಪ್ರಸ್ತಾಪತ್ವೇನ ಒಬ್ಬ ಋಷಿಯು ಭೂಲೋಕದ ಜನಗಳ ಪಾಪಪುಣ್ಯಾಚರಣಗಳನ್ನೂ, ಯಮದೂತರು ಪುಣ್ಯಶಾಲಿಗಳನ್ನು ಕರೆದು ಹೋಗುವ ರೀತಿಯನ್ನೂ ಪಾಪಿಗಳನ್ನು ಎಳೆದುಕೊಂಡು ಹೋಗಿ ಹಿಂಸಿಸುವುದನ್ನೂ ಕುರಿತು ವಿವರಿಸತೊಡಗಿದನು. ಹೇಗೆಂದರೆ–ಧರ್ಮಾಚರಣೆಯಲ್ಲಿದ್ದ ಪುಣ್ಯಶಾಲಿಗಳನ್ನು ಕರೆದೊಯ್ಯುವ ಪರಲೋಕದ ಮಾರ್ಗವು–ಕಸ್ತೂರಿ ಪನ್ನೀರಿನ ಚಳೆಯವನ್ನು ಕೊಟ್ಟು, ಬಗೆಬಗೆಯ ರಂಗಿನ ರಂಗವಲ್ಲಿಗಳನ್ನು ಬಿಟ್ಟು, ಅಲ್ಲಲ್ಲಿಗೆ ಗುಡಿತೋರಣಚಪ್ಪರಗಳನ್ನು ರಚಿಸಿ, ಮೇಲ್ಕಟ್ಟುಗಳನ್ನು ಕಟ್ಟಿ, ಹೂವಿನ ಮಾಲೆಗಳನ್ನೂ ಮುತ್ತಿನ ಕುಚ್ಚುಗಳನ್ನೂ ಇಳೇಬಿಟ್ಟು, ಧೂಪದ ಹೊಗೆಯನ್ನು ಹಾಕಿ, ಘಮಘಮಿಸುವಂತೆ ಮಾಡಿರುವರು. ಅಲ್ಲಲ್ಲಿಗೆ ತಂಪಾದ ನೆಳಲಿನ ತೋಪುಗಳು,

ತಿಳಿಗೊಳಗಳು, ಅರವಟ್ಟಿಗೆಗಳು, ಸಾಲುಮರಗಳು, ಲತಾಗೃಹಗಳು, ನರ್ತನ ಗಾನಮಂಟಪಗಳು, ಉದ್ಯಾನಗಳು, ಫಲವೃಕ್ಷಗಳು, ಕ್ರೀಡಾಪಕ್ಷಿಗಳು, ರಂಜಿಸುತ್ತಿರುವುವು. ಆ ದಾರಿಯಲ್ಲಿ ಬರುವ ಧರ್ಮಾತ್ಮರನ್ನು ನೋಡಿದವರು ಈ ದಿವಸ ನಿಮ್ಮ ದರ್ಶನದಿಂದ ನಾವು ಧನ್ಯರಾದೆವೆಂದು ನುಡಿದು, ಕೈಹಿಡಿದು ಬಂದೊಂದು ಮಂಟಪಗಳಿಗೆ ಕರೆದುಕೊಂಡುಹೋಗಿ, ಪಾದ್ಯಾರ್ಘ್ಯಾದಿಗಳನ್ನುಕೊಟ್ಟು, ಷಡ್ರಸಾನ್ನ ಭೋಜನ ಮಾಡಿಸಿ, ಬಗೆಬಗೆಯ ಹಣ್ಣು ಹೂವು ಗಂಧ ಮೊದಲಾದುವುಗಳನ್ನೊಪ್ಪಿಸಿ, ಉಪಚಾರಗಳಿಂದ ಸಂತೋಷಪಡಿಸಿ, ವಸ್ತ್ರಾಭರಣಾಲಂಕಾರಗಳನ್ನಿತ್ತು ಮರ್ಯಾದಿಸಿ, ಮುಂದೆ ಕಳಿಸಿಕೊಡುವರು. ಆ ದಾರಿಯಲ್ಲಿ ಹೋಗುವವರಿಗೆ ತಾವು ಹೆಂಡಿರು ಮಕ್ಕಳು ಮನೆಮಠಗಳನ್ನು ಬಿಟ್ಟು ಬಂದೆವೆಲ್ಲ ಎಂಬ ಚಿಂತೆಯು ಲೇಶಮಾತ್ರವೂ ಹತ್ತುವುದಿಲ್ಲ. ಹೀಗೆ ಉಪಚರಿಸಿಕೊಂಡು ಸಂತೋಷದಿಂದ ಹೋದ ಜನಗಳನ್ನು ದೂತರು ಯಮಧರ್ಮನ ಮುಂದೆ ನಿಲ್ಲಿಸಿದಾಗ, ಆತನು ಇವರುಗಳು ಮಾಡಿದ ಧರ್ಮಕಾರ್ಯವಿವರಣಗಳೇನೆಂದು ಕೇಳುವನು. ಚಿತ್ರಗುಪ್ತರಾದರೋ– ಈತನು ಪರೋಪಕಾರಿ, ಈತನು ದಯಾಳು, ಈತನು ವಿದ್ಯಾದಾನಿ, ಈತನು ಗುರುಹಿರಿಯರಲ್ಲಿ ವಿನಯದಿಂದ ನಡೆದುಕೊಂಡವನು, ಈತನು ಸನ್ಮಾರ್ಗಗಾಮಿ, ಇವನು ಭೂದಾತೃವು, ಈತನು ಗೋದಾನಮಾಡಿದವನು, ಈತನು ವಸ್ತ್ರದಾನ ಮಾಡಿದವನು, ಇವನು ಗೃಹದಾನಿಯು, ಇವನು ಅನ್ನದಾನಿಯು, ಇವನು ಪ್ರಾಣದಾನಿಯು, ಈತನು ಜಂಗಮಸತ್ಕಾರಕನು, ಈತನುಗುರುಭಕ್ತನು, ಈತನುದೇವಾಲಯಪ್ರತಿಷ್ಠಾಪಕನು, ಈತನು ದೈವಭಕ್ತನು, ಈತನು ಸತ್ಯವ್ರತನು, ಈತನು ಗೋರಕ್ಷಕನು, ಈತನು ಭಸ್ಮರುದ್ರಾಕ್ಷಧಾರಕನು, ಈತನು ಶಿವಚಿಹ್ನಧಾರಿಗಳ ಸೇವಕನು, ಈತನು ಪಂಚಾಕ್ಷರಜಾಪಕನು, ಇವನು ಶಿವಾರಾಧನೆಗೆ ಹೂವನ್ನೆತ್ತಿಕೊಟ್ಟವನು, ಇವನು ಕೆರೆಯನ್ನು ಕಟ್ಟಿಸಿದವನು, ಇವನು ತೋಪನ್ನು ನಿರ್ಮಿಸಿದವನು, ಇವನು ಪುಷ್ಪೋದ್ಯಾನವನ್ನು ನಿರ್ಮಿಸಿದವನು, ಈತನು ಧರ್ಮಕಲ್ಯಾಣವನ್ನು ಮಾಡಿದವನು, ಈತನು ರಿಕ್ತರಿಗೆ ಅನ್ನ ವಸ್ತ್ರದಾನ ಮಾಡಿದವನು, ಇವನು ಪುರಾಣಶ್ರವಣ ಮಾಡಿಸಿದವನು, ಇವನು ಸತ್ಪುತ್ರರನ್ನು

ಪಡೆದವನು, ಇವನು ಮಾತೃಪಿತೃಭಕ್ತನು, ಇವನು ಅರವಟ್ಟಿಗೆಯನ್ನಿ ಡಿಸಿದವನು, ಇವನು ಛತ್ರಧ್ವಜಪಾದುಕಾದಿಗಳನ್ನು ದಾನಮಾಡಿದವನು, ಇವನು ಅನ್ನಸತ್ರಗಳನ್ನು ಪ್ರತಿಷ್ಠಿಸಿದವನು, ಇವನು ವಿದ್ಯಾಶಾಲೆ ಗಳನ್ನು ಸ್ಥಾಪಿಸಿದವನು, ಇವನು ದಾರಿಗಳನ್ನು ಸರಿಮಾಡಿದವನು, ಇವನು ಗೂಳಿಗಳನ್ನು ಬಿಡಿಸಿದವನು, ಇವನು ಏಕಪತ್ನೀವ್ರತಸ್ಥನು, ಈತನು ಶುಚಿತನುನು, ಈತನು ನಿಷ್ಕಪಟಿಯು, ಈತನು ಅಹಿಂಸಕನು, ಈತನು ದೀನಬಂಧುವು, ಈತನು ನೀತಿಪರನು, ಈತನು ಬೆಟ್ಟಕ್ಕೆ ಕೆಂಬಿ ಯನ್ನು ಹೊರಿಸಿದವನು, ಎಂದು ಮೊದಲಾಗಿ ಅವರವರು ಮಾಡಿದ ಧರ್ಮಕಾರ್ಯಗಳನ್ನು ವಿವರಿಸಿ ಹೇಳುವರು. ಅದರಮೇಲೆ ಅವರ ಕರ್ಮ್ಮನು ಸಾರವಾದ ಭೋಗಗಳನ್ನು ಇಷ್ಟಿಷ್ಟು ದಿವಸ ಸ್ವರ್ಗಲೋಕದಲ್ಲಿ ಅ ನುಭವಿಸಿಕೊಂಡಿರುವುದಕ್ಕಾಗಿ ಆಯಾಯ ಸ್ಥಲಕ್ಕೆ ಕಳಿಸಿಕೊಡಿರೆಂದು ಯಮಧರ್ಮನು ಅಪ್ಪಣೆ ಮಾಡಿ, ಪುಷ್ಪವಿಮಾನಗಳಲ್ಲಿ ಕುಳ್ಳಿರಿಸಿ, ಅವ ರನ್ನು ಕಳಿಸಿಕೊಡುವನು. ಅವರು ತಮ್ಮ ನಿಯಮಿತಕಾಲದವರೆಗೆ ಸುಖ ವಾಗಿರುವರು. ಪಾಪಿಗಳನ್ನು ಯಮದೂತರು ಕರೆದುಕೊಂಡುಹೋಗು ವಾಗಲಾದರೋ—ಹಲ್ಲನ್ನು ಕಡಿದು, ಕೋರೆಯನ್ನು ಕಿರಿದು, ಹುಬ್ಬನ್ನು ಗಂಟಿಕ್ಕಿ, ಬಿರುಗಣ್ಣನ್ನು ಬಿಟ್ಟು, ಗಜರಿ, ಅಪ್ಪಳಿಸಿ, ಹೊಡೆ, ಬಡೆ, ಎಳೆ, ಎಂದು ಮೊದಲಾಗಿ ಕೂಗಿ, ಹೆದರಿ ಹಿಂಜರಿದರನ್ನು ಕೈಕಾಲ್ಪಿಡಿ ದು ದರದರನೆ ಎಳೆದೊಯ್ಯುವರು. ಮರಣೋನ್ಮುಖನಾದವನು ಅವರನ್ನು ಕಂಡಕೂಡಲೆ ಜಲಮಲಗಳನ್ನು ಬಿಟ್ಟುಕೊಳ್ಳುವನು. ಇವರನ್ನು ಕರೆ ದೊಯ್ಯುವ ಮಾರ್ಗಗಳಲ್ಲಿ ಕಲ್ಲುಗಳು, ಮುಳ್ಳುಗಳು, ಬೆಟ್ಟಗಳು, ಗುಡ್ಡ ಗಳು, ಸ್ಮಶಾನಗಳು, ಕ್ರೂರಮೃಗಗಳು, ಹಾವುಗಳು, ಮರುಭೂಮಿಗ ಳು, ಕಾಳ್ಕಿಚ್ಚುಗಳು, ಬರಸಿಡಿಲ್ಮಿಂಚುಗಳು, ಕೆಂಡದಮಳೆಗಳು, ಹಳ್ಳ ಕೊಳ್ಳಗಳು, ಹುತ್ತುಗಳು, ಶಾಕಿನಿಡಾಕಿನಿಯರು, ತುಂಬಿರುವುವು. ಎಲ್ಲಿ ನೋಡಿದರೂ ನೆಳಲಿಲ್ಲ; ನೀರಿಲ್ಲ; ಸುಡುಗಾಡು, ಕಡುಬಿಸಿಲು, ಬೆಂಕಿಯ ಹೊಗೆ, ಕಾದ ನೆಲಗಳೇ ಇರುವುವು. ಕಲ್ಲು ಕಾಲಿಗೆ ನಟ್ಟು ಮುಳ್ಳುಗ ಳು ಚುಚ್ಚಿ, ಹೊಪ್ಪಳಿದ್ದು, ರಕ್ತವು ಸುರಿದು, ಸಂಕಟಪಟ್ಟು ನಡೆ ಯಲಾರದೆ ಕುಳಿತರೆ, ದೂತರು ತಿವಿಯುತ್ತಲೂ, ಬಡಿಯುತ್ತಲೂ, ಚು

ಚ್ಚುತ್ತಲೂ, ಎಳೆಯುತ್ತಲೂ, ಹಳ್ಳಗಳಿಗೆ ನೂಕುತ್ತಲೂ, ಮುಳ್ಳುಗಳಮೇಲೆ ಉರುಳಿಸುತ್ತಲೂ, ಬೆಂಕಿಗೆ ನುಗ್ಗಿಸುತ್ತಲೂ, ವಿಷದ ಗುಳಿಗಳಲ್ಲಿ ಮುಳುಗಿಸುತ್ತಲೂ, ಕಿರಿಚಿದರೆ ಬಾಯಿಗೆ ಸಲಾಕಿಯನ್ನು ನೆಡುತ್ತಲೂ, ಬಿದ್ದುಕೊಂಡರೆ ಕಾಲ್ಗಳಿಂದೊದೆಯುತ್ತಲೂ, ಚಾಟಿಗಳಿಂದ ಹೊಡೆಯುತ್ತಲೂ, ಕೆಂಡವನ್ನು ತಲೆಯಮೇಲೆ ಸುರಿಸುತ್ತಲೂ, ಹಸಿದ ಹುಲಿಗಳ ಮುಂದೆ ಇಡುತ್ತಲೂ, ಬುಸುಗುಟ್ಟುವ ಹಾವುಗಳಿಂದ ಕಡಿಸುತ್ತಲೂ, ಶಾಕಿನಿಡಾಕಿನಿಯರಿಂದ ಕರುಳನ್ನು ಬಗಿಸುತ್ತಲೂ, ಹದ್ದುಕಾಗೆಗಳಿಂದ ಕಣ್ಣನ್ನು ಕೀಳಿಸುತ್ತಲೂ, ಬಾಯಾರಿತೆಂದು ನೀರನ್ನು ಕೇಳಿದರೆ ಕಾದ ಸೀಸವನ್ನು ಹುಯ್ಯುತ್ತಲೂ, ವಿಚಿತ್ರಹಿಂಸೆಗೊಳಿಸಿ ಎಳೆದೊಯ್ಯುವರು. ಹೀಗೆ ನಡೆದು ಹೋದ ಕರ್ಮಿಗಳನ್ನು ದೂತರು ಯಮರಾಜನ ಮುಂದೆ ನಿಲ್ಲಿಸಲು, ಅವನು ಘುಡಿಘುಡಿಸಿ, ಕೆಂಗಣ್ಣಿನಿಂದ ನೋಡಿ, ಇವರೇನನ್ನು ಮಾಡಿದರೆಂದು ಕೇಳುವನು. ಚಿತ್ರಗುಪ್ತರಾದರೋ– ಇವನು ಕೆರೆಯನ್ನೊಡೆದವನು. ಇವನು ಮನೆಗೆ ಬೆಂಕಿಯನ್ನಿಕ್ಕಿದವನು. ಇವನು ವಿಷಪ್ರಯೋಗವನ್ನು ಮಾಡಿದವನು. ಇವನು ಜೀವಹಿಂಸೆಯನ್ನು ಮಾಡಿದವನು. ಇವನು ಗೋಹತ್ಯೆ ಮಾಡಿದವನು. ಇವನು ಬ್ರಹ್ಮಘ್ನನು, ಇವನು ಮಾಡಿದುಪಕಾರವನ್ನು ಮರೆತವನು, ಇವನು ಪರಸ್ತ್ರೀಗಾಮಿಯು, ಇವನು ಗುರುದ್ರೋಹಿಯು, ಇವನು ಪರಸ್ವಾಪಹಾರಿಯು, ಇವನು ಹಿರಿಯರನ್ನು ನಿಂದಿಸಿದವನು, ಇವನು ಗುರೂಪದೇಶದೂಷಕನು, ಇವನು ಮತಭ್ರಷ್ಟನು, ಇವನು ಅನೃತವಾದಿಯು ಇವನು ಭರ್ತೃರನ್ನು ನಿಂದಿಸಿ ಮನಸ್ಸನ್ನು ನೋಯಿಸಿದವನು, ಇವನು ಅನೃತಸಾಕ್ಷ್ಯವನ್ನು ನುಡಿದವನು, ಇವನು ನಂಬಿಸಿ ಮೋಸ ಮಾಡಿದವನು, ಇವನು ಆಶ್ರಯಿಸಿದವರನ್ನುಪೇಕ್ಷಿಸಿದವನು. ಈತನು ಸ್ವಾಮಿದ್ರೋಹಿ, ಈತನು ಕುಲಘಾತಕನು, ಈತನು ಮಿತ್ರದ್ರೋಹಿ, ಇವನು ಸೂತಕಿಯರನ್ನೂ ಮಗಳನ್ನೂ ಸೊಸೆಯನ್ನೂ ಮಿತ್ರನ ಹೆಂಡತಿಯನ್ನೂ ಗಮಿಸಿದವನು, ಇವನು ಚಾಡಿಕೋರನು, ಇವನು ಶಿವಾಲಯವನ್ನು ಹಾಳ್ಮಾಡಿದವನು, ಇವನು ಶಿಶುಹತ್ಯಗಾರನು, ಇವನು ಅನ್ನದಾನ ಗೋದಾನಾದಿಗಳಿಗೆ ಅಡ್ಡಲಾದವನು, ಇವನು ಮದುವೆಯನ್ನು ತಡೆದವ

ನು, ಇವನು ಭಸ್ಮರುದ್ರಾಕ್ಷ ಶಿವಮಂತ್ರಾದಿಗಳನ್ನು ತಿರಸ್ಕರಿಸಿದವನು, ಇವನು ಜಾತಿಧರ್ಮಗಳನ್ನು ಬಿಟ್ಟವನು, ಇವನು ಸಜ್ಜನ ಹಿಂಸಕನು, ಇವನು ಪರರ ಮಾನವನ್ನು ಖಂಡಿಸಿದವನು, ಇವನು ತಾಯ್ತಂದೆಗಳನ್ನು ಹೊಡೆದು ಬೈದವನು, ಇವನು ತನ್ನ ಅಣ್ಣತಮ್ಮಂದಿರಿಗೆ ದ್ರೋಹ ಮಾಡಿದವನು, ಇವನು ಹುಲ್ಲು ನೀರನ್ನು ಸೇವಿಸುವ ಗೋವುಗಳನ್ನು ಅಟ್ಟಿದವನು, ಇವನು ಲಂಚವನ್ನು ತಿಂದವನು, ಇವನು ಅಭ್ಯಾಗತರನ್ನು ಓಡಿಸಿದವನು, ಇವನು ಶಿವನಿರ್ಮಾಲ್ಯವನ್ನು ಬಿಸುಡಿದವನು, ಇವನು ಅಭಕ್ಷ್ಯಭಕ್ಷಣ ಅಪೇಯಪಾನಗಳನ್ನು ಮಾಡಿದವನು, ಇವನು ದಯಾಹೀನನು, ಇವನು ಹೆರರ ಉನ್ನತಿಯನ್ನು ಸಹಿಸದವನು, ಇವನು ಎಂದೂ ಶಿವಾರಾಧನೆಯನ್ನು ಮಾಡದವನು, ಇವನು ಪರಾನ್ನದಿಂದಲೇ ಜೀವಿಸಿದವನು, ಇವನು ದಾರಿಗೆ ಕಲ್ಲುಮುಳ್ಳುಗಳನ್ನಿಳಿದವನು, ಇವನು ಸೂಳೆಯೊಡನುಂಡವನು, ಇವನು ಸಾಲುಪ[illegible]ಳನ್ನು ತರಿದವನು, ಇವನು ಕಳ್ಳನು, ಇವನು ಯುದ್ಧದಲ್ಲಿ ಹಿಮ್ಮೆಟ್ಟೋಡಿದವನು, ಇವನು ವಿಷಯಲಂಪಟನು, ಇವನು ಭಕ್ತಿಹೀನನು, ಇವನು ತನ್ನ ಕುಟುಂಬವನ್ನು ಸಾಕಲಾರದೆ ಬಿಟ್ಟೋಡಿದವನು, ಇವನು ಮೃಗ ಪಕ್ಷಿ ಜಲಚರಾದಿಗಳನ್ನು ಕೊಂದವನು, ಇವನು ಸಾಲವನ್ನು ತೀರಿಸದಿದ್ದವನು, ಇವನು ಬೆಟ್ಟಕ್ಕೆ ಬೇಗೆಯನ್ನಿಕ್ಕಿದವನು, ಇವನು ಜಗಳವನ್ನು ತಂದಿಕ್ಕಿ ನೋಟ ನೋಡುತ್ತಿದ್ದವನು, ಇವನು ದಾರಿ ಕಾದು ತಲೆ ಹೊಡೆದವನು, ಇವನು ಕೊಟ್ಟ ದಾನವನ್ನು ನೆನೆದು ವ್ಯಥೆಪಟ್ಟವನು, ಇವನು ಮಾಡಿದ ದಾನವನ್ನು ಹೊಗಳಿಕೊಂಡವನು, ಇವಳು ಗಂಡನು ಮಾಡುತ್ತಿದ್ದ ದಾನಕ್ಕೆ ಅಡ್ಡಿಮಾಡಿದವಳು, ಇವಳು ಭಿಕ್ಷೆಗೆ ಬಂದವರನ್ನು ಗದರಿ ಅಟ್ಟಿದವಳು, ಇವಳು ಮಾವ ಅತ್ತೆಯರನ್ನು ಟೊಣೆದು ಗೋಳಡಿಸುತ್ತಿದ್ದವಳು, ಇವಳು ಪತಿಭೇದವನ್ನು ಮಾಡಿದವಳು, ಇವಳು ಹಾದರಕ್ಕೆ ಹೇಸದವಳು, ಇವಳು ಅನಾಚಾರಕ್ಕೆ ತೌರಾದವಳು, ಇವಳು ಭಕ್ತಿಯ ಗುರುತನ್ನು ಕಾಣದವಳು, ಇವಳು ಎಂದೂ ಶಿವಕಥಾಶ್ರವಣವನ್ನು ಮಾಡದವಳು, ಇವಳು ಗಂಡನನ್ನು ಹೀಯಾಳಿಸುತ್ತಿದ್ದವಳು. ಇವಳು ಪರರ ಮಕ್ಕಳನ್ನು ವಿಷವಿಕ್ಕಿ ಕೊಂದವಳು, ಇವಳು ಅತ್ತಿಗೆ ನಾದಿನಿಯರೊಡನೆ ಕಾ

ದುತ್ತಿದ್ದವಳು, ಇವಳು ಗಂಡನ ತಲೆಯಮೇಲೆ ಕಲ್ಲನ್ನು ಹಾಕಿ ಕೊಂದು ಮಿಂಡನನ್ನು ಕೂಡಿದವಳು, ಎಂದು ಮೊದಲಾಗಿ ಅವರ ಕೃತ್ಯವನ್ನು ವಿವರಿಸಿ ನುಡಿಯುವರು. ಇವೆಲ್ಲವನ್ನೂ ಯಮಧರ್ಮನು ಕೇಳಿ, ಕೋಪವೇರಿ ಗರ್ಜಿಸಿ, ಈ ಪಾಪಿಗಳನ್ನೆಲ್ಲ ಮುಂದಲೆ ಹಿಡಿದು ಎಳೆದೊಯ್ದು, ಮಹಾನರಕಗಳಲ್ಲಿ ಕೆಡಹಿ, ಕಾಲುಗಳನ್ನು ಕಡಿದು, ಕೈಗಳನ್ನು ಕತ್ತರಿಸಿ, ನಾಲಿಗೆಗಳನ್ನು ಸೀಳಿ, ಕಣ್ಣುಗಳನ್ನು ಕಿತ್ತು, ಮೂಗುಗಳನ್ನು ಕೊಯ್ದು, ಹೊಟ್ಟೆಗಳನ್ನು ಬಗಿದು, ಚರ್ಮಗಳನ್ನು ಸುಲಿದು, ಮೂಳೆಗಳನ್ನು ಮುರಿದು, ಶೂಲಕ್ಕೇರಿಸಿ, ಕೆಂಡದಮೇಲೆ ಮಲಗಿಸಿ, ಮುಳ್ಳಿನಮೇಲೆ ಉರುಳಿಸಿ, ಚಾಟಿಗಳಿಂದ ಹೊಡೆದು, ದೊಣ್ಣೆಗಳಿಂದ ಬಡಿದು, ಗರಗಸದಿಂದ ಕೊಯ್ದು, ಕಾದಕಂಬವನ್ನು ತಬ್ಬಿಸಿ, ಇಕ್ಕಳದಿಂದ ಕಚ್ಚಿಸಿ, ಸಲಾಕಿಗಳಿಂದ ಚುಚ್ಚಿಸಿ, ಪರಿಪರಿಯಾಗಿ ಶಿಕ್ಷಿಸಿರಿ ಹೋಗಿ, ಎಂದು ಅಪ್ಪಣೆ ಮಾಡಿ ಕಳಿಸುವನು. ದೂತರಾದರೋ ತಮ್ಮೊಡೆಯನು ಹೇಳಿದುದಕ್ಕೆ ೧ಕ್ಕೆ ನೂರಾಗಿ ಈ ಪಾತಕಿಗಳನ್ನು ಶಿಕ್ಷಿಸುತ್ತ, ನಾನಾನಾಮಕನರಕಗಳಲ್ಲಿ ಕೆಡಹಿ, ಹಿಂಸೆಗೊಳಿಸಿ, ಬಹುಕಾಲ ನರಳಿಸುತ್ತಿರುವರು. ಎಂದು ಮುನಿಪತಿಯು ನುಡಿಯಲು, ಸಾನಂದಗಣೇಶನು ಎಲ್ಲವನ್ನೂ ಕೇಳಿ, ಮನದಲ್ಲಿ ಬಹಳವಾಗಿ ನೊಂದು, "ಶಿವಶಿವಾ! ಮುಂದಾಗುವುದನ್ನು ಕಾಣದೆ ನರರು ಅಕೃತ್ಯವನ್ನು ಮಾಡಿದರೆ, ಅವರನ್ನು ಯಮಧರ್ಮನು ಇಷ್ಟೊಂದು ಪರಿಯಾಗಿ ಹಿಂಸಿಸಬಹುದೆ? ಅಯ್ಯೋ! ಆ ಪ್ರಾಣಿಗಳು ಎಷ್ಟು ನೊಂದುಕೊಳ್ಳುತ್ತಿರುವರೋ!" ಎಂದು ಪರಿತಪಿಸಿ, "ಓ ಪರಶಿವನೇ! ನೀವು ಇಂಥವರನ್ನೆಲ್ಲ ಹಿಂಸೆಗೆ ಒಳಗುಮಾಡಿ ನೋಡಿಕೊಂಡು ಸುಮ್ಮನಿರಬಹುದೆ? ನೀವೇ ತಟಸ್ಥರಾದ ಬಳಿಕ, ಇನ್ನು ಆ ಬಡವರನ್ನು ಉದ್ಧರಿಸುವರಾರು? ಸರ್ವದಯಾಪರ! ಶಂಕರ! ಸರ್ವಗತ! ಎಂಬ ಬಿರುದು ನಿಮಗಲ್ಲವೆ ಮತ್ತಾರಿಗಿರುವುದು? ಕೆರದ ಕಾಲಿಂದೊದೆದವರೂ ಬಿಲ್ಲಿನಿಂದ ಹೊಡೆದವರೂ, ಕಲ್ಲಿನಿಂದ ಇಟ್ಟವರೂ, ಅವರಿಗೆಲ್ಲ ಮೆಚ್ಚಿ ಕೈಲಾಸಕ್ಕೆ ಕರೆಸಿಕೊಂಡು ಹೋದ ನಿಮ್ಮ ದಯೆಯು ಈ ದೀನಪ್ರಾಣಿಗಳ ಮೇಲೆ ಅದೇಕೆ ಪ್ರಸರಿಸಲಿಲ್ಲ? ಹರಹರಾ! ನಮಶ್ಶಿವಾಯ!" ಎಂದು ಪರಿಪರಿಯಾಗಿ ಪ್ರಲಾಪಿಸಿ, ಇದನ್ನು ಕೇಳಿಕೊಂಡು ಸುಮ್ಮನಿರುವುದು

ಸರಿಯಲ್ಲವಾದುದರಿಂದ ಈಗಳೇ ಯಮಪುರಿಗೆ ಹೋಗಿ, ಅಲ್ಲಿ ಯಾತನೆಗೊಳಗಾಗಿರುವವರನ್ನೆಲ್ಲ ಶಿವಲೋಕಕ್ಕೆ ಕರೆದುಕೊಂಡು ಹೋಗುವುದೇ ಕರ್ತವ್ಯವೆಂದು ಯೋಚಿಸಿ, ಥಟ್ಟನೆದ್ದನು. ಬಳಿಯಲ್ಲಿದ್ದ ಋಷಿಗಳೆಲ್ಲರೂ ಆತನೊಡನೆಯೇ ಎದ್ದರು. ಶಿವದತ್ತವಾದ ಪುಷ್ಪಕದಲ್ಲಿ ಎಲ್ಲರೊಡನೆ ಕುಳಿತು ಸಾನಂದಗಣೇಶನು ಹೊರಟನು. ಮುಂದೆ ಕಹಳೆಗಳು ಭೇರಿಗಳು ಧ್ವನಿ ಮಾಡಿದುವು. ಯಮಪುರದ ಸಮೀಪಕ್ಕೆ ಹೋಗುವುದರೊಳಗಾಗಿ ಚಾರನೊಬ್ಬನು ಓಡಿಹೋಗಿ, ಮಹಾತೇಜಸ್ವಿಯಾದ ಸಾನಂದಗಣಾಧೀಶ್ವರನು ಇಲ್ಲಿಗೆ ದಯಮಾಡಿಸುತ್ತಿರುವನೆಂದು ತನ್ನ ರಾಜನಾದ ಅಂತಕನೊಡನೆ ಬಿನ್ನೈಸಿದನು. ಯಮನು ಝಗ್ಗನೆದ್ದು, ಪುರವೀಧಿಗಳನ್ನಲಂಕರಿಸುವಂತೆ ಅಪ್ಪಣೆ ಮಾಡಿ, ಪರಿವಾರದೊಡನೆ ಇದಿರ್ಗೊಳ್ಳುವುದಕ್ಕಾಗಿ ಪಟ್ಟಣದ ಹೊರಬಾಗಿಲಿಗೆ ಬಂದನು. ಅತ್ತ ಗಣಾಧೀಶ್ವರನು ಪುರದ ಮಹಾದ್ವಾರದಲ್ಲಿ ವಿಮಾನವನಿಳಿದು, ಹಾವುಗೆಗಳನ್ನು ಮೆಟ್ಟಿ ಋಷಿಸ್ತೋಮದೊಡನೆ ಒಳನುಗ್ಗಿದನು. ಯಮರಾಜನು ಋಷೀಶ್ವರನನ್ನು ಕಂಡು, ಕಾಣ್ಕೆಯನ್ನು ಮುಂದಿಟ್ಟು, ದೀರ್ಘವಾಗಿ ನಮಸ್ಕರಿಸಲು, ಮುನೀಶನು ಕರುಣದಿಂದ ಅವನ ಮಂಡೆಯನ್ನು ಹಿಡಿದೆತ್ತಿ, ಯಮರಾಜನೆ ಕುಶಲವೆ? ಎಂದು ಕೇಳಿದನು. ಯಮನಾದರೊ—ಸ್ವಾಮಿಯ ಅನುಗ್ರಹದಿಂದ ಇಷ್ಟುಮಟ್ಟಿಗೆ ಕುಶಲಿಯಾಗಿರುವೆನು. ಬಹುಕಾಲಕ್ಕೆ ನನ್ನಮೇಲೆ ಕೃಪೆಯಿಟ್ಟು ತಾವು ದಯಮಾಡಿಸಿದುದರಿಂದ ನನ್ನ ಆನಂದವು ಮಿತಿಮೀರಿರುವುದು; ಈ ಅಲ್ಪನು ಮಾಡುವ ಸೇವೆಯನ್ನು ಪರಿಗ್ರಹಿಸಿ, ಧನ್ಯನನ್ನು ಮಾಡುವುದಕ್ಕಾಗಿ ಅರಮನೆಗೆ ಚಿತ್ತೈಸಬೇಕೆಂದು ಪ್ರಾರ್ಥಿಸಿದನು. ಅದಕ್ಕಾಗಿಯೇ ನಾವು ಬಂದೆವೆಂದು ಋಷೀಶನು ನುಡಿಯಲು, ಯಮನು ಹಸ್ತಾವಲಂಬನವನ್ನು ಕೊಟ್ಟು, ಕರೆದುಕೊಂಡು ಹೋಗುತ್ತಿರಲು, ಸಾನಂದಗಣೇಶನು ಯಮನಗರಿಯ ಸೌಂದರ್ಯವನ್ನೆಲ್ಲ ನೋಡಿಕೊಂಡು ಹೋಗುತ್ತಿದ್ದು, ಯಮರಾಜನೆ! ನಿನ್ನ ಪಟ್ಟಣದಲ್ಲಿರುವ ನರಕವಜ್ರಗಳ ವಿಸ್ತಾರವನ್ನೆಲ್ಲ ಸ್ವಲ್ಪ ತೋರಿಸು, ಎಂದು ನುಡಿಯಲು, ಯಮನು—ಸ್ವಾಮಿ, ಪರಶಿವನ ಪರಾವತಾರರಾದ ತಮ್ಮಂಥವರು ಪಾಪಿಗಳಿರುವ ಆ ವೈತರಣಿಯ ಬಳಿಯನ್ನು ಅವಲೋಕಿಸಬಾರದು, ಅಲ್ಲಿರುವ ಮಹಾನ

ರಕಿಗಳ ದರ್ಶನಭಾಷಣಗಳಿಂದ ಇತರರಿಗೂ ಪಾಪಸಂಘಟನವಾಗುವು ದು, ಎಂದು ಬಿನ್ನೈಸಿದನು. ಗಣೇಶನಾದರೋ— ಹರಹರಾ! ಮಹಾ ದೇವಾ! ನಾವು ಇಷ್ಟು ದೂರ ಬಂದು, ಆ ದೀನಪಾತಕಿಗಳನ್ನು ನೋ ಡದೆ ಹೋಗಬಹುದೆ? ಅದರಿಂದೇನಾದರೂ ಆಗಲಿ; ನೀನು ಅವಶ್ಯಕ ವಾಗಿ ನಮಗೆ ತೋರಿಸಲೇ ಬೇಕು. ಎಂದು ನುಡಿದನು. ಅದಕ್ಕೆ ಪ್ರ ತ್ಯುಪಾಯವನ್ನು ಯಮನು ಕಾಣದೆ, ಸ್ವಾಮಿಯ ಚಿತ್ತವಿದ್ದಂತಾಗಲಿ, ಎಂದು ಬಾಹ್ಯದಲ್ಲಿ ನುಡಿದು, ಮನದಲ್ಲಿ ನೊಂದು, ಮುಂದೆ ಸಾಗಿ, ನರಕಗ ಳ ಕೇರಿಗೆ ಕೈಹಿಡಿದು ಕರೆದುಕೊಂಡು ಹೋದನು. ಅಲ್ಲಿ ದೂತರು ಘುಡಿಘುಡಿಸಿ ನಾರಕಿಗಳನ್ನು ಸೀಳುತ್ತಲೂ, ಮುದಲೆಯನ್ನು ಹಿಡಿ ದು ಎಳೆಯುತ್ತಲೂ, ಕುಸುರಿ ಬಿಸುಡುತ್ತಲೂ, ಚಾಟಿಯ ಹೊಡೆತದಿಂ ದ ಬಾಯ್ಬಿಡಿದುಕೊಂಡರೆ ಮುಳ್ಳುಗಳನ್ನು ಗಂಟಲಿಗೆ ತುಂಬುತ್ತಲೂ, ಗರ ಗಸದಿಂದ ಕೊರೆದು ಕಿವಿಮೂಗುಗಳನ್ನು ಅರಿದು, ಅಲಗುಗಳನ್ನು ಮರ್ಮ ಸ್ಥಾನಗಳಿಗೆ ಚುಚ್ಚಿ, ಕಲ್ಲುಗಾಣಗಳಲ್ಲಿ ಅರೆದು, ಉಕ್ಕಿನಕಾಗೆಗಳಿಂದ ಕು ಕ್ಕಿಸಿ, ಖಂಡಗಳನ್ನು ಕಡಿದು, ಕೊಡಲಿಗಳಿಂದ ತರಿದು, ಶೂಲದಿಂದಿರಿದು, ಮೂಳೆಗಳನ್ನು ಮುರಿದು, ಮುಸಲಗಳಿಂದ ಬಡಿದು, ಜಡಿದು, ಬಗೆಬಗೆಯಾ ಗಿ ಹಿಂಸೆಗೊಳಿಸುತ್ತಿದ್ದರು. ನಾರಕಿಗಳು ತಡೆಯಲಾರದೆ ಅಯ್ಯೋ! ಅಪ್ಪಾ! ಹೊಡೆಯಬೇಡಿರಿ, ದಮ್ಮಯ್ಯ! ಸಾಕು! ತುಳಿಯಬೇಡಿರಿ, ಕೊಲ್ಲಬೇಡಿರಿ; ಕೊಚ್ಚಬೇಡಿರಿ; ಎಂದು ತರತರನಾಗಿ ಬಾಯ್ಬಿಟ್ಟು ಬೇ ಡಿಕೊಳ್ಳುತ್ತಿದ್ದರೂ, ದೂತರು ನಿಷ್ಕರುಣೆಗಳಾಗಿ ಮತ್ತಷ್ಟು ಹೆಚ್ಚಾಗಿ ಹಿಂಸೆಪಡಿಸುತ್ತಿದ್ದರು. ಅಷ್ಟೊಂದು ಪರಿಯಾಗಿ ಹಿಂಸೆಗೊಳ್ಳುತ್ತಲಿರು ವ ಪ್ರಾಣಿವರ್ಗವನ್ನೆಲ್ಲ ಋಷೀಶನು ನೋಡಿ, ಮನದಲ್ಲಿ ಮರುಗಿ, ಇವ ರನ್ನೆಲ್ಲ ಕಡೆಗೆ ಏನು ಮಾಡುವಿರಿ? ಎಂದು ಯಮರಾಜನನ್ನು ಕೇಳಲು, ಮಹಾನಿರಯಕುಂಡದಲ್ಲಿ ಇವರನ್ನು ಹಾಕುವೆವು ಎಂದು ಪ್ರೇತರಾಜನು ನುಡಿದನು. ಅದೆಲ್ಲಿರುವುದೆಂದು ಗಣೇಶ್ವರನು ಕೇಳಲು, ಯಮನು ಆ ಮಹಾನರಕಕುಂಡವನ್ನು ತೋರಿಸಿದನು. ಅದರಲ್ಲಿ ಕೋಟ್ಯನುಕೋಟಿ ಪ್ರಾಣಿಗಳು ಬೇಯುತ್ತಿರುವುದನ್ನು ಸಾನಂದಮುನಿಯು ಕಂಡು, ಶಿವ ಶಿವಾ! ನಿನ್ನ ಪಟ್ಟಣದಲ್ಲಿ ಇಂಥ ಕೂಪಗಳು ಎಷ್ಟಿರುವವೆಂದು ಕೇಳಿ

ದನು. ಇಂಥವು ಇಪ್ಪತ್ತೆಂಟು ಕೋಟಿ ನಾಯಕನರಕಗಳಿರುವುವೆಂತಲೂ, ಅವುಗಳಿಗೆ ಉಪಕುಂಡಗಳು ಇನ್ನೂ ಅಗಣಿತವಾಗಿರುವುವೆಂತಲೂ ಬಿನ್ನೈಸಲು, ಮುನಿಪತಿಯು ಕೇಳಿ, ಆಶ್ಚರ್ಯಸಮುದ್ರದಲ್ಲಿ ಮುಳುಗಿದನು. ಮತ್ತು ಆ ಪ್ರಾಣಿಗಳಮೇಲೆ ಮಹಾಕರುಣಗೊಂಡು ಕೈಯೆತ್ತಿ "ಶಿವಶಿವನಮಶ್ಶಿವಾಯಾ!" ಎಂದು ಮಹಾಮಂತ್ರವನ್ನು ಗಟ್ಟಿಯಾಗಿ ಉದ್ಘೋಷಿಸಿದನು. ಅದು ಆ ನಾರಕಿಗಳ ಕಿವಿಗೆಲ್ಲ ಉಪದೇಶಿಸಿದಂತೆ ಕೇಳಿತು. ಅವರೆಲ್ಲರಿಗೂ ಸಾನಂದಗಣೇಶನ ಅನುಗ್ರಹದಿಂದ ಸದ್ಬುದ್ಧಿಯುಂಟಾಗಲು, ಅದನ್ನೇ ಗುರೂಪದಿಷ್ಟಮಂತ್ರದಂತೆ ಸರ್ವರೂ ತಿಳಿದು "ಶಿವನಮಶ್ಶಿವಾಯಾ!" ಎಂದು ಪಠಿಸಿದರು. ಆ ಕೂಡಲೇ ಥಟ್ಟನೆ ಅವರು ಯಾತನೆಗಳಿಂದ ನಿರ್ಮುಕ್ತರಾದರು. ನರಕಗಳನ್ನು ಬಿಟ್ಟಿದ್ದರು. ಕೇರಿಕೇರಿಯಲ್ಲೂ ಸಾನಂದಗಣಪತಿಯ ಅಪ್ಪಣೆಯುಮೇರೆ "ನಮಶ್ಶಿವಾಯ" ಎಂಬ ಮಂತ್ರವು ಸಾರಿಸಲ್ಪಟ್ಟಿತು. ಎಲ್ಲರೂ ಆ ಮಂತ್ರವನ್ನು ಪುನಶ್ಚರಣ ಮಾಡಿ ಎದ್ದೆದ್ದು ಬಂದು, ಮುನಿಪನ ಸುತ್ತಲೂ ನಿಂತರು. ಯಮದೂತರು ನಿಂತಲ್ಲಿಯೇ ನಿಂತು, ಹಲ್ಲನ್ನು ಕಡಿದುಕೊಳ್ಳುತ್ತಿದ್ದರು. ನಾರಕಿಗಳೆಲ್ಲರೂ ಚಿತ್ರಗುಪ್ತರನ್ನು ಪರಿಪರಿಯಾಗಿ ಹಂಗಿಸಿ ಬೈಯುತ್ತಲೂ, ಸಾನಂದಗಣೇಶನನ್ನು ಸ್ತುತಿಸುತ್ತಲೂ ಇದ್ದರು. ಯಮರಾಜನು ಬೆರಗಾಗಿ ನಿಂತನು. ಸಾನಂದಗಣೇಶನು ವಿಮಾನವಲ್ಲಿ ಕುಳ್ಳಿರಿಸಿ, ಸರ್ವರನ್ನೂ ಕೈಲಾಸಕ್ಕೆ ಸಾಗಿಸಿದನು. ಇತ್ತ ಯಮಧರ್ಮನು ನರಕಗಳೆಲ್ಲ ಬರಿದಾದುದನ್ನು ಕಂಡು, ಖಿನ್ನನಾಗಿ ಮಲಗಿರಲು, ಚಿತ್ರಗುಪ್ತರು ತಮ್ಮ ಸ್ವಾಮಿಯ ಬಳಿಗೆ ಹೋಗಿ, "ಜೀಯಾ! ಇದಕ್ಕಾಗಿ ತಾವು ವ್ಯಸನಪಡುವುದೇಕೆ? ತಮಗೆ ಅಧಿಕಾರವನ್ನು ಕೊಟ್ಟದ್ದ ಪರಶಿವನ ಬಳಿಗೆ ಹೋಗಿ ಈ ಸಂಗತಿಯನ್ನೆಲ್ಲ ಬಿನ್ನೈಸಿ, ಆ ಸಾನಂದನಿಗೆ ತಕ್ಕ ಪ್ರತಿಕ್ರಿಯೆಯನ್ನು ಮಾಡಿಸಿದರಾಯಿತು" ಎಂದು ಹೇಳಿ, ಸಮಾಧಾನಪಡಿಸಿದರು. ಯಮನು ಅದೇ ಸರಿಯೆಂದು ಯೋಚಿಸಿ, ಆಪ್ತಜನರನ್ನು ಕೂಡಿಕೊಂಡು, ಕೈಲಾಸಕ್ಕೆ ಬಂದನು. ಯಮನು ರೋದಿಸುತ್ತ ಶಿವನ ಮುಂಗಡೆಗೆ ಹೋಗಿ, ನರಕಲೋಕದ ಬೀಗದಕೈಗಳ ಜೊಂಪೆಯನ್ನೆಲ್ಲ ಇಟ್ಟು, ನಮಸ್ಕರಿಸಿ, ಪ್ರಭುವೇ! ಸಾನಂದಮುನಿಯು ನಮ್ಮ ಪುರಕ್ಕೆ ಬಂದು, ನಾರಕಿಗಳನ್ನೆಲ್ಲ ಕರೆದು

ಕೊಂಡು ಹೋಗಿ, ನನ್ನ ಪುರವನ್ನು ಹಾಳ್ಗೆಡಹಿದನು. ಇನ್ನು ನನಗೆ ನರಕಲೋಕಾಧಿಕಾರವೇತಕ್ಕೆ ? ಎಂದು ದುಗುಡದಿಂದ ಬಿನ್ನೈಸಿದನು. ಅದನ್ನು ಕೇಳಿ ಮಹಾದೇವನು ನಸುನಕ್ಕು— "ಸಾನಂದನು ಮುಂದಾಲೋಚನೆಯನ್ನು ಮಾಡದೆ ಅಚಾತುರ್ಯದಿಂದ ಮಾಡಿರಬಹುದು; ಮುಂದೆ ಹಾಗೆ ಮಾಡದಂತೆ ನಾನು ಆತನಿಗೆ ಬೆಸಸುತ್ತೇನೆ; ಇದಕ್ಕಾಗಿ ನೀನು ಮನಸ್ಸಿನಲ್ಲಿ ಚಿಂತೆಪಡಬೇಡ; ಎಂದಿನಂತೆ ಪಾಪಿಗಳನ್ನು ಶಿಕ್ಷಿಸುವ ಕೆಲಸವನ್ನು ಮಾಡಿಕೊಂಡಿರು ಹೋಗು" ಎಂದು ಹೇಳಿ ಸಮಾಧಾನವಡಿಸಿ, ಬೀಗವಕ್ಕೈಗಳನ್ನೆಲ್ಲ ಅವನೊಡನೆಯೇ ಹೋಗಿಸಿಕೆಳಿಸಿಕೊಟ್ಟನು. ಇತ್ತ ಸಾನಂದನನ್ನು ತೆಗೆದಪ್ಪಿ ಸಂತೈಸಿ, ಗಣಪದವಿಯಿತ್ತು, ನರಕವನ್ನು ಬಿಟ್ಟು ಅವನೊಡನೆ ಬಂದಿದ್ದವರಿಗೆಲ್ಲ ಸಾಲೋಕ್ಯವನ್ನು ಅನುಗ್ರಹಿಸಿದನು; ಎಂದು ಚೆನ್ನಬಸವೇಶನು ನಿರೂಪಿಸಿದನೆಂಬಲ್ಲಿಗೆ ಮೂರನೇ ಅಧ್ಯಾಯವು ಸಂಪೂರ್ಣವು.

---

## ೪ನೇ ಅಧ್ಯಾಯವು.

### ವೀರಶೈವಶರಣರ ಚರಿತ್ರ.

ಬಳಿಕ ಸಿದ್ಧರಾಮೇಶನು ಚೆನ್ನಬಸವೇಶನನ್ನು ಕುರಿತು— ಶಿವನಂತ್ರ ಜಪಯೋಗಿಗಳಿಂದಲೇ ಅನೇಕರು ಕೈಲಾಸವನ್ನು ಹೊಂದಿದರೆಂದು ತಾವೇ ಅಪ್ಪಣೆ ಕೊಡಿಸಿದಿರಷ್ಟೆ. ಹೀಗಿರುವಲ್ಲಿ ಇನ್ನು ಇಷ್ಟಲಿಂಗಧಾರಣವೇತಕ್ಕೆ! ಎಂದು ಬೆಸಗೊಳ್ಳಲು, ಚೆನ್ನಬಸವೇಶನು— ಅವರು ಭಕ್ತಿಜಪತಪಸ್ಸುಗಳಿಂದ ಶಿವಲೋಕಕ್ಕೆ ಹೋದರೂ, ಅಲ್ಲಿನ ಹೊರಬಾಗಿಲಲ್ಲಿ ನಂದೀಶನು ಅವರೆಲ್ಲರಿಗೂ ಲಿಂಗಧಾರಣೆಯನ್ನು ಮಾಡದೆ ಒಳಹುಗಿಸುವುದೇ ಇಲ್ಲ, ಎಂದನು. ಹಾಗಾದರೆ ಭೂಲೋಕದಲ್ಲೇ ಲಿಂಗಧಾರಣವನ್ನು ಮಾಡಿಕೊಂಡಿದ್ದು ಶಿವಲೋಕವನ್ನೈದಿದವರ ಚರಿತ್ರವನ್ನು ನನಗೆ ಅಪ್ಪಣೆ ಕೊಡಿಸಬೇಕೆಂದು ಪ್ರಾರ್ಥಿಸಲು, ಚೆನ್ನಬಸವೇಶನು ಹೇಳತೊಡಗಿದನೆಂತೆಂದರೆ— ಲಿಂಗಧಾರಕರಾದ ವೀರಶೈವರಿಗೆ ಜಾತಿ, ಜನನ, ಪ್ರೇತ, ಉಚ್ಛಿಷ್ಟ, ರಜಸ್ಸು, ಎಂಬ ಪಂಚಸೂತಕಗಳು ಇಲ್ಲ. ಶ್ವಪಚಯ್ಯನಿಗೆ ಶಿಷ್ಯನಾಗಿ ದೀಕ್ಷೆಯನ್ನು ಪಡೆದುಕೊಂಡ ಸಾಮವೇದಿಗಳು ಜಾತಿಸೂ

ತಕವಿಲ್ಲವೆಂಬುದನ್ನೂ, ನಿಂಬವ್ವೆಯು ಮಗನನ್ನು ಕೊಂದು ಮತ್ತೆ ಆಗಳೇ ಶಿವನಿಗೆ ಬೋನವನ್ನು ಮಾಡಿಕ್ಕಿ ಪ್ರೇತಸೂತಕವಿಲ್ಲವೆಂಬುದನ್ನೂ, ದಾಸಿ ನಿಂಬ್ಯಕ್ಕನು ರಜಸ್ಸೂತಕವಿಲ್ಲವೆಂಬುದನ್ನೂ, ಸಿಂಧುಮಾರಾಳನು ಜನನಸೂತಕವಿಲ್ಲವೆಂಬುದನ್ನೂ, ಬಿಬ್ಬಬಾಚಯ್ಯನು ಉಚ್ಛಿಷ್ಟಸೂತಕವಿಲ್ಲವೆಂಬುದನ್ನೂ, ದೃಢಪಡಿಸಿರುವರು. ಕಾಚಿರಾಜನು ಪಾದೋದಕದ ಮಹಿಮೆಯನ್ನು ಮೆರೆಯಿಸಿದನು. ವೀರಶಂಕರದಾಸನು ಕನಸಿನಲ್ಲಿ ತಾನು ಭವಿಯನ್ನು ಮುಟ್ಟಿದೆನೆಂದು ತಿಳಿದು ಕಾದಕೊಪ್ಪರಿಗೆಯಲ್ಲಿ ಶರೀರವನ್ನೊಪ್ಪಿಸಿದನು. ಕರುಳಕೇತಯ್ಯನು ಹಾಲನ್ನು ಲಿಂಗಕ್ಕೆ ಸಮರ್ಪಿಸದೆ ಕುಡಿದೆನೆಂದು ತಿಳಿದು ಕರುಳನ್ನೇ ಬಗಿದುಕೊಂಡನು. ಪರ್ವತನಾಥನು ತಾಯಿಯ ಮಾತಿಗಾಗಿ ಕರುಳಿನ ತೋರಣವನ್ನು ಕಟ್ಟಿದನು. ಗಂಡಗತ್ತರಿಯ ನಾಚಯ್ಯನು ಶಿವನಿಂದಕನನ್ನು ತುಂಡುತುಂಡಾಗಿ ಕತ್ತರಿಸಲಾಗಿ ಪರಮತಸ್ಥರು ಬಂದು ಮುತ್ತಿಕೊಳ್ಳಲು, ಆಗ ನಾಚಯ್ಯನು ತಲೆಯನ್ನು ಕತ್ತರಿಗೆ ಕೊಟ್ಟು ಕತ್ತರಿಸಲು, ರಾಚಮಲ್ಲಯ್ಯನ ತಾಳಕ್ಕೆ ಸರಿಯಾಗಿ ಆ ಮುಂಡವು ಕುಣಿದಾಡಿ ಮತ್ತೆ ರುಂಡಕ್ಕೆ ಸೇರಿ ನೇರವಾಯಿತು. ಹಾವಿನಹಾಳಕಲ್ಲಯ್ಯನು ಹಾರ್ವರೊಡನೆ ವಾದಮಾಡಿ ನಾಯಿಯಿಂದ ವೇದವನ್ನು ಹೇಳಿಸಿದನು. ಜಂಬೂರಕಾಳಯ್ಯನು ಹಾಗೆಯೇ ಶುನಕನಿಂದ ವೇದವನ್ನೋದಿಸಿದನು. ತಂದೆಯು ತನ್ನ ತಲೆಯನ್ನು ತರಿದು ಶಿವನಿಗೆ ಆರತಿಯೆತ್ತಿ ಮತ್ತೆ ಮುನ್ನಿನಂತೆ ಸೇರಿಸಿಡಲು, ಮಗನಾದ ಗೋವಿಂದಭಟ್ಟನು ಅದನ್ನು ಕಂಡು, ಶಿವನಿಗೆ ಸಮರ್ಪಿಸಿದಕಾರಣದಿಂದ ನಿರ್ಮಾಲ್ಯವಾದ ಶಿರಸ್ಸನ್ನು ಮತ್ತೆ ಧರಿಸಿಕೊಳ್ಳುವುದು ಅನುಚಿತವೆಂದು ತಿರಸ್ಕರಿಸಿ, ತನ್ನ ತಲೆಯನ್ನು ತರಿದು ಶಿವನಿಗೆ ಬೆಳಗಿ, ಮೂರು ದಿನದ ನಂತರ ಹೊಸತಲೆಯನ್ನು ಪಡೆದನು. ಮೋಟದ ಬಂಕಯ್ಯನು ಒಣಗಿದ ಮೋಟುಮರವನ್ನು ಚಿಗುರಿಸಿ, ಗೊಡ್ಡುಹಸುವಿನಿಂದ ಹಾಲನ್ನು ಕರೆದು, ಬತ್ತಿದ್ದ ಬಿಲುವೆಯಲ್ಲಿ ನೀರನ್ನು ಹುಟ್ಟಿಸಿ, ಜಂಗಮನಿಗೆ ಕೊಟ್ಟನು. ಮತ್ತು ತನ್ನ ಶಿರಸ್ಸನ್ನು ತರಿದು ಲಿಂಗಕ್ಕೆ ಆರತಿಯನ್ನು ಬೆಳಗಿ, ತಲೆಯು ಮತ್ತೆ ಹುಟ್ಟಲಾಗಿ, ಅದನ್ನೂ ತರಿದು ಸಮರ್ಪಿಸುತ್ತ, ಹೀಗೆ ಅರುವತ್ತೆರಡುಬಾರಿ ಮಾಡಿ, ಹೊಸಹೊಸತಲೆಗೆ ಬೇ

ರೆ ಬೇರೆ ಶರೀರಗಳನ್ನು ಪಡೆದನು. ಅನ್ಯರ ಲಿಂಗವನ್ನು ತಾನು ಎಂದಿಗೂ ಮುಟ್ಟದಿರುವ ನೇಮದ ಬೊಮ್ಮಯ್ಯನೊಬ್ಬನಿದ್ದನು. ತನ್ನ ಲಿಂಗವನ್ನು ಇತರರ ಕೈಯಿಂದ ಮುಟ್ಟಿಸದ ನಿಯಮವುಳ್ಳ ಮತ್ತೊಬ್ಬ ಬೊಮ್ಮಯ್ಯನಿದ್ದನು. ಇವರಿಬ್ಬರೂ ಬಸವೇಶನ ಅರಮನೆಗೆ ಬಂದು ಶಿವಾರ್ಚನೆಯನ್ನು ಮಾಡಿಕೊಳ್ಳುತ್ತಿರುವಲ್ಲಿ, ಮೊದಲಿನವನು ಎರಡನೆಯವನ ಲಿಂಗವನ್ನು ಮುಟ್ಟಲಾಗಿ, ಅವರವರ ವ್ರತಕ್ಕೆ ಭಂಗ ಬಂದು, ಈರ್ವರ ಪ್ರಾಣವೂ ಹೋಯಿತು. ಇವರಿಬ್ಬರೂ ಪ್ರಾಣವಳಿದುದನ್ನು ಮತ್ತೊಬ್ಬ ಬೊಮ್ಮಯ್ಯನು ನೋಡಿ, ಭಕ್ತಪ್ರಾಣಿಯಾದುದರಿಂದ ತಾನೂ ಪ್ರಾಣವನ್ನು ಬಿಟ್ಟನು. ಇವರು ಮೂವರನ್ನೂ ನೋಡಿದ ಬಸವೇಶನು ತಾನು ಪ್ರಾಣವನ್ನು ಕಳೆದುಕೊಳ್ಳಲು ಸಿದ್ಧನಾಗುವಷ್ಟರಲ್ಲಿ, ವೀರಬಂಕಯ್ಯನು ತನ್ನ ಕೊರಳಿನ ಖಡ್ಗವನ್ನು ಹಾಕಿ, ಶಿವಾನುಗ್ರಹದಿಂದ ಮೂವರ ಪ್ರಾಣವನ್ನೂ ಬರಮಾಡಿದನು. ಜೈನನಾದ ಜಯಸಿಂಹರಾಜನ ಹೆಂಡತಿ ಶಿವಭಕ್ತೆಯಾದ ಸುಗ್ಗಲದೇವಿಯು, ತನ್ನ ಗುರುವಾದ ದೇವರ ದಾಸಿಮಯ್ಯನನ್ನು ಬರಮಾಡಿ ಜನರೊಡನೆ ವಾದಮಾಡಿಸುವಲ್ಲಿ, ಘಟದಲ್ಲಿ ಮುಚ್ಚಿಟ್ಟಿದ್ದ ಸರ್ಪವನ್ನು ಚಂದ್ರಕಾಂತದ ಲಿಂಗವನ್ನಾಗಿ ಗುರುವು ಮಾಡಲು, ಜಿನರಾಜನು ಬೆರಗಾಗಿ ಶಿವದೀಕ್ಷೆಯನ್ನು ಪಡೆದುಕೊಂಡನು. ಋಷಿಶಾಪದಿಂದ ಕರಡಿಯಾಗಿದ್ದ ಗಂಧರ್ವನನ್ನು ತೆಲುಂಗುಬೊಮ್ಮಯ್ಯನು ಕೊಂದು ಮುಕ್ತನನ್ನು ಮಾಡಿದನು. ಮತ್ತೆ ಪುರಾಣಿಕ ಬ್ರಾಹ್ಮಣನೊಬ್ಬನು ಶಿವನಿಂದೆಯನ್ನು ಮಾಡುತ್ತಿರಲು, ಅವನ ಎದೆಗೆ ಶೂಲವನ್ನು ನೆಟ್ಟು ಕೊಂದನು; ಅದೇತಕ್ಕೆ ಕೊಂದೆಯೆಂದು ರಾಜನು ವಿಚಾರಿಸಲು, ಅವನು ಪಾಪಿಯೆಂದು ನುಡಿದು, ಅವನ ದೇಹವನ್ನೆಲ್ಲ ಹುಳುಗಳ ರಾಶಿಯನ್ನು ಮಾಡಿ ತೋರಿಸಿದನು. ಹೆಂಡದ ಮಾರಯ್ಯನು ತನ್ನ ಕೈಯನ್ನೇ ಕಡಿದುಕೊಂಡೂ, ಕೋಲಶಾಂತಯ್ಯನು ಜಂಗಮಘಾತಕನನ್ನು ಕೊಂದೂ, ಕಕ್ಕಯ್ಯನು ವಿಷ್ಣುಭಕ್ತಪುರಾಣಿಕನನ್ನು ಇರಿದೂ, ಪ್ರಭಾತಯ್ಯನು ತನ್ನ ಮಗನ ಅಳಿವನ್ನು ನೋಡಿ ಸತ್ತ ಕನ್ಯೆಗೆ ಪ್ರಾಣವನ್ನು ಕೊಟ್ಟೂ, ತಮ್ಮ ವೀರವ್ರತವನ್ನು ಮೆರೆದರು. ಒಬ್ಬ ಸೂಳೆಯ ಮನೆಯು ಬೆಂಕಿಯಿಂದ ಬೇಯುತ್ತಿರುವಾಗ, ಅವಳ ವಿಟ

ನಾದ ಜಂಗಮನು ತನ್ನ ಕಾಂತೆಯು ಬೆಂಕಿಯಲ್ಲಿ ಸುಟ್ಟುಹೋಗುವಳೆಂದು ವ್ಯಥೆಪಡುತ್ತಿರಲು, ಉರಗರಾಯಣ್ಣನೆಂಬುವನು ಕಂಡು, ಅಗ್ನಿಯ ಬಾಯಿಂದ ಆ ಸೂಳೆಯನ್ನು ಈಚೆಗೆ ಉಗುಳಿಸಿ ಬದುಕಿಸಿದನು. ಜೋದರಾಯಣ್ಣನು ಬೇಡಿದ ಜಂಗಮನಿಗೆ ಗಜದಾನವನ್ನು ಮಾಡಿದನು. ರಕ್ಕಸಬ್ರಹ್ಮನು ತನ್ನ ಸಮಯಾಚಾರದ ಜಂಗಮಮೂರ್ತಿಯು ಅಳಿದುದರಿಂದ ತನ್ನ ತಲೆಯನ್ನು ಕತ್ತರಿಸಿ ಪ್ರಾಣ ಬಿಟ್ಟನು. ಕಣ್ಣಪ್ಪನೆಂಬ ಶರಣನು ಲಕ್ಷದ ತೊಂಭತ್ತಾರು ಸಾವಿರ ಜಂಗಮರಿಗೆ ಸಲಿಸುವುದಕ್ಕಾಗಿ ಬಿನ್ನಹ ಮಾಡಿ, ಅವರು ಬರದಿರಲು, ಅವರ ಲಿಂಗಗಳನ್ನೆಲ್ಲ ಆಕರ್ಷಿಸಿಕೊಂಡನು. ರಕ್ಕಸಮಾರಣ್ಣನು ತನ್ನೆಡೆಯನ್ನು ಜಂಗಮನು ಉಣ್ಣಲಾಗಿ ಕತ್ತಿಯಿಂದ ಕತ್ತರಿಸಿ, ತನ್ನ ಪಾಲನ್ನು ತೆಗೆದುಕೊಂಡು, ಮರಳಿ ಜಂಗಮನಿಗೆ ಪ್ರಾಣವನ್ನು ಕೊಟ್ಟನು. ಮುಟ್ಟಿಚೌಡಯ್ಯನು ಇಟ್ಟಯಹಣ್ಣನ್ನು ಇನಿವಣ್ಣನ್ನಾಗಿ ಮಾಡಿ ಜಂಗಮನಿಗೆ ತಿನ್ನಿಸಿದನು, ಹೊಳದ್ದ ಬಸವನನ್ನು ಏಳಿಸಿದನು, ಸತ್ತಿದ್ದವಳಿಗೆ ಪ್ರಾಣವನ್ನು ಬರಮಾಡಿದನು. ಕೋಹೂರಬೊಮ್ಮಯ್ಯನು ಜೈನರೊಡನೆ ವಾದ ಮಾತುವಾಗ ಅವರು ಸುಟ್ಟ ಆಲದ ಮರವನ್ನು ತಾನು ಮೊದಲಂತೆ ಮಾಡಿದನು. ಸತ್ತಿದ್ದ ಮಗನಿಗೆ ಆರುತಿಂಗಳಮೇಲೆ ಪ್ರಾಣವನ್ನು ಕೊಟ್ಟನು. ವೇಮನಾರ್ಯನು ತನಗೆ ನಮಸ್ಕರಿಸಿದ ರಾಜನಿಗೆ ಅಲ್ಪಾಯುಷ್ಯವಿದ್ದುದರಿಂದ ಹರಸದೆ ಬಿಟ್ಟು, ಕಡೆಗೆ ಅವನು ಸರ್ಪದಷ್ಟನಾಗಿ ಅಳಿಯಲು, ಹರಣವನ್ನಿತ್ತನು. ಅಮರಗುಂಡದ ಮಲ್ಲಿಕಾರ್ಜುನಾರ್ಯರೆಂಬ ತಮ್ಮ ಗುರುವಿನ ಹಾವುಗೆಗಳನ್ನು ತನ್ನ ಪಾದವು ಸೋಂಕಲಾಗಿ ಗುರುಭಕ್ತಾರ್ಯನು ಕೂಡಲೇ ತನ್ನ ಕಾಲನ್ನು ಕಡಿದುಕೊಂಡು, ಗುರುವಿನ ಆಜ್ಞೆಯಮೇರೆ ಶೂಲವನ್ನೇರಿ, ಆ ಗುರುವಿನ ಅನುಗ್ರಹದಿಂದಲೇ ಮತ್ತೆ ಕಾಲನ್ನು ಪಡೆದನು. ಪ್ರೌಢಮತಿಯನ್ನು ತನ್ನ ಗುರುವಿನ ಸೂಳೆಯೆಂದು ಕಾಣದೆ ಮೋಹಿಸಿದ ಗುರುಭಕ್ತಾಂಡಾರಿಯು ಅವಳಾದ ನಿಜಸ್ಥಿತಿಯನ್ನು ತಿಳಿದ ಬಳಿಕ ಕೊರಗಿ ತನ್ನ ಕಣ್ಣನ್ನೇ ಕಳೆದುಹಾಕಿ, ಗುರುಕರುಣದಿಂದ ಪಡೆದುಕೊಂಡನು. ಉಷಃಕಾಲಕ್ಕೆ ಶಿವಾರ್ಚನೆಯನ್ನು ಮಾಡುವ ನೇಮದ ವೆಲ್ಲಗೊಂಡದ ಮಹಾದೇವನು ಒಂದು ದಿನ ಮೈಮರೆದು ನಿದ್ರೆಯಲ್ಲಿದ್ದು

ಎದ್ದಾಗ ಸೂರ್ಯನುದಿಸಿರುವುದನ್ನು ಕಂಡು ಕಾಲ ಮೀರಿತೆಂಬ ಭಯದಿಂದ ತನ್ನ ಕಣ್ಣನ್ನೇ ಕಳಚಿ, ಮತ್ತೆ ಶಿವಾನುಗ್ರಹದಿಂದ ಪಡೆದನು. ಮತ್ತು ತನ್ನ ಗುರುವಾದ ಪಂಡಿತಾರಾಧ್ಯರ ಪೂಜೋಪಕರಣಗಳನ್ನು ತನ್ನ ಕಾಲು ಸೋಂಕಲು, ಅವನ್ನು ಕಡಿದು, ಮತ್ತೆ ಗುರುಕರುಣದಿಂದ ಪಡೆದನು. ಶಂಕರದಾಸಿಮಯ್ಯನು ಶಿವನಿಂದ ಅಗ್ನಿನೇತ್ರವನ್ನು ಪಡೆದು, ಅನ್ಯದೇವಾಲಯಗಳನ್ನು ಆ ಕಣ್ಣಿನಿಂದ ನೋಡಿ ಸುಡುತ್ತಿದ್ದನು. ಈ ಶರಣನು ಸೂಜಿಯ ಕಾಯಕದಿಂದ ಜೀವಿಸುತ್ತಿರಲು, ಈತನು ಬಡವನೆಂದು ತಿಳಿದು ಜೇಡರದಾಸಿಮಯ್ಯನು ತನ್ನ ಮನೆಯ ಬತ್ತವನ್ನು ಕಳಿಸಿಕೊಡಲು, ಅದನ್ನು ಕೈಯಲ್ಲಿ ಹಿಡಿದು, ಜೇಡರದಾಸಿಮಯ್ಯನ ಕಣಜದ ಬತ್ತವೆಲ್ಲ ಬಯಲಾಗುವಂತೆ ಮಾಡಿ, ಅವನು ಬಂದು ಕೊಂಡಾಡಲು, ಮತ್ತೆ ಎಂದಿನಂತೆ ಬತ್ತವನ್ನುಂಟುಮಾಡಿದನು. ಈ ಮಹಿಮನ ಮುಂದೆ ಮಸಣದ ಮಾರಯ್ಯನು ಒಬ್ಬ ಮಸಣಿಯನ್ನು ಕಾಣಿಸಲು, ನನ್ನ ಮುಂದೆ ಮಸಣಿಯೆ ? ಎಂದು ದಾಸಿಮಯ್ಯನು ಕಿಡಿಗಣ್ಣನ್ನು ಬಿಡಲು, ಅದನ್ನು ಮಸಣಯ್ಯ ಬೆರಳಿನಿಂದ ಮೀಂಟ ನುಂಗಲು, ಅದನ್ನು ಶಿಕ್ಷಿಸಿ, ಅದರ ಮುಖದಿಂದ ಕಿಡಿಗಣ್ಣನ್ನು ಮಾರಯ್ಯನಮೇಲೆ ಉಗುಳಿಸಿದನು. ಸನ್ಯಾಸಿ ಮಾಸಣ್ಣನು ತನ್ನ ಕೈಪೊಣ್ಣಿಯಿಂದಲೇ ಹೊನ್ನನ್ನು ಕರೆದು ಜಂಗಮನಿಗೆ ಕೊಟ್ಟನು. ಮೋರಸವೇಮಯ್ಯನು ತನ್ನ ದೇಹದಮೇಲೆ ಹತ್ತಿದ್ದ ಮಣ್ಣನ್ನು ಹೊನ್ನನ್ನು ಮಾಡಿದನು. ಮೋಳಿಗೆಯಮಾರಯ್ಯನು ಸೌದೆಗಳನ್ನೆಲ್ಲ ಚಿನ್ನದ ಗಟ್ಟಿಗಳನ್ನು ಮಾಡಿ ಜಂಗಮರಿಗೆ ಕೊಟ್ಟನು. ನುಲಿಯಚಂದಯ್ಯನು ಕೂಡ ಜಂಗಮರಿಗೆ ಚಿನ್ನದ ಕೋಲುಗಳನ್ನು ಕೊಟ್ಟನು. ಬೊಂತಾದೇವಿಯು ತನ್ನ ಮೈಮೇಲಣ ಬೊಂತೆಯನ್ನೊದರಿ ಹೊನ್ನನ್ನುದುರಿಸಿ ಜಂಗಮಮೂರ್ತಿಗಿತ್ತಳು. ಮಾರಗೌಡನು ಜಂಗಮಕ್ಕೆ ಸಾವಿರ ಹೊನ್ನುಗಳನ್ನು ಹುಟ್ಟಿಸಿ ಕೊಟ್ಟನು. ಶೂಲಾಯುಧಯ್ಯನು ಚಿತ್ರಪ್ರತಿಮೆಗೆ ಪ್ರಾಣವನ್ನು ಬರಿಸಿ, ಜಂಗಮನಿಗೆ ದಾನ ಮಾಡಿದನು. ಗೌಳಭಟ್ಟರಕನು ಕನ್ನಡಿಯಲ್ಲಿ ಜಂಗಮನಿಗೆ ಶಿವಸ್ವರೂಪವನ್ನು ತೋರಿಸಿದನು. ಕೆಂಬಾವಿಬೋಗಯ್ಯನು ಅಂತ್ಯಜನನ್ನು (ತದ್ರೂಪಶಿವನನ್ನು) ಪೂಜಿಸಿದನೆಂದು ತಿಳಿದು, ಆ ಪುರದ ವಿಪ್ರರು ಅವ

ನನ್ನು ಹೊರಕ್ಕೆ ಹೊರಡಿಸಲು, ಊರಿನ ಲಿಂಗಗಳೆಲ್ಲ ಅವನೊಡನೆಯೇ ಉರುಳಿಕೊಂಡುಹೋದುವು. ಮರಳಿ ಆತನನ್ನು ಕರೆದುಕೊಂಡು ಬರಲು ಲಿಂಗಗಳೂ ಬಂದು ಬಂದರ ಪಿತ್ರನಲ್ಲಿ ಮಾತ್ತೊಂಬು ಕುಳಿತುಕೊಂಡುವು. ಪ್ರೋರಾಂಡಲದ ಸೂರವ್ವೆಯು ಅಂತ್ಯಜರೂಪದಿಂದ ಬಂದಿದ್ದ ಶಿವನಿಗೆ ಉಣಬಡಿಸಿರಲು, ಆ ಅಗ್ರಹಾರದ ಹಾರ್ವರೆಲ್ಲರೂ ಅವಳ ಮನೆಯ ಸುತ್ತಲೂ ಮುತ್ತಿ, ಹೆದರಿಸುತ್ತಿರುವಾಗ, ಶಿವನು– ಇನ್ನೇನು ಗತಿ! ಯೆಂದು ಭಯವನ್ನು ನಟಿಸುತ್ತಿರುವಲ್ಲಿ, ಮುದುಕಿಯು ಅಭಯವನ್ನು ಹೇಳಿ ಶಿವನ ಮೆಚ್ಚಿಗೆಯನ್ನು ಪಡೆದಳು. ತೆಲುಗೇಶನು ನವಲಿಂಗಾನುಸಂಧಾನವನ್ನರಿತೂ, ಮಸಣಯ್ಯನು ಲಿಂಗಾಂಗಸಾಮರಸ್ಯಜ್ಞಾನವನ್ನು ಪಡೆದೂ, ಡಕ್ಕೆಯಬೊಮ್ಮಯ್ಯನು ಅಷ್ಟಾವರಣತತ್ತ್ವವನ್ನರಿದೂ, ಭಾನುದೇವನು ಶಿವನನ್ನೇ ಗುರುವನ್ನಾಗಿ ಮಾಡಿಕೊಂಡು ಲಿಂಗಾಂಗಸಂಬಂಧವನ್ನರಿತೂ, ಬಡಿಹೋರಿಬ್ರಹ್ಮನು ಬಡಿಹೋರಿಕಾಯಕವನ್ನು ಮಾಡಿಯೂ, ಎರೇಶ್ವರದಕೇತಯ್ಯನು ಮಗನಿಗೆ ಮಗಳನ್ನೇ ಮದುವೆ ಮಾಡಿಯೂ, ಕಣಿಯೂರಬಾಚಯ್ಯನು ಹುರಿದ ಬೀಜವನ್ನು ಬಿತ್ತಿ ಬೆಳೆದೂ, ಸುಗುಣಯ್ಯನು ಕೊಯ್ದ ಕೂಳೆಯಲ್ಲಿ ಮತ್ತೆ ತೆನೆಗಳನ್ನು ಕೊಯ್ದೂ, ಇಳೆಹಾಳಬೊಮ್ಮಯ್ಯನು ಬೀಜವನ್ನು ಬಿತ್ತದೆ ಬೇಕಾದ ಧಾನ್ಯಗಳನ್ನು ಬೆಳೆದೂ ಭಕ್ತಿಪ್ರಭಾವವನ್ನು ಮೆರೆಯಿಸಿದರು. ಕಾಳರಾಜನು ತನ್ನ ಇಷ್ಟಲಿಂಗಕ್ಕೆ ಷಡ್ರಸಾನ್ನವನ್ನುಣಿಸುತ್ತಿದ್ದನು. ಚೆನ್ನಯ್ಯನು ತಾನುಣ್ಣುತ್ತಿದ್ದ ಅಂಬಲಿಯು ರುಚಿಯಾಗಿರಲು, ಶಿವನಿಗೂ ಕುಡಿಸಿದನು. ಶೀಲವಂತಕೇತಯ್ಯನು ಪ್ರತಿದಿನವೂ ಮಳೆಯ ನೀರನ್ನು ಕರೆಸುತ್ತಿದ್ದನು. ಪುಲಿಕಾಮನು ನವನಿಧಿಯನ್ನು ಪಡೆದಿದ್ದನು. ಕೋಟೆಯ ಶಿವನಾಗಯ್ಯನು ಧಾನ್ಯದ ಮಳೆಯನ್ನು ಬರಿಸಿದನು. ಅಂಬಿಗರಚೌಡಯ್ಯನು ಸಂಸಾರಸಾಗರವನ್ನು ದಾಟಿದನು. ಚಂಡಕೇಶಿ, ಮಾರಾಭಕ್ತ, ಇವರಿಬ್ಬರೂ ಲಿಂಗದಲ್ಲೇ ಹೊಕ್ಕು ಅಡಗಿದರು. ಚಿಕ್ಕಲಿಗನಾಚಯ್ಯನು ಹಾಡಿ ಶಿವಪ್ರಸಾದವನ್ನು ಪಡೆದನು. ಕಕ್ಕಯ್ಯನ ಕೋಲುಗೆಜ್ಜೆಯ ಲಯಕ್ಕೆ ಸರಿಯಾಗಿ ಶಿವನು ಕುಣಿದನು. ಚಿಕ್ಕಯ್ಯನ ಭಕ್ತಿಗೆ ಮೆಚ್ಚಿ ಶಿವನು ಲಿಂಗರೂಪದಿಂದ ನೆಲಸಿದನು. ಅಕ್ಕಿಯಮಾರಣ್ಣನು ಜಂಗಮ

ರಿಗೆ ಮೃಷ್ಟಾನ್ನವನ್ನೀಡಿ ಶಿವಾನುಗ್ರಹವನ್ನು ಪಡೆದನು. ಉಡುಗಣಿಯ ಪೆರುಮಾಳೆಯು ಜಂಗಮರಿಗೆ ರಾಜ್ಯವನ್ನೆಲ್ಲ ಕೊಟ್ಟನು. ಇಡುಗಡಲ ಪೆರ್ಮಾಡಿಯು ಜಂಗಮರಿಗೆ ಧನಧಾನ್ಯವನ್ನೆಲ್ಲ ಸಮರ್ಪಿಸಿದನು. ನಿತುಗುಡಿಯ ಮಾರನು ಜಂಗಮನಿಗೆ ತನ್ನ ಹೆಂಡತಿಯ ಸೀರೆಯನ್ನು ಬಿಚ್ಚಿಸಿ ಕೊಟ್ಟನು. ಸಿಂಧುಬಲ್ಲಾಳನೂ ಆಯ್ದಕ್ಕಿಯ ಮಾರಯ್ಯನೂ ಅರುಹವಗೆಯೂ, ತಮ್ಮ ತಮ್ಮ ಹೆಂಡಿರನ್ನು ಜಂಗಮರಿಗೆ ಕೊಟ್ಟರು. ವೀರಬೊಮ್ಮಯ್ಯನು ಪರವಾದಿಯಾದ ಶಿವದ್ವೇಷಿ ಶಂಕರಕೋಟಿಗನನ್ನು ಕೊಂದನು, ವೀರಬಲದೇವನು ನೆಲನಾಡಚೋಳನ ತಲೆಯನ್ನು ಕಡಿದನು, ನಗರದಬೊಮ್ಮದೇವನು ಪರವಾದಿಜೈನನನ್ನು ಕೊಂದನು, ಶಿವಾನುಗ್ರಹವನ್ನು ಪಡೆದರು. ಪರಮಭಕ್ತಯ್ಯನು ಆಳವ ಗುರುವಿಗೆ ತನ್ನ ಪ್ರಾಣವನ್ನಿತ್ತು ಉಳುಹಿದನು. ಬಿಲ್ಲಮರಾಯನು ತನ್ನ ಗುರುವನ್ನು ಶಿವಲೋಕಕ್ಕೆ ಕರೆದೊಯ್ದನು. ಗೊಗೆಯಮಾರಣ್ಣನು ಗುರೂಪದೇಶದಿಂದ ಮುಕ್ತನಾದನು. ಬೊಪ್ಪಿದೇವನು ತನ್ನ ಮಗನಿಗೆ ಗುರುವಿನ ಹೆಸರನ್ನು ಕರೆದು ಕಾಯಸಿದ್ಧಿಯನ್ನು ಪಡೆದನು. ಮಾದರಧೂಳಯ್ಯನು ಮಾಚಯ್ಯನಿಗೆ ಉಳಿಯ ಮೊನೆಯಲ್ಲಿ ಶಿವಲಿಂಗವನ್ನು ತೋರಿಸಿದನು. ಚಿಕ್ಕಲಿಗೆಯಯ್ಯನು ಬರೆಯಲ್ಲಿ ಭೀಮರಸನಿಗೆ ಲಿಂಗವನ್ನು ತೋರಿಸಿದನು. ಪೆದ್ದಯ್ಯನಿಗೆ ಇವಿರಿನಲ್ಲಿ ಉರಿಲಿಂಗವನ್ನು ತೋರಿಸಿದನು. ಸೊಡ್ಡಳಬಾಚರಾಜಯ್ಯನಿಗೆ ಸೌರಾಷ್ಟ್ರಸೋಮೇಶನು ದವಸದ ಕೊಟಾರದಲ್ಲಿ ತೋರಿದನು. ವೀರರೇಚಯ್ಯನೂ ಸೋಮಿದೇವಯ್ಯನೂ ಶಿರಸ್ಸನ್ನು ಕತ್ತರಿಸಿ ಶಿವಲಿಂಗಕ್ಕೆ ಆರತಿಯನ್ನೆತ್ತಿ ಮತ್ತೆ ಪಡೆಯುತ್ತಿದ್ದರು. ಭವಿಗಳನ್ನು ಮುಟ್ಟದ ಪ್ರತಿಜ್ಞೆಯಿದ್ದ ಕೇಶಿತಂದೆಯು ತನ್ನ ತಲೆಯನ್ನು ಭವಿಯು ಮುಟ್ಟಲಾಗ, ಆ ಶಿರವನ್ನೇ ಕತ್ತರಿಸಿ, ಮತ್ತೆ ಪಡೆದನು. ಏಕಾಂತರಾಮಯ್ಯನು ಜೈನರೊಡನೆ ವಾದ ಮಾಡಿ ತಲೆಯನ್ನು ಕತ್ತರಿಸಿಕೊಂಡು, ಏಳು ದಿನದಮೇಲೆ ಪಡೆದನು. ಪುಲಿಗೆರೆಯ ಸೋಮಣ್ಣನು ಜಿನವಿಗ್ರಹವನ್ನು ನೋಡಿ ಸೀಳಿ ಶಿವಲಿಂಗವನ್ನು ಮಾಡಿದನು. ಮಾರುಡಿಗೆನಾಚಯ್ಯನು ಜೈನರನ್ನು ಕೊಂದು ಅವರ ಬಸದಿಗಳಲ್ಲಿ ಲಿಂಗಪ್ರತಿಷ್ಠೆ ಮಾಡಿದನು, ಆದಯ್ಯನು ಜಂಗಮರಿಗಾಗಿ ಮಾಡಿಸಿದ್ದ ಅನ್ನವನ್ನು

ಜೈನರು ಎತ್ತಿಕೊಂಡು ಹೋಗಿ, ಆತನ ಹೆಂಡತಿಯನ್ನು ಕತ್ತರಿಸಿಹಾಕಲು, ಪುಲಿಗೆರೆಸೋಮಯ್ಯನನ್ನು ಸುರಹೊನ್ನೆಯೆಂಬ ಜೈನರ ಬಸದಿಗೆ ಕರೆತಂದು ಅವರನ್ನೆಲ್ಲ ಕೊಲ್ಲಿಸಿದನು. ಮುಖರ್ಜನೈನಾರರು ವೇಷಧಾರಿಯಾದ ಶಿವನೊಡನೆ ಜೂಜಾಡಿ, ಸೋಲಿಸಿ, ಅವನು ಪಣವನ್ನು ಕೊಡದಿರಲು ಕಟ್ಟಿಹಾಕಿದ್ದು, ಅವನನ್ನು ಜಂಗಮನೆಂದು ತಿಳಿದಾಗ ಬಿಟ್ಟುಬಿಟ್ಟನು. ಚಿರುತೊಣೆಯನು ಜಂಗಮಾರ್ಚನೆಗೆಂದು ಕೊಟ್ಟದ್ದ ಧನವನ್ನು ಹೆಂಡತಿಯು ಬಂಧುಗಳಿಗೆ ವೆಚ್ಚಮಾಡಿ ಉಣ್ಣಿಸಲಾಗ, ಅವಳನ್ನೂ ನಂಟರನ್ನೂ ಕಡಿದು ಕೈಲಾಸಕ್ಕೆ ಹೋದನು. ಸಿರಿಯಾಳಸೆಟ್ಟಿಯು ತನ್ನ ಮಗನನ್ನು ತರಿದು ಶಿವನಿಗೆ ಉಣಬಡಿಸಿದನು. ಶಿವನನ್ನೂ ಆ ಸಿರಿಯಾಳನನ್ನೂ ಅವರ ಘೋರಕೃತ್ಯಾಚರಣೆಗಾಗಿ ಹಲಾಯುಧಯ್ಯನು ಬಹಿಷ್ಕರಿಸಲು, ಸಿರಿಯಾಳನ ಹೆಂಡತಿಯೂ ಪಾರ್ವತಿಯೂ, ಆತನ ಬಳಿಗೆ ಬಂದು ಬೇಡಿಕೊಳ್ಳಲು, ಅವರ ಗಂಡಂದಿರನ್ನು ಗುಂಪಿಗೆ ತೆಗೆದುಕೊಂಡನು. ಬಾಹೂರಬೊಮ್ಮಯ್ಯನು ಆನೆಯನ್ನು ಕೊಂದು ಪ್ರಾಣವನ್ನಿತ್ತು ಜೋಳದರಾಶಿಯಲ್ಲಿ ಶಿವನನ್ನು ಪೂಜಿಸಿ, ಶಿಲೆಯನಂದಿಗೆ ಕಬ್ಬನ್ನು ತಿನ್ನಿಸಿದನು. ಕಾಳವ್ವೆಯು ಕಗ್ಗಲ್ಲಿನಿಂದ ಹಾಲನ್ನು ಕರೆದು ಶಿವನಿಗುಣಿಸಿದಳು. ಕೋಳೂರಕೊಡಗೂಸು ಹಾಲನ್ನು ಶಿವಲಿಂಗಕ್ಕೆ ಕುಡಿಸಿದಳು. ಚೋಳಿಯಕ್ಕನು ಉಣ್ಣುವಾಗ ರುಚಿಯಾಗಿ ಕಂಡ ಹುಗ್ಗಿಯನ್ನು ಭೀಮನಾಥನಿಗೆ ಉಣ್ಣಿಸಿದಳು. ವಿರೂಪಾಕ್ಷಯ್ಯನು ತನ್ನ ಎರಡು ಕಣ್ಣುಗಳನ್ನೂ ಶಿವನಿಗರ್ಪಿಸಿ ಮತ್ತೆ ಪಡೆದನು. ದೇವಯ್ಯನು ತನ್ನ ಕಣ್ಣನ್ನು ಕಳೆದು ಶಿವನಿಗೆ ಅರ್ಚಿಸುವುದನ್ನು ಬರಮಾತದನರು ನೋಡಿ ಹಾಸ್ಯಮಾಡಲು, ಕೋತ್ರಯ ಕಣ್ಣನ್ನು ಕಳೆದು ಮತ್ತೆ ಪಡೆದು ತೋರಿಸಿದನು. ಶಿವರಾತ್ರಿಯ ಸಂಕಣ್ಣನು ಬೇಲಿಸು ಭರುಬಂದ ಬಿಲ್ವಪತ್ರೆಯನ್ನು ಕಿತ್ತುಹಾಕುತಲಿದ್ದು ಶಿವಾರ್ಚನೆಯನ್ನು ಮಾಡಿ ಕೈಲಾಸವನ್ನು ಪಡೆದನು. ಇದರಂತೆಯೇ ಶಿವರಾತ್ರಿಅಪ್ಪಯ್ಯನೂ ಭದ್ರಯ್ಯನೂ ಬಿಲ್ವದಿಂದರ್ಚಿಸಿ ಮುಕ್ತರಾದರು. ಹಾವಮಲ್ಲಯ್ಯನು ಶಿವಾರ್ಚನೆಗೆ ಬಂದು ಕಣಗಿಲೆಯ ಹೂವು ಸಾಲದಿರಲು, ತನ್ನ ಕಣ್ಣನ್ನೇ ತೆಗೆದರ್ಪಿಸಿ ಮತ್ತೆ ಪಡೆದನು. ಶಿವಯೋಗಿದೇವಯ್ಯನು ತನ್ನ ನಾಲಿಗೆಯನ್ನು ಕಡಿದು

ಮತ್ತೆ ಪಡೆದನು. ಉರುಲಿಂಗಪೆದ್ದಯ್ಯನು ಶರಣನೇ ಸತಿ, ಲಿಂಗವೇಪತಿಯೆಂಬ ಭಾವದಿಂದಿರಲು, ಸ್ತನವೇ ಲಿಂಗವಾಗಿ ಪರಿಣಮಿಸಿತು. ಹೆಂಗುಸು ಗಂಡಾದಳು. ಪರಿವಳಿಗೆಯ ವೈಜಮ್ವೆಯು ಜಂಗಮರಿಗೆ ಊಟಕ್ಕಿಕ್ಕಲಾಗಿ ಜೈನನಾದ ಗಂಡನು ಆಕೆಯನ್ನು ಹೊಡೆಯೋಡಿಸಲಾಗಿ, ಅವಳು ಹೆದರಿ ಶಿವಾಲಯವೆಂದು ಜಿನಾಲಯವನ್ನು ಹೊಕ್ಕು, ಶಿವಲಿಂಗವೆಂದು ಜಿನನನ್ನು ತಬ್ಬಿಕೊಳ್ಳಲು, ಅದು ಒಡೆದು ಅವಳನ್ನು ಐಕ್ಯಮಾಡಿಕೊಂಡು ಲಿಂಗಾಕಾರವಾಗಿ ವೈಜಕೇಶ್ವರನೆಂದು ಪ್ರಸಿದ್ಧವಾಯಿತು. ಶಿವಯೋಗಿ ಮಲ್ಲರಸರಾಜ್ಞೆಯಿಂದ ಸಕಳೇಶಮಾದಿರಾಜನು ಕಲ್ಯಾಣದಲ್ಲಿರುತ್ತ, ಚಿಕ್ಕಮಾದಣ್ಣನು ಅಳಿಯಲಾಗಿ ಅವನ ಹೆಂಡತಿ ಮಾದೇವಿಯು ಸಮಾಧಿಯನ್ನು ತೋಡುತ್ತಿರಲು, ಮಗನಾದ ಬಾಲಲಿಂಗಯ್ಯನು ಮಾದಿರಾಜನೊಡನೆ ಬಿನ್ನೈಸಲು, ಚಿಕ್ಕಮಾದಣ್ಣನ ಪ್ರಾಣವನ್ನು ಬರಮಾಡಿದನು. ಶಿವಲೆಂಕಮಂಚಣಪಂಡಿತನು ತನ್ನ ಬೆರಲನ್ನು ಕಡಿದು ಶಿವನಿಗೆ ಸಮರ್ಪಿಸುತ್ತಿರಲು, ದೂಷಕರು ಕಂಡು ಹಾಸ್ಯ ಮಾಡಲಾಗಿ, ಕಾಶಿಯ ವಿಶ್ವೇಶ್ವರನ ಮುಂದೆ ಹರಿಯು ಬಂದು ಅಡ್ಡಬೀಳುವಂತೆ ಮಾಡಿದನು. ಆರ್ಯಮರಾಜನು ಹರಿ ಯೆಂದು ನುಡಿದ ಹಾರ್ವನನ್ನು ಕೊಂದನು. ಸತ್ಯಕ್ಕನು ವಿಷ್ಣುನಾಮೋಚ್ಚರಣೆಯನ್ನು ಮಾಡಿದ ಭಿಕ್ಷುಕನನ್ನು ಸೌಟನಿಂದಲೇ ಬಡಿದು ಕೊಂದಳು. ಬಳ್ಳೇಶಮಲ್ಲಯ್ಯನು ಬಳ್ಳವನ್ನೇ ಲಿಂಗವನ್ನಾಗಿ ಮಾಡಿದನು. ಕಲಿಗಣನಾಥನು ಭವಿಗಳಿಗೆಲ್ಲ ಲಿಂಗಧಾರಣೆ ಮಾಡಿಸುತ್ತಿರಲು, ಶಿವನು ಭವಿವೇಷದಿಂದ ಅವನಿದಿರಿಗೆಬಂದು, ಬಲಾತ್ಕರಿಸಿದರೂ ಲಿಂಗವನ್ನು ಕಟ್ಟಿಕೊಳ್ಳದಿದ್ದು, ಅವನು ಕಡಿಯಲಾಗಿ ನಿಜರೂಪವನ್ನು ತೋರಿಸಿ, ಕಡೆಗೂ ಅವನಿಂದ ಲಿಂಗಧಾರಣೆಯನ್ನು ಮಾಡಿಸಿಕೊಂಡನು. ಕುಂಬಾರಗುಂಡಯ್ಯನು ಮಡಕೆಯನ್ನು ತಟ್ಟುವ ಲಯಕ್ಕೆ ಸರಿಯಾಗಿ ಶಿವನನ್ನು ಕುಣಿಸಿದನು. ಬುದ್ಧಯ್ಯನೂ ಭದ್ರಗಾಯಕದ ಅಲ್ಲಮಯ್ಯನೂ ಕೇಶವನೂ ಹಾಡಿ ಶಿವನನ್ನು ಮೆಚ್ಚಿಸಿದರು. ಚೌಡಯ್ಯನು ಶಿವನನ್ನು ಕುಣಿಸಿದನು. ಸೋಮಣ್ಣನು ರಂಗವಲ್ಲಿಯ ಸೇವೆಯಿಂದಲೂ, ಸುಕುಮಾರಯ್ಯನು ಕಳುವಿನ ಕಾಯ್ಕದಿಂದಲ್ಲೂ, ವಿರಕ್ತಮಾಣಿಕಯ್ಯನು ಲಿಂಗವನ್ನು ಮೆಟ್ಟಿಯೂ, ಹೂವಿನ ದಂಡಯ್ಯನು ಹೂವಿನ ಕರಡಿಗೆಯಿಂದ

ಲಿಂಗವನ್ನು ಬಡಿವೂ, ಲಿಂಗದಿಂದ ಮುಕ್ತಿಯನ್ನು ಪಡೆದರು. ಪರನಾದಿಗಳನ್ನುಕೊಲ್ಲುತ್ತಿದ್ದ ವೀರಸಂಗಯ್ಯನು ಜಂಗಮವೇಷದಿಂದ ಬಂದವನಿಗೆ ಶರೀರವನ್ನಿತ್ತನು. ಹೇರೂರನಾಚಯ್ಯನು ಜಂಗಮನಿಗೆ ತನ್ನ ದೇಹವನ್ನುಕಡಿದೊಪ್ಪಿಸಿದನು. ವೀರಸೋಮಯ್ಯನು ಕಾಲಿನಲ್ಲಿ ದಸಿಯು ನಟ್ಟದ್ದರೂ ಲಕ್ಷಿಸದೆ ಶಿವನಿಗೆ ಅಭಿಷೇಕಜಲವನ್ನು ತಂದರ್ಪಿಸಿದನು. ವೀರಭೋಗಣ್ಣನು ತನ್ನ ದೇಹವನ್ನು ಆಯುಧಗಳಿಂದ ಕಡಿದುಕೊಂಡನು. ದಸರಯ್ಯನು ಜಂಗಮವೇಷದ ಮೋಟನು ತನ್ನನ್ನು ಹೊಡೆದರೂ, ಅವನಿಗೆ ಕೈಯಿತ್ತನು. ಕೇಶಿರಾಜನು ತನ್ನ ಕೈಯ ಲಿಂಗವು ನೀರಿನಲ್ಲಿ ಬಿದ್ದು ಹೋಗಲಾಗಿ ಸ್ತೋತ್ರ ಮಾಡಿ ಮತ್ತೆ ಅದನ್ನೇ ಬರಮಾಡಿಕೊಂಡನು. ಶಿವದೇವಯ್ಯನು ಬಚ್ಚಲನೀರಿನಿಂದ ತೊನ್ನನ್ನು ಹೋಗಲಾಡಿಸಿದನು. ಅದರಂತೆಯೇ ಮಾದರದೂಡಯ್ಯನು ಸ್ನಾನ ಮಾಡಿದ ನೀರಿನಿಂದ ಅನೇಕರ ಕುಷ್ಠವನ್ನು ಪರಿಹರಿಸಿದನು. ನಿರ್ವಿಷದ ಸಂಗಯ್ಯನು ತನ್ನನ್ನು ಕಚ್ಚಿ ಸತ್ತ ಹಾವಿಗೆ ಪ್ರಾಣವನ್ನಿತ್ತನು. ಅದರಂತೆಯೇ ಧರ್ಮಯ್ಯನೂ ಹಾವಿನಹಾಳಕಲ್ಲಯ್ಯನೂ ತಮ್ಮನ್ನು ಕಚ್ಚಿ ಮಡಿದ ಹಾವುಗಳಿಗೆ ಹರಣವನ್ನಿತ್ತರು. ಇದೇ ಕಲ್ಯಾಣಪಟ್ಟಣದಲ್ಲಿರುವ ಕಿನ್ನರಬ್ರಹ್ಮಯ್ಯನು ಬಿಜ್ಜಳರಾಜನು ಕಾಣುವಂತೆಯೇ ತ್ರಿಪುರಾಂತಕೇಶ್ವರನಿಂದ ಸಾಕ್ಷ್ಯವನ್ನು ನುಡಿಸಿದನು. ಈ ಮುಗಿದೇವಯ್ಯನು ಮನೆಯಿಂದ ಹೊರಡಿಸಲ್ಪಟ್ಟ ಕಾರಣದಿಂದ ಲಿಂಗದ ತಲೆಯಮೇಲೆ ತನ್ನ ಮನೆಯ ಮರಮುಟ್ಟುಗಳನ್ನೆಲ್ಲ ಹೊರಿಸಿಕೊಂಡು ಹೋದವನು. ಈತನೇ ಕನ್ನದ ಕಾಯಕದಿಂದ ಜಂಗಮಾರ್ಚನೆಯನ್ನು ಮಾಡುತ್ತ, ಗೋಡೆಯ ಮಣ್ಣನ್ನು ಚಿನ್ನವನ್ನಾಗಿ ಮಾಡಿದವನು. ಈ ಹಾದರದ ಬೊಮ್ಮಣ್ಣನು ಸಾಯಲಾಗಿ, ಇವನ ಹೆಂಡತಿಯು ಹಾದರದಿಂದ ಹಣವನ್ನು ಗಳಿಸಿ, ಜಂಗಮರಿಗೆ ಪಾಕಮಾಡಿಕ್ಕಿ, ಅವರು ಹಸಿದುದರಿಂದ ತಡಮಾಡದೆ ಎದ್ದು ಪಙ್ಕ್ತಿಗೆ ಬಾರೆಂದು ಸತ್ತಿದ್ದ ಗಂಡನನ್ನು ಕೂಗಿ ಎಬ್ಬಿಸಿದಳು. ಈ ನಿರ್ಲಜ್ಜೆಯ ಶಾಂತಯ್ಯನೂ ಅವನ ಹೆಂಡತಿಯೂ ಸಹ ಶೀತವನ್ನು ತಡೆಯಲಾರೆನೆಂದು ಜಂಗಮವೇಷದ ಶಿವನು ಬೇಡಲಾಗಿ ಉಟ್ಟಿದ್ದ ಬಟ್ಟೆಗಳನ್ನೇ ತೆಗೆದುಕೊಟ್ಟು ದಿಗಂಬರರಾಗಿದ್ದವರು. ಈ ಮರುಳಶಂಕರದೇವ

ನು ಕಾಳಿಂಗದೇಶದಿಂದ ಇಲ್ಲಿಗೆ ಬಂದು ೧೦ ವರ್ಷಗಳಾದುವು. ಇವನು ಪ್ರಸಾದಸೇವನೆಯಿಂದಲೇ ಮುಕ್ತಿಯನ್ನು ಪಡೆಯುವನು. ಪಾರ್ವತಿಯಂಶವೇ ಉಡುತಡಿಯ ಮಹಾದೇವಿಯಕ್ಕನಾಗಿ ಹುಟ್ಟಿ, ಕಾಶಿರಾಜನನ್ನು ಭವಿ ಯೆಂಬದಾಗಿ ಜರೆದುಬಿಟ್ಟು, ಘನವೈರಾಗ್ಯದಿಂದ ಬಾಳಿದವಳು. ಮಲ್ಲಗಣವೆಂಬುವನು ಮೇಖಲಾಸುರನನ್ನು ಕೊಂದು, ಭೂಮಿಯಲ್ಲಿ ಕಲಕೇತಯ್ಯನೆಂಬ ಹೆಸರಿನಿಂದವತರಿಸಿ, ಬಿಜ್ಜಳನ ತಗರನ್ನು ಕೊಂದು, ದೊರೆಯು ಬಂದು ಸ್ತುತಿಸಲಾಗಿ ಅದಕ್ಕೆ ಪ್ರಾಣವನ್ನಿತ್ತು, ಅದರಕೊಂಬನ್ನು ಸದಾ ಕೈಯಲ್ಲಿ ಹಿಡಿದು, ಸುಂಕದ ಬಂಕಯ್ಯನಿಗೆ ಹೊನ್ನನ್ನು ಉದುರಿಸಿಕೊಟ್ಟನು. ದಕ್ಷಯಾಗವನ್ನು ನಾಶಮಾಡಿದ ವೀರಭದ್ರೇಶನೇ ಭೂಮಿಯಲ್ಲಿ ಪರವಾದಿಗಳನ್ನು ಖಿಲಗೊಳಿಸುವುದಕ್ಕಾಗಿ ಮಡಿವಳಮಾಚಯ್ಯನಾಗಿ ಅವತರಿಸಿ, ಬಿಜ್ಜಳನ ಸೈನ್ಯವನ್ನುಕೊಂದು, ಮತ್ತೆ ಅವನು ಸ್ತುತಿಸಲಾಗಿ ಮೊದಲಿನಂತೆ ಹುಟ್ಟಿಸಿ, ಶಿವಶರಣರ ಮನೋಮಾಲಿನ್ಯವನ್ನೆಲ್ಲ ತೊಳೆದು ನಿರ್ಮಲಗೊಳಿಸುತ್ತ, ಮಡಿವಳತನದ ಕಾಯಕದಲ್ಲಿರುವನು. ಈತನೇ ನಿಜಗುಣಮಹಾರಾಜನು, ಈತನೇ ಚಂದಿಮರಸನು, ಇವರೀರ್ವರೂ ಘನತರಮಂತ್ರಿಗಳಾಗಿದ್ದು ವೈರಾಗ್ಯವನ್ನು ಪಡೆದವರು. ಈತನು ಸಪ್ಪೆಯಅಲ್ಲಮದೇವ, ಈತನೇ ಮಿಂಡಸಂಗಯ್ಯ, ಈತನೇ ಮುಗ್ಧಸಂಗಯ್ಯ, ಈತನೇ ಮಾರಿತಂದೆ, ಈತನೇ ಪ್ರಸಾದಿಭೋಗಣ್ಣ, ಈತನೇ ಮೋದರಕೇತಯ್ಯ, ಈತನೇ ಡೋಹರಕಕ್ಕಯ್ಯ, ಈತನೇ ಭರಿತಾರ್ಪಣದ ಸಂಗಯ್ಯ, ಈತನೇ ವೈದ್ಯದ ಸಂಗಣ್ಣ, ಈತನೇ ಸತ್ಯಣ್ಣ, ಈತನು ದಾಸೋಹಿಸಂಗಣ್ಣ, ಈತನು ಬಾಚಿಯ ಕಾಯಕದ ಬಸವಪ್ಪ, ಈತನು ನಗೆಯ ಮಾರಣ್ಣ, ಈತನು ಘಟ್ಟಮರಸಯ್ಯ, ಈತನು ಒಕ್ಕಲಿಗಮುದ್ದಯ್ಯ, ಈತನು ಲದ್ದೆಯ ಸೋಮಯ್ಯ, ಈತನು ಗುವುಡಿ ಮಾರಿತಂದೆ, ಈತನು ಲಿಂಗಬಂಕಣ್ಣ, ಈತನು ರಾಯಸದ ಮಂಚಣ್ಣ, ಇವನು ಅವಸರದಲೆಂಕಣ್ಣ, ಈತನು ಮಡಿಹಾಲಿಯಮುತ್ತಣ್ಣ, ಈತನು ಬೊಕ್ಕಸದ ಚಿಕ್ಕಣ್ಣ, ಈತನು ಭಂಡಾರಿ ಶಾಂತಯ್ಯ, ಈತನು ಹಡಪದಪ್ಪಣ್ಣ, ಈತನು ಚವರದನಾಚಯ್ಯ, ಈತನು ಕಾಳಂಜಿಯಪ್ಪಣ್ಣ, ಈತನು ಭಟ್ಟಮಾರಣ್ಣ, ಈತನು ಸ್ತುತಿಪಾಠಕಗಬ್ಬಿದೇವಯ್ಯ,

ಈತನು ಕೂಗಿನಮಾರಯ್ಯ, ಈತನು ಕೋಲಶಾಂತಯ್ಯ, ಈತನು ಪ್ರಹರಿಯ ಮಾರಣ್ಣ, ಈತನು ಹೊಡೆಹುಲ್ಲಬಂಕಯ್ಯ, ಈತನು ತುರುಗಾವಿಯ ಮಾರಣ್ಣ, ಈತನು ಅಗ್ಗಣಿಯ ಹೊನ್ನಯ್ಯ, ಈತನು ಸತ್ತಿಗೆಯ ಶಾಂತಯ್ಯ, ಇವರು ಮೊದಲಾದ ಏಳುನೂರೆಪ್ಪತ್ತು ಪುರಗಣಂಗಳು ತಮ್ಮ ತಮ್ಮ ಕಾಯಕವನ್ನು ಮಾಡಿಕೊಂಡಿರುವರು. ಇವರೆಲ್ಲರನ್ನೂ ಕೂಡಿಕೊಂಡು ಬಸವರಾಜನು ಭೂಮಿಯಲ್ಲಿ ವೀರಶೈವಾಚಾರವನ್ನುದ್ಧರಿಸುವುದಕ್ಕಾಗಿ ಬಂದಿರುವನು. ಇವರೆಲ್ಲರ ಮಹಿಮೆಯನ್ನೂ ಸಾಂಗವಾಗಿ ವರ್ಣಿಸುವುದಕ್ಕೆ ನನಗೆ ಅಸಾಧ್ಯವು. ಇವರಲ್ಲಿ ಬಸವೇಶನ ಮಹಿಮೆಯೊಂದನ್ನು ಈಗ ವರ್ಣಿಸುತ್ತೇನೆ; ಕೇಳು.- ಇವನು ಸಾಕ್ಷಾತ್ಪ್ರಣವಸ್ವರೂಪಿಯಾದ ದ್ವಿತೀಯಶಂಭುವು. ಶಿಲಾದಮುನಿಯ ತಪಸ್ಸಿನಿಂದ ಅವನಿಗೆ ಸುತನಾಗಿ ಅವತರಿಸಿ, ಪುನಃತಪಸ್ಸಿನಿಂದ ಶಿವನನ್ನು ಮೆಚ್ಚಿಸಿ ಕೈಲಾಸದಲ್ಲಿದ್ದನು. ಹೀಗಿರುವಲ್ಲಿ ಒಂದು ದಿವಸ ಹರಿಬ್ರಹ್ಮಾದಿಸಕಲ ದೇವತಾಸ್ತೋಮದಿಂದ ಸೇವಿಸಿಕೊಳ್ಳುತ್ತಲಿದ್ದ ಪರಶಿವನ ಒಡ್ಡೋಲಗಕ್ಕೆ ದೇವೇಂದ್ರನು ತನ್ನ ಚತುರಂಗಬಲದೊಡನೆ ಬರುತ್ತಿರಲು, ಶಿವನ ಇದಿರಿಗಿದ್ದ ನಂದೀಶನಿಗೆ ದೇವೇಂದ್ರನ ದೇಹವು ಸೋಂಕಿತು. ಆಗ ನಂದೀಶನು ತನ್ನ ಬಾಲದಿಂದ ರಭಾಡಿಸಿದನು. ಅದರಿಂದ ಇಂದ್ರನು ನೊಂದು, ಗರುಡ ಹಂಸ ಐರಾವತ ಉಚ್ಚೈಶ್ರವಸ್ಸ ಮೊದಲಾದ ಎಷ್ಟೋ ಉತ್ತಮವಾಹನಗಳಿರುವಲ್ಲಿ, ಪರಶಿವನು ಈ ಗೊಡ್ಡು ಮುದಿಯೆತ್ತನ್ನು ಅದೇಕೆ ಮೆಚ್ಚಿಕೊಂಡಿರುವನೋ ಕಾಣೆ, ಎಂದು ಸಭಿಕರೊಡನೆ ಗೊಣಗುಟ್ಟಿಕೊಂಡನು. ಶಿವನು ಇದನ್ನು ಕೇಳದವನಂತೆ ಸುಮ್ಮನಿದ್ದನು. ಇಂದ್ರನ ಗರ್ವೋಕ್ತಿಯನ್ನು ಕೇಳಿದರೂ ಶಿವನು ಉಪೇಕ್ಷಿಸಿ ಸುಮ್ಮನಾದನೆಂದು ನಂದೀಶನು ತಿಳಿದು, ಕೋಪಗೊಂಡು ಸಭೆಯಿಂದೆದ್ದು ಹೊರಟನು. ನಾರದನು ಈ ಸುದ್ದಿಯನ್ನು ಶಂಕರನಿಗೆ ಅರಿಕೆಮಾಡಿದನು. ಆಗ ಇಂದ್ರನನ್ನು ಕುರಿತು- ಅಯ್ಯಾ! ನಮ್ಮನ್ನು ವಹಿಸುವ ಸಾಮರ್ಥ್ಯವು ಧರ್ಮಸ್ವರೂಪನಾದ ಈ ನಂದಿಗಲ್ಲದೆ ಮತ್ತಾರಿಗಿರುವುದು ? ಅದನ್ನು ಕಾಣದೆ ನೀನು ಆತನನ್ನು ಜರೆಯಬಹುದೆ? ನೀನೇ ಹೋಗಿ ನಂದೀಶನನ್ನು ಸಮಾಧಾನ ಮಾಡಿ ಕರೆದುಕೊಂಡುಬಾರೆಂದು ಶಿವನು ಅಪ್ಪಣೆ ಮಾಡಲು,

ಇಂದ್ರನು ಚತುರಂಗಸೇನಾಸಮೇತನಾಗಿ ಹೋಗಿ ನಂದೀಶನನ್ನು ಕರೆಯಲು, ಅವನು ಒಪ್ಪದೆ ಹೋದನು. ಆಗ ಯಮವರುಣರು ಪಾಶವನ್ನಿಕ್ಕಿ ನಂದೀಶನನ್ನೆಳೆದರು. ಅವನು ಕೋಪದಿಂದ ಭೂಮಿಯನ್ನು ಪಾದದಿಂದ ಝಾಡಿಸಿ ಕೆರೆಯಲು, ಅದರಿಂದ ರಾಶಿಯಾಗಿ ಬಿದ್ದ ಮಣ್ಣು ಕೇದಾರವಾಯಿತು. ಕೊಂಬಿನಿಂದ ಹಾರಿಸಿದ ಮಣ್ಣು ಸಮುದ್ರದಲ್ಲಿ ಬಿದ್ದು ಸಿಹ್ಮಳದ್ವೀಪವಾಯಿತು. ತೋಡಿದ ಗುಂಡಿಯು ಮಾನಸಸರೋವರವಾಯಿತು. ಹೂಂಕರಿಸಿ ಪಾಶಂಗಳನ್ನು ಕೀಳಲು, ಆತನ ಶ್ವಾಸೋಛ್ವಾಸದಿಂದ ದೇವತೆಗಳು ತರಗೆಲೆಗಳಂತೆ ಹಾರಾಡಿದರು. ಆಗ ಇಂದ್ರನು ನಂದೀಶನ ಮಹತ್ತ್ವವನ್ನು ತಿಳಿದು ಭಯಭಕ್ತಿಯಿಂದ ಸ್ತೋತ್ರ ಮಾಡಲಾಗಿ, ಆತನು ಪ್ರಸನ್ನನಾಗಿ ನಿನ್ನ ಇಷ್ಟವೇನೆಂದು ಕೇಳಿದನು. ಇಂದ್ರನು—ಪ್ರಭುವೇ! ಈ ನನ್ನ ಭಾಗ್ಯವು ಅತ್ಯಲ್ಪವಾದದ್ದು, ಮತ್ತು ಅಸ್ಥಿರವು. ಶಾಶ್ವತವಾದ ಘನಮುಕ್ತಿಯನ್ನು ಪಡೆವುದಕ್ಕಾಗಿ ನನಗೆ ಇಷ್ಟಲಿಂಗಧಾರಣವನ್ನು ಅನುಗ್ರಹಿಸು ಎಂದು ಬೇಡಲು, ನಂದೀಶನು— ಇಂದ್ರನೆ, ನಿನಗೆ ಈ ಜನ್ಮದಲ್ಲಿ ಅದು ಲಭಿಸಲಾರದು, ನರಜನ್ಮದಲ್ಲಿ ನೀನು ಅವತರಿಸಿ ಶಿವಭಕ್ತಿಯುಳ್ಳವನಾಗಿದ್ದರೆ, ನಾನೇ ಬಂದು ನಿನ್ನ ಇಷ್ಟಾರ್ಥವನ್ನು ನೆರವೇರಿಸುವೆನು ಎಂದನು. ಅದರಂತೆಯೇ ಇಂದ್ರನು ಭೂಲೋಕಕ್ಕೆ ಬಂದು, ಪಟ್ಟಗಲ್ಲೆಂಬ ಪಟ್ಟಣದಲ್ಲಿ ಚಾಳುಕ್ಯಕುಲದರಸನಾದ ತ್ರೈಲೋಕ್ಯಚೂಡಾಮಣಿ ಯೆಂಬ ಪ್ರಭುವಿನ ಪತ್ನಿ ಮಹಾದೇವಿಯೆಂಬುವಳ ಗರ್ಭದಲ್ಲಿ ಅನಿಮಿಷನೆಂಬ ನಾಮದಿಂದ ಹುಟ್ಟಿದನು. ಇವನು ಯೌವನಸ್ಥನಾಗಿ ಪ್ರತಿದಿವಸವೂ ಶಿವಲಿಂಗದರ್ಶನವಿಲ್ಲದೆ ಭುಂಜಿಸದ ವ್ರತವನ್ನು ಹಿಡಿದಿದ್ದನು. ಒಂದು ದಿನ ಬೇಟೆಗೆ ಹೋಗಿ ಕಾಡಿನಲ್ಲಿ ಶಿವಲಿಂಗವನ್ನು ಕಾಣದೆ ಹಸಿದು ಬಳಲುತ್ತಿದ್ದನು. ಆತನ ಕುದುರೆಯೂ ಮಾಯವಾಯಿತು. ನಂದೀಶನು ಅವನಿಗೆ ಪೂರ್ವಜನ್ಮದಲ್ಲಿ ಕೊಟ್ಟಿದ್ದ ವರವನ್ನು ನೆರವೇರಿಸುವುದಕ್ಕಾಗಿ ಆ ಅರಣ್ಯಕ್ಕೆ ಬಂದನು. ಅವನನ್ನು ಅನಿಮಿಷನು ಕಂಡು ಲಿಂಗವನ್ನು ಕೇಳಿದನು. ನಂದೀಶನು ಅವನಿಗೆ ಲಿಂಗದೀಕ್ಷೆಯನ್ನಿತ್ತು ಪ್ರಾಣಲಿಂಗಿಯನ್ನಾಗಿ ಮಾಡಿದನು. ಬಳಿಕ ಲಿಂಗೈಕ್ಯನಾದ ಅನಿಮಿಷಯ್ಯನಿಗೆ ಆತನ ಮಂ

ತ್ರಿವರ್ಗದವರು ಕ್ರಮವಾಗಿ ಸಮಾಧಿಯನ್ನು ಮಾಡಿದರು. ನಂದೀಶನು ತನ್ನ ಲಿಂಗವನ್ನು ಅನಿಮಿಷಯ್ಯನಿಗೆ ಕೊಟ್ಟುಬಿಟ್ಟನೆಂಬ ಸುದ್ದಿಯನ್ನು ನಾರದನು ಮುಂದಾಗಿ ಕೈಲಾಸಕ್ಕೆ ಹೋಗಿ ಹೇಳಿದನು. ಕೈಲಾಸದ್ವಾರದಲ್ಲಿದ್ದ ಸಿಂಹಕೇಸರಿ, ದ್ರವಿಡ ಎಂಬಿವರು ಲಿಂಗವಿಲ್ಲದ ಭವಿಯೆಂದು ನಂದೀಶನನ್ನು ಒಳಗೆ ಬಿಡದೆ ತಡೆಯಲು, ಇದನ್ನು ಶಿವನು ಕೇಳಿ, ಆ ನಂದೀಶನು ಸರ್ವಾಂಗಲಿಂಗಿಯು, ಅಂಥವನನ್ನು ನೀವುಗಳು ಭವಿ ಯೆಂದು ತಿರಸ್ಕರಿಸಿದ ಕಾರಣ, ಭೂಮಿಯಲ್ಲಿ ಭವಿಗಳಾಗಿ ಹುಟ್ಟಿ, ಆ ನಂದೀಶನ ಮಹಿಮೆಯನ್ನು ತಿಳಿದು, ಜ್ಞಾನೋದಯಗೊಂಡು ಮರಳಿ ಕೈಲಾಸಕ್ಕೆ ಬನ್ನಿರಿ ಎಂದು ಆಜ್ಞಾಪಿಸಿದನು. ಅದರಂತೆ ಕಸ್ವೇಶ, ಬಿಜ್ಜಳ ಎಂಬ ಹೆಸರಿನಿಂದ ಅವರು ಅವತರಿಸಿದರು. ಶಿವನು ಎಂದಿನಂತೆ ಕೈಲಾಸದಲ್ಲಿರಲು, ನಾರದನು ಭೂಲೋಕವಾರ್ತೆಯನ್ನು ತಂದು ಹೇಳುವಾಗ್ಗೆ, ಅಲ್ಲಿ ಶಿವಭಕ್ತಿಯು ಅತಿ ವಿರಳವಾಗಿರುವುದೆಂಬುದನ್ನು ತಿಳಿಸಲು, ಶಂಕರನು ನಂದೀಶನನ್ನು ಕರೆದು, ವೀರಶೈವಾಚಾರವನ್ನುದ್ಧರಿಸಿ, ಬಿಜ್ಜಳನಿಗೆ ನಿನ್ನ ಮಹತ್ವವನ್ನು ತೋರ್ಪಡಿಸುವುದಕ್ಕಾಗಿ ಭೂಮಿಯಲ್ಲಿ ನೀನು ಅವತರಿಸು ಎಂದು ಬೆಸಸಿ ಕಳಿಸಿಕೊಟ್ಟನು. ನಂದೀಶನು ಅಮರಗಣದೊಡನೆ ಕೂಡಿ ಭೂಮಿಗೆ ಬಂದು ಮಾದರಸನ ಪತ್ನಿ ಮಾದಾಂಬೆಯ ಗರ್ಭದಲ್ಲಿ ಬಸವನೆಂಬ ಹೆಸರಿನಿಂದ ಅವತರಿಸಿದನು. ಬಾಲಲೀಲೆಯ ಕಾಲದಲ್ಲೇ ಒಡನಾಡಿಯಾದ ಬ್ರಾಹ್ಮಣಕುಮಾರನೊಬ್ಬನು ಕಾಲ್ಜಾರಿ ಬಾವಿಯಲ್ಲಿ ಬಿದ್ದು ಸಾಯಲು, ಅವನ ತಾಯ್ತಂದೆಗಳು ಬಸವನೇ ಈ ಕೃತ್ಯವನ್ನು ನಡಿಸಿದನೆಂದು ಬೆನ್ನಟ್ಟಿ ಬರಲು, ತಾನು ಸಂಗಮನಾಥನಲ್ಲಿಗೆ ಹೋಗುತ್ತ, ಅಡ್ಡಲಾಗಿದ್ದ ಪ್ರವಾಹವನ್ನು ಎರಡು ಭಾಗ ಮಾಡಿ, ನಿಲ್ಲಿಸಿ, ಆಚೆಗೆ ಹೋಗಿ, ತಾನು ಆ ಹುಡುಗನನ್ನು ಕೊಲ್ಲಲಿಲ್ಲವೆಂಬ ಸಂಗತಿಯನ್ನು ಸಂಗಮನಾಥನಿಂದ ಸಾಕ್ಷ್ಯವಾಗಿ ನುಡಿಸಿದನು. ಅನಂತರ ತಂದೆಯು ತನಗೆ ಮಾಡಬೇಕೆಂದಿದ್ದ ಉಪನಯನವನ್ನು ತಿರಸ್ಕರಿಸಿ, ತನ್ನ ಅಕ್ಕನೊಡನೆ ಕೂಡಿ ಕಲ್ಯಾಣಕ್ಕೆ ಬಂದು, ಅಲ್ಲಿನ ಮಂತ್ರಿಯಾದ ಬಲದೇವನ ಮಗಳನ್ನು ಮದುವೆಯಾಗಿ, ಮಾವನು ಸತ್ತ ಬಳಿಕ ಅವನ ಸ್ಥಾನದಲ್ಲಿ ತಾನೇ ಮಂತ್ರಿಯಾಗಿ ನಿಂತು, ಬಿಜ್ಜಳನ ಸಭೆಯಲ್ಲಿ ದೇವಲಿಪಿ

ಯನ್ನೋದಿ, ಗದ್ದುಗೆಯ ಕೆಳಗಿದ್ದ ಅರವತ್ತು ಕೋಟಿಯ ಹೊನ್ನನ್ನು ತೆಗಿಸಿ, ರಾಜನಿಗೆ ಕೊಟ್ಟನು. ತನ್ನ ಮನೆಗೆ ನುಗ್ಗಿದ್ದ ಕಳ್ಳರನ್ನು ಲಿಂಗಮುಕರನ್ನಾಗಿಯೇ ಮಾಡಿದನು. ಜೋಳವನ್ನು ಮುತ್ತನ್ನಾಗಿ ಮಾಡಿ ಜಂಗಮರಿಗಿತ್ತನು. ಕನ್ನಡಿಯಲ್ಲಿ ಹಣೆಗಣ್ಣನ್ನು ತೋರಿಸಿಯೂ, ಲೆಕ್ಕದ ಬಚ್ಚಿತವನ್ನು ಮಾಡುವ ಸಮಯದಲ್ಲಿ ೧೧ ದಿನಗಳವರೆಗೆ ಸೂರ್ಯನನ್ನು ತಡೆದೂ, ಗೊಲ್ಲತಿಯ ಮಜ್ಜಿಗೆಯ ಗಡಿಗೆಯನ್ನು ಹಿಡಿದೂ, ಮಂಚಣ್ಣನ ಚಾಡಿಯ ಮೇಲೆ ರಾಜನಿಗೆ ನಾನಾಸಂದರ್ಭಗಳಲ್ಲಿ ಉಂಟಾಗಿದ್ದ ಸಂಶಯಗಳನ್ನೆಲ್ಲ ಬಗೆಬಗೆಯಾಗಿ ಪರಿಹರಿಸುವುದರಿಂದಲೂ, ಗಡಿಗೆಯೊಳಗಣ ನೀರನ್ನು ಗಟ್ಟಿ ಮಾಡಿಯೂ, ಶಿವನಾಗಯ್ಯನ ಬೆರಲಿನಿಂದ ಹಾಲನ್ನು ಕರೆದೂ, ಕಣಿಗಿಲೆಯ ಹೂವನ್ನು ಸಂಪಗೆಹೂವನ್ನಾಗಿ ಮಾಡಿಯೂ, ತನ್ನ ದೇಹವನ್ನು ಕಚ್ಚಿ ಸತ್ತಹಾವಿಗೆ ಪ್ರಾಣವನ್ನು ಕೊಟ್ಟೂ, ಚಿತ್ರದಲ್ಲಿ ಬರೆದಿದ್ದ ಹಲಸಿನ ಹಣ್ಣನ್ನು ನಿಜವಾದ ಹಣ್ಣನ್ನಾಗಿ ಮಾಡಿಯೂ, ಹೆಂಡವನ್ನು ಅಮೃತವನ್ನು ಮಾಡಿಯೂ, ವಿಷವನ್ನು ಅಮೃತದಂತೆ ಮಾಡಿಯೂ, ದೊರೆಯ ರಾಣಿವಾಸದವರನ್ನೆಲ್ಲ ಜಂಗಮರನ್ನಾಗಿ ಮಾಡಿಯೂ ತೊಗರಿಯನ್ನು ರತ್ನಗಳನ್ನು ಮಾಡಿಯೂ, ಜಂಗಮಕ್ಕೆ ತನ್ನ ಹೆಂಡತಿಯನ್ನು ಕೊಟ್ಟೂ, ಜಂಗಮನೊಡನೆ ತನ್ನ ಪ್ರಾಣವನ್ನು ಬಿಟ್ಟೂ, ಅಗ್ಗಣಿಯ ಹೊನ್ನಯ್ಯನ ಕುಷ್ಠವನ್ನು ಪರಿಹರಿಸಿಯೂ, ಹೀಗೆ ಬಸವೇಶನು ನಾನಾವಿಧವಾದ ಪವಾಡಗಳನ್ನು ಅಪರಿಮಿತವಾಗಿ ನಡಿಸಿರುವನು. ಅವುಗಳನ್ನೆಲ್ಲ ಇಷ್ಟೆಂದು ಹೇಳುವುದಕ್ಕೆ ನನಗೆ ಅಸಾಧ್ಯವು. ಎಲೆ ಸಿದ್ಧರಾಮೇಶನೇ, ಪೂರ್ವದಲ್ಲಿ ಅಲ್ಲಮಪ್ರಭುವು ನಿರ್ಮಾಯನೆಂಬ ಗಣನಾಥನಿಗೂ ನಿರಹಂಕಾರಸುಜ್ಞಾನಿಗೂ ಮಗನಾಗಿ ಅವತರಿಸಿ, ಮಾಯೆಯನ್ನು ಜರೆದು ಬಂದು, ಅನಿಮಿಷಯ್ಯನ ಕೈಯಲ್ಲಿದ್ದ ನಂಜೀಶನು ಕೊಟ್ಟದ್ದ ಲಿಂಗವನ್ನು ತೆಗೆದುಕೊಂಡು, ಗೊಗ್ಗಯ್ಯ ಮುಕ್ತಾಯಿಗಳನ್ನು ಲಿಂಗಾಂಗಸಾಮರಸ್ಯಬೋಧೆಯಿಂದ ಮುಕ್ತರನ್ನು ಮಾಡಿದನು. ಅಲ್ಲಿಂದ ನಿನ್ನ ಪಟ್ಟಣಕ್ಕೆ ಬಂದು ನಿನ್ನ ಕೃತ್ಯವನ್ನೆಲ್ಲ ನೋಡಿ ತಿರಸ್ಕರಿಸಿ, ಶಿವತತ್ತ್ವೋಪದೇಶವನ್ನು ಮಾಡಿ, ಇಷ್ಟಲಿಂಗಸ್ವರೂಪವನ್ನು ನಿನಗೆ ತಿಳಿಯಪಡಿಸಬೇಕೆಂದುದ್ದೇಶಿಸಿ, ಇಲ್ಲಿಗೆ ಕರೆದುಕೊಂಡು ಬಂದಿರುವನು.

ಈ ಮಹಾಮಹಿಮನ ಅಪ್ಪಳಿಲೀಲೆಯು ಪವಿತ್ರವಾದದ್ದು. ಈ ಜಗತ್ತಿನಲ್ಲಿರುವ ೮೪ ಲಕ್ಷ ಜೀವರಾಶಿಗಳಲ್ಲಿ ಗೋಜನ್ಮವು ಉತ್ತಮವಾದದ್ದು. ಅದಕ್ಕಿಂತಲೂ ಮಾನವಜನ್ಮವಧಿಕವು. ಅವರಲ್ಲೆಲ್ಲ ಶಿವಭಕ್ತರು ಉತ್ತಮರು. ಅವರೊಳಗೆಲ್ಲ ವೀರಶೈವರು ಶ್ರೇಷ್ಠರು. ಅವರಲ್ಲೂ ಷಟ್ಸ್ಥಲತತ್ತ್ವವನ್ನರಿತವರು ಅಧಿಕರು. ಆ ಷಟ್ಸ್ಥಲಬ್ರಹ್ಮಿಗಳಾದ ನಿರಾಭಾರಿಗಳಿಗಿಂತಲೂ ಅಧಿಕರಾದವರು ಮೂರು ಲೋಕದಲ್ಲಿಯಾರೂ ಇಲ್ಲ. ಅದುಕಾರಣ, ಅಂತಹ ಷಟ್ಸ್ಥಲಬ್ರಹ್ಮಿಗಳನ್ನಲ್ಲದೆ ಇತರರನ್ನು ಈ ಬಾಗಿಲಿನಿಂದೊಳಗೆ ಹೋಗಗೊಳಿಸರು, ಎಂದು ನುಡಿದನು. ಇದನ್ನು ಕೇಳಿದ ಅಲ್ಲಿದ್ದ ಶರಣರಲ್ಲಿ ಕೆಲರು,– "ಅದು ನಿಜ, ಇಷ್ಟಲಿಂಗವಿಲ್ಲದವರ ಮುಖವನ್ನು ಕೂಡ ನೋಡಬಾರದು" ಎಂದು ಹೇಳಿದರು. ಆಗ ಅಲ್ಲಮಪ್ರಭುವು– ಈ ಸಿದ್ಧರಾಮನಂತಹ ಸರ್ವಾಂಗಲಿಂಗಿಗೆ ಇಷ್ಟಲಿಂಗಧಾರಣವೇತಕ್ಕೆ ? ಆಕಾಶವನ್ನೇ ಹತ್ತುವವನಿಗೆ ಊರುದೊಣ್ಣೆ ಯೇತಕ್ಕೆ ? ಸಮುದ್ರವನ್ನು ದಾಟುವವನಿಗೆ ಹರಿಗೋಲೇತಕ್ಕೆ ? ಎನ್ನಲು, ಚೆನ್ನಬಸವೇಶನು ಪ್ರಭುವನ್ನು ಕುರಿತು– ಮುಖ್ಯವಾದ ಇಷ್ಟಲಿಂಗಧಾರಣೆಯೇ ಇಲ್ಲದ ಈ ಸಿದ್ಧರಾಮನು ಅದು ಹೇಗೆ ಸರ್ವಾಂಗಲಿಂಗಿಯಾದನು ? ಅದನ್ನು ಅರುಹಬೇಕು, ಎಂದು ಬೆಸಗೊಂಡನು. ಆಗ ಸಿದ್ಧರಾಮೇಶನು "ಇಲ್ಲಿ ನೋಡು" ಎಂದು ಹೇಳಿ, ತನ್ನ ದೇಹವೆಲ್ಲ ಲಿಂಗಗಳ ಗೊಂಚಲಾಗಿರುವುದನ್ನು ತೋರ್ಪಡಿಸಿದನು. ಅದನ್ನು ಚೆನ್ನಬಸವೇಶನು ನೋಡಿ ನಕ್ಕು, ಇಂತಹ ಇಂದ್ರಜಾಲದ ಸರ್ವಾಂಗಲಿಂಗಿತ್ವವು ನಿಷ್ಪ್ರಯೋಜಕವು, ನಿನಗೆ ಏಕಲಿಂಗನಿಷ್ಠೆಯು ಆಳವಟ್ಟಿಲ್ಲ. ಮರೆಗೆ ಅಲ್ಲಮನು ಬರಲಾಗಿ, ಅವನನ್ನು ಸುಡಬೇಕೆಂದು ನೀನು ಉರಿಗಣ್ಣನ್ನು ಬಿಟ್ಟೆ, ಅದುಕಾರಣ ನೀನು ಜಂಗಮದ್ರೋಹಿ, ಹೋಗು, ಎಂದು ತಿರಸ್ಕರಿಸಿದನು. ಮತ್ತು ಅಲ್ಲಮನ ಕಡೆಗೆ ತಿರುಗಿ, ನೀನು ಈ ಜಂಗಮದ್ರೋಹಿಯನ್ನು ಇಲ್ಲಿಗೆ ಕರೆತಂದು, ಇವನ ಸರ್ವಾಂಗಲಿಂಗಿತ್ವದ ಪ್ರಭಾವವನ್ನು ಮೆರೆಯಿಸುತ್ತಿರುವೆ! ಗುರುವಿಲ್ಲದೆ ಲಿಂಗವನ್ನು ಸಂಪಾದಿಸಿ ತಂದಿರುವೆ! ನಿನ್ನಾಟವೇನು ಸಾಮಾನ್ಯವೆ ? ನಿಮ್ಮಿಬ್ಬರ ಮುಖವನ್ನೂ ನೋಡಬಾರದು, ಎನ್ನಲು, ಅಲ್ಲಮನು– ನಾನು ಗು

ರುವನ್ನು ಬಿಟ್ಟು ಲಿಂಗವನ್ನು ತಂದಿಲ್ಲ; ಈ ಲಿಂಗದಲ್ಲೇ ಗುರುವಿನ ಚಿತ್ಕಳೆಯೂ ಅಡಕವಾಗಿದೆ ನೋಡು, ಎಂದನು. ಮತ್ತು ದ್ವಿತೀಯಶಂಭುವಾದ ಬಸವೇಶನು ಗುರುವಾಗಿಯೂ, ನೀನು ಪರಮಗುರುವಾಗಿಯೂ ಇರುವಾಗ, ಗುರುವನ್ನು ಬಿಟ್ಟುದು ಹೇಗೆ? ಎನ್ನಲು, ಅದನ್ನು ಕೇಳಿದ ಶರಣರೆಲ್ಲರೂ ಚಕಿತರಾಗಿ ಆನಂದಗೊಂಡರು. ಆಗ ಸಿದ್ಧರಾಮನು ಬೆರಗಾಗಿ, ಪ್ರಭುವಿನ ಪಾದಕ್ಕೆಬಿದ್ದು, ಮುಂದೆ ನನ್ನ ಗತಿಯೇನೆಂದು ಕೇಳಿದನು. ನೀನು ಇಷ್ಟಲಿಂಗವನ್ನು ಪಡೆದುಕೊಂಡಲ್ಲದೆ ಬೇರೆ ಮಾರ್ಗವಿಲ್ಲವೆಂದು ಪ್ರಭುವು ಹೇಳಲು, ನನಗೆ ಇಷ್ಟಲಿಂಗದೀಕ್ಷೆಯನ್ನು ಮಾಡುವರಾರೆಂದು ಬೆಸಗೊಂಡನು. ಪ್ರಭುವಾದರೊ— ಈ ಬಸವೇಶ ಮೊದಲಾದ ಏಳುನೂರೆಪ್ಪತ್ತಮರಗಣಗಳು ಭೂಮಿಯಲ್ಲಿ ವೀರಶೈವಮಾರ್ಗವನ್ನುದ್ಧರಿಸುವುದಕ್ಕಾಗಿ ಬಂದಿರುವರು; ಇವರಿಗೆ ಪ್ರಾಣಲಿಂಗಸಂಬಂಧದ ಷಟ್ಸ್ಥಲತತ್ತ್ವವನ್ನು ಬೋಧಿಸುವುದಕ್ಕಾಗಿ ಶಿವನ ಚಿತ್ಕಳಾಕುಮಾರನೇ ಈ ಚೆನ್ನಬಸವೇಶನಾಗಿ ಅವತರಿಸಿರುವನು. ಈತನೇ ನಿನಗೆ ಇಷ್ಟಲಿಂಗವನ್ನು ಅನುಗ್ರಹಿಸುವನು, ಎಂದು ನುಡಿದನು. ಸಿದ್ಧರಾಮೇಶನು ಹರ್ಷದಿಂದೆದ್ದು ಚೆನ್ನಬಸವೇಶನಿಗೆ ದೀರ್ಘದಂಡವಾಗಿ ನಮಸ್ಕರಿಸಿ, ಎಲೈ ಗುರುವೆ, ಜೀವರಾಶಿಗಳಲ್ಲಿ ತಾರತಮ್ಯಗಳನ್ನು ತಾವು ಸೂಚಿಸಿದಿರಷ್ಟೆ; ಆ ಜೀವಭೇದಗಳನ್ನೂ, ಮನುಷ್ಯಜನ್ಮದ ಪಿಂಡಲಕ್ಷಣ ಮೊದಲಾದುದನ್ನೂ ನನ್ನಮೇಲೆ ಕರುಣವಿಟ್ಟು ನಿರೂಪಿಸಿ, ಇಷ್ಟಲಿಂಗದೀಕ್ಷೆಯನ್ನಿತ್ತು ಕೃತಾರ್ಥನನ್ನು ಮಾಡಬೇಕೆಂದು ಪ್ರಾರ್ಥಿಸಿದನೆಂಬಲ್ಲಿಗೆ ನಾಲ್ಕನೇ ಅಧ್ಯಾಯವು ಸಂಪೂರ್ಣವು.

---

## ೫ ನೇ ಅಧ್ಯಾಯವು.

### ಪಿಂಡೋತ್ಪತ್ತಿ ಕರಣಹಸಿಗೆಗಳು.

ಎಲೆ ಸಿದ್ಧರಾಮೇಶನೆ ಕೇಳು.— ಹಿಂದೆ ನಾನು ವಿವರಿಸಿದಂತೆ ಸತ್ಕರ್ಮಾಚಾರಿಗಳು ಸ್ವರ್ಗವನ್ನನುಭವಿಸಿ, ಪಾಪಿಗಳು ಯಮಲೋಕದಲ್ಲಿ ನರಕಯಾತನೆಯನ್ನನುಭವಿಸಿ, ಆ ಫಲಾನುಭವವು ತೀರಿದ ನಂತರ, ಆ ಎರಡು ವಿಧದವರೂ ಕೂಡ, ಜನ್ಮದ ಬಾಗಿಲಾದ ಆಕಾಶ, ವಾ

ಯು, ಅಗ್ನಿ, ಜಲ, ಪೃಥ್ವಿ ಎಂಬ ಐದು ಭೂತಗಳಲ್ಲಿ ಸೇರಿ, ಗಿಡ ಬಳ್ಳಿ ಮೊದಲಾದುವುಗಳಾಗಿ ಜನಿಸಿ, ಅವುಗಳ ಸಾರವಾದ ಅನ್ನರೂಪದಿಂದ ಪ್ರಾಣಿಗಳ ದೇಹದಲ್ಲಿ ಸೇರಿ, ರೇತಸ್ಸಾಗಿ ಪರಿಣಮಿಸಿ, ಅದರಿಂದ ಪಿಂಡವಾಗಿ ಮರಳಿ ಹುಟ್ಟುವರು. ಈ ಬ್ರಹ್ಮಾಂಡದಲ್ಲಿರತಕ್ಕ ಪ್ರಾಣಿಗಳೆಲ್ಲ ಸ್ಥಾವರ ಜಂಗಮ ಎಂದು ಎರಡು ವಿಧವಾಗಿರುವುವು. ಇವೆರಡೂ ಅಂಡಜ ಸ್ವೇದಜ ಉದ್ಭಿಜ್ಜ ಜರಾಯುಜ ಮಂತ್ರಜವೆಂದು ಐದು ಪ್ರಕಾರಗಳಾಗಿರುವುವು. ಈ ಎಲ್ಲ ಜಾತಿಗಳೂ ಸೇರಿ ೮೪ ಲಕ್ಷ ಜೀವರಾಶಿಗಳಾಗುವುವು. ಹೇಗೆಂದರೆ— ಗಿಡ ಮರ ಬಳ್ಳಿ ಮೊದಲಾದ ಉದ್ಭಿಜ್ಜಗಳಲ್ಲಿ ೨೦ ಲಕ್ಷ ಭೇದವು. ಮಂತ್ರಜಗಳಾದ ದೇವತೆಗಳಲ್ಲಿ ೧೪ ಲಕ್ಷ ಭೇದವು. ಅಂಡಜಗಳಾದ ಪಕ್ಷಿಸರ್ಪಾದಿಗಳಲ್ಲಿ ೨೦ ಲಕ್ಷ ಭೇದವು. ಸ್ವೇದಜಗಳಾದ ಕ್ರಿಮಿಕೀಟಾದಿಗಳಲ್ಲಿ ೧೧ ಲಕ್ಷ ಭೇದವು. ಜರಾಯುಜಗಳಾದ ಮಾನವಜಾತಿಯಲ್ಲಿ ೯ ಲಕ್ಷಭೇದವೂ, ಪಶುಮೃಗಾದಿಗಳಲ್ಲಿ ೧೦ ಲಕ್ಷ ಭೇದವೂ ಇರುವುವು. ಜೀವನು ಮಂತ್ರಜ ಹೊರತು ಉಳಿದ ನಾಲ್ಕು ಬಗೆಯ ಜನ್ಮಗಳಲ್ಲಿ ಬಂದು, ಆಯಾಯ ಜಾತಿಗೆ ವಿಹಿತವಾದ ನಡೆಗಳನ್ನಾಚರಿಸಿ, ಅಳಿದು, ಗೋಜನ್ಮವನ್ನು ಪಡೆದು, ಅಲ್ಲಿಂದ ಮಾನವಜನ್ಮಕ್ಕೆ ಬರುವನು. ಆ ಜನ್ಮಾದಿವಿವರಣವನ್ನು ಹೇಳುತ್ತೇನೆ ಕೇಳು— ಸ್ತ್ರೀಯು ಋತುಕಾಲದಲ್ಲಿ ಪುರುಷನೊಡನೆ ಕೂಡಲಾಗಿ, ಅವಳ ಶೋಣಿತವೂ, ಪುರುಷನ ವೀರ್ಯವೂ ಒಂದುಗೂಡುವುವು. ಆ ಸಂಯುಕ್ತವಸ್ತುವಿಗೆ ಮೊದಲನೇ ದಿನದಲ್ಲಿ ಕಲಲವೆಂಬ ಹೆಸರು. ೫ ದಿನಕ್ಕೆ ಗುಳ್ಳೆಯಂತಾಗುವುದು, ೧೦ ದಿನಕ್ಕೆ ರಕ್ತಗೂಡುವುದು. ೧೫ ದಿನಕ್ಕೆ ಮಾಂಸದ ಉಂಡೆಯಂತಾಗುವುದು. ೨೦ ದಿನಕ್ಕೆ ಗಟ್ಟಿಯಾಗುವುದು. ೨೫ ದಿನಕ್ಕೆ ಅವಯವಗಳು ಮೂಡುವುವು. ೧ ತಿಂಗಳಿಗೆ ಶಿರಸ್ಸು ಹುಟ್ಟುವುದು. ೨ ನೇ ತಿಂಗಳಿಗೆ ತೋಳ್ತೊಡೆಗಳೂ, ತಿಂಗಳು ೩ ಕ್ಕೆ ಕೈ ಕಾಲು ಬೆರಲುಗಳೂ, ೪ ಕ್ಕೆ ಮೂಗು ಕಣ್ಣು ಕಿವಿಗಳು ಗುದಮೇಢ್ರರೋಮಗಳೂ, ೫ ಕ್ಕೆ ನರದ್ವಾರಗಳೂ ಹೊಟ್ಟೆಯೂ, ೬ ಕ್ಕೆ ಉಗುರು ತಲೆಕೂದಲೂ, ಮೂಡುವುವು. ೭ ಕ್ಕೆ ಅವಯವದ ಸಂಧಿಬಂಧಗಳು ಬಲಿದು ಚೈತನ್ಯವು ಹುಟ್ಟಿ, ತಾಯಿ ಯುಂಡ ಅನ್ನದ ರಸವು ಹೊಕ್ಕುಳ ನಾಳಿದ್ವಾರ

ದಿಂದ ಆ ಶಿಶುವಿನ ಉದರಕ್ಕೆ ಸೇರುವುದು. ತಿಂಗಳು ೮ ರಲ್ಲಿ ಗರ್ಭ ಕೋಶದೊಳಗೆ ಬಚ್ಚಲ ಹುಳುವಿನಂತೆ ಒದ್ದಾಡುತ್ತ, ತನ್ನ ಜನ್ಮಸ್ಥಿತಿ ಯನ್ನು ಪರಿಭಾವಿಸಿ ದುಃಖಿಸುತ್ತಿರುವುದು. ೯ ರಲ್ಲಿ ಶಿವಧ್ಯಾನಪರ ನಾಗಿ ಮುಂದೆ ಮುಕ್ತನಾಗುವೆನೆಂದು ನೆನೆಯುತ್ತಿದ್ದು, ನವಮಾಸ ತುಂ ಬಿದ ಬಳಿಕ, ಸೂತಿಕಾವಾಯುವಿನಿಂದ ಧೊಪ್ಪನೆ ಬಡಿಯಲ್ಪಟ್ಟು, ಬಲು ನೊಂದು ತಲೆಕೆಳಗಾಗಿ, ಪೂರ್ವವಿವೇಕವನ್ನು ಮರೆದು, ಮೂರ್ಛೆಗೊಂ ಡು, ಯೋನಿದ್ವಾರದಿಂದ ತಲೆ ಮುಂದಾಗಿ ತೂರಿಬರುವುದು. ಸ್ತ್ರೀ ಯು ರಜಸ್ವಲೆಯಾಗಿ ಸ್ನಾನಗೊಂಡ ೧ ನೇ ದಿನದಲ್ಲಿ ಪುರುಷಸಂಗದಿಂದ ಪಿಂಡವು ನಿಂತರೆ ಕುಲಗೇಡಿಯಾದ ಸ್ತ್ರೀ ಶಿಶುವು ಜನಿಸುವುದು. ೨ ನೇ ದಿನದಲ್ಲಿ ನಿಂತ ಪಿಂಡವು ಪಾಪಿ, ೩ ನೇ ದಿನದಲ್ಲಿ ಕಳ್ಳ, ೪ ರಲ್ಲಿ ಕಪ ಟ, ೫ ರಲ್ಲಿ ಮತಿವಂತ, ೬ ರಲ್ಲಿ ವ್ರತಭ್ರಷ್ಟ, ೭ರಲ್ಲಿ ದಯಾಶಾಲಿ, ೮ ರಲ್ಲಿ ದರಿದ್ರ, ೯ ರಲ್ಲಿ ಶ್ರೀಮಂತ, ೧೦ ರಲ್ಲಿ ಕಾಮುಕ, ೧೧ ರಲ್ಲಿ ವೈರಾ ಗ್ಯಶಾಲಿ, ೧೨ ರಲ್ಲಿ ಕೋಪಿಷ್ಠ, ೧೩ ರಲ್ಲಿ ಪಂಡಿತ, ೧೪ ರಲ್ಲಿ ರೋಗಿ, ೧೫ ರಲ್ಲಿ ರಾಜ, ೧೬ ರಲ್ಲಿ ಶಿವಯೋಗಿಯಾಗಿ ಜನಿಸುವನು. ಸ್ತ್ರೀ ಪುರು ಷರು ಸಂಭೋಗಸಮಯದಲ್ಲಿ ಅನ್ಯರಲ್ಲಿ ಮನಸ್ಸಿಟ್ಟದ್ದರೆ ಜನಿಸುವವನು ಜಾರನಾಗುವನು. ಶಿವಧ್ಯಾನತತ್ಪರರಾಗಿದ್ದರೆ ಭಕ್ತಿಸಂಪನ್ನನಾಗಿ ಹುಟ್ಟು ವನು. ಸೂರ್ಯೋದಯಕಾಲಕ್ಕೆ ಹುಟ್ಟಿದವನು ಅತ್ಯಂತ ಕೋಪಿಯು, ಮ ಧ್ಯಾಹ್ನದಲ್ಲಿ ಜನಿಸಿದವನು ಪಾಪಿಯು, ಸಾಯಂಕಾಲದಲ್ಲಿ ಹುಟ್ಟಿದವನು ಮನಸ್ತಾಪವುಳ್ಳವನಾಗುವನು. ರಾತ್ರಿಯಲ್ಲಿ ಹುಟ್ಟಿದವನು ಶಾಂತ್ಯಾದಿಸ ದ್ಗುಣಭರಿತನಾಗುವನು. ಸಂಯೋಗಕಾಲದಲ್ಲಿ ಪುರುಷವೀರ್ಯವು ಹೆಚ್ಚಾ ದರೆ ಪಿಂಡವು ಗಂಡಾಗುವುದು. ಸ್ತ್ರೀಯ ಶೋಣಿತವು ಹೆಚ್ಚಾಗಿದ್ದರೆ ಹೆಣ್ಣಾಗುವುದು. ಎರಡೂ ಸಮನಾಗಿದ್ದರೆ ನಪುಂಸಕನಾಗುವುದು. ಈ ಸ್ಥೂಲಶರೀರದಲ್ಲಿ ಒಂದು ಬಳ್ಳ ಪಿತ್ತವೂ ೨ ಬಳ್ಳ ಶ್ಲೇಷ್ಮವೂ, ಮಾಂಸ ವು ಇಪ್ಪತ್ತು ಸಾವಿರ ಪಲದ ತೂಕವೂ, ಕೊಬ್ಬು ೧೦ ಸಾವಿರ ಪಲದ ತೂಕವೂ, ರಕ್ತವು ೧೫ ಸಾವಿರ ಪಲದ ತೂಕವೂ, ಮಜ್ಜೆಯು ೩ ಸಾವಿರ ಪಲದ ತೂಕವೂ, ರೇತಸ್ಸು ೧೨ ಸಾವಿರ ಪಲದ ತೂಕವೂ ಇರುವುವು. ೩॥ ಕೋಟಿ ರೋಮಗಳಿರುವುವು. ೩೬೦ ಮೂಳೆಗಳಿರು

ವುವು. ಈ ಸಪ್ತಧಾತುಗಳಲ್ಲಿ ನರಗಳು ರೇತಸ್ಸು ಮೂಳೆ ರೋಮಗಳು; ಸಹ ತಂದೆಯಂಶವು; ಚರ್ಮ ಮಾಂಸ ರಕ್ತಗಳು ತಾಯಿ ಅಂಶಗಳು, ಮೇಲೆ ಹೇಳಿದ ಆಕಾಶಾದಿಪಂಚಭೂತಗಳನ್ನು ಒಂದೊಂದನ್ನೆರಡೆರಡಾಗಿ ಭಾಗಿಸಿ, ಪ್ರತಿಯೊಂದರ ಮೊದಲಭಾಗವನ್ನು ಮಹಾಭೂತವನ್ನಾಗಿಟ್ಟು, ಉಳಿದ ಒಂದೊಂದು ಭಾಗವನ್ನು ಎರಡೆರಡು ಭಾಗವನ್ನಾಗಿ ಮಾಡಿ, ಆ ಭಾಗಗಳನ್ನೇ ಮತ್ತು ೪–೪ ಭಾಗವನ್ನಾಗಿ ಮಾಡಿ, ಆ ೪ ಭಾಗವನ್ನು ಅದರದರ ಎರಡನೇ ಭಾಗವಲ್ಲಿ ಸೇರಿಸದೆ, ಉಳಿದವುಗಳ ಎರಡೆರಡನೆಯ ಭಾಗದಲ್ಲಿ ಒಂದೊಂದನ್ನು ಕೂಡಿಸಿದರೆ, ೨೫ ತತ್ತ್ವಗಳಾಗುವುವು. ಹೇಗೆಂದರೆ— ಆಕಾಶದ ಎರಡನೇ ಭಾಗವು ಜ್ಞಾತೃವು, ವಾಯುವಿನ ೨ ನೇ ಭಾಗದಲ್ಲಿ ಕೂಡಿದುದೇ ಮನಸ್ಸು, ತೇಜಸ್ಸಿನ ೨ ನೇ ಭಾಗದಲ್ಲಿ ಸೇರಿದ್ದುದೇ ಬುದ್ಧಿಯು, ಜಲದ ೨ ನೇ ಭಾಗವಲ್ಲಿ ಸೇರಿದುದೇ ಚಿತ್ತವು, ಭೂಮಿಯ ೨ ನೇ ಭಾಗದಲ್ಲಿ ಸೇರಿದುದೇ ಅಹಂಕಾರವು, ಇವು ಆಕಾಶದ ಪಂಚೀಕರಣಗಳು. ಹೀಗೆಯೇ ವಾಯುವಿನ ದ್ವಿತೀಯಭಾಗವನ್ನು ಇತರ ಭೂತಗಳ ದ್ವಿತೀಯಭಾಗದೊಡನೆ ಕೂಡಿಸುತ್ತ ಹೋದರೆ ವ್ಯಾನ, ಸಮಾನ, ಉದಾನ, ಅಪಾನ, ಪ್ರಾಣವೆಂಬ ಪಂಚವಾಯುಗಳು; ಅಗ್ನಿಯಿಂದ– ನೇತ್ರ, ಶ್ರೋತ್ರ, ತ್ವಕ್ಕು, ಜಿಹ್ವೆ, ಘ್ರಾಣವೆಂಬ ಪಂಚಜ್ಞಾನೇಂದ್ರಿಯಗಳು; ಜಲದಿಂದ_ರಸ, ಶಬ್ದ, ಸ್ಪರ್ಶ, ರೂಪ, ಗಂಧ, ಎಂಬ ವಿಷಯಗಳು; ಪೃಥ್ವಿಯಿಂದ– ವಾಯು, ವಾಕ್ಕು, ಪಾಣಿ, ಪಾದ, ಉಪಸ್ಥ, ಎಂಬ ೫ ಕರ್ಮೇಂದ್ರಿಯಗಳು ಉದಿಸಿದುವು. ಇನ್ನು ಪಿಂಡಾಂಡಪಂಚೀಕರಣವೆಂತೆಂದರೆ— ಹಿಂದೆ ಹೇಳಿದ ಈ ಪಂಚಭೂತಗಳೇ ಪಂಚಾಂಶ ಪಂಚೀಕೃತವಾಗಿ ದೇಹವೆನಿಸುವುವು. ದೇಹದಲ್ಲಿರುವ ಅಸ್ಥಿ, ತೊಕ್ಕು, ನಾಡಿ, ಮಾಂಸ, ರೋಮ ಇವೈದೂ ಪೃಥ್ವಿಯಿಂದಾದಂಶಗಳು. ಬೆವರು, ಶ್ಲೇಷ್ಮ, ಮೂತ್ರ, ರೇತಸ್ಸು, ರಕ್ತ— ಇವಿಷ್ಟು ಜಲದಿಂದಾದಂಶಗಳು. ಹಸಿವು, ನೀರಡಿಕೆ, ನಿದ್ರೆ, ಆಲಸ್ಯ, ಸಂಗ– ಇವಿಷ್ಟು ಅಗ್ನಿಯಿಂದಾದ ಗುಣಗಳು. ಕೂಡುವುದು, ಅಗಲುವುದು, ಸುತ್ತುವುದು, ಹಾರುವುದು, ನಡೆಯುವುದು— ಇವಿಷ್ಟು ವಾಯುವಿಂದಾದ ಗುಣಗಳು. ಅಜ್ಞಾನ, ಪ್ರೀತಿ, ದ್ವೇಷ, ನಾಚಿಕೆ, ಭಯ– ಇವಿಷ್ಟು

ಆಕಾಶದಿಂದಾದ ಗುಣಗಳು. ಹೀಗೆ ಸ್ಥೂಲದೇಹದಲ್ಲಿರುವ ಪಂಚಭೂತಗಳ ೨೫ ಗುಣಗಳಲ್ಲದೆ, ಸೂಕ್ಷ್ಮದೇಹದ ಪ್ರತಿಯೊಂದು ಭೂತದ ಸೂಕ್ಷ್ಮಾಂಶಗಳನ್ನೂ ಅದರದರ ವಿಷಯಗಳಿಂದ ಗುಣಿಸುವಾಗ ೭೫ ವಿಭೇದ ಗುಣಗಳು ಉಂಟಾಗುವವು. ಹೇಗೆಂದರೆ- ಭೂಮಿಗೆ ೫ ವಿಷಯಗಳಿರುವುದರಿಂದ, ಅದಕ್ಕೆ ೫×೫=೨೫ ಗುಣಗಳು, ಜಲಕ್ಕೆ ೪ ವಿಷಯವಾದುದರಿಂದ ಅದಕ್ಕೆ ೫×೪=೨೦ ಗುಣಗಳು. ಅಗ್ನಿಗೆ ೩ ವಿಷಯಗಳಿರುವುದರಿಂದ ಅದಕ್ಕೆ ೫×೩=೧೫ ಗುಣಗಳು. ವಾಯುವಿಗೆ ೨ ವಿಷಯಗಳಿರುವುದರಿಂದ ಅದಕ್ಕೆ ೫×೨=೧೦ ಗುಣಗಳು. ಆಕಾಶಕ್ಕೆ ೧ ವಿಷಯವಿರುವುದರಿಂದ ಅದಕ್ಕೆ ೫×೧=೫ ಗುಣಗಳು. ಅಂತೂ ೭೫ ಮಿಶ್ರಗುಣಗಳಾದುವು. ಇನ್ನು ಭೂತಪಂಚೀಕರಣವು ಹೇಗೆಂದರೆ—ಪೃಥ್ವಿಯಲ್ಲಿರುವ ಪೃಥಿವ್ಯಂಶವೇ ಪಾಯು, ಪೃಥ್ವಿಯಲ್ಲಿಯ ಜಲಾಂಶವೇ ಗಂಧ, ಅದರಅಗ್ನ್ಯಂಶವೇ ನಾಸಿಕೇಂದ್ರಿಯ, ಅದರಲ್ಲಿನ ವಾಯ್ವಂಶವೇ ಪ್ರಾಣ, ಅದರ ಆಕಾಶಾಂಶವೇ ಚಿತ್ತವು. ಇದರಂತೆಯೇ ಜಲಭೂತದಲ್ಲಿ ಕ್ರಮವಾಗಿ ಗುಹ್ಯ, ರಸ, ಜಿಹ್ವಾ, ಅಪಾನ, ಬುದ್ಧಿ ಎಂಬಿವುಗಳೂ, ಅಗ್ನಿಯಲ್ಲಿ— ಪಾದ, ರೂಪ, ನೇತ್ರ, ಉದಾನ, ಅಹಂಕಾರವೆಂಬಿವುಗಳೂ,ವಾಯುವಿನಲ್ಲಿ- ಪಾಣಿ, ಸ್ಪರ್ಶನ, ತ್ವಕ್ಕು, ವ್ಯಾನ, ಮನಸ್ಸು-ಎಂಬಿವುಗಳೂ; ಆಕಾಶದಲ್ಲಿ- ವಾಕ್ಕು, ಶಬ್ದ, ಶ್ರೋತ್ರ, ಸಮಾನ, ಜ್ಞಾನವೆಂಬಿವುಗಳೂ ಪಂಚೀಕೃತಿಗಳು.

ಬಳಿಕ ಜ್ಞಾನೇಂದ್ರಿಯಗಳು ಅವುಗಳ ವಿಷಯ, ಭೂತ, ಅಧಿದೇವತೆ ಮೊದಲಾದ ವಿಷಯಗಳು ಹೇಗೆಂದರೆ— ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಎಂಬಿವುಗಳೇ ಜ್ಞಾನೇಂದ್ರಿಯಗಳು. ಇವುಗಳಲ್ಲಿ ಶ್ರೋತ್ರಕ್ಕೆ ಆಕಾಶ ಭೂತ, ದಿಕ್ಕುಗಳು ಅಧಿದೇವತೆ, ಶಬ್ದವೇ ವಿಷಯ, ಅಕ್ಷರಾತ್ಮಕ- ಅನಕ್ಷರಾತ್ಮಕ, ಇವೆರಡು ಶಬ್ದಭೇದಗಳು. ತ್ವಕ್ಕಿಗೆ ವಾಯು ಭೂತ, ಇಂದ್ರ ಅಧಿದೇವತೆ, ಸ್ಪರ್ಶವೇ ವಿಷಯ, ಶೀತ—ಉಷ್ಣ—ಮೃದು—ಕಠಿಣ— ಇವೇ ಸ್ಪರ್ಶನಭೇದಗಳು. ನೇತ್ರಕ್ಕೆ— ಅಗ್ನಿ ಭೂತ, ಸೂರ್ಯನು ಅಧಿದೇವತೆ, ರೂಪವೇ ವಿಷಯ, ಶ್ವೇತ—ಪೀತ—ಹರಿತ—ರಕ್ತ—ಕೃಷ್ಣ—ಮಾಂಜಿಷ್ಠ, ವೆಂಬಿವಾರೇ ರೂಪಭೇ

ದಗಳು. ಜಿಹ್ವೇಂದ್ರಿಯಕ್ಕೆ– ಜಲವೇ ಭೂತ, ವರುಣನು ಅಧಿದೇವತೆ, ರಸವೇ ವಿಷಯ, ಮಾಧುರ್ಯ–ಲವಣ–ಆಮ್ಲ–ತಿಕ್ತ–ಕಟು–ಕಷಾಯ–ಎಂಬಿವಾರು ರಸಭೇದಗಳು. ಘ್ರಾಣೇಂದ್ರಿಯಕ್ಕೆ ಪೃಥ್ವಿಯೇ ಭೂತ, ಅಶ್ವಿನೀದೇವತೆಗಳು ಅಧಿದೇವತೆ, ಗಂಧವೇ ವಿಷಯ, ಸುಗಂಧ–ದುರ್ಗಂಧ–ವೆಂಬೆರಡು ಗಂಧಭೇದಗಳು.

ಇನ್ನು ಕರ್ಮೇಂದ್ರಿಯಗಳಿಗೆ ಹೇಗೆಂದರೆ–ವಾಕ್ಕು, ಪಾದ, ಪಾಣಿ, ಪಾಯು, ಗುಹ್ಯ ಎಂಬಿವೇ ಕರ್ಮೇಂದ್ರಿಯಗಳು. ಇವುಗಳಲ್ಲಿ ವಾಕ್ಕಿಗೆ–ನಾಗವಾಯುವು, ಸರಸ್ವತಿ ಅಧಿದೇವತೆ, ಸುವಾಕ್ಯ ದುರ್ವಾಕ್ಯಗಳೇ ವಿಷಯವು. ಪಾಣೀಂದ್ರಿಯಕ್ಕೆ– ಕೂರ್ಮವಾಯು, ಇಂದ್ರನಧಿದೇವತೆ, ದಾನ–ಆದಾನವೆಂಬ ವಿಷಯವು. ಪಾದೇಂದ್ರಿಯಕ್ಕೆ–ಕೃಕರವಾಯು, ವಿಷ್ಣುವಧಿದೇವತೆ, ಗಮನಾಗಮನಗಳು ವಿಷಯವು. ಪಾಯ್ವಿಂದ್ರಿಯಕ್ಕೆ–ದೇವದತ್ತವಾಯು, ಮೃತ್ಯುವಧಿದೇವತೆ, ಸರ್ಜನ ವಿಸರ್ಜನವಿಷಯಗಳು. ಗುಹ್ಯೇಂದ್ರಿಯಕ್ಕೆ– ಧನಂಜಯವಾಯು, ಬ್ರಹ್ಮನು ಅಧಿದೈವ, ಆನಂದ ಅನಾನಂದಗಳೇ ವಿಷಯವು.

ಇನ್ನು ದಶವಾಯುಗಳ ಸ್ಥಾನಕರ್ಮಾದಿಗಳು ಹೇಗೆಂದರೆ– ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ, ಎಂಬಿವೇ ದಶವಾಯುಗಳು. ಇವುಗಳಲ್ಲಿ ಪ್ರಾಣವಾಯುವಿಗೆ–ಇಂದ್ರನೀಲವರ್ಣ, ಹೃದಯದಲ್ಲಿ ನೆಲೆ, ಇದು ಪಾದದ ಹೆಬ್ಬೆರಲಿನಿಂದ ಹಿಡಿದು ತಲೇ ಕೂದಲ ತುದಿಯವರೆಗೂ ದೇಹದಲ್ಲಿ ವ್ಯಾಪಿಸಿ, ಉಚ್ಛ್ವಾಸನಿಶ್ವಾಸಗಳನ್ನು ಮಾಡಿಸುತ್ತ, ಆಹಾರವನ್ನು ಜೀರ್ಣಗೊಳಿಸುತ್ತಿರುವುದು. ಅಪಾನವಾಯುವು–ಹಸಿರುಬಣ್ಣ, ಇದು ಗುದಸ್ಥಾನದಲ್ಲಿದ್ದು ಮಲಮೂತ್ರವಿಸರ್ಜನಗಳನ್ನು ಮಾಡಿಸುತ್ತ, ಗುದದ್ವಾರವನ್ನು ಮುಚ್ಚಿ ಅನ್ನರಸವನ್ನು ವ್ಯಾಪನಗೊಳಿಸುತ್ತಿರುವುದು. ಸಮಾನವಾಯುವು–ಕಪ್ಪುಬಣ್ಣ, ಇದು ನಾಭಿಸ್ಥಾನದಲ್ಲಿದ್ದು ಆಪಾದಮಸ್ತಕವಾಗಿ ದೇಹದಲ್ಲೆಲ್ಲ ವ್ಯಾಪಿಸಿ, ಅನ್ನರಸವನ್ನು ರೋಮಗಳಿಗೆಲ್ಲ ಏರಿಸುವುದು. ಉದಾನವಾಯುವು–ಮಳೆಮಿಂಚಿನಬಣ್ಣ, ಇದು ಕೊರಲಿನಲ್ಲಿದ್ದು, ಸೀನು, ಕೆಮ್ಮು, ಕನಸು, ಏಳಿಸುವುದು, ಕಳ್ಳರಿಸುವುದು, ಓಕರಿಸುವುದು, ಅದನ್ನು

ತಡೆಯುವುದು— ಈ ಕೆಲಸಗಳನ್ನು ಮಾಡುತ್ತ, ಇಳಿವ ಅನ್ನರಸವನ್ನು ಮತ್ತೆ ಮೇಲಕ್ಕೇರಿಸುತ್ತಿರುವುದು. ವ್ಯಾನವಾಯುವು—ಹಾಲಿನ ಬಣ್ಣ, ಇದು ಅಂಗಸಂಧಿಗಳಲ್ಲಿದ್ದು, ಅಂಗಗಳನ್ನು ಮುದುಡುವ ನೀಡುವ ಕೆಲಸಗಳನ್ನು ಮಾಡುತ್ತ, ಅಲ್ಲಲ್ಲಿಗೆ ತಕ್ಕಷ್ಟು ಅನ್ನಪಾನಗಳನ್ನು ಒದಗಿಸಿಕೊಡುತ್ತಿರುವುದು. ಇವೇ ಪ್ರಾಣಪಂಚಕಗಳು; ಶ್ರೋತ್ರಾದಿಜ್ಞಾನೇಂದ್ರಿಯ ಚೇಷ್ಟೆಗೆ ಹೇತುಗಳು. ಇನ್ನು ೫ ಉಪವಾಯುಗಳಲ್ಲಿ ನಾಗವಾಯುವು—ಹೊಂಬಣ್ಣ, ಇದು ರೋಮನಾಳಗಳಲ್ಲಿದ್ದು, ಚಲನೆಯಿಲ್ಲದೆ ಆಡಿಸುತ್ತಿರುವುದು. ಕೂರ್ಮವಾಯುವು—ಬಿಳಿಯ ಬಣ್ಣ, ಇದು ಉದರಲಲಾಟಸ್ಥಾನಗಳಲ್ಲಿದ್ದು, ದೇಹಪುಷ್ಟಿಯನ್ನು ಮಾಡುತ್ತ, ಕಣ್ಬಾಯ್ಗಳನ್ನು ಮುಚ್ಚಿ ತೆರೆಯಿಸುತ್ತಿರುವುದು. ಕೃಕರವೆಂಬ ವಾಯುವು— ಕಾಡಿಗೆಯ ಬಣ್ಣ, ಇದು ಮೂಗಿನ ತುದಿಯಲ್ಲಿದ್ದುಕೊಂಡು, ಕ್ಷುತ್ತೃಷಾದಿಧರ್ಮಂಗಳನ್ನುಂಟುಮಾಡಿ, ಗಮನಾಗಮನಗಳನ್ನು ಮಾಡಿಸುತ್ತಿರುವುದು. ದೇವದತ್ತವಾಯುವು— ಸ್ಫಟಿಕವರ್ಣವು, ಇದು ಗುಹ್ಯಕಟಿಸ್ಥಾನಗಳಲ್ಲಿದ್ದುಕೊಂಡು, ಕುಳ್ಳಿರುವ, ಏಳುವ, ಮಲಗುವ, ಹೊರಳುವ, ಮಾತನಾಡುವ, ನಗುವ ಕೆಲಸಗಳನ್ನು ಮಾಡಿಸುವುದು. ಧನಂಜಯವಾಯುವು—ಕಪ್ಪುಬಣ್ಣ, ಇದು ಬ್ರಹ್ಮರಂಧ್ರಸ್ಥಾನದಲ್ಲಿದ್ದು, ಕಿವಿಗಳಲ್ಲಿ ಸಮುದ್ರಘೋಷದಂತೆ ಯಾವಾಗಲೂ ಮೊರೆಯುತ್ತಿದ್ದು, ಮರಣಕಾಲಕ್ಕೆ ಸದ್ದಳಿದಿರುವುದು. ಮತ್ತು ಸತ್ತ ಬಳಿಕ ೫ ದಿನದವರೆಗೂ ದೇಹದಲ್ಲಿದ್ದು ಅದನ್ನು ಊದಿಸಿ ಒಡೆಸಿ ತಾನು ದೇಹವನ್ನು ಬಿಡುವುದು. ಈ ೫ ವಾಯುಗಳು ನಾಗಾದಿಕರ್ಮೇಂದ್ರಿಯಚೇಷ್ಟೆಗಳಿಗೆ ಕಾರಣವಾಗಿರುವುವು.

ಇನ್ನು ಕರಣಗಳ ವಿವರವನ್ನು ಹೇಳುತ್ತೇನೆ ಕೇಳು— ಆತ್ಮನು, ಆಕಾಶದೊಡನೆ ಬೆರೆಯಲು ಜ್ಞಾನವು ಹುಟ್ಟಿತು. ವಾಯುವಿನೊಡನೆ ಕೂಡಲು ಮನಸ್ಸಾಯಿತು, ಅಗ್ನಿಯೊಡನೆ ಕೂಡಲು ಅಹಂಕಾರವು ಹುಟ್ಟಿತು, ಜಲದೊಡನೆ ಕೂಡಲು ಬುದ್ಧಿ ಹುಟ್ಟಿತು, ಪೃಥ್ವಿಯೊಡನೆ ಕೂಡಲು ಚಿತ್ತವಾಯಿತು. ಇವೇ ಜ್ಞಾನಕರಣಗಳು. ಇವುಗಳಲ್ಲಿ ಮನಸ್ಸಿಗೆ— ವಾಯು ಭೂತವು, ಚಂದ್ರನು ಅಧಿದೇವತೆ, ಸಂಕಲ್ಪವಿಕಲ್ಪಗಳೇ ಕಾರ್ಯವು. ಅಹಂಕಾರಕ್ಕೆ— ಅಗ್ನಿಯು ಭೂತ, ರುದ್ರನಧಿದೇವತೆ, ಹ

ವ್ಮನ್ನು ತಾಳುವುದೇ ಕಾರ್ಯವು, ಬುದ್ಧಿಗೆ— ಅಪ್ಪು ಭೂತವು, ಬ್ರಹ್ಮ ನಧಿದೇವತೆ, ನಿಶ್ಚೈಸುವಿಕೆಯೇ ಕಾರ್ಯವು. ಚಿತ್ತಕ್ಕೆ— ಪೃಥ್ವಿಯೇ ಭೂತವು. ವಿಷ್ಣುವಧಿದೇವತೆಯು, ಅವಧರಿಸಿ ಆನಂದಿಸುವುದೇ ಕಾರ್ಯವು.

ಈ ಮೇಲೆ ಹೇಳಿದ ಭೂತಪಂಚಕ, ವಾಯುಪಂಚಕ, ಜ್ಞಾನೇಂದ್ರಿಯಪಂಚಕ, ಕರ್ಮೇಂದ್ರಿಯಪಂಚಕ, ಕರಣಚತುಷ್ಟಯ—ಇವಿಷ್ಟು ಸೇರಿ ೨೪ ತತ್ತ್ವಗಳಾದುವು. ಜ್ಞಾನಕಾರಣವೂ ಸೇರಿದರೆ ೨೫ ಆಗುವುವು. ಈ ತತ್ವಗಳಿಂದ ಕೂಡಿದುದೇ ದೇಹವು, ಇಂತಹ ದೇಹವನ್ನು ತಾಳಿದ ಆತ್ಮನಿಗೆ ಜ್ಞಾನೇಂದ್ರಿಯವೇ ಚಿತ್ಸ್ವರೂಪವಾಗಿರುವುದು. ಪರಶಿವನೇ ಅಧಿದೇವತೆಯು, ಈ ಆತ್ಮನು ಸರ್ವಾಂಗದಲ್ಲೂ ತುಂಬಿಕೊಂಡು ಚೈತನ್ಯರೂಪನಾಗಿ, ತೊಳಗಿ ಬೆಳಗುತ್ತಿರುವನು. ಈ ಆತ್ಮನು ಜೀವಾತ್ಮ, ಅಂತರಾತ್ಮ, ಪರಮಾತ್ಮನೆಂದು ಮೂರು ಭೇದವನ್ನು ಪಡೆದಿರುವನು. ಸಂಸಾರಸುಖದುಃಖಬದ್ಧನೇ ಜೀವಾತ್ಮನು, ಈ ಸುಖದುಃಖಗಳನ್ನು ಹೊಂದಿಯೂ ಹೊಂದದಂತಿರುವವನು ಅಂತರಾತ್ಮನು, ಪ್ರಪಂಚವ್ಯಾಪಾರಕ್ಕೆ ಸಿಕ್ಕದೆ ನಿರಾಕಾರಿಯಾಗಿರುವವನು ಪರಮಾತ್ಮನು. ಇನ್ನು ಸ್ಥೂಲ, ಸೂಕ್ಷ್ಮ, ಕಾರಣವೆಂಬ ತನುತ್ರಯಗಳ ವಿವರವೆಂತೆಂದರೆ—ಪಂಚಭೂತಮಯವಾದುದೇ ಸ್ಥೂಲದೇಹವು; ಪಂಚಪ್ರಾಣವಾಯುಗಳು, ದಶೇಂದ್ರಿಯಗಳು, ಮನೋಬುದ್ಧಿಗಳೆರಡು, ಈ ೧೭ ತತ್ತ್ವಗಳಿಂದಾದುದೇ ಲಿಂಗಭೌತಿಕವೆಂಬ ಸೂಕ್ಷ್ಮಶರೀರವು; ಅಹಂಕಾರ, ಚಿತ್ತ ಆತ್ಮಸಂಯೋಗದಿಂದಾದುದೇ ಕಾರಣತನುವು.

ಇನ್ನು ಅಂಗ, ಪ್ರತ್ಯಂಗ, ಸಾಂಗಾಂಗ, ಉಪಾಂಗಗಳ ಭೇದವನ್ನು ಹೇಳುವೆನು — ಶಿರಸ್ಸು ಎದೆ ತೊಡೆ ಭುಜ— ಇವುಗಳು ಅಂಗವು; ಮುಖ ಮೂಗು ಕಿವಿ ತುಟಿ ಕಣ್ಣು ಬೆರಲು—ಇವು ಪ್ರತ್ಯಂಗಗಳು; ಕರಣಚತುಷ್ಟಯವು ಸಾಂಗಾಂಗವು; ವಸ್ತ್ರ ಆಭರಣ ಅನುಲೇಪನಗಳು ಉಪಾಂಗಗಳು. ಇನ್ನು ದಶನಾಡಿಗಳ ವಿವರವು ಹೇಗೆಂದರೆ— ಎಡಮೂಗಿನ ಚಂದ್ರನಾಡಿಯು ಈಡೆ, ಬಲಮೂಗಿನ ಸೂರ್ಯನಾಡಿಯು ಪಿಂಗಳೆ, ಮಧ್ಯದ ನಾಡಿಯೇ ಸುಷುಮ್ನೆಯು, ಬಲಗಣ್ಣಿನಲ್ಲಿ ಗಾಂಧಾರಿಯು, ಎಡಗಣ್ಣಿನಲ್ಲಿ ಹಸ್ತಿಜಿಹ್ವೆಯು, ಬಲಗಿವಿಯಲ್ಲಿ ಪೂಷೆ, ಎಡಗಿವಿಯಲ್ಲಿ ಪ

ಯಸ್ವಿನಿ, ಮೇಢ್ರನಾಳವೇ ಅಲಂಬುವು, ಗುದನಾಳವೇ ಲಕುಹವು, ನಾಭಿನಾಳವೇ ಶಂಕಿನಿಯು.

ಬಳಿಕ ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶ ಸೂರ್ಯ ಚಂದ್ರ ಆತ್ಮ ಎಂಬ ಅಷ್ಟಮೂರ್ತಿಗಳ ಸಂಬಂಧದ ಮದಗಳಿರುವುವು. ಆತ್ಮನು ಪೃಥ್ವೀಮದಸಂಬಂಧವುಳ್ಳವನಾದರೆ ದೇಹಗುಣಭರಿತನಾಗಿ ವಸ್ತ್ರಾಭರಣತಾಂಬೂಲಾದಿಗಳನ್ನು ಅಪೇಕ್ಷಿಸುವನು. ಜಲಮದದಿಂದ ಕೂಡಿದರೆ ಸಂಸಾರಿಯಾಗಿ, ಅದು ಬೇಕು ಇದು ಬೇಕು ಎಂದು ಅಪೇಕ್ಷಿಸುತ್ತಿರುವನು. ಅಗ್ನಿಮದದಿಂದ ಕೂಡಿದರೆ ಕಾಮರಸವುಳ್ಳವನಾಗಿ, ನೋಡಬೇಕು ಮಾತನಾಡಿಸಬೇಕು ಎಂಬುದು ಮೊದಲಾದ ಇಚ್ಛೆಯುಳ್ಳವನಾಗುವನು. ವಾಯುಮದವೇರಿದರೆ ಗಮನೋನ್ಮುಖನಾಗುವನು. ಆಕಾಶಮದವೇರಿದರೆ ವಾಹನವನ್ನೇರಬೇಕೆಂದಿಚ್ಛೈಸುವನು. ರವಿ ಮದವೇರಿದರೆ ಕೋಪವೇರಿರುವನು. ಚಂದ್ರ ಮದವೆತ್ತಿದರೆ ಚಿಂತಾಕುಲನಾಗುವನು. ಆತ್ಮಮದವಂಟಿದರೆ ಅಹಂಕಾರಯುಕ್ತನಾಗುವನು.

ಇನ್ನು ಸಪ್ತಧಾತುಗಳ ಉತ್ಪತ್ತಿ ವರ್ಣಾಂಶಾದಿವಿಷಯವೆಂತೆಂದರೆ— ರಸ, ರುಧಿರ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ಲ, ವೆಂಬಿವುಗಳೇ ಸಪ್ತಧಾತುಗಳು. ಉಂಡನ್ನವೇ ಪ್ರತಿಯೇಳು ದಿನಕ್ಕೆ ಕ್ರಮವಾಗಿ ಮೇಲ್ಕಂಡ ರಸಾದಿನಾಮಕಗಳುಳ್ಳದ್ದಾಗುವುದು. ಮೊದಲನೇ ರಸವು ಕಪಿಲವರ್ಣವಾದದ್ದು, ಪೃಥಿವ್ಯಂಶದೇಹವನ್ನು ನಡಗಿಸುವುದು. ರಕ್ತವು ನೀಲವರ್ಣವು, ಜಲಾಂಶದೇಹವನ್ನು ಅಳ್ಕಿಸುವುದು. ಮಾಂಸವು ರಕ್ತವರ್ಣ, ಅಗ್ನ್ಯಂಶದೇಹವನ್ನು ಕಳವಳಗೊಳಿಸುವುದು. ಮೇದಸ್ಸು ಕೆಂಪು ಬೆರೆದ ಹೊಂಬಣ್ಣ, ಅದು ವಾಯ್ವಂಶತನುವನ್ನು ಹೆದರಿಸುವುದು. ಅಸ್ಥಿಯು ಕಪ್ಪುಬಣ್ಣದ ಧಾತು, ಇದು ಆಕಾಂಶಾಶದೇಹವನ್ನು ಹುಚ್ಚುಹುಚ್ಚಾಗಿ ನುಡಿಸುವುದು. ಮಜ್ಜೆಯು ತಾಮ್ರವರ್ಣವುಳ್ಳದ್ದು, ಅದು ರವ್ಯಂಶದೇಹವನ್ನು ಕಳವಳಿಸುವಂತೆ ಮಾಡುವುದು. ಶುಕ್ಲವು ಬಿಳಿಯಬಣ್ಣದ್ದು, ಅದು ಚಂದ್ರಾಂಶತನುವನ್ನು ನಡುಗುಹುಟ್ಟಿಸುವುದು.

ಬಳಿಕ ಸಪ್ತವ್ಯಸನಗಳ ವಿವರವು ಹೇಗೆಂದರೆ— ತನು ಮನ ಧನ ರಾಜ್ಯ ವಿಶ್ವ ಉತ್ಸಾಹ ಸೇವಕ ವ್ಯಸನವೆಂಬುವುಗಳು. ತನುವ್ಯಸನವೇ

ರಿದರೆ ದೇಹವು ಕೃಶವಾಯ್ತೆನ್ನುವನು. ಮನೋವ್ಯಸನವಂಟದರೆ ಕಳುವು ಹಾದರಗಳನ್ನಿಚ್ಛೈಸುವನು. ಧನವ್ಯಸನದಿಂದ ಹಣವನ್ನಿಚ್ಛೈಸುವನು. ರಾಜ್ಯವ್ಯಸನದಿಂದ ವಾಹನ ವಸ್ತ್ರಾಭರಣಛತ್ರಪಾದುಕಾದಿಗಳನ್ನಪೇಕ್ಷಿಸುವನು. ವಿಶ್ವವ್ಯಸನದಿಂದ ಮನೆ ಹೊಲ ಗದ್ದೆಗಳನ್ನು ಬಯಸುವನು. ಉತ್ಸಾಹವ್ಯಸನದಿಂದ ಪುತ್ರಮಿತ್ರಬಾಂಧವಾದಿಗಳನ್ನಿಚ್ಛೈಸುವನು. ಸೇವಕಾವ್ಯಸನವುಂಟಾದರೆ ಕೊಳ್ಳುವೆನು ಕೊಡುವೆನು ಉಡುವೆನು ತೊಡುವೆನು ಎಂಬ ಇಷ್ಟಚಿಂತೆಯುಳ್ಳವನಾಗುವನು.

ಇನ್ನು ಷಡೂರ್ಮಿಗಳು ಯಾವುವೆಂದರೆ— ಹಸಿವು, ನೀರಡಿಕೆ, ಶೋಕ, ಮೋಹ, ಜನನ, ಮರಣ, ಎಂಬಿವುಗಳು. ಇವುಗಳಲ್ಲಿ ಹಸಿವು ಬಾಯಾರಿಕೆಗಳು ಪ್ರಾಣಧರ್ಮವು, ಮೋಹಶೋಕಗಳು ಮನೋಧರ್ಮವು, ಜನನಮರಣಗಳು ದೇಹಧರ್ಮವು.

ಅರಿಷಡ್ವರ್ಗಗಳಾವುವೆಂದರೆ— ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು. ಷಡ್ಭ್ರಮೆಗಳಾವುವೆಂದರೆ— ಜಾತಿ, ವರ್ಣ, ಕುಲ, ಗೋತ್ರ, ಆಶ್ರಮ, ನಾಮ ಎಂಬಿವುಗಳು. ಷಡ್ಭಾವವಿಕಾರಗಳಾವುವೆಂದರೆ— ಜಾಯತೆ, ಅಸ್ತಿತೆ, ವಿಪರಿಣಮತೆ, ವಿವರ್ಧತೆ, ಅಪಕ್ಷತೆ, ವಿನಶ್ಯತೆ ಎಂಬಿವು. ಜಾಯತೆಯೆಂದರೆ— ತಾಯಿ ಗರ್ಭದಿಂದ ಹುಟ್ಟುವುದು, ಅಸ್ತಿತೆಯೆಂದರೆ ಉಂಟೆನಿಸುವುದು, ವಿಪರಿಣಮತೆಯೆಂದರೆ ಪರ್ಯವಸಾನಗೊಳ್ಳುವುದು, ವಿವರ್ಧತೆಯೆಂದರೆ ಬೆಳೆಯುವುದು, ಅಪಕ್ಷತೆಯೆಂದರೆ ಕ್ಷಯಿಸುವುದು, ವಿನಶ್ಯತೆ ಯೆಂದರೆ ಕೆಡುವುದು.

ಪಂಚಕೋಶಗಳಾವುವೆಂದರೆ— ಅನ್ನಮಯ, ಪ್ರಾಣಮಯ, ವಿಜ್ಞಾನಮಯ, ಆನಂದಮಯ, ಮನೋಮಯ ಎಂಬಿವುಗಳು.

ಗುಣತ್ರಯಲಕ್ಷಣಗಳು—ಸತ್ವಗುಣಕ್ಕೆ—ಸತ್ಯ, ಹರ್ಷ, ಕ್ಷಮೆ, ಜ್ಞಾನ, ಮೌನ, ಶ್ರದ್ಧೆ, ಧೈರ್ಯ, ವಿವೇಕ, ಸಾಹಸ, ನಿಶ್ಚಯ ಎಂಬ ೧೦ ಲಕ್ಷಣಗಳು. ರಜೋಗುಣಕ್ಕೆ— ಗರ್ವ, ಕೋಪ, ದ್ವೇಷ, ಮಚ್ಚರ, ಅಹಂಕಾರ, ಅಪ್ರಿಯ, ಡಂಭ, ಉದ್ಯೋಗ, ವಾಚಕ, ವಾದ ಎಂಬ ೧೦ ಲಕ್ಷಣಗಳು. ತಮೋಗುಣಕ್ಕೆ— ನಿದ್ರೆ, ಆಲಸ್ಯ, ಮೋಹ, ಚಾಪಲ್ಯ, ಹಿಂಸೆ, ನಿಂದೆ, ಹೀನವೃತ್ತಿ ಪಾಪಬುದ್ಧಿ ಎಂಬ ೮ ಲಕ್ಷಣಗಳು.

ಅಂತರಂಗದ ಅಷ್ಟಮದಗಳು:— ಸಂಸ್ಥಿತೆ, ತೃಣೀಕೃತ, ವರ್ತ್ತಿನಿ, ಕ್ರೋಧಿನಿ, ಗಂಧಚಾರಿಣಿ, ಮೋಹಿನಿ, ಅತಿಚಾರಿಣಿ, ವಾಸಿನಿ ಯೆಂಬಿವುಗಳು.

ಬಹಿರಂಗದ ಅಷ್ಟಮದಗಳು— ಕುಲ, ಛಲ, ಧನ, ಯೌವನ, ರೂಪ, ವಿದ್ಯೆ, ರಾಜ್ಯ, ತಪಸ್ಸು ಇವುಗಳಿಂದ ಬಂದ ಮದಗಳು.

ತಾಪತ್ರಯಗಳು— ಆಧ್ಯಾತ್ಮಿಕ, ಆಧಿಭೌತಿಕ, ಅಧಿದೈವಿಕವೆಂದು. ಇವುಗಳಲ್ಲಿ ಆಧ್ಯಾತ್ಮಿಕವು-ಮಾನಸ, ಶಾರೀರವೆಂದು ಎರಡುಪ್ರಕಾರವಾಗಿರುವುದು. ಮದಮತ್ಸರಾದಿಗಳಿಂದುಂಟಾದ ದುಃಖವು ಮಾನಸವು. ಜ್ವರಾದಿರೋಗಗಳಿಂದುಂಟಾದ ದುಃಖವು ಶಾರೀರವು. ರಾಜರು ಚೋರರು ಪಶು ಪಕ್ಷಿ ಮೃಗಾದಿಗಳಿಂದುಂಟಾದ ದುಃಖವು ಆಧಿಭೌತಿಕವು. ಜನನ ಮರಣ ಹಸಿವು ತೃಷೆ ಅಜ್ಞಾನ ಮೊದಲಾದುವುಗಳಿಂದುಂಟಾದ ದುಃಖವು ಅಧಿದೈವಿಕವು. ಹೀಗೆ ಜನ್ಮಜನ್ಮಾಂತರದಲ್ಲಿ ಹುಟ್ಟ ತಾಪತ್ರಯಗಳ ಭ್ರಮೆಯಿಂದ ನೊಂದು ಬೇಸತ್ತ ಜೀವನಿಗೆ ಜನ್ಮಾಂತರಾರ್ಜಿತಸುಕೃತವಾಸನೆಯ ಬಲದಿಂದ ಶಿವಭಕ್ತಿ ಹುಟ್ಟುವುದು. ಅದರಿಂದ ಶಿವಜ್ಞಾನಸಿದ್ಧಿಯಾಗುವುದು. ಆ ಜ್ಞಾನವು— ಪ್ರತ್ಯಕ್ಷ, ಪರೋಕ್ಷ, ಅಪರೋಕ್ಷವೆಂದು ೩ ತೆರನಾಗಿರುವುದು. ಸ್ಥೂಲಾದಿಶರೀರತ್ರಯಗಳಲ್ಲಿಯೂ, ಶ್ರೋತ್ರಾದಿಜ್ಞಾನೇಂದ್ರಿಯಪಂಚಕದಿಂದಲೂ, ಶಬ್ದಾದಿಪಂಚವಿಷಯಗಳಿಂದಲೂ, ಜ್ಞಾನಾದಿಅಂತಃಕರಣಪಂಚಕದಿಂದಲೂ, ತಿಳಿದುಕೊಳ್ಳುವುದೇ ಪ್ರತ್ಯಕ್ಷಜ್ಞಾನವು. ದೇಶಕಾಲಗಳನ್ನೂ, ಲೋಕಾಂತರವನ್ನೂ, ಜನ್ಮಾಂತರ ಸುಖದುಃಖಗಳನ್ನೂ, ಸುಕರ್ಮದುಷ್ಕರ್ಮಗಳನ್ನೂ, ಬಂಧಮೋಕ್ಷಗಳನ್ನೂ, ವೇದಾಗಮಾದಿಗಳ ವಿಚಾರದಿಂದ ತಿಳಿದುಕೊಳ್ಳುವುದೇ ಪರೋಕ್ಷಜ್ಞಾನವು. ಬಹಿರಂಗದಲ್ಲಿ ಕಾಣುವ ಭೂತಪಂಚಕವೂ, ಅಂತರಂಗದಲ್ಲಿರುವ ಸೂಕ್ಷ್ಮಭೂತಪಂಚಕವೂ, ಒಂದೇ ಎಂದು ತಿಳಿದು, ತದ್ಭೂತಗುಣಧರ್ಮಾದಿವಿಷಯಗಳನ್ನೆಲ್ಲ ತಾನಲ್ಲವೆಂದರಿತು, ಜೀವಪರಮರ ಐಕ್ಯವನ್ನು ನಿರ್ಧರಿಸಿ, ತನ್ನ ಹೊರತು ಬೇರೊಂದು ವಸ್ತುವಿಲ್ಲವೆಂಬುದನ್ನು ಶ್ರೀಗುರುಕಟಾಕ್ಷದಿಂದ ನಿಜವಾಗಿ ಅರಿತುಕೊಳ್ಳುವುದೇ ಅಪರೋಕ್ಷಜ್ಞಾನವು. ಎಂದು ಚೆನ್ನಬಸವೇಶ

ನು ಅಪ್ಪಣೆ ಕೊಡಿಸಲು, ಸಿದ್ಧರಾಮೇಶನು ಸಂತುಷ್ಟನಾಗಿ ನಮಸ್ಕರಿಸಿದನು. ಎಂಬಲ್ಲಿಗೆ ಐದನೇ ಅಧ್ಯಾಯವು ಸಂಪೂರ್ಣವು.

## ೬ನೇ ಅಧ್ಯಾಯವು.

### ಲಿಂಗದೀಕ್ಷಾ ಗುರು ಲಿಂಗ ಜಂಗಮಮಾಹಾತ್ಮ್ಯವು.

ಬಳಿಕ ಸಿದ್ಧರಾಮೇಶನು ಚೆನ್ನಬಸವೇಶನನ್ನು ಕುರಿತು— ಗುರುವರೇಣ್ಯನೆ! ನನಗೆ ಮುಂದೇನು ಗತಿ? ಎಂದು ಕೇಳಿಕೊಳ್ಳಲು, ಶಿವಾಗಮಾರ್ಥವಿಜ್ಞಾನಿಗಳಾದವರ ಕರುಣದಿಂದ ಅಷ್ಟಾವರಣಲಕ್ಷಣವನ್ನು ತಿಳಿದು, ವೀರಶೈವತತ್ತ್ವೋಪದೇಶವನ್ನು ಪಡೆದು, ಜನ್ಮಬಂಧವನ್ನು ಕಳೆದುಕೊಳ್ಳೆಂದು ಚೆನ್ನಬಸವೇಶನು ನುಡಿಯಲು, ನೀನು ಹೊರತು ನನಗೆ ಬೇರೆ ಗುರುವಿಲ್ಲವಾದಕಾರಣ, ಅದನ್ನೆಲ್ಲ ನೀನೇ ಉಪದೇಶಿಸಬೇಕೆಂದುಸಿದ್ಧರಾಮನು ಬೇಡಿ, ಮತ್ತೆ ನಮಸ್ಕರಿಸಿದನು. ಆಗ ಚೆನ್ನಬಸವೇಶನು— ಗುರುವಾದವನು ವೇದಶೈವಾಗಮಪುರಾಣಾದಿಗಳ ಅರ್ಥವನ್ನು ತಿಳಿದು, ಪರಮಶಾಂತನೂ, ಪರಿಶುದ್ಧನೂ, ಶಿವಾಚಾರಸಂಪನ್ನನೂ, ಅಂಗವೈಕಲ್ಯರಹಿತನೂ, ಜಿತೇಂದ್ರಿಯನೂ, ದುರ್ಗುಣರಹಿತನೂ, ಗುರುಸಂಪ್ರದಾಯಗತನೂ, ಸದ್ವಂಶಜಾತನೂ, ಶಿವಧ್ಯಾನಯುಕ್ತನೂ ಆಗಿರಬೇಕು. ಅಂಥವರಲ್ಲಿ ಹೋಗಿ ನೀನು ದೀಕ್ಷೆಯನ್ನು ಪಡೆದು ಬಾರೆಂದು ಹೇಳಲು; "ಗುರುವೆ! ತಾವು ಅಪ್ಪಣೆ ಕೊಡಿಸಿದ ಗುಣಗಳೆಲ್ಲ ತಮ್ಮಲ್ಲೀ ಇರುವುವು, ತಾವೇ ಶಿವನ ಚಿತ್ಕಳಾಸ್ವರೂಪರು, ನೀವು ಈ ಬಸವೇಶ್ವರಾದಿಪ್ರಮಥಗಣರಿಗೆಲ್ಲ ಪ್ರಾಣಲಿಂಗೋಪದೇಶವನ್ನು ಮಾಡಿರುವಿರಿ. ಆದುಕಾರಣ, ತಾವೇ ನನಗೂ ಕರುಣದಿಂದ ಶಿವದೀಕ್ಷೆಯನ್ನು ಮಾಡಿ ಭವಪಾಶದಿಂದ ಬಿಡಿಸಿ ಉದ್ಧರಿಸಬೇಕು" ಎಂದು ಸಿದ್ಧರಾಮೇಶನು ಬೇಡಿದನು. ಅದಕ್ಕಾಚೆನ್ನಬಸವೇಶನು— ಎಲೆ ಸಿದ್ಧರಾಮೇಶನೆ, ವೀರಶೈವಾಚರಣೆ ಯೆಂಬುದು ನಿನಗೆ ಸುಲಭವಲ್ಲ, ಅದು ಕತ್ತಿಯ ಬಾಯಲ್ಲಿರುವ ಜೇನುತುಪ್ಪದಂತೆಯೂ, ಸರ್ಪದ ತಲೆಯಲ್ಲಿರುವ ರತ್ನದಂತೆಯೂ ಸಾಮಾನ್ಯರಿಗೆ ದುರ್ಲಭವಾಗಿರುವುದು. ಮಲತ್ರಯಗಳನ್ನೂ ಪಂಚಸೂತಕಗಳನ್ನೂ ಕಳೆದು, ಅನ್ಯದೈವ

ಭಜನೆಯನ್ನೂ ಭವಿಸಂಗವನ್ನೂ ಬಿಟ್ಟು, ಪಂಚಾಚಾರತತ್ಪರನಾಗಿದ್ದವನೇ ವೀರಶೈವನೆನಿಸಿಕೊಳ್ಳುವನು ಎನ್ನಲು, ಆ ಮಲತ್ರಯಾದಿಗಳ ವಿವರವನ್ನು ತಿಳಿಸಬೇಕೆಂದು ಸಿದ್ದರಾಮೇಶನು ಕೇಳಲಾಗಿ, ಹೇಳಿದನೆಂತೆಂದರೆ—ನನ್ನ ತಾಯಿ ತಂದೆ ಮಕ್ಕಳು ಎಂಬ ಅಭಿಮಾನವು ಆಣವಮಲವು, ಕುಲಗೋತ್ರಾದಿಗಳ ಅಭಿಮಾನವು ಮಾಯಾಮಲವು, ಧನಾದ್ಯಭಿಮಾನವು ಕಾರ್ಮಿಕಮಲವು, ಇವನ್ನೆಲ್ಲ ಬಿಟ್ಟು, ಪಾರ್ವತೀಪರಮೇಶ್ವರರೇ ನನ್ನ ತಾಯ್ತಂದೆಗಳು, ಈಶ್ವರನ ಕುಲವೇ ನನ್ನ ಕುಲ, ಸಕಲ ಸಂಪತ್ತೂ ಶಿವನದೇ ಹೊರತು ನನ್ನದಲ್ಲ, ಎಂಬ ಭಾವವುಳ್ಳವನಿಗೆ ಮಲತ್ರಯಗಳು ಅಳಿದುಹೋಗುವುವು. ಜಾತಿಸೂತಕ, ಜನನಸೂತಕ, ಪ್ರೇತಸೂತಕ, ರಜಸ್ಸೂತಕ, ಉಚ್ಛಿಷ್ಟಸೂತಕ, ಇವೇ ಪಂಚಸೂತಕಗಳು. ಸ್ಥಾವರಾದಿಅನ್ಯಲಿಂಗಪೂಜೆ, ತೀರ್ಥಕ್ಷೇತ್ರಯಾತ್ರೆ, ಇತ್ಯಾದಿಗಳೇ ಅನ್ಯದೇವಾರ್ಚನೆಯು, ಅಂಗವಿಹೀನರಾದವರನ್ನು ತನ್ನ ತಾಯ್ತಂದೆ ಬಂಧುಗಳೆಂದು ಭಾವಿಸುವುದು ಭವಿಸಂಗವು. ಇವೆಲ್ಲವನ್ನೂ ಬಿಡಬೇಕು ಎನ್ನಲು, "ಗುರುವೆ! ನನ್ನ ಕಲ್ಪತರುವೆ! ತಮ್ಮಪ್ಪಣೆಯಂತೆ ಅದೆಲ್ಲವನ್ನೂ ಬಿಟ್ಟಿರುವೆನು; ಇನ್ನೇನನ್ನು ಬಿಡಬೇಕೋ ಅದನ್ನೂ ಅಪ್ಪಣೆ ಕೊಡಿಸಿರಿ; ನನ್ನನ್ನು ಶಿವದೀಕ್ಷೆಯಿಂದ ಧನ್ಯನಂ ಮಾಡಿರಿ" ಎಂದು ಸಿದ್ಧರಾಮೇಶನು ಕೇಳಿದನು. ಆಗ ಚೆನ್ನಬಸವೇಶನು ಕರುಣಾಕಟಾಕ್ಷದಿಂದ ಸಿದ್ಧರಾಮೇಶನನ್ನು ನೋಡಿ, ಬಳಿಕ ಶಿವಶರಣರ ಕಡೆಗೆ ತಿರುಗಿ— ಈ ಸಿದ್ಧರಾಮನು ಮಾಶಿವನ ಪ್ರತಿಬಿಂಬವು, ಹೇಗೆಂದರೆ— ಪೂರ್ವದಲ್ಲಿ ಗಂಧರ್ವದಂಪತಿಗಳಿಬ್ಬರು ಶಿವನ ಬಳಿಗೆ ಹೋಗುತ್ತ, ಅಲ್ಲಿದ್ದ ಭೃಂಗೀಶ್ವರನನ್ನು ನೋಡಿ ನಕ್ಕರು. ಅದರಿಂದ ಭೃಂಗಿಯು ಕೆರಳಿ, "ನೀವು ಮಾನವಜನ್ಮದಲ್ಲಿ ಭವಿಗಳಾಗಿ ಹುಟ್ಟಿರಿ" ಎಂದು ಅವರಿಗೆ ಶಾಪವಿತ್ತನು. ಅವರು ಹೆದರಿ, ತಂದೆಯೆ, ನಾವು ಅಜ್ಞಾನದಿಂದ ನಕ್ಕೆವು. ಕರುಣದಿಂದ ಶಾಪವಿಮೋಚನವನ್ನು ಅನುಗ್ರಹಿಸಬೇಕೆಂದು ಬೇಡಲು, ನಿಮ್ಮ ಗರ್ಭದಲ್ಲಿ ಒಬ್ಬ ಶಿವಯೋಗಿಯು ಜನಿಸಿದಾಗ ವಿಮೋಚನವಾಗುವುದು ಎಂದು ಭೃಂಗೀಶನು ಹೇಳಿದನು. ಅಲ್ಲಿಂದ ಆ ಗಂಧರ್ವರು ಶಿವನ ಬಳಿಗೆ ಹೋಗಿ ತಮಗಾದ ಸಂಕಟವನ್ನು ಹೇಳಿಕೊಂಡು ಅತ್ತರು. ಆಗ ಶಂಕರನು— ನೀವು

ಹೆದರಬೇಡಿರಿ, ನಿಮ್ಮ ಗರ್ಭದಲ್ಲಿ ನನ್ನ ಪ್ರತಿರೂಪನೇ ಅವತರಿಸಿ, ನಿಮಗೆ ಮುಕ್ತಿಗುಡುವಂತೆ ಮಾಡುವೆನು, ಎಂದು ಅಭಯವನ್ನು ಕೊಟ್ಟನು. ಆ ದಂಪತಿಗಳು ಸೊನ್ನಲಿಗೆ (ಸೊಲ್ಲಾಪುರ) ಯೆಂಬ ಊರಿನಲ್ಲಿ ಕುಡಿಯೊಕ್ಕಲಿಗರಿಬ್ಬರ ಗರ್ಭದಲ್ಲಿ ಜನಿಸಿದರು. ಗಂಡನು ಮುದ್ದಗೌಡನಾದನು. ಹೆಂಡಿತಿಯು ಸುಗ್ಗಾಯಿಯಾದಳು. ಅವರಿಬ್ಬರೂ ಮದುವೆಯಾಗಲು, ಅವರ ಹೊಟ್ಟೆಯಲ್ಲಿ ಶಿವಪ್ರತಿಬಿಂಬವೇ ಈ ಸಿದ್ಧರಾಮನಾಗಿ ಜನಿಸಿದನು. ಈತನು ಶ್ರೀಶೈಲಕ್ಕೆ ಹೋಗಿ, ಅಲ್ಲಿನ ಮಲ್ಲಿಕಾರ್ಜುನೇಶ್ವರನನ್ನು ತನ್ನೂರಿಗೆ ಕರೆತಂದು, ಪೂಜೆಸಿ, ಮನ್ಮಥನನ್ನು ಗೆದ್ದು, ನರಕಕುಂಡದಲ್ಲಿ ಬಿದ್ದಿದ್ದವರನ್ನು ಕೈಲಾಸಕ್ಕೆ ಸಾಗಿಸಿದನು. ತನ್ನ ಹೃದಯವನ್ನು ಬಗಿದು ಒಳಗಿರುವ ಬಸವೇಶನನ್ನು ಶಿವಶರಣರಿಗೆ ತೋರಿಸಿದನು. ಇವನ ಮಾಹಾತ್ಮ್ಯವನ್ನು ಸಾಂಗವಾಗಿ ವರ್ಣಿಸುವುದಕ್ಕೆ ನನಗೆ ಸಾಧ್ಯವಲ್ಲ; ಎನ್ನಲು, ಸಿದ್ಧರಾಮನು–ಗುರುವೆ! ಚೆನ್ನಾಯಿತು, ತಮ್ಮ ಸೇವಕರ ಸೇವಕನಾದ ನನ್ನನ್ನು ಹೀಗೆ ಹೊಗಳಬಹುದೆ? ಕರುಣವಿಟ್ಟು ನನಗೆ ಇಷ್ಟಲಿಂಗವನ್ನು ದಯೆಪಾಲಿಸಬೇಕು ಎಂದು ಸಾಷ್ಟಾಂಗವಾಗಿ ನಮಸ್ಕರಿಸಿ ಬೇಡಿದನು. ಅಲ್ಲಮಪ್ರಭು ಬಸವೇಶ ಮೊದಲಾದ ಶಿವಶರಣರೆಲ್ಲರೂ ಸಿದ್ಧರಾಮೇಶನಿಗೆ ದೀಕ್ಷೆಯನ್ನು ಮಾಡಿ ಉದ್ಧರಿಸುವುದೇ ವಿಹಿತವೆಂದು ಅಪ್ಪಣೆ ಮಾಡಿದುದನ್ನನುಸರಿಸಿ ಚೆನ್ನಬಸವೇಶನು ಸಿದ್ಧರಾಮನ ಮಂಡೆಯಮೇಲೆ ಕೈಯಿಟ್ಟು ಎತ್ತಿದನು. ಕೂಡಲೇ ದೀಕ್ಷಾಮಂಟಪವು ಪರಿಪರಿಯ ವಸ್ತ್ರಮಾಲ್ಯಪುಷ್ಪಪಲ್ಲವಾದಿಗಳಿಂದಲಂಕೃತವಾಯಿತು. ದೀಕ್ಷಾಂಗಕರ್ಮಗಳು ಆರಂಭಿಸಲ್ಪಟ್ಟುವು. ವಿಧಿಪ್ರಕಾರವಾಗಿ ಪಂಚಕಲಶಸ್ಥಾಪನವಾಯಿತು. ಸಿದ್ಧರಾಮೇಶನು ಭಸಿತವೆರೆದ ವೀಳಯವನ್ನು ಸಕಲ ಶಿವಶರಣರ ಮುಂದಿಟ್ಟು ನಮಸ್ಕರಿಸಿ, ದೀಕ್ಷಾನುಗ್ರಹವನ್ನು ಬೇಡಿದನು. ಅವರಪ್ಪಣೆಯಾದನಂತರ ಚೆನ್ನಬಸವೇಶನು ಸಿದ್ಧರಾಮನನ್ನು ದೀಕ್ಷಾವೇದಿಕೆಯ ಮಧ್ಯದಲ್ಲಿ ಕುಳ್ಳಿರಿಸಿದನು. ಅರ್ಚಿತವಾದ ಪಂಚಕಲಶತೀರ್ಥವನ್ನು ಆಚಾರ್ಯಚತುಷ್ಕದೊಡನೆ ಚೆನ್ನಬಸವೇಶನು ಶಿಷ್ಯನ ತಲೆಯಮೇಲಿಂದ ಸಮಂತ್ರವಾಗಿ ಮೂರು ಬಾರಿ ಅಭಿಷೇಕಿಸಿ, ಪರಿಶುದ್ಧನಂ ಮಾಡಿ, ವಿಭೂತಿರುದ್ರಾಕ್ಷಪಟ್ಟವನ್ನು ಕಟ್ಟಿ, ಬಳಿಕ ಶಿಷ್ಯನ ತ್ರಿವಿಧ

ದೇಹದಲ್ಲಿನ ಮಲತ್ರಯವನ್ನು ವೇಧಾ ಮನು ಕ್ರಿಯೆ ಯೆಂಬ ದೀಕ್ಷಾತ್ರಯದಿಂದ ಹೋಗಲಾಡಿಸಿ, ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯವನ್ನು ಸ್ಥೂಲ ಸೂಕ್ಷ್ಮ ಕಾರಣ ತನುಗಳಲ್ಲಿ ಅಳವಡಿಸಿದನು. ಆಗ ಸಿದ್ಧರಾಮನು ತನ್ನ ಗುರು ಮೊದಲಾದ ಸಕಲ ಗಣಸಮೂಹಕ್ಕೂ ನಮಸ್ಕರಿಸಿ, ಧನ್ಯನಾದೆನೆಂದುಸುರಿ, ಈ ಪಂಚಕಲಶಗಳ ಸ್ವರೂಪವನ್ನು ನನಗೆ ವಿವರಿಸಿ ತಿಳುಹಬೇಕೆಂದು ಚೆನ್ನಬಸವೇಶನನ್ನು ಪ್ರಾರ್ಥಿಸಿದನು. ಆತನಾದರೋ— ಪರಶಿವನು ಗುರು ಲಿಂಗ ಜಂಗಮವೆಂಬ ತ್ರಿವಿಧಭೇದಗೊಂಡಿರುವನು. ಮತ್ತು ತನ್ನ ವಿನೋದದಿಂದ ಶಿವಸಾದಾಖ್ಯ, ಅಮೂರ್ತಸಾದಾಖ್ಯ, ಮೂರ್ತಸಾದಾಖ್ಯ, ಕರ್ತೃಸಾದಾಖ್ಯ, ಕರ್ಮಸಾದಾಖ್ಯವೆಂಬ ಪಂಚಸಾದಾಖ್ಯಗಳನ್ನೂ, ಶಾಂತ್ಯತೀತ, ಶಾಂತಿ, ವಿದ್ಯೆ, ಪ್ರತಿಷ್ಠೆ, ನಿವೃತ್ತಿ, ಎಂಬ ಪಂಚಕಲೆಗಳನ್ನೂ, ಪರಾ, ಆದಿ, ಇಚ್ಛಾ, ಜ್ಞಾನ, ಕ್ರಿಯಾ, ಎಂಬ ಪಂಚಶಕ್ತಿಗಳನ್ನೂ ಹೊಂದಿ, ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತವೆಂಬ ಪಂಚಬ್ರಹ್ಮಮೂರ್ತಿಯಾಗಿರುವನು. ಈ ೫ ಕಲಶಗಳಲ್ಲೂ ಆ ಪಂಚಬ್ರಹ್ಮಮೂರ್ತಿಗಳು ಪ್ರತಿಷ್ಠಿಸಲ್ಪಟ್ಟಿರುವರು. ಮಧ್ಯದ ಹೊನ್ನಿನ ಕಲಶಕ್ಕೆ ಗುರುವೇ ಅಧೀಶನು. ಆ ಗುರುವು ಸದಾಶಿವ, ಈಶ್ವರ, ಮಹೇಶ ರುದ್ರರೆಂಬ ನಾಲ್ವರಿಗೆ ಶಿವದೀಕ್ಷೆಯನ್ನು ಮಾಡಿದನು. ಅವರುಗಳು ಆಚಾರ್ಯರಾಗಿ, ಸಕಲ ಗಣಕುಲಕ್ಕೂ, ಹರಿಸುರೇಂದ್ರಾದಿದೇವತೆಗಳಿಗೂ, ಶಿವದೀಕ್ಷೆಯನ್ನು ಮಾಡಿದರು. ಬಳಿಕ ಭೂಲೋಕದ ಜನರನ್ನು ಶಿವದೀಕ್ಷೆಯಿಂದ ಧನ್ಯರನ್ನು ಮಾಡುವುದಕ್ಕಾಗಿ ಮೇಲ್ಕಂಡ ನಾಲ್ವರ ವಂಶದಿಂದಲೇ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರ್ಯ, ಎಂಬ ಹೆಸರಿನವರು ಅವತರಿಸಿದರು. ರೇವಣಸಿದ್ಧಾಚಾರ್ಯನಿಗೆ—ಆದಿಶಕ್ತಿ, ತತ್ಪುರುಷಮುಖ, ಎಂಬುಜಡೆ, ಯೋಗದಂಡ, ಕರಿಯ ಕೆಂಬಳಿಯಂಗಿ, ಬ್ರಹ್ಮಚರ್ಯಾಶ್ರಮ, ಲೋಹದ ಕರಪಾತ್ರೆ, ಕರ್ಣಕುಂಡಲ, ಹಸ್ತದಲ್ಲಿ ಶಾಂತಮಲ್ಲಿಕಾರ್ಜುನಲಿಂಗಾರಾಧನೆ, ಪ್ರಣವಮಂತ್ರ, ಋಗ್ವೇದಾಧ್ಯಯನ, ಸಿಂಹವಾಹನ, ನಕ್ಷತ್ರಪರ್ವತದ ತಪ್ಪಲಿನಲ್ಲಿ ಕಲ್ಪವೃಕ್ಷದಬುಡದೊಳಗೆ ಹುಲಿಯ ಚರ್ಮದ ಗದ್ದುಗೆಯಮೇಲೆ ಪದ್ಮಾಸನಾಸೀನನಾಗಿ, ಭಸ್ಮರುದ್ರಾಕ್ಷಗಳನ್ನುಧರಿಸಿ, ತನ್ನ ಶಿಷ್ಯವರ್ಗಕ್ಕೆ

ದೀಕ್ಷೆಯನ್ನು ಮಾಡುವಾಗ ಪಾರಿಜಾತದ ಚಿಗುರನ್ನು ಪಯೋಗಿಸುವನು. ಆತನ ಕಲಶವು ಲೋಹಮಯವಾಗಿ ಪೂರ್ವದಿಕ್ಕಿನಲ್ಲಿರುವುದು. ಮರುಳಸಿದ್ಧಾಚಾರ್ಯನಿಗೆ– ಇಚ್ಛಾಶಕ್ತಿ, ಅಘೋರಮುಖ, ಬಹುಜಟೆ, ಸೆರಗಿನ ಕಂಬಳಿಯ ಕವನಿ, ಲೋಹದ ಪಾತ್ರೆ, ಕುಂಡಲ, ಕೊಡಲಿಯ ದಂಡ, ಯತ್ಯಾಶ್ರಮ, ಬಾಯಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನಾರಾಧನೆ, ಷಡಕ್ಷರಮಂತ್ರಜಪ, ಯಜುರ್ವೇದಾಧ್ಯಯನ, ಹುಲಿಯವಾಹನ, ಕುಮಾರಪರ್ವತದ ತಪ್ಪಲಿನಲ್ಲಿ ಮಂದಾರವೃಕ್ಷದ ಬುಡದೊಳಗೆ ಮೃಗಚರ್ಮದಮೇಲೆ ಗೋಮುಖಾಸನಾಸೀನನಾಗಿ, ಭಸ್ಮರುದ್ರಾಕ್ಷಗಳನ್ನು ಧರಿಸಿ, ಶಿಷ್ಯರಿಗೆ ದೀಕ್ಷೆಯಂ ಮಾಡುವಾಗ ಗರಿಕೆಯಿಂದ ಸೇಚಿಸುವನು. ಆತನ ಕಲಶವು ಲೋಹಮಯವಾಗಿ ದಕ್ಷಿಣದಿಕ್ಕಿನಲ್ಲಿರುವುದು. ಏಕೋರಾಮಾಚಾರ್ಯನಿಗೆ– ಜ್ಞಾನಶಕ್ತಿ, ವಾಮದೇವಮುಖ, ಐದುಜಡೆ, ಕಾವಿಯವಸ್ತ್ರ, ತಾಮ್ರದಪಾತ್ರೆ, ಚಿತ್ರದಂಡ, ಕುಂಡಲ, ಜಡೆಯಲ್ಲಿ ಭೋಗಮಲ್ಲಿಕಾರ್ಜುನನನ್ನಿಟ್ಟು ಆರಾಧಿಸುವಿಕೆ, ಪ್ರಸಾದಪಂಚಾಕ್ಷರೀಮಂತ್ರಜಪ, ಸಾಮವೇದಾಧ್ಯಯನ, ಹಂಸವಾಹನ, ಗೃಹಸ್ಥಾಶ್ರಮ, ಮೇರುಪರ್ವತದ ತಪ್ಪಲಿನಲ್ಲಿ ಆಲದಮರದ ಕೆಳಗೆ ಕಾಷಾಯವಸ್ತ್ರದ ಗದ್ದುಗೆಯಮೇಲೆ ಭದ್ರಾಸನಾಸೀನನಾಗಿ, ಭಸಿತರುದ್ರಾಕ್ಷಧಾರಿಯಾಗಿ, ಶಿಷ್ಯರಿಗೆ ದೀಕ್ಷೆಯನ್ನೆಸಗುವಾಗ ಹೊಂಬಾಳೆಯಿಂದ ಪರಿಷೇಚಿಸುವನು. ಆತನ ಕಲಶವು ಉತ್ತರದಿಕ್ಕಿನಲ್ಲಿರುವುದು. ಪಂಡಿತಾಚಾರ್ಯನಿಗೆ– ಕ್ರಿಯಾಶಕ್ತಿ ಸದ್ಯೋಜಾತಮುಖ, ಒಂದುಜಡೆ, ಬಿಳಿಯ ಬಟ್ಟೆ, ಬೆಳ್ಳಿಯ ಕರಪಾತ್ರೆ, ಮುತ್ತಿನ ಕುಂಡಲ, ಕೈಯಲ್ಲಾಗಲಿ ಕಂಕುಳಲ್ಲಾಗಲಿ ಚೆನ್ನಮಲ್ಲಿಕಾರ್ಜುನಲಿಂಗವನ್ನು ಧರಿಸಿ ಆರಾಧಿಸುವುದು. ಹಂಸಪಂಚಾಕ್ಷರೀಮಂತ್ರಜಪ, ಅಥರ್ವಣವೇದಾಧ್ಯಯನ, ಗಜವಾಹನ, ಗೃಹಸ್ಥಾಶ್ರಮ, ತ್ರಿಕೂಟಪರ್ವತದ ತಪ್ಪಲಿನಲ್ಲಿ ಮಾವಿನ ಮರದ ಕೆಳಗೆ ರನ್ನಗಂಬಳಿಯ ಗದ್ದುಗೆಯಮೇಲೆ ಸುಖಾಸನಾಸೀನನಾಗಿ, ಭಸ್ಮರುದ್ರಾಕ್ಷಗಳನ್ನು ಧರಿಸಿ, ತನ್ನ ಶಿಷ್ಯರಿಗೆ ದೀಕ್ಷೆಯನ್ನು ಮಾಡುವಾಗ ವೀಳೆಯದೆಲೆಯಿಂದ ಪ್ರೋಕ್ಷಿಸುವನು. ಆತನ ರಜತಕಲಶವು ಪಶ್ಚಿಮದಿಕ್ಕಿನಲ್ಲಿರುವುದು. ಈ ನಾಲ್ವರು ಆಚಾರ್ಯರು ಪ್ರತಿಯುಗದಲ್ಲೂ ಭೂಮಿಯ ಜನಕ್ಕೆ ಶಿವದೀಕ್ಷೆಯಿತ್ತು ಧನ್ಯರು ಮಾಡುವುದಕ್ಕಾಗಿ ಅವತರಿ

ಸುವರು. ಈ ಆಚಾರ್ಯರ ವಂಶಿಕರಲ್ಲಿ ಹಿರಿಯರನ್ನೇ ದೀಕ್ಷಾಸಮಯದಲ್ಲಿ ಆಯಾಯ ಆಚಾರ್ಯರ ಕಲಶಗಳನ್ನಾರಾಧಿಸುವುದಕ್ಕೆ ಕುಳ್ಳಿರಿಸುವರು. ಮಧ್ಯದಲ್ಲಿ ಗುರುಕಲಶವನ್ನಿಟ್ಟು ಗುರುವಿನಂತೆ ಅದನ್ನು ಭಾವಿಸಿ ಪೂಜಿಸುವನು. ದೀಕ್ಷೆಯನ್ನು ಮಾಡುವವರೂ ಮಾಡಿಸಿಕೊಳ್ಳುವವರೂ ಅಂಗದಲ್ಲಿ ಊನವಿಲ್ಲದವರಾಗಬೇಕು. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ಚತುರ್ವರ್ಣದವರೂ ಈ ದೀಕ್ಷೆಯನ್ನು ಪಡೆಯಬಹುದು. ಆದರೆ ಅವರಿಗೆ ದೀಕ್ಷೆಮಾಡುವಾಗ ಬ್ರಾಹ್ಮಣನನ್ನು ೩ ವರ್ಷ, ಕ್ಷತ್ರಿಯನನ್ನು ೬ ವರ್ಷ, ವೈಶ್ಯನನ್ನು ೯ ವರ್ಷ, ಶೂದ್ರನನ್ನು ೧೨ ವರ್ಷಗಳವರೆಗೆ, ಉತ್ತಮರನ್ನು ನೀಚಕಾರ್ಯದಲ್ಲೂ, ನೀಚರನ್ನು ಉತ್ತಮಕಾರ್ಯದಲ್ಲೂ ಸೇರಿಸಿ, ಹೊಡೆದು ಬಡಿದು ನಾನಾಪ್ರಕಾರವಾಗಿ ಶಿಕ್ಷಿಸಿ, ಅವನ ಮನಃಪರಿಪಾಕಾದಿಗಳನ್ನು ಪರೀಕ್ಷಿಸಿ, ಬಳಿಕ ಅವರಿಗೆ ತ್ರಿವಿಧ ದೀಕ್ಷೆಗಳನ್ನು ಮಾಡಬೇಕು; ಎಂದು ಹೇಳಲು, ದೀಕ್ಷಾತ್ರಯವೆಂದರೇನು ? ಲಿಂಗತ್ರಯವೆಂದರೇನು ? ಅವನ್ನು ವಿವರಿಸಬೇಕೆಂದು ಸಿದ್ಧರಾಮೇಶನು ಬೇಡಿದನು. ಆಗ ಚೆನ್ನಬಸವೇಶನು— ಪ್ರಳಯಕಾಲಾಗ್ನಿಯ ತೇಜಸ್ಸನ್ನು ಕೂಡ ಧಿಃಕರಿಸುತ್ತ ಕೋಟಿಮಿಂಚಿಗೆ ಸಮನಾದ ಕಾಂತಿಯಿಂದ ಶಿಖಾಚಕ್ರದಲ್ಲಿ ಸೂಕ್ಷ್ಮವಾಗಿ ಹೊಳೆಯುತ್ತಿರುವ ಚಿತ್ಕಲೆಯನ್ನು ಗುರುವರನು ತನ್ನ ಭಾವಮನೋದೃಷ್ಟಿಗಳಿಂದ ಹಸ್ತಕ್ಕೆ ತಂದು, ಆ ಪರಮಹಸ್ತವನ್ನು ಶಿಷ್ಯನ ಮಂಡೆಯಮೇಲಿಟ್ಟು, ವೇಧಾದೀಕ್ಷೆಯಿಂದ ಭಾವಲಿಂಗವನ್ನು ಕಾರಣತನುವಿನಲ್ಲಿ ಹೀಗೆ ನೆಲೆಗೊಳಿಸುವನು. ಕಿವಿಯಲ್ಲಿ ಮಂತ್ರವನ್ನುಪದೇಶಿಸಿ, ಪ್ರಾಣಲಿಂಗವನ್ನು ಸೂಕ್ಷ್ಮದೇಹದಲ್ಲಿ ಸ್ಥಾಪಿಸಿ, ಹೀಗೆ ಮನುದೀಕ್ಷೆಯನ್ನು ಮಾಡುವನು. ಸ್ಥೂಲದೇಹದಲ್ಲಿ ಇಷ್ಟಲಿಂಗವನ್ನು ಧರಿಸಿ, ಕ್ರಿಯಾದೀಕ್ಷೆಯನ್ನು ಮಾಡುವನು. ದೀ—ಕ್ಷೆ ಎಂಬಕ್ಷರಗಳು, ಗುರುವರನ ಅನುಗ್ರಹದಿಂದ ಶಿವಜ್ಞಾನಸಂಬಂಧವು (ದೀಯತೆ) ಕೊಡಲ್ಪಡುವುದು, ಮಲತ್ರಯವು (ಕ್ಷೀಯತೆ) ನಾಶಗೊಳ್ಳುವುದು. ಎಂಬರ್ಥವನ್ನು ಸೂಚಿಸುತ್ತಿರುವುವು. ಅದುಕಾರಣವೇ ಈ ಸಂಸ್ಕಾರಕ್ಕೆ ದೀಕ್ಷೆ ಯೆಂದು ಹೆಸರು. ಗುರುವು ಸಚ್ಚಿದಾನಂದಸ್ವರೂಪನು, ಅವನಿಗೆ ಪರವಾದ ವಸ್ತುವೇ

ಇಲ್ಲ. ಆದುದರಿಂದಲೇ "ನಗುರೋರಧಿಕಂ" ಎಂದು ಪ್ರಮಾಣವಚನ ವಿರುವುದು. ಇನ್ನು ಲಿಂಗತ್ರಯಭೇದವನ್ನು ಕೇಳು— ಹಿಂದೆ ನಾನು ನಿನಗೆ ಬೋಧಿಸಿದ ಮಹಾಲಿಂಗವೇ ನಿಷ್ಕಲವಾಗಿ ಭಾವಕ್ಕೆ ಗೋಚರಿಸಿ, ಭಾವಲಿಂಗವಾಯಿತು. ಅದೇ ಸಕಲ ನಿಷ್ಕಲವಾಗಿ ಮನಸ್ಸಿಗೆ ಗೋಚರಿಸಿ ಪ್ರಾಣಲಿಂಗವಾಯಿತು. ಅದೇ ಸಕಲವಾಗಿ ಕಣ್ಣಿಗೆ ಗೋಚರಿಸಿ, ಇಷ್ಟಲಿಂಗವೆನಿಸಿತು. ಅತ್ಯತಿಷ್ಠದ್ದಶಾಂಗುಲ, ನಿರುಪಮ, ನಿತ್ಯ, ನಿರಾಮಯ, ನಿರ್ಗುಣ, ನಿರಂಜನ, ನಿರ್ದ್ವಂದ್ವ, ಅವ್ಯಕ್ತ, ಅನ್ವಯ, ಪರಾತ್ಪರ, ಅದ್ವಿತೀಯಬ್ರಹ್ಮ, ವೆಂಬ ಪದಕ್ಕೆ ವಾಚ್ಯವಾದ ಪರವಸ್ತುವೇ ಈ ಲಿಂಗವು. ಇಂತಹ ಲಿಂಗವನ್ನು ಶಿರಸ್ಸಿನಲ್ಲಾಗಲಿ, ಬಾಯಲ್ಲಾಗಲಿ, ಕೊರಲಿನಲ್ಲಾಗಲಿ, ಕಂಕುಳಿನಲ್ಲಾಗಲಿ, ಎದೆಯಮೇಲಾಗಲಿ ಧರಿಸಬಹುದು. ಆದರೆ ಹೊಕ್ಕುಳಿನಿಂದ ಕೆಳಗಣ ಅಧಶ್ಶರೀರದಲ್ಲಿ ಮಾತ್ರ ಧರಿಸಕೂಡದು. ಅದು ಪಾತಕವು. ಬಳಿಕ ಘಟವಿರುವವರೆಗೂ ಭೋಜನ, ಶಯನ, ಮಲಮೂತ್ರವಿಸರ್ಜನ, ಸ್ತ್ರೀಸಂಗ, ರಾಜಭಯ, ಮೊದಲಾದ ಯಾವ ಸಂದರ್ಭದಲ್ಲೂ ದೇಹದಿಂದ ಈ ಲಿಂಗವನ್ನು ಅಗಲಿಸಕೂಡದು. ಈ ಲಿಂಗಕ್ಕೆ ಜಂಗಮವೇ ಮುಖವು. ಜಂಗಮನ ಮುಖದಿಂದ ಈ ಲಿಂಗಕ್ಕೆ ತೃಪ್ತಿಯುಂಟಾಗುವುದು. ಆ ಜಂಗಮರ ಲಕ್ಷಣವನ್ನು ಕೇಳು— ಆದಿಮಧ್ಯಾಂತಶೂನ್ಯನಾಗಿ, ನಿತ್ಯನೂ, ಪರಿಪೂರ್ಣನೂ, ನಿರಾಮಯನೂ, ಸಗುಣನಿರ್ಗುಣನೂ, ಹರಿಬ್ರಹ್ಮಶಿವಾದಿಪೂಜ್ಯನೂ ಆಗಿರುವವನೇ ಜಂಗಮನು. ಎಂದು ಚೆನ್ನಬಸವೇಶನು ಹೇಳಿದನೆಂಬಲ್ಲಿಗೆ ಆರನೇ ಅಧ್ಯಾಯವು ಸಂಪೂರ್ಣವು.

---

## ೭ ನೇ ಅಧ್ಯಾಯವು.

### ಭಸ್ಮರುದ್ರಾಕ್ಷಾದಿಮಾಹಾತ್ಮ್ಯವು.

ಗುರುವರ್ಯನೇ, ಇನ್ನು ಲಿಂಗಾರ್ಚನಕ್ರಮವನ್ನೂ ಭಸ್ಮರುದ್ರಾಕ್ಷಪಾದೋದಕಪ್ರಸಾದಗಳ ಮಾಹಾತ್ಮ್ಯವನ್ನೂ ನಿರೂಪಿಸಬೇಕೆಂದು ಸಿದ್ಧರಾಮೇಶನು ಪ್ರಾರ್ಥಿಸಲು, ಚೆನ್ನಬಸವೇಶನು ಹೇಳಲಾರಂ

ಭಿಸಿದನು.–ಶಿವಪೂಜೆಗೆ, ನಕ್ಷತ್ರಗಳೆಲ್ಲ ಆಕಾಶದಲ್ಲಿ ಸಂಪೂರ್ಣವಾಗಿರುವ ಕಾಲವು ಉತ್ತಮವಾದದ್ದು. ಅವುಗಳು ಕಾಂತಿವಿಹೀನವಾಗುತ್ತಿರುವ ಕಾಲವು ಮಧ್ಯಮವು. ಸೂರ್ಯೋದಯಕಾಲದ ಪೂಜೆಯು ಅಧಮವು. ಉತ್ತಮಕಾಲದಲ್ಲಿ ಶಿವಸ್ಮರಣೆ ಮಾಡುತ್ತ ನಿದ್ರೆಯಿಂದೆದ್ದು, ಮಲಮೂತ್ರಗಳನ್ನು ವಿಸರ್ಜಿಸಿ, ಮೃತ್ತಿಕಾಶೌಚವನ್ನು ಮಾಡಿ, ಹಸ್ತಪಾದಗಳನ್ನು ತೊಳೆದು, ಬಳಿಕ, ಹಾಲಿರುವ, ಮೊಗ್ಗಾಗುವ, ಮುಳ್ಳಿರುವ, ಮೂರು ಜಾತಿಯ ಮರದ ಕಡ್ಡಿಗಳಿಂದ (ಅವುಗಳಿಗೆಲ್ಲ ಕಗ್ಗಲಿಯ ಕಡ್ಡಿಯು ಉತ್ತಮವು) ಹಲ್ಲನ್ನುಜ್ಜಿ, ಲಿಂಗೋದಕದಿಂದ ಬಾಯ್ಮುಕ್ಕಳಿಸಿ, ಮುಖವನ್ನು ತೊಳೆದು, ಸ್ನಾನ ಮಾಡಿ, ಮಡಿಯುಟ್ಟು, ಮನೆಯ ಈಶಾನಭಾಗದಲ್ಲಿರುವ ಶಿವಪೂಜಾಗಾರವನ್ನು ಹೊಕ್ಕು, ಸಾರಿಸಿ, ರಂಗವಲ್ಲಿಯನ್ನಿಕ್ಕಿ, ಪದ್ಮಾಸನದಲ್ಲಿ ಕುಳಿತು, ನಿರ್ಮಲಚಿತ್ತದಿಂದ ಶಿವಪೂಜಾಸಾಮಗ್ರಿಗಳನ್ನೆಲ್ಲ ಇರಿಸಿಕೊಳ್ಳಬೇಕು. ಬಳಿಕ ಭಸ್ಮದ ಸ್ನಾನ, ಉದ್ಧೂಳನ, ತ್ರಿಪುಂಡ್ರಧಾರಣಗಳನ್ನು ಮಾಡಿ, ರುದ್ರಾಕ್ಷಮಾಲಿಕೆಯನ್ನು ಧರಿಸಿ, ಶಿವಮಂತ್ರವನ್ನು ಪಠಿಸುತ್ತ, ಪೂಜಾಸಾಮಗ್ರಿಗಳನ್ನರ್ಚಿಸಿ, ಶಿವಾರ್ಚನೆಯನ್ನು ಮಾಡಬೇಕು. ಭಸ್ಮಾದಿಗಳ ವಿವರವು ಹೇಗೆಂದರೆ—ಪರಶಿವನ ಸದ್ಯೋಜಾತಮುಖದಿಂದ ಪೃಥ್ವಿಯುತ್ಪನ್ನವಾಯಿತು, ಅದಕ್ಕೆ ನಿವೃತ್ತಿಯೆಂಬ ಕಲೆ, ಅದಕ್ಕೆ ನಂದೆ ಯೆಂಬ ಕಪಿಲವರ್ಣದಹಸುವಿನ ಸಂಬಂಧವು; ಅಂಥ ಹಸುವಿನ ಸಗಣವನ್ನು ಸುಟ್ಟು ಮಾಡಿದುದೇ ವಿಭೂತಿಯು. ವಾಮದೇವಮುಖದಿಂದ ಜಲಭೂತವು, ಅದಕ್ಕೆ ಪ್ರತಿಷ್ಠಾಕಲೆ, ಭದ್ರೆ ಯೆಂಬ ಕಾಳಹಸುವು, ಅದರ ಸಗಣದಿಂದಾದದ್ದು ಭಸಿತವು. ಅಘೋರಮುಖದಿಂದ ಅಗ್ನಿಭೂತವು, ಅದಕ್ಕೆ ವಿದ್ಯಾಕಲೆ, ಸುರಭಿ ಯೆಂಬ ಕೆಂಬಣ್ಣದ ಹಸು, ಅದರ ಸಗಣದಿಂದಾದುದು ಭಸ್ಮವು. ತತ್ಪುರುಷಮುಖದಿಂದ ವಾಯುಭೂತವು. ಅದಕ್ಕೆ ಶಾಂತಿಕಲೆ, ಸುಶೀಲೆಯೆಂಬ ಬಿಳಿಯಹಸುವು, ಅದರ ಸಗಣದಿಂದಾದುದೇ ಕ್ಷಾರವು. ಈಶಾನಮುಖದಿಂದ ಆಕಾಶಭೂತವು, ಅದಕ್ಕೆ ಶಾಂತ್ಯತೀತೆ ಯೆಂಬ ಕಲೆ, ಸುಮನಸೆ ಯೆಂಬ ಚಿತ್ರವರ್ಣದ ಹಸು, ಅದರ ಸಗಣದಿಂದಾದುದೇ ರಕ್ಷೆಯು. ಇವುಗಳಲ್ಲಿ ಭೂತಿ ಮತ್ತು ಭಸಿತಗಳು ಜ್ಞಾನವರ್ಧಕಗಳು. ಭಸ್ಮವು ಪಾಪಹರವು,

ಕ್ಷಾರವು ವಿಪತ್ಪರಿಹಾರಕವು. ರಕ್ಷೆಯು ಭಯನಿವಾರಕವು. ಹೀನವ ದಾರ್ಥಗಳನ್ನು ತಿನ್ನುವ, ಕರುವಿಲ್ಲದ, ರೋಗವೆರೆದ, ಬಲಹೀನವಾದ, ಅಂಗವಿಕಾರವುಳ್ಳ, ಅಮಿತವಾಗಿ ತಿನ್ನುವ, ಬರೆ ಹಾಕಿರುವ ಅಂಗಹೀನ ವಾದ, ಗೊಡ್ಡಿಯಾದ, ಕುಂಟಾದ, ಹಾಲ ಕರೆಯದ, ಎಳೆಗಂತಿಯಾದ ಹಸುಗಳನ್ನು ಬಿಟ್ಟು, ಸಲಕ್ಷಣವಾದ ಮೇಲೆ ಹೇಳಿದ ಬಣ್ಣದ ಗೋವು ಗಳಿಂದ ಸಗಣವನ್ನು ಭೂಮಿಗೆ ಬೀಳಗೊಳಿಸದಂತೆ ಆತುಕೊಂಡು, ಗ್ರ ಹಿಸುವುದು, ಉಂಡೆ ಮಾಡುವುದು, ಒಣಗಿಸುವುದು, ಸುಡುವುದು, ಶೋ ಧಿಸುವುದು, ಈ ಪಂಚಕಾರ್ಯಗಳನ್ನು ವಿಧ್ಯುಕ್ತ್ಯನುಸಾರವಾಗಿ ಮಂ ತ್ರೋಚ್ಚಾರದೊಡನೆ ನಡಿಸಿ, ಧೂಳಯುನ್ನಾಗಿಯೂ ಗಟ್ಟಯುನ್ನಾಗಿಯೂ ಮಾಡಿ ಇಟ್ಟುಕೊಳ್ಳಬೇಕು. ಇಂತಹ ಭಸಿತಾದಿಗಳಿಲ್ಲದಿದ್ದರೆ, ಅನ್ಯರು ಕೊಟ್ಟುದನ್ನು ಭಕ್ತಿಯಿಂದ ಸ್ವೀಕರಿಸಬೇಕು. ಶಿರಸ್ಸು, ಮುಖ, ಹೃದ ಯ, ಗುಹ್ಯ, ಪಾದಾದಿಸರ್ವಾಂಗ, ಈ ಸ್ಥಲಗಳಲ್ಲಿ ಕ್ರಮವಾಗಿ ಈಶಾನಾದಿ ಮಂತ್ರಗಳಿಂದ ಭಸ್ಮಸ್ನಾನ ಮಾಡಬೇಕು. ಭಸ್ಮಸ್ನಾತನಿಗೆ ಭವಬಂಧವಿ ರುವುದಿಲ್ಲ. ಬಿಸಿಲಿನಿಂದ ಕೂಡಿದ ಮಳೆಯ ಸ್ನಾನಕ್ಕೆ ದಿವ್ಯಸ್ನಾನವೆಂ ದು ಹೆಸರು. ಗೋವಿನ ಗೊರಸಿನಿಂದೆದ್ದು ಗಾಳಿಯಿಂದ ಕೊಚ್ಚಿ ಬಂದ ಭೂಧೂಳಿಯ ಸ್ನಾನವೇ ವಾಯುವ್ಯಸ್ನಾನವು. ನೀರಿನಿಂದ ಮಾಡುವ ಮಜ್ಜನವು ವಾರುಣಸ್ನಾನವು. ಆ ವಾರುಣಸ್ನಾನವೆಲ್ಲ ಗಂಗಾಸ್ನಾನ ವಧಿಕವು. ಶಿವಧ್ಯಾನವೇ ಮನಸ್ಸ್ನಾನವು. ಭಸ್ಮದಿಂದ ಮಾಡುವ ಸ್ನಾನ ವೇ ಆಗ್ನೇಯಸ್ನಾನವು. ಮೇಲ್ಕಂಡ ಸ್ನಾನಗಳೊಳಗೆಲ್ಲ ಭಸ್ಮಸ್ನಾನ ವೇ ಶ್ರೇಷ್ಠವಾದದ್ದು. ಭಸ್ಮಸ್ನಾನಾನಂತರ ಉದ್ಧೂಳನ ಮಾಡಿ, ಬ ಳಿಕ, ಶಿರಸ್ಸು, ಹಣೆ, ಕಿವಿಗಳು, ಕೊರಲು, ಪಾದಗಳು, ಭುಜಗಳು, ಎದೆ, ಹೊಕ್ಕಳು, ಬೆನ್ನು, ಮಣಿಬಂಧಗಳು, ಹೆಕ್ಕತ್ತು, ಈ ಏಕಾದಶ ಸ್ಥಲಗಳಲ್ಲಿ ಕ್ರಮವಾಗಿ– ಪರಮಾತ್ಮ, ಶಿವ, ಮಹೇಶ್ವರ, ರುದ್ರ, ಶ್ರೀ ಕಂಠ, ಶಂಭು, ಈಶ್ವರ, ಮಹಾದೇವ, ಪಶುಪತಿ, ಶಂಕರ, ವೃಷಧ್ವಜ, ಎಂಬ ಏಕಾದಶರುದ್ರರುಗಳನ್ನು ಸ್ಮರಿಸಿ ತ್ರಿಪುಂಡ್ರಧಾರಣವನ್ನು ಮಾಡ ಬೇಕು. ತಲೆ, ಹಣೆ, ಕಿವಿಗಳು ೨, ಕಣ್ಣುಗಳು ೨, ಮೂಗಿನ ಹೊಳ್ಳೆ ಗಳು ೨, ಬಾಯಿ, ತೋಳುಗಳು ೨, ಭುಜಗಳು ೨, ಸ್ತನಗಳು ೨,

ಹೊಟ್ಟೆ, ಮುಂಗೈಗಳು ೨, ಪಕ್ಕಗಳು ೨, ಹೊಕ್ಕಳು, ಶಿಶ್ನ, ಬೆನ್ನು, ಮೂಡಿಗಳು ೨, ಮೊಣಕಾಲುಗಳು ೨, ತೊಡೆಗಳು ೨, ಗುದ, ಕಾಲುಗಳು ೨, ಇವೇ ೩೨ ಸ್ಥಾನಗಳು. ಸಮರ್ಥರಾದವರು ಈ ಸ್ಥಾನಗಳಲ್ಲೂ ಧರಿಸಬಹುದು. ಶಕ್ತಿಯಿಲ್ಲದಿದ್ದರೆ ಮಂಡೆ, ಹಣೆ, ಕಿವಿಗಳು, ಕತ್ತು, ತೋಳುಗಳು, ಭುಜಗಳು, ಮುಂಗೈಗಳು, ತುಟಿಗಳೆರಡು, ಎದೆ, ಬೆನ್ನು, ಹೊಕ್ಕಳು, ಈ ಹದಿನಾರು ಸ್ಥಲಗಳಲ್ಲಿ ಧರಿಸಬಹುದು. ಇಷ್ಟಕ್ಕೂ ಶಕ್ತಿಯಿಲ್ಲದಿದ್ದರೆ ತಲೆ, ಹಣೆ, ಕತ್ತು, ಭುಜಗಳು, ಎದೆ ಹೊಕ್ಕಳು, ಬೆನ್ನು ಈ ಎಂಟು ಸ್ಥಾನದಲ್ಲಾದರೂ ಪ್ರತಿದಿನವೂ ತಪ್ಪದೆ ಧರಿಸಬೇಕು. ಭೂತ, ಪ್ರೇತ, ಪಿಶಾಚ, ಬ್ರಹ್ಮರಾಕ್ಷಸ, ಅಪಸ್ಮಾರ, ದುಷ್ಟಮೃಗ, ಸರ್ಪ, ವೃಶ್ಚಿಕ, ಚೋರ, ರಾಜ, ಮೊದಲಾದವರ ಭಯವನ್ನೆಲ್ಲ ಈ ಭಸ್ಮವು ಸೋಂಕಿನ ಮಾತ್ರದಿಂದಲೇ ಪರಿಹರಿಸುವುದು. ಏಕೆಂದರೆ— ಇದು ಪರಶಿವಸ್ವರೂಪವಾದದ್ದು. ಇನ್ನು ರುದ್ರಾಕ್ಷಿಯ ವಿಷಯವನ್ನು ಕೇಳು.— ಪೂರ್ವದಲ್ಲಿ ಶಂಕರನು ತ್ರಿಪುರದಹನವನ್ನು ಮಾಡುವಾಗ ಅದರ ಕೀಲನ್ನು ನಿರೀಕ್ಷಿಸುತ್ತಿರಲು, ಆ ಮಹಾದೇವನ ಕಣ್ಣಿನಿಂದ ನೀರಿನ ಹನಿಗಳುದುರಿ, ಅವೇ ರುದ್ರಾಕ್ಷಗಳಾದುವು. ಈ ಮಣಿಗಳನ್ನು ಶಿವಸ್ವರೂಪವೆಂದು ತಿಳಿದು ಜಡೆಯ ತುದಿಯಲ್ಲಿ ೧, ನೆತ್ತಿಯಲ್ಲಿ ೩, ತಲೆಗೆ ೩೬, ಕಿವಿಗೆ ಆರಾರು, ಕೊರಳಿಗೆ ೩೨, ರೋಮಗಳಿಗೆ ೫೦, ಉಪವೀತಕ್ಕೆ ೧೦೮, ಭುಜಗಳಿಗೆ ೧೬, ಮುಂಗೈಗೆ ೧೨, ಜಪಮಾಲಿಕೆಗೆ ೧೦೮, ಹೀಗೆ ಆಯಾಸ್ಥಳದಲ್ಲಿ ಸಂಖ್ಯಾನುಗುಣವಾಗಿ ಧರಿಸಬೇಕು. ರುದ್ರಾಕ್ಷಿಯನ್ನು ಶಿರಸ್ಸಿನಲ್ಲಿ ಧರಿಸಿದರೆ ಕೋಟಿಭಾಗದಷ್ಟು ಫಲವು, ಕಿವಿಯಲ್ಲಿ ಧರಿಸಿದರೆ ೧೦ ಕೋಟಿ ಫಲವು, ಕೊರಳಿನಲ್ಲಿ ಧರಿಸಿದರೆ ೧೦೦ ಕೋಟಿಯು ಫಲವು. ತೋಳುಗಳಲ್ಲಿ ಧರಿಸಿದರೆ ಸಾವಿರಕೋಟಿ ಫಲವು. ಹಸ್ತಕ್ಕೆ ಧರಿಸಿದರೆ ಗಣನಾತೀತವಾದ ಫಲವು ಲಭಿಸುವುದು. ೨೫ ಮಣಿಗಳ ಸರವನ್ನು ಧರಿಸಿದರೆ ಮೋಕ್ಷಸಿದ್ಧಿಯು. ೨೮ ರ ಸರದಿಂದ ದೇಹಪುಷ್ಟಿಯು, ೨೭ ರ ಸರದಿಂದ ಮೃಷ್ಟಾನ್ನಭುಕ್ತಿಯು, ೩೬ ರ ಸರದಿಂದ ದ್ರವ್ಯಲಾಭವು, ೩೨ ರ ಸರದಿಂದ ಕಾರ್ಯಜಯವು, ೧೫ ರ ಸರದಿಂದ ವ್ಯಾಪಕತೆ ಉಂಟಾಗುವುದು. ಇನ್ನು ಪ್ರಣವದುತ್ಪತ್ತಿಯನ್ನು

ಹೇಳುತ್ತೇನೆ. ಪರಶಿವನ ಚಿತ್ತೇ ಚಿತ್ಪ್ರಣವವಾಯಿತು. ಅದರಿಂದ ನಾದ ಬಿಂದು ಕಲೆಗಳು ಹುಟ್ಟಿದುವು. ಇವುಗಳೇ ಕ್ರಮವಾಗಿ ಅಕಾರ–ಉಕಾರ–ಮಕಾರಗಳಾದುವು. ಇವು ಮೂರೂ ಒಂದುಗೂಡಲು ಓಂಕಾರವೆಂಬ ಪ್ರಣವವಾಯಿತು. ಇದರಿಂದ ತಾರಕ ದಂಡಕ ಕುಂಡಲ ಅರ್ಧಚಂದ್ರ ಬಿಂದುವೆಂಬ ಪಂಚಲಕ್ಷಣಗಳುಂಟಾದುವು. ಅವುಗಳಲ್ಲಿ ತಾರಕಾಕೃತಿಯೇ ನಕಾರವು. ದಂಡಾಕೃತಿಯೇ ಮಕಾರವು, ಕುಂಡಲಾಕಾರವೇ ಶಿಕಾರವು, ಅರ್ಧಚಂದ್ರಾಕಾರವೇ ವಕಾರವು, ಬಿಂದುವೇ ಯಕಾರವು, ಈ ಪಂಚಾಕ್ಷರಗಳು ಕೂಡ ಹಿಂದೆ ಹೇಳಿದ ಚಿತ್ಪ್ರಣವವೆಂಬ ತಾರಕಬ್ರಹ್ಮದಿಂದ ಹುಟ್ಟಿದುವು. ಈ ಪಂಚಾಕ್ಷರಗಳಿಂದ ಪಂಚಸಂಜ್ಞೆಗಳು ಹುಟ್ಟಿದುವು. ಅವುಗಳಿಂದ ಪಂಚಸಾದಾಖ್ಯಗಳಾದುವು. ಅವುಗಳೇ ಪಂಚಮುಖಗಳಾದುವು. ಅವುಗಳಿಂದ ಪಂಚಕಲೆಯೂ, ಪಂಚಶಕ್ತಿಯೂ, ಪಂಚಭೂತಗಳೂ, ಆ ಭೂತಗಳಿಂದ ೨೫ ತತ್ತ್ವಗಳೂ ಹುಟ್ಟಿದುವು. ಹೀಗೆ ಸಕಲಕ್ಕೂ ಮೂಲವಾದ ದೇವ ಪ್ರಣವ ಸಹಿತವಾದ ಪಂಚಾಕ್ಷರೀಮಂತ್ರವು. ಇದು ಅನೇಕ ಕೋಟಿ ಮಂತ್ರಗಳಿಗೆಲ್ಲ ಮಾತೆಯಾಗಿರುವುದು. ಇದನ್ನು ಸದಾ ಜಪಿಸುವವನು ಪ್ರತ್ಯಕ್ಷ ಪರಶಿವನೇ ಆಗುವನು. ಈ ಮಂತ್ರದಿಂದಲೇ ಪೂಜಾದ್ರವ್ಯಶುದ್ಧಿಯನ್ನು ಮಾಡಬೇಕು. ಅಂತಹ ಉಪಕರಣಗಳಿಂದ ಶಿವಾರ್ಚನೆಯನ್ನು ಮಾಡಬೇಕು. ಹೇಗೆಂದರೆ– ಪಾದ್ಯ, ಅರ್ಘ್ಯ, ಆಚಮನಗಳಿಂದಲೂ, ಕ್ಷೀರ ದಧಿ ಮೊದಲಾದ ಪಂಚಾಮೃತಗಳಿಂದಲೂ, ಗಂಧೋದಕ, ಪುಷ್ಪೋದಕ, ಮಂತ್ರೋದಕ, ಸ್ವರ್ಣೋದಕಗಳಿಂದಲೂ ಶಿವಲಿಂಗವನ್ನಭಿಷೇಕಿಸಿ, ಬಳಿಕ ಪಾದೋದಕವನ್ನು ಪರಿಗ್ರಹಿಸಬೇಕು. ಪಾದೋದಕದ ವಿವರವೆಂತೆಂದರೆ– ಇದು ಮೂರು ವಿಧವಾಗಿರುವುದು ಗುರುವಿನ ಪಾದೋದಕವೇ ಕರುಣೋದಕವು. ಲಿಂಗಪಾದೋದಕವೇ ವಿನಯೋದಕವು. ಜಂಗಮ ಪಾದೋದಕವೇ ಸಮತೋದಕವು. ಈ ತ್ರಿವಿಧೋದಕದಿಂದ ಸಂಚಿತ ಆಗಾಮಿ ಪ್ರಾರಬ್ಧವೆಂಬ ಕರ್ಮತ್ರಯಗಳು ಅಳಿವುವು. ಇದಲ್ಲದೆ ಮತ್ತೆ ತ್ರಿವಿಧೋದಕಗಳಿರುವುವು. ಯಾವುವೆಂದರೆ– ಪಂಚಾಕ್ಷರೀಮಂತ್ರಸ್ಮರಣದಿಂದ ತನ್ನ ಮನೆಗೆ ಹೊರಗಿನಿಂದ ತೆಗೆದುಕೊಂಡುಬಂದುದೇ ಮಂ

ತೀರ್ಥೋದಕವು. ಅದನ್ನು ಇಷ್ಟಲಿಂಗಕ್ಕೆ ಅಭಿಷೇಕಿಸಿದರೆ ಪಾದೋದಕವೆನಿಸಿಕೊಳ್ಳುವುದು, ಆ ಲಿಂಗಕ್ಕೆ ಸಮರ್ಪಿಸಿದುದೇ ಪ್ರಸಾದೋದಕವೆನಿಸಿಕೊಳ್ಳುವುದು. ಇವುಗಳಲ್ಲಿ ಮಂತ್ರೋದಕದಿಂದ ಅಡಿಗೆಯನ್ನು ಮಾಡಬೇಕು. ಪಾದೋದಕದಿಂದ ಮುಖವನ್ನು ತೊಳೆಯಬೇಕು. ಪ್ರಸಾದೋದಕವನ್ನು ಕುಡಿಯಬೇಕು. ಇನ್ನು ಮುಂದಣ ಶಿವಪೂಜಾಕ್ರಮವನ್ನು ಹೇಳುತ್ತೇನೆ– ಷೋಡಶೋಪಚಾರಗಳಿಂದಲೂ ಅಷ್ಟವಿಧಪೂಜೆಯಿಂದಲೂ ಭಕ್ತಿಯಿಂದ ಶಿವಲಿಂಗವನ್ನಾರಾಧಿಸಿ, ಮೃಷ್ಟಾನ್ನವನ್ನು ನಿವೇದಿಸಿ, ಆ ಲಿಂಗಪ್ರಸಾದವನ್ನು ಚೆಲ್ಲದಂತೆ ತಾನು ಶ್ರದ್ಧೆಯಿಂದ ನಿಶ್ಶೇಷವಾಗಿ ಭುಂಜಿಸಿ, ಅದರ ದ್ರವವನ್ನು ಅಂಗಕ್ಕೆ ಲೇಪಿಸಿಕೊಳ್ಳಬೇಕು. ಈ ಪ್ರಸಾದವಿವರವೆಂತೆಂದರೆ– ಇದು ಶುದ್ಧ ಸಿದ್ಧ ಪ್ರಸಿದ್ಧವೆಂದು ಮೂರು ತೆರನಾಗಿರುವುದು. ಗುರುವುಂಡುಳಿಸಿದುದೇ ಶುದ್ಧಪ್ರಸಾದವು. ಶಿವಾರ್ಪಿತವೇ ಸಿದ್ಧಪ್ರಸಾದವು. ಜಂಗಮನುಂಡುಳಿಸಿದುದೇ ಪ್ರಸಿದ್ಧಪ್ರಸಾದವು. ಹಿಂದೆ ಹೇಳಿದ ಶಿವಪೂಜೆಯಲ್ಲಿ– ರಾಜಸ, ತಾಮಸ, ಸಾತ್ವಿಕವೆಂದು ಮೂರು ಭೇದಗಳುಂಟು. ವೇದಾಗಮೋಕ್ತಮಂತ್ರವಿಧಿಗಳನ್ನನುಸರಿಸದೆ ಮನಸ್ಸು ಬಂದಂತೆ ಪೂಜಿಸುವುದೇ ರಾಜಸಪೂಜೆಯು. ವೇದಾಗಮಗಳಲ್ಲಿ ಉಕ್ತವಾದುದನ್ನೂ ಅನುಕ್ತವಾದುದನ್ನೂ ಒಟ್ಟುಗೂಡಿಸಿ ಮಾಡುವುದು ತಾಮಸಪೂಜೆಯು. ವೇದಾಗಮೋಕ್ತಿಯನ್ನು ಬಿಡದೆ ಅನುಸರಿಸಿ ಭಕ್ತಿಯಿಂದ ಮಾಡುವುದೇ ಸಾತ್ವಿಕಪೂಜೆಯು, ಇನ್ನು ಆ ಸಾತ್ವಿಕಪೂಜೆಯಲ್ಲಿರುವ ಶುದ್ಧಮಿಶ್ರಸಂಕೀರ್ಣವೆಂಬ ಭೇದಗಳನ್ನು ಹೇಳುತ್ತೇನೆ. ಅಖಂಡಪರಿಪೂರ್ಣತೇಜೋರಾಶಿಯಾದ ಪರಶಿವನು ತನ್ನ ಲಿಂಗದಲ್ಲಿ ನೆಲಸಿರುವನೆಂಬ ದೃಢಭಾವದಿಂದ ಪೂಜಿಸುವುದೇ ಶುದ್ಧಪೂಜೆಯು. ಆ ಲಿಂಗವನ್ನು ೫ ಮುಖಗಳು, ೧೫ ಕಣ್ಣುಗಳು, ೧೦ ತೋಳುಗಳು, ಶುದ್ಧಸ್ಫಟಿಕದ ಬಣ್ಣ–ಇವುಗಳುಳ್ಳ ಸದಾಶಿವಸ್ವರೂಪವೆಂದು ಭಾವಿಸಿ, ಪೂಜಿಸುವುದೇ ಮಿಶ್ರಪೂಜೆಯು. ಆ ಲಿಂಗದಲ್ಲಿ ಹರಿಬ್ರಹ್ಮೇಂದ್ರಾದಿದೇವತೆಗಳ ಮಧ್ಯದಲ್ಲಿ ಪಾರ್ವತಿಯೊಡನೆ ಕೂಡಿದ ಪರಶಿವನು ಒಪ್ಪುತ್ತಿರುವನೆಂಬ ಭಾವದಿಂದ ಅರ್ಚಿಸುವುದೇ ಸಂಕೀರ್ಣಪೂಜೆಯು. ಇನ್ನು ಕರ್ಮ ಭಕ್ತಿಜ್ಞಾನಪೂಜೆಗಳ ವಿವರವನ್ನು ಕೇಳು–ವರ್ಣಾಶ್ರಮ

ಧರ್ಮಕರ್ಮಗಳಿಂದ ಕೂಡಿ, ಫಲಾಪೇಕ್ಷೆಯಿಂದ ಮಾಡುವುದೇ ಸೋಪಾಧಿಕವಾದ ಕರ್ಮಪೂಜೆಯು. ವರ್ಣಾಶ್ರಮಧರ್ಮಕರ್ಮಗಳನ್ನು ಬಿಟ್ಟು, ಭವಿಭಕ್ತರ ಭೇದವನ್ನು ಅರಿತು, ಫಲಾಪೇಕ್ಷೆಯಿಲ್ಲದೆ ಮಾಡುವುದೇ ನಿರುಪಾಧಿಕಭಕ್ತಿಪೂಜೆಯು. ವರ್ಣಾಶ್ರಮಧರ್ಮಕರ್ಮಗಳನ್ನೆಲ್ಲ ಅಪ್ರಯೋಜಕಗಳೆಂದು ತಿರಸ್ಕರಿಸಿ, ಫಲಪದವಿಗಳನ್ನೆಲ್ಲ ಮೀರಿ, ಪೂಜ್ಯಪೂಜಕವಸ್ತುಗಳೆರಡರಲ್ಲೂ ಏಕಭಾವವನ್ನು ಹೊಂದಿ, ಸ್ವಾನುಭಾವದಿಂದ ಅರ್ಚಿಸುವುದೇ ಜ್ಞಾನಪೂಜೆಯು. ಇದು ಸದ್ಯೋಮುಕ್ತಿಪ್ರದವಾದದ್ದು. ಇನ್ನು ಶಿವತತ್ತ್ವಭೇದವನ್ನು ಹೇಳುತ್ತೇನೆ. ಅನಾದಿಪರಶಿವನ ಚಿತ್ತದಲ್ಲಿ ಪ್ರವೃತ್ತಿಯು ಸ್ಫುರಿಸಲು, ಅವನ ಚಿತ್ತೇ ಚಿಚ್ಛಕ್ತಿಯಾಯಿತು. ಅದರಿಂದ ಮಹಾಲಿಂಗವುದ್ಭವಿಸಿತು. ಅದರಿಂದ ಪಂಚಕಲೆಗಳು ಜನಿಸಿದುವು. ಆ ಮಹಾಲಿಂಗವು—ಪರ, ಗೂಢ, ಶರೀರಸ್ಥ, ಲಿಂಗಕ್ಷೇತ್ರ, ಅನಾದಿ, ಎಂದು ೫ ಸಂಜ್ಞೆಗಳುಳ್ಳದ್ದಾಯಿತು. ಸಕಲ ತತ್ತ್ವಗಳಿಗೂ ಪರವಾದುದರಿಂದ ಪರವೆಂತಲೂ, ತಾನು ಮೂರ್ತಿಮತ್ತಲ್ಲದೆ ಸಕಲ ಮೂರ್ತಿಗಳನ್ನೂ ತನ್ನಿಂದಲೇ ಹುಟ್ಟಿಸುತ್ತ ಗುಪ್ತವಾಗಿರುವ ಕಾರಣ ಗೂಢವೆಂತಲೂ, ಸಕಲ ಚರಾಚರಪ್ರಪಂಚವನ್ನೆಲ್ಲ ತಾನೇ ಸೃಷ್ಟಿಸಿ, ಅದಕ್ಕೆಲ್ಲ ತಾನೇ ಆಧಾರವಾಗಿ, ಅದರೊಳಗೆಲ್ಲ ತಾನೇ ವ್ಯಾಪಿಸಿರುವುದರಿಂದ ಶರೀರಸ್ಥವೆಂತಲೂ, ತನ್ನಲ್ಲೇ ಹುಟ್ಟಿದ ಸಚರಾಚರವನ್ನೆಲ್ಲ ಲಯಗೊಳಿಸಿ, ತನ್ನಲ್ಲೇ ಲೀನಗೊಳಿಸಿಕೊಳ್ಳುವುದರಿಂದ ಲಿಂಗಕ್ಷೇತ್ರವೆಂತಲೂ, ಶಿವಾದಿರುದ್ರಾಂತವಾದ ಸಕಲ ತತ್ತ್ವಗಳಿಗೂ ತಾನೇ ಆದಿಯಾಗಿಯೂ ತನಗೆ ಆದಿಯಾದದ್ದು ಮತ್ತೊಂದಿಲ್ಲದೆಯೂ ಇರುವ ಕಾರಣ ಅನಾದಿಯೆಂತಲೂ ಹೇಳಲ್ಪಡುವುದು. ಹಿಂದೆ ಹೇಳಿದ ೫ ಕಲೆಗಳು, ೫ ಸಾದಾಖ್ಯಗಳು, ಪರಶಿವತತ್ತ್ವವೊಂದು, ಇವು ಹನ್ನೊಂದೂ ಲಿಂಗತತ್ತ್ವಗಳು. ಮೊದಲು ಹೇಳಿದ ಅಂಗತತ್ತ್ವಗಳು ೨೫. ಇವಿಷ್ಟು ಕೂಡಿದರೆ ೩೬ ತತ್ತ್ವಗಳಾದುವು. ಎಂದು ಚೆನ್ನಬಸವೇಶನು ಸಿದ್ಧರಾಮೇಶನಿಗೆ ನಿರೂಪಿಸಿದನೆಂಬಲ್ಲಿಗೆ ಏಳನೇ ಅಧ್ಯಾಯವು ಸಂಪೂರ್ಣವು.

# ೮ನೇ ಅಧ್ಯಾಯವು.

## ಷಟ್ಸ್ಥಲವಿವರಣವು.

ಗುರುವೆ! ಇನ್ನು ನನಗೆ ಷಟ್ಸ್ಥಲತತ್ವಾರ್ಥವನ್ನು ನಿರೂಪಿಸಿ ಕೃತಕೃತ್ಯನನ್ನು ಮಾಡಬೇಕೆಂದು ಸಿದ್ಧರಾಮೇಶನು ಪ್ರಾರ್ಥಿಸಲು, ಚೆನ್ನಬಸವೇಶನು ಹೇಳಲಾರಂಭಿಸಿದನೆಂತೆಂದರೆ-ಮಹದಾದಿತತ್ತ್ವಗಳಿಗೆಲ್ಲ ಜನ್ಮಸ್ಥಲವಾಗಿಯೂ, ಪ್ರಕೃತಿಪುರುಷಾತ್ಮಕವಾದ ಜಗತ್ತಿಗೆಲ್ಲ ಲಯಸ್ಥಾನವಾಗಿಯೂ ಇರುವ ಪರಬ್ರಹ್ಮವೇ ಸ್ಥಲನೆಂದು ಹೇಳಲ್ಪಟ್ಟಿತು. ಅಂತಹ ಪರಬ್ರಹ್ಮವೇ (ಮಹಾಸ್ಥಲವೇ) ತನ್ನಲ್ಲಿ ಎಡೆವಿಡದೆ ಲೀನವಾಗಿರುವ ಚಿಚ್ಛಕ್ತಿಯು ಸ್ಫುರಣದಿಂದ, ನಿಸ್ತರಂಗಸಮುದ್ರದಲ್ಲಿ ವಾಯುಚಲನೆಯಿಂದ ತರೆಗಳೂ ನೊರೆಗಳೂ ಹುಟ್ಟುವಂತೆ, ಲಿಂಗಸ್ಥಲ ಅಂಗಸ್ಥಲವೆಂದು ಎರಡುತೆರನಾಯಿತು. ಲಿಂಗವೇ ಪೂಜ್ಯವಾಯಿತು. ಅಂಗವೇ ಪೂಜಕವಾಯಿತು. ಲಿಂಗವೇ ಬ್ರಹ್ಮವು, ಅಂಗವೇ ಜೀವವು. ಸ್ಥಲಶಬ್ದವಾಚ್ಯವಾದ ಶಿವತತ್ತ್ವವು ಎರಡುತೆರನಾದಕೂಡಲೇ ತದ್ಗತವಾಗಿದ್ದ ಮಹಾಶಕ್ತಿಯು ಕೂಡ ಸ್ವಸ್ವಾತಂತ್ರ್ಯದಿಂದಲೂ ಪರಶಿವಸಮಾನಧರ್ಮದಿಂದಲೂ, ದೊಡ್ಡ ಬೆಂಕಿಯು ಬೇರೆ ಬೇರೆ ಸಣ್ಣದೀಪಗಳಾದಂತೆ, ಕಲೆ ಅಥವಾ, ಪರೆ, ಅಥವಾ ಶಕ್ತಿಯೆಂತಲೂ, ಮತ್ತೊಂದು ಭಕ್ತಿಯೆಂತಲೂ ಎರಡು ವಿಧವಾಯಿತು. ಬೆಂಕಿಯು ಜ್ವಾಲೆಯು ಹೊಗೆಯಿಂದ ಮುಸುಕಿರುವಾಗ ಬೆಳಕನ್ನು ಹರಡಲಾರದೆ ಮಂಕಾಗಿರುವಂತೆ ಕಲೆ (ಶಕ್ತಿಯು) ವಾಸನಾಸಹಿತವಾಗಿರುವುದು. ಭಕ್ತಿಯು ಹೊಗೆಯಿಲ್ಲದೆ ಬೆಳಗುವ ಜ್ಯೋತಿಯಂತೆ ನಿರ್ವಾಸನೆಯಾಗಿ ಹೊಳೆಯುತ್ತಿರುವುದು. ಭಕ್ತಿಯು ಮಹತ್ತರವಾದದ್ದು, ಸೂಕ್ಷ್ಮವಾದದ್ದು, ಮತ್ತು ಮುಕ್ತಿಯನ್ನು ಕೊಡತಕ್ಕದ್ದು. ಶಕ್ತಿಯಾದರೋ- ಪುಣ್ಯಫಲವನ್ನು ಕೊಡುವುದು. ಶಕ್ತಿಯಿಂದ ಪ್ರಪಂಚದ ಸೃಷ್ಟಿಗೆ ದಾರಿಯಾಗುವುದು. ಭಕ್ತಿಯಿಂದ ಆ ಪ್ರಪಂಚದ ಲಯವಾಗುವುದು. ಶಕ್ತಿಯು ವೈಚಿತ್ರ್ಯದಿಂದ ನೀರೂಪವಾದದ್ದು ಕೂಡ ಸರೂಪವಾಗುವುದು. ಭಕ್ತಿಯಿಂದ ಸರೂಪವಾಗಿದ್ದುದೂ ನೀರೂಪವಾಗುವುದು. ಪ್ರಪಂಚದ ವೃದ್ಧಿಯನ್ನಪೇಕ್ಷಿಸುವುದೇ ಶಕ್ತಿಯ ಸ್ವಾಭಾವಿಕಗು

ಣವು. ಪ್ರಪಂಚದ ಲಯವನ್ನಪೇಕ್ಷಿಸುವುದೇ ಭಕ್ತಿಯ ಸ್ವಭಾವಗುಣವು. ಶಕ್ತಿಯು ಮಾಯಾಸಹಿತವು. ಭಕ್ತಿಯು ಮಾಯಾರಹಿತವು. ಶಕ್ತಿಯು– ಅಧೋಮುಖಿಯೆಂತಲೂ, ಪ್ರವೃತ್ತಿಮಾರ್ಗವುಳ್ಳದ್ದೆಂತಲೂ, ಭಕ್ತಿಯು– ಊರ್ಧ್ವಮುಖಿಯೆಂತಲೂ, ನಿವೃತ್ತಿಮಾರ್ಗವುಳ್ಳದ್ದೆಂತಲೂ ಹೇಳಲ್ಪಡುವುದು. ಅದುಕಾರಣ, ಶಕ್ತಿಗಿಂತಲೂ ಭಕ್ತಿಯೇ ಅಧಿಕವು. ಶಕ್ತಿಗೆ ಉಪಾಸ್ಯತ್ವವುಂಟಾದುದರಿಂದ ಅದು ಲಿಂಗಸ್ಥಲವನ್ನಾಶ್ರಯಿಸಿತು. ಭಕ್ತಿಗೆ ಉಪಾಸಕತ್ವವುಂಟಾದುದರಿಂದ ಅದು ಅಂಗಸ್ಥಲವನ್ನಾಶ್ರಯಿಸಿತು. ಲಿಂಗ ಅಂಗಗಳೇ ಶಿವಜೀವರುಗಳೆಂದು ಮೇಲೆ ಹೇಳಲ್ಪಟ್ಟದೆಯಷ್ಟೆ. ಅಂಥ ಲಿಂಗಅಂಗಗಳ ಸಾಮರಸ್ಯವೇ ಶಿವಜೀವೈಕ್ಯವೆಂದು ಹೇಳಲ್ಪಡುವುದು. ಆ ಲಿಂಗಸ್ಥಲವು ವೇಧಾ ಮನು ಕ್ರಿಯಾ ಎಂಬ ದೀಕ್ಷಾತ್ರಯದಿಂದಲೂ, ನಾದ ಬಿಂದು ಕಲೆಗಳ ಸಂಬಂಧದಿಂದಲೂ, ಕ್ರಮವಾಗಿ– ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ಮೂರು ತೆರನಾಯಿತು. ಭಾವದಿಂದ ಗ್ರಹಿಸಲ್ಪಡುವ ಸದ್ರೂಪವಾದ ಭಾವಲಿಂಗವೇ ನಿಷ್ಕಲವು; ಮನಸ್ಸಿನಿಂದ ಗ್ರಹಿಸಲ್ಪಡುವ ಚಿದ್ರೂಪವಾದ ಪ್ರಾಣಲಿಂಗವೇ ಸಕಲನಿಷ್ಕಲವು; ಕಣ್ಣಿನ ನೋಟದಿಂದ ಗ್ರಹಿಸಲ್ಪಡುವ ಆನಂದರೂಪವಾದ ಇಷ್ಟಲಿಂಗವೇ ಸಕಲವು. "ತತ್ತ್ವಮಸಿ" ಎಂಬ ಮಹಾವಾಕ್ಯದಲ್ಲಿರುವ ತತ್ ಪದವೇ ಇಷ್ಟಲಿಂಗವಾಚಕವು, ತ್ವಂ ಪದವೇ ಪ್ರಾಣಲಿಂಗವಾಚಕವು, ಅಸಿ ಪದವೇ ಭಾವಲಿಂಗವಾಚಕವಾದದ್ದು. ಇಷ್ಟಲಿಂಗವು– ಹೊರಗೆ ತೋರುವ ಸ್ಥೂಲತತ್ತ್ವಾತ್ಮಕವು, ಪ್ರಾಣಲಿಂಗವು–ಒಳಗೆ ತೋರುವ ಸೂಕ್ಷ್ಮತತ್ವಾತ್ಮಕವು. ಭಾವಲಿಂಗವು–ಒಳಗೂ ಹೊರಗೂ ಅಖಂಡವಾಗಿ ತೋರುವ ಪರತತ್ತ್ವಾತ್ಮಕವಾಗಿರುವುದು. ಈ ತ್ರಿವಿಧಲಿಂಗಸ್ಥಲಗಳೂ ಎರಡೆರಡರಂತೆ ಆರುಭೇದಗಳನ್ನೈದಿರುವುವು. ಹೇಗೆಂದರೆ– ಭಾವಲಿಂಗವೇ ಮಹಾಲಿಂಗ ಪ್ರಸಾದಲಿಂಗವೆಂತಲೂ, ಪ್ರಾಣಲಿಂಗವೇ– ಜಂಗಮಲಿಂಗ ಶಿವಲಿಂಗವೆಂತಲೂ, ಇಷ್ಟಲಿಂಗವೇ–ಗುರುಲಿಂಗ ಆಚಾರಲಿಂಗವೆಂತಲೂ ಎರಡೆರಡು ಪ್ರಕಾರವಾದುವು. ಹೀಗೆ ಲಿಂಗಸ್ಥಲಗಳು ಆರಾಗಲು, ತದ್ಗತವಾದ ಚಿಚ್ಛಕ್ತಿಯೂ ಕೂಡ ಆರು ತೆರನಾದ ಕಳೆಗಳನ್ನು ಹೊಂದಿ ೬ ತೆರದ ಶಕ್ತಿಯಾಯಿತು. ಹೇ

ಗೆಂದರೆ— ಶಾಂತ್ಯತೀತೋತ್ತರೆಯೆಂಬ ಕಲೆಯಿಂದ ಚಿಚ್ಛಕ್ತಿಯು, ಶಾಂತ್ಯತೀತಕಲೆಯಿಂದ ಪರಾಶಕ್ತಿಯು, ಶಾಂತಿಕಲೆಯಿಂದ ಆದಿಶಕ್ತಿಯು, ವಿದ್ಯಾಕಳೆಯಿಂದ ಇಚ್ಛಾಶಕ್ತಿಯು, ಪ್ರತಿಷ್ಠಾಕಳೆಯಿಂದ ಜ್ಞಾನಶಕ್ತಿಯು ನಿವೃತ್ತಿಕಳೆಯಿಂದ ಕ್ರಿಯಾಶಕ್ತಿಯು ಆದುವು. ಈ ಆರು ತೆರದ ಶಕ್ತಿಗಳೂ ಹಿಂದೆ ಹೇಳಿದ ಆರು ಲಿಂಗಗಳೊಡನೆ ಕೂಡಿದುವು. ಆಗ ಆ ಪ್ರತಿಯೊಂದು ಲಿಂಗಗಳ ಸ್ವರೂಪಲಕ್ಷಣಗಳು ಹೇಗಾದವೆಂದರೆ— ಮಹಾಲಿಂಗವು— ಶಾಂತ್ಯತೀತೋತ್ತರಕಲಾಸಮೇತವಾಗಿ ಚಿಚ್ಛಕ್ತಿಯಿಂದ ಕೂಡಿ, ಮಹಾಸಾದಾಖ್ಯವನ್ನು ಹೊಂದಿ ಭಾವಗವ್ಯವಾಗಿರುವುದು. ಪ್ರಸಾದಲಿಂಗವು— ಶಾಂತ್ಯತೀತಕಲಾಸಮೇತವಾಗಿ ಪರಾಶಕ್ತಿಯಿಂದ ಕೂಡಿ, ಶಿವಸಾದಾಖ್ಯವನ್ನು ಹೊಂದಿ ಜ್ಞಾನೈಕಗವ್ಯವಾಗಿರುವುದು. ಜಂಗಮಲಿಂಗವು—ಶಾಂತಿಕಲಾಸಮೇತವಾಗಿ, ಆದಿಶಕ್ತಿಯಿಂದ ಕೂಡಿ, ಅಮೂರ್ತಸಾದಾಖ್ಯವನ್ನು ಹೊಂದಿ, ಮನೋಗವ್ಯವಾಗಿರುವುದು. ಶಿವಲಿಂಗವು—ವಿದ್ಯಾಕಲಾಸಮೇತವಾಗಿ ಇಚ್ಛಾಶಕ್ತಿಯಿಂದ ಕೂಡಿ, ಮೂರ್ತಸಾದಾಖ್ಯವನ್ನು ಹೊಂದಿ, ಅಹಂಕಾರಗವ್ಯವಾಗಿರುವುದು. ಗುರುಲಿಂಗವು—ಪ್ರತಿಷ್ಠಾಕಲಾಸಮೇತವಾಗಿ ಜ್ಞಾನಶಕ್ತಿಯಿಂದ ಕೂಡಿ, ಕರ್ತೃಸಾದಾಖ್ಯವನ್ನು ಹೊಂದಿ, ಬುದ್ಧಿಗವ್ಯವಾಗಿರುವುದು. ಆಚಾರಲಿಂಗವು—ನಿವೃತ್ತಿಕಲಾಸಮೇತವಾಗಿ, ಕ್ರಿಯಾಶಕ್ತಿಯಿಂದ ಕೂಡಿ, ಕರ್ಮಸಾದಾಖ್ಯವನ್ನು ಹೊಂದಿ ಚಿತ್ತಗವ್ಯವಾಗಿರುವುದು. ಹೀಗೆ ಉಪಾಸ್ಯವಾದ ಲಿಂಗಸ್ಥಲವು ಮೊದಲು ಮೂರಾಗಿ ಬಳಿಕ ಆರಾದಂತೆ, ಉಪಾಸಕವಾದ ಅಂಗಸ್ಥಲವು ಕೂಡ ಮೊದಲು ಯೋಗಾಂಗ ಭೋಗಾಂಗ ತ್ಯಾಗಾಂಗವೆಂದು ಮೂರು ಭೇದಗಳನ್ನು ಪಡೆದಿತು. ಯೋಗಾಂಗವು— ಶಿವನ ಐಕ್ಯಾನುಸಂಧಾನವೇ ಲಕ್ಷಣವಾಗುಳ್ಳದ್ದು, ಭೋಗಾಂಗವು— ಶಿವಪ್ರಸಾದಸೇವನೆಯಿಂದುಂಟಾದ ಸುಖಪರಿಣಾಮವೇ ಲಕ್ಷಣವಾಗುಳ್ಳದ್ದು, ತ್ಯಾಗಾಂಗವು—ಸಂಸಾರಭ್ರಾಂತಿಪರಿತ್ಯಾಗವೇ ಲಕ್ಷಣವಾಗುಳ್ಳದ್ದು. ಮೊದಲನೇ ಯೋಗಾಂಗವು— ಕಾರಣಶರೀರಸಂಬಂಧನಾಗಿ, ಸುಷುಪ್ತ್ಯವಸ್ಥೆಯನ್ನೈದಿ ಪ್ರಾಜ್ಞನೆನಿಸಿಕೊಳ್ಳುವುದು. ಭೋಗಾಂಗವು— ಸೂಕ್ಷ್ಮದೇಹಸಂಪನ್ನವಾಗಿ ಸ್ವಪ್ನಾವಸ್ಥೆಯಿಂದ ತೈಜಸನೆನ್ನಲ್ಪಡುವುದು. ತ್ಯಾಗಾಂಗವು—

ಸ್ಥೂಲದೇಹಯುಕ್ತವಾಗಿ, ಜಾಗ್ರದವಸ್ಥೆಯಿಂದ ವಿಶ್ವನೆನಿಸಿಕೊಳ್ಳುವು
ದು. ಈ ಅಂಗತ್ರಯಗಳಿಗೇ ಕ್ರಮವಾಗಿ ಪರಮಾತ್ಮ ಅಂತರಾತ್ಮ ಜೀ
ವಾತ್ಮ ಎಂದು ಬೇರೆ ಹೆಸರುಗಳಿರುವುವು. ಬಳಿಕ ಈ ಮೂರು ಅಂಗಸ್ಥ
ಲಗಳೇ ಒಂದೊಂದಕ್ಕೆರಡರಂತೆ ಆರು ತೆರನಾದುವು. ಹೇಗೆಂದರೆ_ಯೋ
ಗಾಂಗವೇ— ಐಕ್ಯ ಶರಣ, ಎಂತಲೂ, ಭೋಗಾಂಗವೇ– ಪ್ರಸಾದಿ, ಪ್ರಾ
ಣಲಿಂಗಿಯೆಂತಲೂ, ತ್ಯಾಗಾಂಗವೇ– ಮಾಹೇಶ, ಭಕ್ತ ಎಂತಲೂ, ವಿಭಿ
ನ್ನವಾದುವು. ಹೀಗೆ ಅಂಗಸ್ಥಲವು ೬ ಆಗಲು, ಅದನ್ನೈದಿದ ಭಕ್ತಿ
ಯೂ ಕೂಡ–ಸಮರಸಭಕ್ತಿ, ಆನಂದಭಕ್ತಿ, ಅನುಭವಭಕ್ತಿ, ಅವಧಾನ
ಭಕ್ತಿ, ನೈಷ್ಠಿಕೀಭಕ್ತಿ, ಸದ್ಭಕ್ತಿಯೆಂದು ೬ ತೆರನಾಯಿತು. ಇವು ಕ್ರ
ಮವಾಗಿ ಅಂಗಸ್ಥಲಗಳನ್ನು ಎಂದರೆ— ಐಕ್ಯಸ್ಥಲವನ್ನು ಸಮರಸಭಕ್ತಿ
ಯೂ, ಶರಣಸ್ಥಲವನ್ನು ಆನಂದಭಕ್ತಿಯೂ, ಪ್ರಾಣಲಿಂಗಿಸ್ಥಲವನ್ನು
ಅನುಭವಭಕ್ತಿಯೂ, ಪ್ರಸಾದಿಸ್ಥಲವನ್ನು ಅವಧಾನಭಕ್ತಿಯೂ, ಮಾ
ಹೇಶ್ವರಸ್ಥಲವನ್ನು ನೈಷ್ಠಿಕೀಭಕ್ತಿಯೂ, ಭಕ್ತಸ್ಥಲವನ್ನು ಸದ್ಭ
ಕ್ತಿಯೂ ಹೊಂದಿದುವು. ಪ್ರವೃತ್ತಿಮಾರ್ಗಾನುಸಾರವಾಗಿ ಹಿಂದೆ
ಹೇಳಿದ ಲಿಂಗಸ್ಥಲದಂತೆ ಪ್ರವೃತ್ತಿಮಾರ್ಗಾನುಸಾರವಾದ ಅಂಗಸ್ಥಲದ
ಕ್ರಮವನ್ನು ಕೇಳು– ಶಿವನೇ ತನ್ನ ಚಿಚ್ಛಕ್ತಿಸ್ಫುರಣದಿಂದ ಮಹಾ
ಲಿಂಗನಾದನಷ್ಟೆ. ಉಪಾಸ್ಯವಾದ ಆ ಮಹಾಲಿಂಗಸ್ಥಲಕ್ಕೆ ಐಕ್ಯಸ್ಥ
ಲವು ಉಪಾಸಕವಾಯಿತು. ಆ ಮಹಾಲಿಂಗದಲ್ಲಿ ಪರಾಶಕ್ತಿಸ್ಫುರಣದಿಂ
ದ ಪ್ರಸಾದಲಿಂಗನಾಯಿತು. ಅದಕ್ಕೆ ಶರಣಸ್ಥಲವು ಉಪಾಸಕವಾಯಿ
ತು. ಆ ಪ್ರಸಾದಲಿಂಗದಲ್ಲಿ ಆದಿಶಕ್ತಿಸ್ಫುರಣದಿಂದ ಜಂಗಮಲಿಂಗವಾಯಿ
ತು. ಅದಕ್ಕೆ ಪ್ರಾಣಲಿಂಗಿಸ್ಥಲವು ಉಪಾಸಕವಾಯಿತು. ಆ ಜಂಗಮ
ಲಿಂಗದಲ್ಲಿ ಇಚ್ಛಾಶಕ್ತಿಸ್ಫುರಣದಿಂದ ಶಿವಲಿಂಗವುದಿಸಿತು. ಅದಕ್ಕೆ ಪ್ರಸಾ
ದಿಸ್ಥಲವು ಉಪಾಸಕವು. ಆ ಶಿವಲಿಂಗದಲ್ಲಿ ಜ್ಞಾನಶಕ್ತಿಸ್ಫುರಣದಿಂದ
ಗುರುಲಿಂಗವುದಿಸಿತು. ಅದಕ್ಕೆ ಮಾಹೇಶ್ವರಸ್ಥಲವು ಉಪಾಸಕ
ವು. ಆ ಗುರುಲಿಂಗದಲ್ಲಿ ಕ್ರಿಯಾಶಕ್ತಿಸ್ಫುರಣದಿಂದ ಆಚಾರಲಿಂಗವುದಿ
ಸಿತು. ಅದಕ್ಕೆ ಭಕ್ತಸ್ಥಲವು ಉಪಾಸಕವಾಯಿತು. ಹೀಗೆ ಷಟ್ಸ್ಥಲವ
ನ್ನೈದಿದ ಅಂಗವೆಂಬ ಆದರನಾದುವು ಆತ್ಮನಿಂದ ಆಕಾಶವೂ, ಆಕಾಶ

ದಿಂದ ವಾಯುವೂ, ಅದರಿಂದ ಅಗ್ನಿಯೂ, ಆದರಿಂದ ಜಲವೂ, ಅದರಿಂದ ಭೂಮಿಯೂ, ಉಂಟಾದುವು. ಇದರಂತೆಯೇ ಪರತತ್ತ್ವದಿಂದ ಭಾವವೂ, ಭಾವದಿಂದ ಜ್ಞಾನವೂ, ಅದರಿಂದ ಮನಸ್ಸೂ, ಅದರಿಂದಹಂಕಾರವೂ, ಆದರಿಂದ ಬುದ್ಧಿಯೂ, ಅದರಿಂದ ಚಿತ್ತವೂ ಆದುವು. ಪ್ರತಿಯೊಂದು ಅಂಗಸ್ಥಲವೂ ಕ್ರಮವಾಗಿ ಒಂದೊಂದು ಲಿಂಗವನ್ನೂ, ಭಕ್ತಿಯನ್ನೂ, ಹಸ್ತೋಪಕರಣವನ್ನೂ ಹೊಂದಿ ತಮ್ಮ ತಮ್ಮ ಉಪಾಸ್ಯಲಿಂಗವನ್ನು ಸೇವಿಸುವುವು. ಹೇಗೆಂದರೆ— ಐಕ್ಯಸ್ಥಲವು ಆತ್ಮಾಂಗವನ್ನೈದಿ, ಚಿಚ್ಛಕ್ತಿಯಿಂದ ಕೂಡಿದ ಮಹಾಲಿಂಗವನ್ನು, ಭಾವಹಸ್ತದಿಂದ ಸಮರಸಭಕ್ತಿಯೊಡನೆ ಪೂಜಿಸುವುದು. ಶರಣಸ್ಥಲವು— ಆಕಾಶಾಂಗವನ್ನೈದಿ, ಪರಾಶಕ್ತಿಯಿಂದ ಕೂಡಿದ ಪ್ರಸಾದಲಿಂಗವನ್ನು ಜ್ಞಾನಹಸ್ತದಿಂದ ಆನಂದಭಕ್ತಿಯೊಡನೆ ಪೂಜಿಸುವುದು. ಪ್ರಾಣಲಿಂಗಿಸ್ಥಲವು ವಾಯ್ವಂಗವನ್ನೈದಿ, ಆದಿಶಕ್ತಿಯಿಂದ ಕೂಡಿದ ಜಂಗಮಲಿಂಗವನ್ನು ಮನೋಹಸ್ತದಿಂದ ಅನುಭವಭಕ್ತಿಯೊಡನೆ ಪೂಜಿಸುವುದು. ಪ್ರಸಾದಿಸ್ಥಲವು— ಅಗ್ನ್ಯಂಗವನ್ನೈದಿ, ಇಚ್ಛಾಶಕ್ತಿಯಿಂದ ಕೂಡಿದ ಶಿವಲಿಂಗವನ್ನು ಅಹಂಕಾರಹಸ್ತದಿಂದ ಅವಧಾನಭಕ್ತಿಯೊಡನೆ ಪೂಜಿಸುವುದು. ಮಾಹೇಶಸ್ಥಲವು— ಜಲಾಂಗವನ್ನೈದಿ, ಜ್ಞಾನಶಕ್ತಿಯಿಂದ ಕೂಡಿದ ಗುರುಲಿಂಗವನ್ನು ಬುದ್ಧಿಹಸ್ತದಿಂದ ನಿಷ್ಠಾಭಕ್ತಿಯೊಡನೆ ಪೂಜಿಸುವುದು. ಭಕ್ತಸ್ಥಲವು— ಪೃಥಿವ್ಯಂಗವನ್ನೈದಿ, ಕ್ರಿಯಾಶಕ್ತಿಯಿಂದ ಕೂಡಿದ ಆಚಾರಲಿಂಗವನ್ನು ಚಿತ್ತಹಸ್ತದಿಂದ ಸದ್ಭಕ್ತಿಯೊಡನೆ ಪೂಜಿಸುವುದು. ಹೀಗೆ ಐಕ್ಯಾದಿಭಕ್ತಾಂತವಾದ ೬ ಸ್ಥಲಗಳು ಆಯಾಯ ಲಿಂಗವನ್ನು ಧರಿಸಿ ಪೂಜಿಸುವುದೇ ಲಿಂಗಾಂಗಸಂಯೋಗವೆನಿಸಿಕೊಳ್ಳುವುದು. ಹಿಂದೆ ಹೇಳಿದಂತೆ ಷಡ್ವಿಧಭಕ್ತ್ಯಾದಿಗಳಿಂದ ಕೂಡಿರುವ ಐಕ್ಯಾದಿಸ್ಥಲಗಳ ಮುಖ್ಯಲಕ್ಷಣವು ಹೇಗೆಂದರೆ— ನಾನು ನೀನು ಎಂಬ ವ್ಯವಹಾರವೆರಡಕ್ಕೂ ವಿಷಯನಾದವನು ನಾನೇ, ಪ್ರಾಣದೇಹೇಂದ್ರಿಯಾದಿಭೇದಗಳೆಲ್ಲ ಭ್ರಾಂತಿಜನ್ಯಗಳೇ ಹೊರತು ನನ್ನಲ್ಲಿಲ್ಲ, ಎಂಬ ಭಾವದಿಂದ ಸುಖರೂಪಸ್ವರೂಪವಾಗಿರುವುದೇ ಐಕ್ಯಸ್ಥಲವು. ಅರಿವಿನ ಬೆಳಕಿನಿಂದ ದೇಹೇಂದ್ರಿಯಾದಿಗಳೆಲ್ಲ ತನ್ನ ರೂಪೆಂದು ತಿಳಿದು, ಸಕಲ ವಿಷಯಗಳಲ್ಲೂ ತಗಲಿದ್ದರೂ ಶುದ್ಧಾತ್ಮ

ನಾಗಿ ಆನಂದದಿಂದಿರುವುದೇ ಶರಣಸ್ಥಲವು. ಪ್ರಾಣೇಂದ್ರಿಯಾದಿಗಳೆಲ್ಲ ನನ್ನವೆಂಬ ಭ್ರಾಂತಿಯನ್ನು ಬಿಟ್ಟು, ಎಲ್ಲವನ್ನೂ ಲಿಂಗವೇ ಎಂದು ತಿಳಿದು, ಲಿಂಗೈಕಾಯತ್ತಚಿತ್ತನಾಗಿರುವುದೇ ಪ್ರಾಣಲಿಂಗಿಸ್ಥಲವು. ಪ್ರತಿಯೊಂದು ಇಂದ್ರಿಯಮುಖನಾಗಿ ಅನುಭವಿಸುವ ಸೌಖ್ಯವನ್ನೂ ಮೊದಲು ಲಿಂಗಕ್ಕೆ ಸಮರ್ಪಿಸಿ, ಬಳಿಕ ಅದನ್ನು ಪ್ರಸಾದಬುದ್ಧಿಯಿಂದ ತಾನನುಭವಿಸುವುದೇ ಪ್ರಸಾದಿಸ್ಥಲವು. ಯಾವಾಗಲೂ ಲಿಂಗೈಕನಿಷ್ಠೆಯಿಂದ ಆಸ್ತಿಕ್ಯ, ನಿತ್ಯಕರ್ಮ, ಸತ್ಯ, ಸದಾಚಾರ, ಧರ್ಮ, ಸೌಶೀಲ್ಯಾದಿಗಳನ್ನು ಹೊಂದಿ, ವೀರಶೈವವ್ರತಸಂಪನ್ನನಾಗಿರುವುದೇ ಮಾಹೇಶ್ವರಸ್ಥಲವು. ಶರೀರಪ್ರಾಣಧರ್ಮಾದಿಗಳೆಲ್ಲವೂ ಸ್ಥಿರವೆಂದು ತೋರುತ್ತಿದ್ದರೂ, ತನ್ನ ಕ್ರಿಯಾವಿಶೇಷದಿಂದ ಆ ಭ್ರಾಂತಿಯನ್ನು ಬಿಡುತ್ತ, ಚಿತ್ತವನ್ನು ಸದಾ ಶಿವಭಕ್ತಿಸದಾಚಾರಗಳಲ್ಲಳವಡಿಸುವುದೇ ಭಕ್ತಸ್ಥಲವು. ಇನ್ನು ಲಿಂಗಾಂಗಸಂಯೋಗಕ್ರಮವನ್ನು ಹೇಳುತ್ತೇನೆ- ಲಿಂಗವೆಂದರೆ ಬ್ರಹ್ಮ ಅಂಗವೆಂದರೆ ಆತ್ಮ, ಇವುಗಳ ನಿತ್ಯಸಂಬಂಧವೇ ಸಂಯೋಗವೆನಿಸಿಕೊಳ್ಳುವುದು. ಲಿಂಗವೇ ತತ್ಪದವಾಚ್ಯವು, ಅಂಗವೇ ತ್ವಂಪದವಾಚ್ಯವು, ಸಂಯೋಗವೇ ಅಸಿಪದವಾಚ್ಯವು; ಲಿಂಗವೇ ನಾದ, ಅಂಗವೇ ಬಿಂದು, ಸಂಯೋಗವೇ ಕಳೆಯು; ಲಿಂಗವೇ ಸನ್ಮಾತ್ರ, ಅಂಗವೇ ಚಿನ್ಮಾತ್ರ, ಆನಂದವೇ ಯೋಗವು; ಇದೇ ಮಹಾಲಿಂಗಾಂಗಸಂಯೋಗವು. ತನ್ನ ತ್ರಿವಿಧದೇಹದಲ್ಲಿರುವ ತ್ರಿವಿಧಲಿಂಗವನ್ನೂ ಅವಸ್ಥಾತ್ರಯಗಳಲ್ಲಿ ವಿಶ್ವತೈಜಸಪ್ರಾಜ್ಞರೂಪನಾಗಿ ಉಪಾಸಿಸುತ್ತಿರುವುದೇ ಲಿಂಗಾಂಗಸಂಯೋಗವು. ಸಂಯೋಗವೆಂದರೆ ದ್ವೈತನಾಶ; ಆ ನಾಶವೇ ನಿವೃತ್ತಿ, ನಿವೃತ್ತಿಯೇ ವಿಶ್ರಾಂತಿ, ಆ ವಿಶ್ರಾಂತಿಯೇ ಪರಮಪದ ಅಥವಾ ಮುಕ್ತಿಯೆನಿಸಿಕೊಳ್ಳುವುದು. ಇನ್ನು ಸರ್ವಾಂಗಲಿಂಗಸಾಹಿತ್ಯವನ್ನು ಹೇಳುವೆನು.— ಗುರುವಿನಿಂದ ತ್ರಿವಿಧದೇಹದಲ್ಲಿ ತ್ರಿವಿಧಲಿಂಗಗಳು ಸ್ಥಾಪಿಸಲ್ಪಟ್ಟಿರುವಂತೆಯೇ ಜ್ಞಾನೇಂದ್ರಿಯಗಳಲ್ಲೂ ಒಂದೊಂದು ಲಿಂಗವು ಸ್ಥಾಪಿಸಲ್ಪಟ್ಟಿರುವುದು. ಹೇಗೆಂದರೆ— ಹೃದಯಾಂಗದಲ್ಲಿ ಮಹಾಲಿಂಗ, ಶ್ರೋತ್ರಾಂಗದಲ್ಲಿ ಪ್ರಸಾದಲಿಂಗ, ತ್ವಗಂಗದಲ್ಲಿ ಚರಲಿಂಗ, ನೇತ್ರಾಂಗದಲ್ಲಿ ಶಿವಲಿಂಗ, ಜಿಹ್ವಾಂಗದಲ್ಲಿ ಗುರುಲಿಂಗ, ನಾಸಿಕಾಂಗದಲ್ಲಿ ಆಚಾರಲಿಂಗವು ಇರುವುವು. ಇದರಂತೆ

ಯೇ ಕರ್ಮೇಂದ್ರಿಯಗಳಲ್ಲೂ ಇರುವುವು. ಹೇಗೆಂದರೆ— ಒಂದು ಜ್ಞಾನೇಂದ್ರಿಯ, ಅದರ ವಿಷಯ, ಒಂದು ಕರ್ಮೇಂದ್ರಿಯ, ಅದರ ವಿಷಯ, ಒಂದೊಂದು ಭೂತ, ಇವೈದೈದಕ್ಕೂ ಈಶಾನಾದಿಪಂಚಮೂರ್ತಿಗಳಲ್ಲೊಂದೊಂದು ಅಧಿದೈವವಾಗಿರುವುವು. ಅವರ ವಿವರವೆಂತೆಂದರೆ—ಶ್ರೋತ್ರ—ಶಬ್ದ, ವಾಕ್ಕು—ವಚನ, ಆಕಾಶ—ಇವುಗಳಿಗೆ ಈಶಾನಮೂರ್ತಿಯೂ, ತ್ವಕ್ಕು—ಸ್ಪರ್ಶ, ಪಾಣಿ—ಆದಾನ, ವಾಯು—ಇವುಗಳಿಗೆ ತತ್ಪುರುಷಮೂರ್ತಿಯೂ, ನೇತ್ರ— ರೂಪ, ಪಾದ—ಗಮನ, ಅಗ್ನಿ—ಇವುಗಳಿಗೆ ಅಘೋರಮೂರ್ತಿಯೂ, ಜಿಹ್ವೆ—ರಸ, ಗುಹ್ಯ—ಆನಂದ, ಜಲ—ಇವುಗಳಿಗೆ ವಾಮದೇವಮೂರ್ತಿಯೂ, ನಾಸಿಕೆ—ಗಂಧ, ಪಾಯು— ವಿಸರ್ಜನ, ಭೂಮಿ— ಇವುಗಳಿಗೆ ಸದ್ಯೋಜಾತಮೂರ್ತಿಯೂ, ಅಧಿದೈವಗಳಾಗಿರುವುವು. ಈ ಜ್ಞಾನಕರ್ಮೇಂದ್ರಿಯಗಳಿಗೆಲ್ಲ ಹೃದಯವೇ ಆಶ್ರಯವು. ಹೀಗೆ ಸಕಲಇಂದ್ರಿಯಗಳಿಗೂ ಅವಕಾಶವನ್ನು ಕೊಟ್ಟುಕೊಂಡಿರುವುದರಿಂದ ಇದಕ್ಕೆ ಹೃದಯಾಕಾಶವೆಂದು ಹೆಸರು. ಇದು ಮಹಾಲಿಂಗಕ್ಕಾಶ್ರಯವಾದದ್ದು. ಮೇಲ್ಕಂಡ ಇಂದ್ರಿಯಗಳೆಲ್ಲ ಸ್ಥೂಲಾಂಗದಲ್ಲಿ ಸ್ಥೂಲರೂಪವಾಗಿಯೂ, ಸೂಕ್ಷ್ಮಾಂಗದಲ್ಲಿ ಸೂಕ್ಷ್ಮರೂಪವಾಗಿಯೂ, ಕಾರಣಾಂಗದಲ್ಲಿ ಕಾರಣರೂಪವಾಗಿಯೂ ಇರುವುವು. ಈ ತ್ರಿವಿಧರೂಪವಾದ ಇಂದ್ರಿಯಗಳಲ್ಲೂ ಸತ್ಯಾದಿಲಕ್ಷಣಲಕ್ಷಿತವಾದ ಗುರೂಪದೇಶಸಂಸಿದ್ಧಲಿಂಗವು ಸರ್ವತೋಮುಖವಾಗಿ ಶೋಭಿಸುತ್ತಿರುವುದು. ಪ್ರತಿಯೊಂದು ಇಂದ್ರಿಯಗಳ ಮುಖವಾಗಿ ಬರುವ ವಿಷಯವನ್ನೂ ಲಿಂಗಮುಖವಾಗಿಯೇ ಪರಿಗ್ರಹಿಸಬೇಕು. ಆ ಲಿಂಗಮುಖವನ್ನು ತಿಳಿಯುವುದು ಸೂಕ್ಷ್ಮದರ್ಶಿಗಳಿಗಲ್ಲದೆ ಜಡಾತ್ಮರಿಗೆ ಸುಲಭವಲ್ಲ, ಅಂತಹ ಸೂಕ್ಷ್ಮದರ್ಶಿಗಳಿಗೆ ಹೃದಯಕ್ಕೆ ಹೃದಯವೂ, ಶ್ರೋತ್ರಕ್ಕೆ ಶ್ರೋತ್ರವೂ, ತ್ವಕ್ಕಿಗೆ ತ್ವಕ್ಕೂ, ನೇತ್ರಕ್ಕೆ ನೇತ್ರವೂ, ಜಿಹ್ವೆಗೆ ಜಿಹ್ವೆಯೂ, ನಾಸಿಕಕ್ಕೆ ನಾಸಿಕವೂ, ವಾಕ್ಕಿಗೆ ವಾಕ್ಕೂ ಪಾಣಿಗೆ ಪಾಣಿಯೂ, ಪಾದಕ್ಕೆ ಪಾದವೂ, ಪಾಯುವಿಗೆ ಪಾಯುವೂ, ಗುಹ್ಯಕ್ಕೆ ಗುಹ್ಯವೂ, ಮುಖವಾಗಿ ತೋರುವುವು. ಹೇಗೆಂದರೆ— ಹೃದಯಕ್ಕೆ ಹೃದಯವೇ ಮಹಾಲಿಂಗವು, ಶ್ರೋತ್ರಕ್ಕೆ ಶ್ರೋತ್ರವೇ ಪ್ರಸಾದಲಿಂಗವು, ತ್ವಕ್ಕಿಗೆ ತ್ವಕ್ಕೇ ಜಂಗಮಲಿಂಗವು. ನೇತ್ರಕ್ಕೆ

ನೇತ್ರವೇ ಶಿವಲಿಂಗವು, ಜಿಹ್ವೆಗೆ ಜಿಹ್ವೆಯೇ ಗುರುಲಿಂಗವು, ನಾಸಿಕಕ್ಕೆ ನಾಸಿಕವೇ ಆಚಾರಲಿಂಗವು. ಇವಿಷ್ಟು ಪ್ರವೃತ್ತಿಮಾರ್ಗಕ್ರಮವಾಯಿತು. ಇನ್ನು ನಿವೃತ್ತಿಮಾರ್ಗಕ್ರಮವೆಂತೆಂದರೆ— ದೇಹದ ಗುದಸ್ಥಾನ, ಗುಹ್ಯಸ್ಥಾನ, ಹೊಕ್ಕುಳು, ಹೃದಯ, ಕಂಠ, ಹುಬ್ಬಿನ ಮಧ್ಯ, ಇವಾರು ಸ್ಥಲಗಳೂ ಕ್ರಮವಾಗಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಎಂಬ ಆರು ಚಕ್ರಸ್ಥಾನಗಳಿರುವುವು. ಮೊದಲನೇ ಆಧಾರಚಕ್ರಕಮಲಕ್ಕೆ ೪ ದಳ, ಸ್ವಾಧಿಷ್ಠಾನಕ್ಕೆ ೬ ದಳ, ಮಣಿಪೂರಕಕ್ಕೆ ೧೦ ದಳ, ಅನಾಹತಕ್ಕೆ ೧೨ ದಳ, ವಿಶುದ್ಧಿಗೆ ೧೬ ದಳ, ಆಜ್ಞಾಚಕ್ರಕ್ಕೆ ೨ ದಳಗಳಿರುವುವು. ನೋಲ್ಕಂಡ ಪ್ರತಿಚಕ್ರದ ಪ್ರತಿಯೊಂದು ದಳದಲ್ಲೂ ಒಂದೊಂದು ಪ್ರಣವವಿರುವುವು. ಹೇಗೆಂದರೆ—ಆಧಾರಚಕ್ರದಲ್ಲಿ ವ ಶ ಷ ಸ; ಸ್ವಾಧಿಷ್ಠಾನದಲ್ಲಿ— ಬ ಭ ಮ ಯ ರ ಲ, ಮಣಿಪೂರಕದಲ್ಲಿ— ಡ ಢ ಣ ತ ಥ ದ ಧ ನ ಪ ಫ; ಅನಾಹತಚಕ್ರದಲ್ಲಿ— ಕ ಖ ಗ ಘ ಙ ಚ ಛ ಜ ಝ ಞ ಟ ಠ; ವಿಶುದ್ಧಿಚಕ್ರದಲ್ಲಿ— ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ ಅಂ ಅಃ; ಆಜ್ಞಾಚಕ್ರದಲ್ಲಿ ಹಂ ಕ್ಷಂ; ಎಂಬಿವುಗಳೂ ಪ್ರಣವಗಳಾಗಿರುವುವು. ಈ ಷಟ್ಚಕ್ರದ ದಳಗಳ ಮಧ್ಯಕರ್ಣಿಕೆಗಳಲ್ಲಿ ಕ್ರಮವಾಗಿ ಯ ವಾ ಶಿ ಮ ನ ಓಂ ಎಂಬ ಪ್ರಣವಗಳು ಒಂದೊಂದಾಗಿರುವುವು. ಇವುಗಳಲ್ಲಿ ನಕಾರವೇ ಆಚಾರಲಿಂಗವು, ಮಕಾರವೇ ಗುರುಲಿಂಗವು, ಶಿಕಾರವೇ ಶಿವಲಿಂಗವು, ವಾಕಾರವೇ ಆಚಾರಲಿಂಗವು, ಯಕಾರವೇ ಪ್ರಸಾದಲಿಂಗವು, ಓಂಕಾರವೇ ಮಹಾಲಿಂಗವು. ಈ ಷಟ್ಪ್ರಣವಗಳಲ್ಲಿ ಓಂಕಾರವು ತ್ವಕ್ಕಿನಲ್ಲೂ, ನಕಾರವು ರಕ್ತದಲ್ಲೂ, ಮಕಾರವು ಮಾಂಸದಲ್ಲೂ, ಶಿಕಾರವು ಮೇದಸ್ಸಿನಲ್ಲೂ, ವಾಕಾರವು ಅಸ್ಥಿಯಲ್ಲೂ, ಯಕಾರವು ಮಜ್ಜೆಯಲ್ಲೂ, ಈ ಷಡ್ವರ್ಣಗಳೂ ಒಟ್ಟಿಗೆ ಶುಕ್ಲದಲ್ಲೂ ವ್ಯಾಪಿಸಿಕೊಂಡಿರುವುವು. ಇದೇ ವೀರಶೈವನ ಸರ್ವಾಂಗಲಿಂಗಸಾಹಿತ್ಯವು. ಇನ್ನು ಲಿಂಗಾರ್ಪಣವಿಧಾನವನ್ನು ಹೇಳುತ್ತೇನೆ.— ಲಿಂಗಾರ್ಪಣವು ಕ್ರಿಯಾರ್ಪಣ ಜ್ಞಾನಾರ್ಪಣವೆಂದು ಎರಡು ತೆರನಾಗಿರುವುದು. ಕ್ರಿಯಾರ್ಪಣವೆಂದರೆ— ತನ್ನ ಉಪಭೋಗಕ್ಕಾಗಿ ಆದಾಗಿ ಬಂದ ದ್ರವ್ಯವನ್ನು ತ್ರಿವಿಧಲಿಂಗಗಳಿಗೆ ಸಮ

ರ್ಪಿಸಿ, ತತ್ಪ್ರಸಾದವನ್ನನುಭವಿಸುವುದು. ಆ ಕ್ರಿಯಾರ್ಪಣವು-ಸ್ಥೂಲದ್ರವ್ಯಾರ್ಪಣ, ಸೂಕ್ಷ್ಮದ್ರವ್ಯಾರ್ಪಣ, ಆನಂದದ್ರವ್ಯಾರ್ಪಣವೆಂದು ಮೂರು ವಿಧವಾಗಿರುವುದು. ರೂಪವೇ ಸ್ಥೂಲದ್ರವ್ಯ, ರುಚಿಯೇ ಸೂಕ್ಷ್ಮದ್ರವ್ಯ, ತೃಪ್ತಿಯೇ ಆನಂದದ್ರವ್ಯವಾಗಿರುವುವು. ಸ್ಥೂಲದ್ರವ್ಯವಾದ ರೂಪವನ್ನು ಇಷ್ಟಲಿಂಗಾರ್ಪಣ ಮಾಡುವವನೇ ವಿಶ್ವನು. ಆ ಲಿಂಗದ ಪ್ರಸಾದವು ಶುದ್ಧವು. ಸೂಕ್ಷ್ಮದ್ರವ್ಯವಾದ ರುಚಿಯನ್ನು ಪ್ರಾಣಲಿಂಗಕ್ಕರ್ಪಿಸುವವನೇ ತೈಜಸನು. ಆ ಲಿಂಗಪ್ರಸಾದವೇ ಸಿದ್ಧವು. ಆನಂದದ್ರವ್ಯವಾದ ತೃಪ್ತಿಯನ್ನು ಭಾವಲಿಂಗಕ್ಕರ್ಪಿಸುವವನೇ ಪ್ರಾಜ್ಞನು. ಆ ಲಿಂಗಪ್ರಸಾದವೇ ಪ್ರಸಿದ್ಧವು. ಹೀಗೆ ಜಾಗ್ರದಾದ್ಯವಸ್ಥಾತ್ರಯಗಳಲ್ಲಿ ಆತ್ಮನು ತ್ರಿವಿಧಲಿಂಗಾರ್ಪಿತವ ಮಾಡಿ ತತ್ಪ್ರಸಾದೋಪಭೋಗದಿಂದ ಸಂತುಷ್ಟನಾಗಿರುವುದೇ ಕ್ರಿಯಾರ್ಪಣವು. ಇನ್ನು ಜ್ಞಾನಾರ್ಪಣವೆಂದರೆ— ಸಕಲೇಂದ್ರಿಯಮುಖಗಳಿಗೂ ಬರುವ ಸರ್ವದ್ರವ್ಯಗಳನ್ನೂ ಷಡ್ವಿಧಾಂಗದಿಂದ ಷಡ್ವಿಧಲಿಂಗಗಳಿಗೆ ಸಮರ್ಪಿಸಿ ತತ್ಪ್ರಸಾದವನ್ನುಪಭೋಗಿಸುವುದು. ಅದು ಹೇಗೆಂದರೆ— ಗಂಧ ರಸ ರೂಪ ಸ್ಪರ್ಶ ಶಬ್ದ ಪರಿಣಾಮ ಎಂಬ ಷಡ್ವಿಷಯಗಳೇ ೬ ಪದಾರ್ಥಗಳು. ಹೇಗೆಂದರೆ— ಗಂಧವು ಚಂದನಾದಿಪರಿಮಳಪದಾರ್ಥಮಯವಾಗಿರುವುದು. ರಸವು ಮಧುರಾದಿಪದಾರ್ಥಮಯವಾಗಿರುವುದು, ರೂಪವು ನಾನಾವರ್ಣಪದಾರ್ಥಮಯವಾಗಿರುವುದು. ಸ್ಪರ್ಶವು ಮೃದುಕಠೋರಾದಿಪದಾರ್ಥಮಯವಾಗಿರುವುದು. ಶಬ್ದವು ನಾದಪದಾರ್ಥಮಯವಾಗಿರುವುದು. ಪರಿಣಾಮವು ಸುಖಪದಾರ್ಥಮಯವಾಗಿರುವುದು. ಇವುಗಳನ್ನು ಆತ್ಮನು ಷಡಂಗಗಳಿಂದ ಷಡ್ಲಿಂಗಗಳಿಗೆ ಸಮರ್ಪಿಸಿ, ಪ್ರಸಾದವನ್ನು ಸೇವಿಸುವ ರೀತಿಯು ಹೇಗೆಂದರೆ— ಸದ್ಭಕ್ತಿಯಿಂದ ಕೂಡಿದ ಭಕ್ತನು— ತನ್ನ ಭೂಮ್ಯಂಗದಿಂದ ಕ್ರಿಯಾಶಕ್ತಿಸಮೇತವಾದ ಆಚಾರಲಿಂಗಕ್ಕೆ ಚಿತ್ತಹಸ್ತದಿಂದ ನಾಸಿಕಾಮುಖೇನ ಚಂದನಾದಿಪದಾರ್ಥಗಳನ್ನರ್ಪಿಸಿ, ತದ್ಗಂಧಪ್ರಸಾದವನ್ನು ಸದಾ ಅನುಭವಿಸುವನು. ನಿಷ್ಠಾಭಕ್ತಿಯುಕ್ತನಾದ ಮಾಹೇಶ್ವರನು— ತನ್ನ ಜಲಾಂಗದಿಂದ ಜ್ಞಾನಶಕ್ತಿಸಮೇತವಾದ ಗುರುಲಿಂಗಕ್ಕೆ ಸುಬುದ್ಧಿಹಸ್ತದಿಂದ ಜಿಹ್ವಾಮುಖೇನ ಮಧುರಾದಿಷಡ್ರಸಪದಾರ್ಥಗಳ

ನ್ನು ಸಮರ್ಪಿಸಿ, ತದ್ರಸಪ್ರಸಾದವನ್ನು ಸದಾ ಉಪಭೋಗಿಸುವನು. ಅವಧಾನಭಕ್ತಿಯುಕ್ತನಾದ ಪ್ರಸಾದಿಯು– ತನ್ನ ಅಗ್ನ್ಯಂಗದಿಂದ ಇಚ್ಛಾಶಕ್ತಿಸಮೇತವಾದ ಶಿವಲಿಂಗಕ್ಕೆ ನಿರಹಂಕಾರಹಸ್ತದಿಂದ ನೇತ್ರಮುಖೇನ ಶ್ವೇತಾದಿವರ್ಣಪದಾರ್ಥಗಳನ್ನು ಸಮರ್ಪಿಸಿ, ತದ್ರೂಪಪ್ರಸಾದವನ್ನು ಸದಾ ಸೇವಿಸುವನು. ಅನುಭವಭಕ್ತಿಯುಕ್ತನಾದ ಪ್ರಾಣಲಿಂಗಿಯು–ತನ್ನ ವಾಯ್ವಂಗದಿಂದ ಆದಿಶಕ್ತಿಸಮೇತವಾದ ಜಂಗಮಲಿಂಗಕ್ಕೆ ಸುಮನೋಹಸ್ತದಿಂದ ತ್ವಙ್ಮುಖೇನ ಮೃದುಕಠೋರಾದಿಪದಾರ್ಥಗಳನ್ನು ಸಮರ್ಪಿಸಿ, ತತ್ಸ್ಪರ್ಶಪ್ರಸಾದವನ್ನುಪಭೋಗಿಸುವನು. ಆನಂದಭಕ್ತಿಯುಕ್ತನಾದ ಶರಣನು– ತನ್ನ ಆಕಾಶಾಂಗದಿಂದ ಪರಾಶಕ್ತಿಸಮೇತವಾದ ಪ್ರಸಾದಲಿಂಗಕ್ಕೆ ಸುಜ್ಞಾನಹಸ್ತದಿಂದ ಶ್ರೋತ್ರಮುಖೇನ ಶಬ್ದದ್ರವ್ಯವನ್ನರ್ಪಿಸಿ, ತನ್ನಾದಪ್ರಸಾದವನ್ನುಪಭೋಗಿಸುವನು. ಸಮರಸಭಕ್ತಿಯುಕ್ತನಾದ ಐಕ್ಯನು– ತನ್ನ ಆತ್ಮಾಂಗದಿಂದ ಚಿಚ್ಛಕ್ತಿಸಮೇತವಾದ ಮಹಾಲಿಂಗಕ್ಕೆ ಸದ್ಭಾವಹಸ್ತದಿಂದ ಹೃದಯಮುಖೇನ ಪರಿಣಾಮಪದಾರ್ಥವನ್ನರ್ಪಿಸಿ, ತತ್ತೃಪ್ತಿಪ್ರಸಾದವನ್ನುಪಭೋಗಿಸುವನು. ಹೀಗೆ ಪ್ರತಿಯೊಂದು ಸ್ಥಲದಲ್ಲೂ–ಅಂಗ, ಲಿಂಗ, ಭಕ್ತಿ, ಶಕ್ತಿ, ಮುಖ, ಹಸ್ತ, ಅರ್ಪಣ, ಪದಾರ್ಥ, ಎಂಬ ಎಂಟು ತೆರದ ಸ್ಥಲಗಳಿರುವುವು. ಇದುವರೆಗೆ ಹೇಳಿದ ವಿಷಯಗಳನ್ನೆಲ್ಲ ಪರಿಶೀಲಿಸಿದರೆ, ಒಂದು ಸತ್ತೇ ಅಂಗ ಲಿಂಗವೆಂಬೆರಡು ಭೇದಗಳನ್ನೈದಿ, ಚಿತ್ತೇ ಭಕ್ತಿ ಶಕ್ತಿಯೆಂಬೆರಡು ಭೇದವನ್ನು ಹೊಂದಿ, ಆನಂದವೇ ಅರ್ಪಣ ಪ್ರಸಾದವೆಂಬೆರಡು ತೆರನಾಗಿ, ಈ ಸಚ್ಚಿದಾನಂದಲಕ್ಷಣಪರತತ್ತ್ವವೇ ಷಟ್ಸ್ಥಲವೆಂಬ ಹೆಸರನ್ನು ಪಡೆದು, ಉಪಾಸ್ಯೋಪಾಸಕಭೇದದಿಂದ ಲಿಂಗಾಂಗಸ್ಥಲಗಳೆಂದು ವಿಭಜನಗೊಂಡಿತೆಂಬುದಾಗಿ ವ್ಯಕ್ತವಾಗುವುದು. ಈ ಸ್ಥಲಗಳು ನಿವೃತ್ತಿಮಾರ್ಗದಿಂದ ಐಕ್ಯವಾಗುವುದು ಹೇಗೆಂದರೆ– ಪರಶಿವನೇ ಲಿಂಗವು, ಆತ್ಮನೇ ಅಂಗವು, ಇವೆರಡಕ್ಕೂ ವಿಯೋಗವಿಲ್ಲದಿರುವುದೇ ಸಂಯೋಗವು. ಆ ಸಂಯೋಗವೇ ಸದ್ಭಕ್ತಿಯೆನಿಸಿಕೊಳ್ಳುವುದು. ಅದರಿಂದಲೇ ಭಕ್ತಸ್ಥಲವಾಯಿತು. ಆ ಭಕ್ತನು ಆಚಾರಲಿಂಗಸಂಯೋಗದಿಂದ ಸದ್ಭಕ್ತಿಯಿಂದಿರುವುದೇ ನಿಷ್ಠಾಭಕ್ತಿಯೆನಿಸಿತು. ಆ ಭಕ್ತಿಮೇಳನದಿಂದ ಆತ್ಮನಿಗೆ ಮಾಹೇಶ್ವರಸ್ಥ

ಲವು ಲಭಿಸಿತು. ಆ ಮಾಹೇಶ್ವರನು ಗುರುಲಿಂಗಸಂಗದಿಂದ ಅವಧಾನಭಕ್ತಿವೆರೆದಿರಲು, ಅದರಿಂದ ಪ್ರಸಾದಿಸ್ಥಲವು ದೊರೆಕೊಂಡಿತು. ಆ ಪ್ರಸಾದಿಯು ಶಿವಲಿಂಗಸಂಗದಿಂದ ಅನುಭವಭಕ್ತಿವೆರೆಯಲು, ಪ್ರಾಣಲಿಂಗಿಸ್ಥಲವು ಅಳವಟ್ಟಿತು. ಆ ಪ್ರಾಣಲಿಂಗಿಯು ಜಂಗಮಲಿಂಗಸಂಗದಿಂದ ಆನಂದಭಕ್ತಿಯೊಡಗೂಡಲು, ಶರಣಸ್ಥಲವು ಪ್ರಾಪ್ತವಾಯಿತು. ಆ ಶರಣನು ಪ್ರಸಾದಲಿಂಗಸಂಗದಿಂದ ಸಮರಸಭಕ್ತಿಯುಕ್ತನಾಗಲು, ಐಕ್ಯಸ್ಥಲವು ಸಿದ್ಧಿಸಿತು. ಆ ಐಕ್ಯನು ಮಹಾಲಿಂಗಸಂಯೋಗದಿಂದೈಕ್ಯನಾಗಲು, ಅದಕ್ಕಿಂತಲೂ ಪರವಿಲ್ಲವಾಗಿ ನಿಶ್ಶಬ್ದವಾಯಿತು. ಚಂದ್ರನಿಗೂ ಚಂದ್ರಿಕೆಗೂ, ಆಕಾಶಕ್ಕೂ ವಾಯುವಿಗೂ, ಹೂವಿಗೂ ಪರಿಮಳಕ್ಕೂ, ಆಲಿಕಲ್ಲಿಗೂ ನೀರಿಗೂ, ವಾಕ್ಕಿಗೂ ಅರ್ಥಕ್ಕೂ, ದೀಪಕ್ಕೂ ಬೆಳಕಿಗೂ, ರತ್ನಕ್ಕೂ ಕಾಂತಿಗೂ, ರಸಕ್ಕೂ ರುಚಿಗೂ, ಭೇದ ಮತ್ತು ಸಂಯೋಗಗಳಿರುವಂತೆಯೇ ಲಿಂಗಾಂಗಗಳ ಭೇದಸಂಯೋಗಗಳು ತನ್ನಲ್ಲಿರುವುವು. ಈ ಭೇದಾಭೇದಗಳನ್ನಳಿದಿರುವುದೇ ಐಕ್ಯವು. ಲಿಂಗಾಂಗಸಂಗವೇ ಸಂಯೋಗವೆನಿಸುವುದು. ಆ ಸಂಯೋಗವೇ ನಿವೃತ್ತಿಯು. ನಿವೃತ್ತಿಯೆಂದರೆ ಅದ್ವೈತವು. ಅದ್ವೈತವೆಂದರೆ ಐಕ್ಯವು. ಅಂತಹ ಐಕ್ಯವೇ ಸಾಯುಜ್ಯವು. ಸಾಯುಜ್ಯವೆಂದರೆ ವಿಶ್ರಾಂತಿಯೆಂದರ್ಥ. ಆ ವಿಶ್ರಾಂತಿಯೇ ಪರಮಪದವಿಯು. ಅದಕ್ಕಿಂತ ಪರವಾದ ಮುಕ್ತಿಯಿಲ್ಲವೆಂಬುದೇ ಸಿದ್ಧಾಂತವು. ಇದೇ ಷಟ್ಸ್ಥಲಮಾರ್ಗಾಚರಣೆಯೆಂದು ಚೆನ್ನಬಸವೇಶನು ನಿರೂಪಿಸಿದನೆಂಬಲ್ಲಿಗೆ ಎಂಟನೇ ಅಧ್ಯಾಯವು ಸಂಪೂರ್ಣವು.

---

## ೯ನೇ ಅಧ್ಯಾಯವು.

### ಕಾಲಜ್ಞಾನವು.

ಚೆನ್ನಬಸವೇಶನು ನಿರೂಪಿಸಿದ ಷಟ್ಸ್ಥಲತತ್ತ್ವವನ್ನೆಲ್ಲ ಸಿದ್ಧರಾಮೇಶನು ಕೇಳಿ, "ಗುರುವೆ! ತಮ್ಮನುಗ್ರಹದಿಂದ ಷಟ್ಸ್ಥಲತತ್ತ್ವವನ್ನು ತಿಳಿದು ಕೃತಕೃತ್ಯನಾದೆನು" ಎಂದು ಕೊಂಡಾಡುತ್ತಿರುವಲ್ಲಿ, ಅಲ್ಲಮಪ್ರಭುವು— ಎಲೆ ಸಿದ್ಧರಾಮನೆ, ನೀನಿಲ್ಲಿಗೆ ಬಂದುದು ಸಫಲವಾಯಿತು. ನಾವಿನ್ನು ಹೊರಡುತ್ತೇವೆ ಎನ್ನಲು, ಪ್ರಭುವೆ! ತ

ನಿಮ್ಮಿಂದ ನಾನು ಇಂತಪ್ಪ ಗುರುವನ್ನು ಪಡೆದಹಾಗಾಯಿತು, ಎಂದು ಕೃತ
ಜ್ಞತೆಯಿಂದ ಪ್ರಭುವಿನ ಪಾದಕ್ಕೆರಗಿ ಕೊಂಡಾಡಿದನು. ಆಗ ಚೆನ್ನಬಸ
ವೇಶನು ಪ್ರಭುವನ್ನೂ ಸಿದ್ಧರಾಮನನ್ನೂ ಅಲ್ಲಿದ್ದ ಅಖಿಲಗಣಸಮೂ
ಹವನ್ನೂ ತನ್ನ ಮನೆಗೆ ಕರೆದುಕೊಂಡು ಹೋಗಿ, ಎಲ್ಲರಿಗೂ ಮೃಷ್ಟಾ
ನ್ನಭೋಜನದಿಂದ ತೃಪ್ತಿಪಡಿಸಿದನು. ಆಗ ಅಲ್ಲಮನು ಬಸವಾದಿಪ್ರಮಥರ
ನ್ನೆಲ್ಲ ಕುರಿತು- ನೀವುಗಳೆಲ್ಲರೂ ಚೆನ್ನಬಸವೇಶನು ಅನುಗ್ರಹಿಸಿದ ಷ
ಟ್ಸ್ಥಲಮಾರ್ಗವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ಆಚರಿಸುತ್ತಿ
ದ್ದರೆ, ನಾವು ಮತ್ತೆ ಬಂದು ನಿಮಗೆ ಮುಕ್ತಿಯನ್ನು ಕೊಡುವೆವು. ಎಂ
ದು ಹೇಳಿ ನಂಬುಗೆಗೊಟ್ಟು, ಬಸವೇಶ ಚೆನ್ನಬಸವೇಶ ಸಿದ್ಧರಾಮೇಶ
ಮೊದಲಾದವರನ್ನೆಲ್ಲ ಅಲ್ಲೇ ನಿಲ್ಲಿಸಿ, ತಾನು ಹೊರಟನು. ಬಳಿಕ ಸಿದ್ಧ
ರಾಮೇಶನು ಚೆನ್ನಬಸವೇಶನಿಗೆ ನಮಸ್ಕರಿಸಿ, ನನಗೆ ಬುದ್ಧಿವಾದವನ್ನ
ಪ್ಪಣೆ ಕೊಡಿಸಬೇಕೆಂದು ಬೇಡಲು, “ನೀನು ಸೊನ್ನಲಾಪುರದಲ್ಲಿ ಸ
ಮಾಧಿಸ್ಥನಾಗಿರು” ಎಂದು ಅಪ್ಪಣೆ ಮಾಡಿದನು. ಅವನು ಮತ್ತೆ ನಮ
ಸ್ಕರಿಸಿ, ಮುಂದೆ ನಡೆಯುವ ವಿಶೇಷ ಸಂಗತಿಗಳ ಕುರುಹನ್ನು ಅಪ್ಪಣೆ
ಕೊಡಿಸಬೇಕೆಂದು ಬೇಡಲು, ತ್ರಿಕಾಲಜ್ಞನಾದ ಚೆನ್ನಬಸವೇಶನು
ಆ ಭವಿಷ್ಯತ್ತನ್ನು ನಿರೂಪಿಸಿದನೆಂತೆಂದರೆ- ಎಲೆ ಸಿದ್ಧರಾಮನೆ, ಈ
ಪ್ರಭುವು ಇಲ್ಲಿಂದ ತೆರಳಿದ ಬಳಿಕ ಅಖಿಲದೇಶವನ್ನೂ ಸಂಚರಿಸಿಕೊಂ
ಡು, ಶಿವಭಕ್ತರಿಷ್ಟಾರ್ಥವನ್ನು ಕೊಡುತ್ತ, ತನ್ನ ಪಾದಸ್ಪರ್ಶದಿಂದ
ಗಿರಿಗುಹಾನದೀವನಾದಿಗಳನ್ನೆಲ್ಲ ಪವಿತ್ರವನ್ನಾಗಿ ಮಾಡುತ್ತ, ದ್ರಾವಿಡ
ದೇಶಕ್ಕೆ ಬಂದು, ಕಂಚಿ ಕಾಳಹಸ್ತಿ ಅರುಣಾಚಲ ಮೊದಲಾದುವುಗಳನ್ನೆ
ಲ್ಲ ಸಂಚರಿಸಿ, ಅಲ್ಲಿಂದ ರಾಮೇಶ್ವರಕ್ಕೂ ಗೋಕರ್ಣಸೌರಾಷ್ಟ್ರಗಳಿ
ಗೂ ಕಾಶಿಕೇದಾರಗಳಿಗೂ ಹೋಗಿ, ಬಳಿಕ ಹಿಮವತ್ಪರ್ವತವನ್ನು ದಾಟಿ,
ಸವಾಲಕ್ಷಪರ್ವತಕ್ಕೆ ಬರುವನು. ಅಲ್ಲಿದ್ದ ಮುನಿಗಳಿಗೆಲ್ಲ ತತ್ತ್ವಾರ್ಥವ
ನ್ನು ಬೋಧಿಸಿ ಮುಕ್ತರಂ ಮಾಡಿ, ಅಲ್ಲಿನ ಗುಹೆಯೊಳಗೆ ರಾಜಯೋಗ
ದಲ್ಲಿ ೧೨ ವರ್ಷಗಳಿದ್ದು, ಅದುವರೆಗೆ ಶೂನ್ಯಪೀಠದ ಆಡಳಿತವ
ನ್ನು ಬಸವೇಶನು ಸಾಗಿಸುತ್ತಿರುವುದನ್ನು ಅರಿತು, ಬಸವೇಶಾದಿಗಳ
ನ್ನುದ್ಧರಿಸುವುದಕ್ಕಾಗಿ ಇಲ್ಲಿಗೆ ಬರುವನು. ಅವನ ಬರುವಿಕೆಯನ್ನು

ಇವರೆಲ್ಲರೂ ತಿಳಿದು ಇದಿರ್ಗೊಳ್ಳಲು, ಪ್ರಭುವು ಬಂದು ಶೂನ್ಯಸಿಂಹಾಸನವನ್ನಾರೋಹಿಸುವನು. ಅದನ್ನು ಕಂಡು ಇಲ್ಲಿದ್ದ ಚರಮೂರ್ತಿಗಳೆಲ್ಲ ಕೋಪಿಸಿಕೊಂಡು ಹೊರಟುಹೋಗುವರು. ಇದಕ್ಕೇನು ಮಾಡಬೇಕೆಂದು ಬಸವೇಶನು ಭಯದಿಂದ ನಡುಗಿ ಚಿಂತಿಸುತ್ತಿರಲು, ಪ್ರಭುವು– ಅವರೆಲ್ಲರಿಗೂ ಮಾಡಿದ ಆಹಾರವನ್ನೆಲ್ಲ ತರಿಸಿ ನಮಗೆ ನೀಡಿಸು, ಎಲ್ಲವನ್ನೂ ನಾವು ಆರೋಗಿಸುವೆವು, ಎಂದು ನುಡಿಯುವನು. ಅವನ್ನು ಕೇಳಿದ ಬಸವೇಶನು ಅತ್ಯಂತ ಭಕ್ತಿಯಿಂದ ಲಕ್ಷದ ತೊಂಭತ್ತಾರು ಸಾವಿರದ ಜಂಗಮರಿಗಾಗಿ ಮಾಡಿಸಿದ್ದ ಭಕ್ಷ್ಯಭೋಜ್ಯಾದಿಗಳನ್ನೆಲ್ಲ ತರಿಸಿ ನೀಡಿಸುತ್ತಿರಲು, ಎಲ್ಲವನ್ನು ಪ್ರಭುವು ಆಕಾಶವೇ ಬಾಯ್ದೆರೆದಂತೆ ಸಲಿಸುತ್ತಿರುವನು. ಹಿಂದೆ ಪಾರ್ವತಿಯು ಶಿವಗಣಕ್ಕೆಲ್ಲ ಔತಣವನ್ನು ಮಾಡಿಸಿದಾಗ, ಅಂಗುಷ್ಠಗಣಪತಿಯೊಬ್ಬನು ಮುಂದಾಗಿ ಬಂದು ಎಲ್ಲವನ್ನೂ ಭುಂಜಿಸಿ ಬಿಡಲು, ಸಕಲ ಶಿವಗಣರೂ ಅವನೊಬ್ಬನ ತೃಪ್ತಿಯಿಂದಲೇ ತಾವೂ ಪರಿತೃಪ್ತರಾಗಿದ್ದಂತೆ, ಪರಶಿವನ ಪ್ರಾಣಾವತಾರನಾದ ಈ ಪ್ರಭುವೊಬ್ಬನು ಹಾಗೆ ಪರಿತೃಪ್ತಿಪಟ್ಟುದರಿಂದ ಮುಳಿಸುಹೋಗಿದ್ದ ಜಂಗಮರೆಲ್ಲರೂ ತೃಪ್ತರಾಗುವರು. ಹಿಂದೆ ದೂರ್ವಾಸನು ೧೦ ಸಾವಿರ ಋಷಿಗಳನ್ನು ಕರೆದುಕೊಂಡು ಧರ್ಮರಾಯನಬಳಿಗೆ ಬಂದು ಆಹಾರವನ್ನು ಕೇಳುವಲ್ಲಿ, ಕೃಷ್ಣನಿತ್ತಿದ್ದ ಅಕ್ಷಯಪಾತ್ರೆಯನ್ನು ತೊಳೆದ ನೀರನ್ನು ಕುಡಿಸಲು, ಅಷ್ಟು ಮಂದಿಗಳಿಗೂ ಮೃಷ್ಟಾನ್ನಭೋಜನದಿಂದಾಗುವ ಪರಿತೃಪ್ತಿಯುಂಟಾಯಿತೆಂದು ಪ್ರಸಿದ್ಧವಾಗಿರುವಲ್ಲಿ, ಇಂಥ ಪ್ರಭುತೃಪ್ತಿಯಿಂದ ಶಿವಗಣತೃಪ್ತಿಯಾಗುವುದೇನಾಶ್ಚರ್ಯ? ಬಳಿಕ, ಹಾಗೆ ತೃಪ್ತಿಪಟ್ಟ ಜಂಗಮರನ್ನೆಲ್ಲ ಬಸವೇಶನು ಕರೆಸಿ, ಬೇಡಿದುದನ್ನೆಲ್ಲ ಅವರಿಗೆ ಕೊಟ್ಟು, ಸಕಲ ಗಣರೊಡನೆ ಪ್ರಭುವಿಗೆ ನಮಸ್ಕರಿಸಿ, ನಮಗೆ ಮುಂದೆ ಗತಿಯೇನೆಂದು ಪ್ರಾರ್ಥಿಸುವರು. ಆಗ ಪ್ರಭುವು ಅವರೆಲ್ಲರ ಐಕ್ಯಸ್ಥಲವರ್ತನಕ್ರಮವನ್ನು ಪರೀಕ್ಷಿಸಿ ತಿಳಿದು, ಮೆಚ್ಚಿ, ನಿಮಗೆ ಐಕ್ಯಪದವಿಯು ಅಳವಟ್ಟಿತೆಂದು ಅನುಗ್ರಹಿಸಿ, ಅವರು ಬಯಲಾಗುವ ರೀತಿಯನ್ನು ಅಪ್ಪಣೆ ಕೊಡಿಸಿ, ನಮ್ಮನ್ನು ತನ್ನೊಡನೆ ಕರೆದುಕೊಂಡು ಶ್ರೀಶೈಲಕ್ಕೆ ದಯಮಾಡಿಸುವನು. ಆ ಪರ್ವತದಲ್ಲಿ ಗೋರಕ್ಷ

ಮೊದಲಾದ ಯೋಗಿಗಳಿಗೆ ಇಷ್ಟಾರ್ಥವನ್ನು ಕೊಟ್ಟು, ಮಹಾದೇವಿಯಕ್ಕನಿಗೆ ನಿರ್ವಾಣಪದವಿಯ ಮಾರ್ಗವನ್ನರುಹಲು, ಆಕೆಯು ಕದಳಿಯ ವನವನ್ನು ಹೊಕ್ಕು ಲಯವಾಗುವಳು. ಪ್ರಭುವೂ ಅಲ್ಲೇ ಕದಳಿಯ ವನವನ್ನು ಪ್ರವೇಶಿಸಿ ಐಕ್ಯನಾಗುವನು. ಆ ಸುದ್ದಿಯನ್ನು ಬಸವೇಶನು ಕೇಳಿ, ಸಕಲ ಗಣಸಮೂಹಕ್ಕೂ ನಮಸ್ಕರಿಸಿ, ಶಾಲೀವಾಹನ ಶಕದ ೭೦೭ ನೇ ರಕ್ತಾಕ್ಷಿಸಂವತ್ಸರದ ಫಾಲ್ಗುಣಶುದ್ಧೈಕಾದಶಿ ಮಂಗಳವಾರ ಹಗಲು ೨೫ ಗಳಿಗೆಯಲ್ಲಿ ಸಂಗಮೇಶನಲ್ಲಿ ಐಕ್ಯಗೊಳ್ಳುವನು. ಇವರಿಬ್ಬರ ಐಕ್ಯದ ಸುದ್ದಿಯನ್ನೂ ಹಡಪದಪ್ಪಣ್ಣನು ಬಸವೇಶನ ಪತ್ನಿಯಾದ ನೀಲಾಂಬಿಕೆಗೆ ಬಿನ್ನೈಸಲು, ಅವರೀರ್ವರೂ ತಮ್ಮಿಷ್ಟಲಿಂಗಗಳಲ್ಲೈಕ್ಯರಾಗುವರು. ಅನಂತರ ಇನ್ನು ಕೆಲಶರಣರೂ ಐಕ್ಯರಾಗುವರು. ಆ ಬಳಿಕ ಬಿಜ್ಜಳನು ಬಸವೇಶನ ಪಟ್ಟವನ್ನು ನಮಗೆ ಕಟ್ಟುವನು. ಹಳ್ಳಯ್ಯ ಮಧುವಯ್ಯ ಎಂಬಿಬ್ಬರು ಬೇರೆ ಬೇರೆ ಕಾಲದವರು ಬಾಂಧವ್ಯವನ್ನು ಬೆಳಸಿದರೆಂಬ ಕಾರಣದಿಂದ ಅವರನ್ನು ಆನೆಯ ಕಾಲಿಗೆ ಕಟ್ಟಿಸಿ ದೊರೆಯು ಎಳೆಯಿಸಲು, ಆ ಶಿವದ್ರೋಹಿಯನ್ನು ಶಿಕ್ಷಿಸಬೇಕೆಂದು ಸಂಕಲ್ಪಿಸಿದ್ದ ಜಗದೇವಬೊಮ್ಮಯ್ಯಗಳು ನಮ್ಮಪ್ಪಣೆಯನ್ನು ಪಡೆದು ದೊರೆಯ ಬಳಿಯಲ್ಲಿ ದೀವಟಿಗೆಯ ಉಳಿಗದಲ್ಲಿರುವರು. ಇತ್ತ ನಾವು ಶಿವಶರಣರನ್ನೆಲ್ಲ ಕರಿಸಿ, "ನಾವಿನ್ನು ಈ ಶಿವದ್ರೋಹಿಯ ಪಟ್ಟಣದಲ್ಲಿರಬಾರದು, ಉಳುವೆಯ ಮಾಮನೆಗೆ ಹೋಗಬೇಕು" ಎಂದು ಹೇಳಲು, ಕೆಲವರು ಅದಕ್ಕೊಪ್ಪಿ ಬರುವರು. ಮತ್ತೆ ಕೆಲರು ಬರದೆಹೋಗುವರು. ಒಪ್ಪಿದವರನ್ನೆಲ್ಲ ಸಂಗಮೇಶನ ಪರ್ವಕ್ಕೆಂದು ನಾವು ಉಳುವೆಗೆ ಕಳಿಸಿ ಕೊಟ್ಟು, ಆನೆ ಕುದುರೆ ಕಾಲಾಳು ಮೊದಲಾದ ಕಾವಲುಗಾರರನ್ನು ನಮ್ಮ ಅರಮನೆಗಿಟ್ಟುಕೊಂಡಿರುವೆವು. ಅತ್ತ ಜಗದೇವಬೊಮ್ಮಣ್ಣಗಳು ದೀವಟಿಗೆಯನ್ನು ಹಿಡಿದುಕೊಂಡು ಸಮಯವನ್ನು ನಿರೀಕ್ಷಿಸುತ್ತಿದ್ದು, ದೊರೆಯು ಸಭೆಯನ್ನು ವಿಸರ್ಜಿಸಿ, ಪಂಜುಗಳ ಬೆಳಕಿನಿಂದ ಅರಮನೆಯನ್ನು ಹುಗುತ್ತಿರುವಲ್ಲಿ, ಇವರುಗಳು ಸುರಗಿಗಳಿಂದ ದೊರೆಯ ಹೊಟ್ಟೆಯನ್ನಿರಿದು ಕೊಂದು ಕೆಡಹಿ, ಶಿವದ್ರೋಹಿಯನ್ನು ಕೊಂದೆವೆಂದು ಆರ್ಭಟಿಸುತ್ತ, ನಮ್ಮರಮನೆಗೆ ಬಂದು, ತಾವು ಮಾಡಿದ ಕೆಲಸವನ್ನು

ನಮಗೆ ತಿಳಿಸಿಬಿಟ್ಟು, ಸಂತೋಷದಿಂದ ಕೈಲಾಸಕ್ಕೆ ತೆರಳುವರು. ನಾವು ಹಸ್ತ್ಯಶ್ವಾದಿಗಳನ್ನು ಕೂಡಿಕೊಂಡು ಕಲ್ಯಾಣಪಟ್ಟಣವನ್ನು ಬಿಟ್ಟು ಹೋಗುತ್ತಿರಲು, ಹಿಂದಿನಿಂದ ಅಳಿಯ ಬಿಜ್ಜಳನು ದಂಡನ್ನು ಕಟ್ಟಿಕೊಂಡು ಬಂದು, ನಮ್ಮನ್ನು ಬಳಸಿ ಅಡ್ಡಗಟ್ಟುವನು. ಮಡಿವಳಯ್ಯಗಳು, ಕೊಗಿನ ಮಾರಯ್ಯನವರು ಮೊದಲಾದ ನಮ್ಮ ಶಿವಶರಣರಿಗೂ ಅವನ ಸೇನೆಗೂ ಯುದ್ಧವಾಗುವುದು. ಪ್ರತಿಸೇನೆಯು ಅಳಿದು ಸೋಲುವುದು. ಅಳಿಯ ಬಿಜ್ಜಳನನ್ನು ಸೆರೆಹಿಡಿದು ತರುವರು. ಶಿವಶರಣರು ಪರವಧೆಯ ಮಾಡಿದುದನ್ನು ನಾಗಾಂಬಿಕೆಯು ಕೇಳಿ, ಮನದಲ್ಲಿ ಮರುಗಿ, ಅಳಿದಿರುವ ಸೇನೆಗೆ ಪ್ರಾಣದಾನ ಮಾಡಬೇಕೆಂತಲೂ, ಅಳಿಯ ಬಿಜ್ಜಳನನ್ನು ಬಂಧನದಿಂದ ಬಿಟ್ಟುಬಿಡಬೇಕೆಂತಲೂ ನನಗೆ ಆಜ್ಞಾಪಿಸುವಳಲ್ಲದೆ, ಅತ್ತ ಕೈಲಾಸದಲ್ಲಿ ಜಗದೇವಬೊಮ್ಮಯ್ಯಗಳನ್ನು ಶಿವನು ಕಂಡು, ನೀವು ಬಿಜ್ಜಳರಾಜನನ್ನು ವಧಿಸಿಬಂಧಕಾರಣದಿಂದ ಮರಳಿ ಭೂಲೋಕಕ್ಕೆ ಹೋಗಿ, ಶೂಲವನ್ನೇರಿಬರಬೇಕೆಂದು ಕಳುಹಿಸಿಕೊಡುವನೆಂತಲೂ, ಅವರು ಅದೇಮೇರೆ ಓರುಗಲ್ಲೆಂಬ ಪಟ್ಟಣದಲ್ಲಿ ವೀರಗುಂಡಬ್ರಹ್ಮರೆಂಬ ಹೆಸರಿನಿಂದ ಹುಟ್ಟುವರೆಂತಲೂ, ಶಿವನು ಕಳ್ಳನ ವೇಷದಿಂದ ಬಂದು, ಅಲ್ಲಿನ ಗಣಪತಿರಾಯನರಮನೆಯಲ್ಲಿ ಕದ್ದು, ವೀರಗುಂಡಬ್ರಹ್ಮರ ಮನೆಹೊಗಲು, ಅವನನ್ನು ರಾಜಭಟರಿಗೆ ಕೊಡದೆ ರಕ್ಷಿಸುವುದಕ್ಕಾಗಿ ವೀರಗುಂಡಬ್ರಹ್ಮರು ತಾವೇ ಶೂಲವನ್ನು ಹತ್ತಿ ಮುಕ್ತರಾಗುವರೆಂತಲೂ, ಅದು ಕಾರಣ, ಶಿವಭಕ್ತರು ಇಂಥ ಹಿಂಸಾಕಾರ್ಯವನ್ನು ಮನಸ್ಸಿನಲ್ಲೂ ಯೋಚಿಸಬಾರದೆಂತಲೂ, ಬೋಧಿಸುವಳು. ಆಗ ನಾನು ಅಳಿಯ ಬಿಜ್ಜಳನನ್ನು ಬಂಧನದಿಂದ ಬಿಟ್ಟು, ಅವನದಂಡಿಗೆಲ್ಲ ಪ್ರಾಣವನ್ನಿತ್ತು ಹೋಗೆಂದು ಹೇಳುವೆನು. ಅವನು ಮುಂದೆ ನನಗೆ ಗತಿಯೇನೆಂದು ಕೇಳುವನು. ನೀನು ಬಿಜ್ಜಳನಂತೆ ಶಿವದ್ರೋಹಿಯಾಗದೆ ಸದಾಚಾರದಲ್ಲಿರು ಎಂದು ಬೋಧಿಸಿ, ಅವನಿಗೆ ಬಿಜ್ಜಳನ ಪಟ್ಟವನ್ನು ಕಟ್ಟಿಸಿ, "ಎಲೆ ದೊರೆಯೆ, ಈ ಪಟ್ಟಣವು ನಿನಗೆ ಇನ್ನು ೬೦ ವರ್ಷಗಳವರೆಗೂ ನಡೆವುದು. ಅಲ್ಲಿಂದಾಚೆಗೆ ಶಿವವರದಿಂದ ಪೀತಾಂಬರರಾಕ್ಷಸನು ತುರುಕರ ಜಾತಿಯಲ್ಲಿ ಹುಟ್ಟಿ ಬಂದು, ಅವನೂ ಅವನ ಸಜಾತಿಯವರೂ ಈ ದೇಶವನ್ನು ೩೩೦

ವರ್ಷಗಳವರೆಗೆ ಆಳುವರು. ಅದರಿಂದ ಈ ದೇಶವೆಲ್ಲ ತುರುಕಾಣ್ಯವೆನಿಸಿಕೊಳ್ಳುವುದು. ಅವರು ಈ ಕಲ್ಯಾಣಪಟ್ಟಣವನ್ನು ಹಾಳ್ಮಾಡಿ ಕಲುಬುರ್ಗಿಯನ್ನು ಕಟ್ಟಿಸುವರು, ನಾವಿನ್ನು ಇರಬಾರದು, ಅದುಕಾರಣ ಹೋಗುತ್ತೇವೆ" ಎಂದು ಹೇಳಿ ಅವನನ್ನು ಕಳಿಸಿಕೊಡುವೆವು. ಅಳಿಯ ಬಿಜ್ಜಳನು ರಾಜ್ಯವನ್ನು ಸುಖದಿಂದ ಆಳಿಕೊಂಡಿರುವನು. ನಾವು ಉಳುವೆಗೆ ಹೊರಡಲು ಸಿದ್ಧರಾದಾಗ, ಮಡಿವಳಿಮಾಚಯ್ಯನು ಹಿಪ್ಪರಿಗೆಪಟ್ಟಣಕ್ಕೆ ಹೋಗಿ, ತಮ್ಮ ಗುರುವಾದ ಲಿಂಗಣ್ಣಾರ್ಯರಪಾದದಲ್ಲಿ ಐಕ್ಯನಾಗುವನು. ನಾವು ಶಿವಶರಣರೊಡನೆ ಉಳುವೆಗೆ ಬಂದು ದೊಡ್ಡಪರ್ವವನ್ನು ಮಾಡಿಸುವೆವು. ಶರಣರೆಲ್ಲರೂ ತಮ್ಮಿಷ್ಟಬಂದಂತೆ ಬಯಲಾಗುವರು. ನಮ್ಮ ಸಮಯಾಚಾರದ ೧೨ ಸಾವಿರ ಜಂಗಮರನ್ನೂ, ಬಸವಣ್ಣನ ಸಮಯಾಚಾರದ ೩೬ ಸಾವಿರ ಮಾಹೇಶ್ವರರನ್ನೂ ಸಹ ಒಟ್ಟಿಗೆ ಹೊನ್ನರಳಿಯ ಮರಕ್ಕೆ ಕಟ್ಟಿದ ತೊಟ್ಟಿಲಿನಲ್ಲಿ ಕುಳ್ಳರಿಸಿ ತೂಗುವೆವು. ಅವರೆಲ್ಲರೂ ಹಾಗೆಯೇ ನಿರವಯವವನ್ನೈದುವರು. ನಾವು ಉಳಿದಿದ್ದ ಚರಮೂರ್ತಿಗಳಿಗೆಲ್ಲ ನಮಸ್ಕರಿಸಿ, "ತಾವುಗಳು ನಿರಾಕಾರವನ್ನು ಧರಿಸುವಿರೋ ? ಅಥವಾ ಸಾಕಾರವಾಗಿಯೇ ಇರುವಿರೋ ?" ಎಂದು ಕೇಳುವೆವು. ಅವರಾದರೋ— "ನೀವು ಮತ್ತೆ ಇಲ್ಲಿಗೆ ಬರುವವರೆಗೂ ನಾವು ನಮ್ಮ ಗುರುವಿತ್ತ ವ್ರತವನ್ನು ಸೇವಿಸುತ್ತ ಕಲ್ಯಾಣಪಟ್ಟಣದಲ್ಲೇ ಗೂಢವಾಗಿರುವೆವು" ಎಂದು ಹೇಳಲು, ರುದ್ರಮುನಿ ಮೊದಲಾದ ಚರಮೂರ್ತಿಗಳಿಗೆ ನಾವು ನಮಸ್ಕರಿಸಿ ಕಳುಹಿಕೊಟ್ಟು, ಬಳಿಕ ನಾವು ಬರುವವರೆಗೂ ನೀನು ಸೊನ್ನಲಾಪುರಕ್ಕೆ ಹೋಗಿ ಶಿವಯೋಗಸಮಾಧಿಯಲ್ಲಿರೆಂದು ನಿನಗೆ ಹೇಳಿ ಕಳುಹಿಕೊಟ್ಟು, ಮರೆತುಬಂದಿರುವ ಹಾವುಗೆಯನ್ನು ತೆಗೆದುಕೊಂಡುಬಾರೆಂದು ರೇಚಣ್ಣನಿಗೆ ಹೇಳಿ ಕಳುಹಿ, ಅಕ್ಕನಾಗಾಂಬಿಕೆಯೊಡನೆ ಇತರ ಶರಣರನ್ನೆಲ್ಲ ನಿರವಯವವನ್ನೈದಿಸಿ, ಕಡೆಗೆ ನಾವು ಬಯಲಾಗುವೆವು. ಆಗ ಭೂಲೋಕದಲ್ಲುಳಿದ ಜಂಗಮರೆಲ್ಲ ನಾನಾದಿಕ್ಕುಗಳಿಗೆ ಚದರಿಹೋಗಲು, ಚರಪತ್ರಿಗಳು ಮಾತ್ರ ಕಲ್ಯಾಣದಲ್ಲುಳಿದು ಗೋಪ್ಯದಿಂದಿರುವರು. ಅವರಲ್ಲಿ ರುದ್ರಮುನಿತಂದೆಯು ತನ್ನ ಶಿಷ್ಯನಾದ ಮುಕ್ತಿಮುನಿಯನ್ನು ಕುರಿತು— ನೀನು ದೇಶಾಟನವನ್ನು ಮಾಡುತ್ತ,

ಪರವಾದಿಗಳನ್ನು ಜೈಸಿ, ಶಿವಶರಣರನ್ನು ರಕ್ಷಿಸೆಂದು ಹೇಳಿಕಳಿಸುವನು. ಅದೇವೇಳೆಗೆ ಮುಕ್ತಿಮುನಿಯು ಸಂಚರಿಸಿಕೊಂಡು, ಶ್ರೀಗಿರಿಯ ಸಿಹ್ಮಾಸನಕ್ಕೆ ಬಂದು ನಿಂತು ಭಕ್ತರನ್ನು ಪೊರೆಯುವನು. ಅಲ್ಲಿಂದ ೫೬ ದೇಶದ ಮೇಲೂ ಗಣಾಚಾರಿಗಳನ್ನು ನೇಮಿಸಿ ಕಳಿಸಿ, ಸದಾಚಾರವನ್ನು ಬೋಧಿಸಿ, ತನ್ನಾಜ್ಞೆಯನ್ನು ಮೀರಿ ನಡೆದವರಿಂದ ಅಪರಾಧಕಾಣಿಕೆಗಳನ್ನು ತರಿಸಿಕೊಳ್ಳುತ್ತ, ಪರವಾದಿಗಳನ್ನು ಸಮ್ಹರಿಸುತ್ತಲಿರುವನು. ಅತ್ತ ಮಲೆನಾಡಿನಲ್ಲಿ ಜೈನಮೊರೆಗಳು ಪ್ರಬಲಿಸಿ, ಅಲ್ಲಿದ್ದ ವೀರಭದ್ರೇಶ್ವರನನ್ನು ಕಿತ್ತು ನದಿಯಲ್ಲಿ ಬಿಸುಡಿದ್ದರು. ಈ ಸುದ್ದಿಯನ್ನು ಮುಕ್ತಿಮುನಿನಾಥನು ಕೇಳಿ, ಅಜಾತಭಿಕ್ಷಾವೃತ್ತಿಯೆಂಬ ತಮ್ಮ ಶಿಷ್ಯರಿಗೆ ತಮ್ಮ ಪಟ್ಟವನ್ನು ಕಟ್ಟಿ, ಆಜ್ಞೆಯನ್ನು ಕೊಟ್ಟು, ಇನ್ನೊಬ್ಬ ಶಿಷ್ಯನಾದ ದಿಗಂಬರಮುಕ್ತಿಮುನಿಯನ್ನು ಕರೆದು ನೀನು ಮಲೆನಾಡಿಗೆ ಹೋಗಿ ಪರವಾದಿಗಳನ್ನು ಸಹ್ಮರಿಸೆಂದುಹೇಳಿ ಕಳಿಸಿ, ತಾನು ಮಲ್ಲಿಕಾರ್ಜುನಲಿಂಗದಲ್ಲೈಕ್ಯನಾಗುವನು. ಗುರುವಿನಾಜ್ಞೆಯಂತೆ ದಿಗಂಬರಮುಕ್ತಿಮುನಿಯು ಇನ್ನು ಕೆಲ ಚರಪತಿಗಳನ್ನು ಕೂಡಿಕೊಂಡು, ಮಲೆನಾಡಿಗೆ ಬಂದು, ಖಾಂಡ್ಯದಲ್ಲಿ ನಿಂತು, ಅಲ್ಲಿನ ಜೈನರನ್ನೆಲ್ಲ ಸಹ್ಮರಿಸಿ, ಅವರ ಹಲ್ಲುಗಳನ್ನೆಲ್ಲ ಕಳಿಸಿ, ಒಂದು ಮಣವೂ ಮೂರು ಕಂಡುಗದ ತೂಕವಿದ್ದ ಅಷ್ಟು ಹಲ್ಲುಗಳನ್ನೂ ಕೆಣಜದಲ್ಲಿ ತುಂಬಿಸುವನು. ಬಳಿಕ ಹೊಳೆಯಲ್ಲಿದ್ದ ವೀರೇಶನನ್ನು ತೆಗೆದು, ಬಾಳೆದೆರೆಯಮೇಲೆ ಅದನ್ನು ಮಲಗಿಸಿ, ಸಾಗಿಸಿತಂದು, ಹೊನ್ನೂರಿನ ಬಳಿಯಲ್ಲಿ ಒಂದು ಗುಡಿಯನ್ನು ಕಟ್ಟಿಸಿ, ಪ್ರತಿಷ್ಠಿಸಿ, ತಾನೂ ಅಲ್ಲೇ ನೆಲಸಿ, ಉಳಿದಿರುವ ದುರ್ಜನರನ್ನು ಸಹ್ಮರಿಸಬೇಕೆಂದು ಯೋಚಿಸಿ, ಬಾಳೆಯಹಳ್ಳಿ ಯೆಂಬ ಊರನ್ನು ಅಲ್ಲೇ ಕಟ್ಟಿಸಿ, ಸಿಹ್ಮಾಸನಾಸೀನನಾಗಿದ್ದು, ಕೆಲಕಾಲಾನಂತರ, ಚರಪತಿಗಳಲ್ಲಿ ಯೋಗ್ಯನಾಗಿ ತೋರಿದವನೊಬ್ಬನನ್ನು ಕರೆದು, ಆತನಿಗೆ ಪಟ್ಟವನ್ನು ಕಟ್ಟಿ, ಶಿವಶರಣರನ್ನು ಪಾಲಿಸುವುದೂ, ಪರವಾದಿಗಳನ್ನು ಜೈಸುವುದೂ, ಮುಖ್ಯ ಕಾರ್ಯವಾಗಿರಬೇಕೆಂದು ಬೋಧಿಸಿ, ತಾನು ಶಿವಯೋಗಸಮಾಧಿಯಲ್ಲಿರುವನು. ದಿಗಂಬರಮುಕ್ತಿಮುನಿನಾಥರ ಅಪ್ಪಣೆಯಂತೆಯೇ ಆ ಸುಕುಮಾರಚೆನ್ನಬಸವೇಶನು ನಡೆಯುತ್ತಿರಲು, ಚರಪತಿಗಳಲ್ಲೇ ಒಬ್ಬನಾದ ಚಿಕ್ಕಸಿದ್ಧೇಶ್ವರನು ಚರ

ಸಮೂಹದೊಡನೆ ಸಂಚರಿಸಿಕೊಂಡು ಶಿವಗಂಗೆಗೆಹೋಗಿ, ಅಲ್ಲಿನ ಹೊನ್ನಾದೇವಿಯಿಂದ ಕಂಕಣವನ್ನು ಪಡೆಯುವನು. ಬಸವೇಶನು ಐಕ್ಯವಾದ ೭೦ ವರ್ಷಗಳ ನಂತರ ಅಳ್ಳಉಬಿಜ್ಜಳನು ತುರುಕರೊಡನೆ ಕಾದು ಸಾಯುವನು. ತುರುಕರು ಕಲ್ಯಾಣವನ್ನು ಕೆಡಿಸಿ, ತ್ರಿಪುರಾಂತಕದೇವಾಲಯದಲ್ಲಿ ಗೋವುಗಳನ್ನು ಕೊಂದು, ಧ್ವಜಸ್ತಂಭವನ್ನು ಮುರಿದು, ಅಲ್ಲಿ ಮಸೀದಿಯನ್ನು ಕಟ್ಟಿಸುವರು. ಕಲ್ಯಾಣದ ಪ್ರಜೆಗಳನ್ನೆಲ್ಲ ಸುಲಿದು ಸೂರೆಮಾಡುವರು. ಅವರಲ್ಲಿ ಕೇವಲ ಶಿವವ್ರತತತ್ಪರರಾದ ಗುಮ್ಮಣ್ಣಪೆಮ್ಮಣ್ಣನೆಂಬಿಬ್ಬರು ತಪ್ಪಿಸಿಕೊಂಡು, ದಕ್ಷಿಣಕಾಶಿಯೆಂದು ಪ್ರಸಿದ್ಧವಾದ ಶಿವಗಂಗೆಗೆ ಹೋಗಿ, ಅವರ ಬಳಿಯಲ್ಲಿ ಗುಮ್ಮಳಾಪುರವೆಂಬ ಹೆಸರಿನಿಂದ ಬಂದು ಪಟ್ಟಣವನ್ನು ಕಟ್ಟಿಸಿಕೊಂಡಿರುವರು. ಅದನ್ನು ಕಟ್ಟಿಸುವಾಗ ಅವರು ಹಸಿಯ ಮಣ್ಣಿನ ಗಡಿಗೆಯಲ್ಲಿ ಜಂಗಮಪಾದೋದಕವನ್ನು ತುಂಬಿ, ಹರಿವಾಣದಲ್ಲಿಟ್ಟು, ಹೊತ್ತುಕೊಂಡು ಆ ಪುರದ ಎಲ್ಲೆಗೆ ಸರಿಯಾಗಿ ತಿರುಗಿ ಬಂದು, ಮಧ್ಯದಲ್ಲಿ ಕಲಶವನ್ನು ನಿಕ್ಷೇಪಿಸಿ, "ಲಿಂಗವಿಲ್ಲದ ಭವಿಯು ಈ ಪೂರನ್ನು ಪ್ರವೇಶಿಸಿದರೆ, ಕೂಡಲೇ ಸಾಯಲಿ" ಎಂದು ಆಜ್ಞಾಪಿಸುವರು. ಆ ಪಟ್ಟಣವು ಅತ್ಯಂತ ವೈಭವದಿಂದ ಮೆರೆಯುತ್ತಿರುವುದು. ಅಲ್ಲಿ ಧೂಳಿಪವಾಡದವರು ಮೊದಲಾದ ೭೭ ಶೀಲದವರೂ ಇರುವರು. ಸದಾಚಾರವೇ ಪ್ರಾಣವಾಗುಳ್ಳ ವೀರಶೈವಭಕ್ತರು ಮಾಹೇಶ್ವರರು ಪ್ರಸಾದಿಗಳು ಮೊದಲಾದವರು ಅಲ್ಲಿ ಅನಂತವಾಗಿರುವರು. ಆಪ್ರಾಂತದಲ್ಲಿ ಧನವಂತರಾದ ಸೆಟ್ಟಿಗಳು ಹೆಚ್ಚಾಗಿರುವುದರಿಂದ "ಸೆಟ್ಟನಾಡು" ಎನಿಸಿಕೊಳ್ಳುವುದು. ಸಕಲ ಸೌಭಾಗ್ಯಕ್ಕೂ ನಿಧಿಯಾಗಿರುವುದರಿಂದ "ಪ್ರಭುನಾಡು" ಎಂತಲೂ ಹೇಳಿಸಿಕೊಳ್ಳುವುದು. ಸಕಲ ವಿದ್ಯಾವೈದುಷ್ಯವುಳ್ಳ ಕರ್ಣಾಟಕರಿಗೆ ನೆಲೆಯಾಗಿರುವುದರಿಂದ "ಕನ್ನಡನಾಡು" ಎಂತಲೂ ಕರಿಸಿಕೊಳ್ಳುವುದು. ಆ ದೇಶದಲ್ಲಿ ಸತ್ಯವ್ರತತತ್ಪರರಾದ ಜನರು ವಿಶೇಷವಾಗಿರುವುದರಿಂದ ಅದು ಉಳಿದ ದೇಶಕ್ಕೆಲ್ಲ ಶ್ರೇಷ್ಠವಾಗಿರುವುದು. ಆ ದೇಶದಲ್ಲಿ ಶಾಲೀವಾಹನಶಕ ಎಂಟುನೂರು ವರ್ಷ ಕಳೆದ ನಂತರ, ಬರುವ ವಿಳಂಬಿಸಂವತ್ಸರ ಚೈತ್ರಶುದ್ಧ ದಶಮೀ ಗುರುವಾರದದಿನ ೧೦ ಗಳಿಗೆಯಲ್ಲಿ ಹೊಯ್ಸಳಬಲ್ಲಾಳನಿಗೆ ಪಟ್ಟವಾಗುವುದು. ಅವನಾಳಿಕೆ

ಯಿಂದ ಆ ರಾಜ್ಯಕ್ಕೆ ಹೊಯ್ಸಳರಾಜ್ಯವೆಂದು ಹೆಸರಾಗುವುದು. ಅವನೂ ಸೇರಿ ೯ ಮಂದಿ ಬಲ್ಲಾಳರು ಅದನ್ನಾಳುವರು. ಅವರಲ್ಲಿ ವಿಷ್ಣುವರ್ಧನನೆಂಬುವನು ವೇಲಾಪುರದಲ್ಲಿ ಒಂದು ಗುಡಿಯನ್ನು ಕಟ್ಟಿಸಿ, ಬೈಲಿನಲ್ಲಿ ಬಿದ್ದಿದ್ದ ಒಂದು ವಿಷ್ಣುವಿಗ್ರಹವನ್ನು ತರಿಸಿ, ಅಲ್ಲಿ ಪ್ರತಿಷ್ಠೆಮಾಡಿಸಿ, ಅಲ್ಲಿ ಹೊಲೆಯರು ಮೊದಲಾಗಿ ೧೮ ಜಾತಿಯವರೂ ಒಟ್ಟಿಗೆ ಸೇವೆಯನ್ನೊಪ್ಪಿಸುವಂತೆ ಏರ್ಪಡಿಸುವನು. ಹಳೇಬೀಡೆಂಬ ಪಟ್ಟಣದಲ್ಲಿ ನರಸಿಂಹಬಲ್ಲಾಳನ ಹತ್ತಿರ ಗಣಕ (ಮುತ್ಸದ್ದಿ) ರಲ್ಲಿ ಅಗ್ರಗಣ್ಯಾಧಿಕಾರವನ್ನು ವಹಿಸಿದ್ದ ಹರೀಶ್ವರದೇವನನ್ನು ಆ ಬಲ್ಲಾಳನು ಲೆಕ್ಕವನ್ನು ಕೇಳುವಲ್ಲಿ, ಆತನು ಕಡಿತವನ್ನು ಬಿಟ್ಟು ಕೈಯನ್ನು ಹೊಸಗುವನು. ಇದೇನೆಂದು ದೊರೆಯು ಕೇಳಲು, ಹಂಪೆಯ ವಿರೂಪಾಕ್ಷದೇವಾಲಯದಲ್ಲಿ ದೀಪವು ಸೋಂಕಿ ತೆರೆಯು ಸುಡುತ್ತಿದ್ದಿತು, ಅದನ್ನು ತಿಕ್ಕಿ ನಾನಾರಿಸಿದೆನೆಂದು ಹರೀಶ್ವರನು ಹೇಳುವನು. ರಾಜನು—ಹಂಪೆಯೆಲ್ಲಿ ? ನೀನೆಲ್ಲಿ ? ಎಂದು ಆಶ್ಚರ್ಯಪಟ್ಟು, ಕೂಡಲೇ ಒಬ್ಬ ಆಳನ್ನು ಹಂಪೆಗೆ ಕಳಿಸಿ, ವಿಚಾರ ಮಾಡಿಸುವಲ್ಲಿ, ಅಲ್ಲಿನ ಅರ್ಚಕರು— ತೆರೆಸುಡುತ್ತಿದ್ದಾಗ ಹರಿದೇವನು ಇಲ್ಲೇ ಇದ್ದು ಆರಿಸಿದನೆಂಬುದನ್ನು ಹೇಳಿ ತೆರೆಯನ್ನೂ ತೋರಿಸುವರು. ಅದನ್ನು ಆಳು ದೊರೆಗೆ ತಿಳಿಸುವಲ್ಲಿ, ಅವನು ಅತ್ಯಾಶ್ಚರ್ಯಗೊಂಡು, ಹರಿದೇವನೆ, ಇನ್ನು ಮುಂದೆ ನೀನು ಆ ವಿರೂಪಾಕ್ಷದೇವಾಲಯದಲ್ಲೇ ಲೆಕ್ಕವನ್ನು ಬರೆದುಕೊಂಡಿರಬಹುದೆಂದು ಹೇಳಿ ಕಳುಹಿಕೊಡುವನು. ಅನಂತರ ಹರಿದೇವನು ಹಂಪೆಗೆ ಬಂದು, ಶಿವಗಣದರಗಳೆಯೆಂಬ ಗ್ರಂಥವನ್ನೂ, ಗಿರಿಜಾಕಲ್ಯಾಣವನ್ನೂ ರಚಿಸಿ, ವಿರೂಪಾಕ್ಷಲಿಂಗದಲ್ಲೈಕ್ಯನಾಗುವನು. ಆ ಹರೀಶ್ವರನ ಸೋದರನ ಅಳಿಯನಾದ ಉಭಯಕವಿ ಶರಭಭೇರುಂಡ ಮೊದಲಾದ ನಾನಾಬಿರುದುಗಳುಳ್ಳ ರಾಘವಾಂಕನು ಓರುಗಲ್ಲೆಂಬ ಪಟ್ಟಣಕ್ಕೆ ಹೋಗಿ, ಪರವಾದಿಗಳನ್ನೆಲ್ಲ ವಾದದಲ್ಲಿ ಗೆದ್ದು, ವೀರೇಶನಿಂದ ಪದಕವನ್ನು ಪಡೆದು, ವೇಲಾಪುರಿಗೆ (ಬೇಲೂರು) ಹಿಂತಿರುಗಿ ಬಂದು, ಅಲ್ಲಿ ದೇಹವನ್ನು ಬಿಟ್ಟು, ಸಮಾಧಿಸ್ಥನಾಗುವನು. ಅಲ್ಲೇ ಪದ್ಮರಸನೆಂಬ ವೀರಶೈವನಾದ ಬ್ರಹ್ಮಗೋತ್ತಮನು ರಾಜನಲ್ಲಿ ಮಂತ್ರಿಯಾಗಿರುವನು. ಅಲ್ಲಿಗೆ ತ್ರಿಭುವನಶಾಂತಾಚಾರ್ಯನೆಂಬ ಶ್ರೀವೈಷ್ಣವ

ನು ಬಂದು, ವಾದ ಮಾಡಲು, ಪದ್ಮರಸನು ತೃಣಪುರುಷನನ್ನು ಮಧ್ಯದಲ್ಲಿಟ್ಟು, ತನ್ಮುಖವಾಗಿ ವೈಷ್ಣವನನ್ನು ಗೆದ್ದು, ಶರಣಾಗತನಾದ ಆತನಿಗೆ ವೀರಶೈವದೀಕ್ಷೆಯನ್ನಿತ್ತು, ಶಿಷ್ಯನನ್ನು ಮಾಡಿಕೊಳ್ಳುವನು. ಬಿಟ್ಟಬಲ್ಲಾಳನು ಆ ಪದ್ಮರಸನನ್ನು ಕರೆಸಿ, ತನ್ನಲ್ಲಿಟ್ಟುಕೊಂಡು, ಒಂದು ಕೆರೆಯನ್ನು ಕಟ್ಟಿಸಬೇಕೆಂದು ಅವನ ವಶಕ್ಕೆ ಅಪರಿಮಿತವಾದ ಧನವನ್ನು ಕೊಟ್ಟು ಕಳುಹಿಸುವನು. ಆ ಹಣವನ್ನೆಲ್ಲ ಪದ್ಮರಸನು ಜಂಗಮಾರ್ಚನೆಗೆ ವೆಚ್ಚಮಾಡಿಬಿಡುವನು. ಕಡೆಗೆ ಶಿವಾನುಗ್ರಹದಿಂದ ದೊರೆಗೆ ದೊಡ್ಡಕೆರೆಯನ್ನು ರಚಿಸಿಕೊಡುವನು. ದೊರೆಯು ಆ ಕೆರೆಯ ಕೆಳಗಣ ಭೂಮಿಯನ್ನು ೮೮ ಮಂದಿ ಬ್ರಾಹ್ಮಣರಿಗೆ ದಾನಮಾಡಿ, ನಿಮಗೆ ಯಾವ ಬಯಲಾಗಬೇಕೆಂದು ಪದ್ಮರಸನನ್ನು ಕೇಳಲು, ನಮಗೆ ಈ ಮಾಬಯಲೇ ಸಾಕೆಂದು ಹೇಳಿ, ಬಯಲಿನಲ್ಲಿ ಬೆರೆದು ಬಯಲಾಗುವನು. ಪಾಲ್ಕುರಿಕೆಸೋಮಾರಾಧ್ಯನು ಕ್ರಮವಾಗಿ ೭೪ ಶೀಲಗಳನ್ನಾಚರಿಸಿ, ಕಳ್ಳೆಯಕ್ಕೆ ಬಂದು ಅಲ್ಲಿ ಸಮಾಧಿಗೊಳ್ಳುವನು. ಮೇಪೂರಿನ ಭೈರವರಾಜನು ಶೌರ್ಯಶಾಲಿಯಾಗಿ ಮಲ್ಲಿಪಟ್ಟಣಕ್ಕೆ ಬಂದು, ಅಲ್ಲಿ ದೊರೆಯನ್ನು ಕಂಡು, ಬೇಟೆಯ ಪವಾಡದಿಂದ ಅಲ್ಲಿನವರೆಲ್ಲರನ್ನೂ ಗೆದ್ದು, ಅಲ್ಲಿ ವೀರಶೈವದೀಕ್ಷೆಯನ್ನು ಪಡೆದು, ಸಾಸಲಿಗೆ ಹೋಗಿ ಶಿವೈಕ್ಯನಾಗುವನು. ಆ ಸಾಸಲಿನಲ್ಲಿ ಸೋಮೇಶ್ವರಲಿಂಗದಿಂದ ಹಾಲುಸುರಿಯುವುದು. ಅದರ ಸಮೀಪದಲ್ಲಿ ಕೆಂಡದ ಮಳೆ ಸುರಿಯುವುದು. ಶ್ರೀಶೈಲದಮೇಲೆ ಸೂಳೆಯರು ಗುಡಿಸಲನ್ನು ಕಟ್ಟುವರು. ಅಲ್ಲಿ ಹೆಂಡವನ್ನು ಮಾರುವರು. ರಕ್ತದ ಹೊಳೆಯು ಹರಿಯುವುದು. ದಿಂಡುಗೂರಲ್ಲಿ ನಾಗಾಭಕ್ತನು ಭಕ್ತಿಯಿಂದ ಜಂಗಮಸೇವೆಯನ್ನು ಮಾಡುತ್ತಿದ್ದು, ಅದಕ್ಕಾಗಿ ಸಾಲವನ್ನು ಮಾಡಿ, ಶಿವನಿಂದ ಹಣವನ್ನು ಪಡೆದು, ಸಾಲವನ್ನು ತೀರಿಸಿ, ಕೈಲಾಸವನ್ನು ಪಡೆಯುವನು. ಹರಭಕ್ತಕೆಂಜನೂರಾಂಡಿಯು ವೇದಗಳಿಗೆ ಭಾಷ್ಯವನ್ನು ಬರೆದು, ತನ್ನಳಿಯನನ್ನು ಕೊಳದಲ್ಲಿ ಮುಳುಗಿಸಿ, ಕಾಶಿಯ ಮಣಿಕರ್ಣಿಕೆಯಲ್ಲೇಳಿಸಿ, ರಂಗನಾಥನ ಕೈಯಿಂದ ದೇವಾಲಯದ ಬಾಗಿಲನ್ನು ತೆರೆಸಿ, ಈ ತನ್ನ ಮಹಿಮೆಯಿಂದ ಲೋಕವನ್ನು ಬೆರಗುಮಾಡಿ, ಕಡೆಗೆ ಶಿವಾನುಗ್ರಹದಿಂದ ತನ್ನೂರಿನ ಎರಡುಕೇರಿ ಜನಗಳೊಡನೆ ಕೂಡಿ ಕೈಲಾಸವನ್ನೈದುವನು. ಪೆಕ್ಕಲೂರಿನಲ್ಲಿ ನಾಲಿಯಕಲ್ಲಪ್ಪನು

ಹೊಲದಲ್ಲಿ ಒಣಗಿದ ನಾರನ್ನು ಎತ್ತುತ್ತಿದ್ದ ತನ್ನ ಮಗನು ಸರ್ಪದಷ್ಟನಾಗಿ ಸಾಯಲು, ತಾಯಿಯು ಜಂಗಮಾರ್ಚನೆಯನ್ನು ಮಾಡಿ, ಪಾದತೀರ್ಥಪ್ರಸಾದವನ್ನು ತಂದು ಮಗನಿಗೆ ಕೊಟ್ಟು ಏಳಿಸುವನು. ಎಲ್ಲರೂ ಶಿವಕಾರುಣ್ಯದಿಂದ ಕೈಲಾಸವನ್ನು ಹೊಂದುವರು. ಕರಿಮೊಡೆಯೆಂಬೂರಿನಲ್ಲಿದ್ದ ಮುಮ್ಮಡಿಭಕ್ತನು ಬಂದ ಜಂಗಮರಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಿ ವಸ್ತ್ರದಾನ ಮಾಡುತ್ತಿರಲು, ಒಬ್ಬ ಜಂಗಮನು ಬಂದು ಆ ಭಕ್ತನ ಹೆಂಡತಿಯುಟ್ಟಿರುವ ಸೀರೆಯ ಸೆರಗನ್ನು ಕೇಳಲು, ಆ ಭಕ್ತನು ಹರಿದು ಕೊಟ್ಟು, ದಾನೋದಕವನ್ನು ತಳಿದು ಮತ್ತೆ ಸೆರಗನ್ನು ಬೆಳಸುವನು. ಪೆರುವೊಗೆಯೆಂಬೂರಿನ ದೇವಮ್ಮನು ಮಾರಕೋಟ್ಯಂಮರಿರ ಜಂಗಮರಿಗೆ ದಾಸೋಹವನ್ನು ಮಾಡುತ್ತಿರಲು, ಒಬ್ಬ ಜಂಗಮನು ಬಂದು ತನ್ನ ಹುಲಿಸು ಚರ್ಮವನ್ನು ಮಡಗಿರೆಂದು ಹೇಳಿ ಕೊಟ್ಟಿದ್ದು, ಮರಳಿ ಬಂದು ಕೇಳುವನು. ಆಗ ಆಕೆಯು ಹುಡುಕುವಲ್ಲಿ ಚರ್ಮವು ಇಲ್ಲದೆ ಹೋಗಲು, ತನ್ನ ಮೈಯ ಚರ್ಮವನ್ನೇ ಸುಲಿದುಕೊಡುವಳು. ಬಯ್ಯಲಿಂಗಣ್ಣನು ಕುಂಚಿಯಲ್ಲಿ ಪಾದರಾಡಿ ಚೀಟಿಯಲ್ಲಿ ಪಂಚಾಕ್ಷರಮಂತ್ರವನ್ನು ಬರೆದು, ತೂಗಿ, ಅದರ ಸರ್ವೋತ್ಕೃಷ್ಟತ್ವವನ್ನು ಸಿದ್ಧಾಂತಪಡಿಸುವನು. ಗುಜರಾತಿಯ ದೇಶರಾವುತನು ತನ್ನ ಕೈಬೆರಳಿನ ಉಂಗುರದಲ್ಲಿದ್ದ ಬಸವನಿಗೆ ಒಂದು ರಾಶಿಯ ಕಡಲೆಯನ್ನೆಲ್ಲ ತಿನ್ನಿಸುವನು. ಪಟ್ಟೇಶ್ವರದ ವೀರಭದ್ರನ ಮುಂಬೆ ಬಸವಪ್ಪನು ತನ್ನ ಇಬ್ಬರು ಮಕ್ಕಳ ಕತ್ತನ್ನು ತರಿದು ಮತ್ತೆ ಮುಂಡಕ್ಕೆ ಆ ರುಂಡಗಳನ್ನು ಹಚ್ಚಿಸಿ, ಪವಾಡದಿಂದ ಪರವಾದಿಗಳನ್ನು ಗೆಲ್ಲುವನು. ಪರವಾದಿಗಳು ಬಸವಪುರಾಣಪ್ರಮಾಣವನ್ನು ಹಾಸ್ಯಮಾಡಲು, ರಾಮಯ್ಯನು ಆ ಪುರಾಣಪುಸ್ತಕವನ್ನು ಬೆಂಕಿಗೆ ಹಾಕಿ, ಅದು ಸುಡದೆ ಇರಲು, ವಾದಿಗಳನ್ನು ಭಂಗಿಸುವನು. ರಾಜಮಹೇಂದ್ರದಲ್ಲಿ ವಿಪ್ರರು ತಮ್ಮವನೊಬ್ಬನು ಶಿವಭಕ್ತನಾದುದನ್ನು ಕಂಡು ನಿಂದಿಸಲಾಗಿ, ಅವರ ಮನೆಗಳೆಲ್ಲವೂ ಉರಿದು ಈ ಭಕ್ತನ ಮನೆಯು ಮಾತ್ರ ಉಳಿವುದು. ಆಗ ಅವರು ಶಿವಭಕ್ತನಾದ ಆ ಬುಷಾರಿ ಸೋಮಣ್ಣನಿಗೆ ಶಿಷ್ಯರಾಗಿ ಕಾರುಣ್ಯವನ್ನು ಪಡೆದು ಎಂದಿನಂತೆ ಬಾಳುವರು. ದಕ್ಷಿಣಾಪುರದಲ್ಲಿ ಶಿವಭಕ್ತರು ಕೆಂಡವನ್ನು ಕಟ್ಟಿ, ಒರಳಕಲ್ಲನ್ನು ಕರೆಯಿಸುವರು. ಎಂದು ಅವರ ಮ

ಹಿಮೆಯನ್ನು ಬೇಳೆಯೊಡೆಯರು ಕೊಂಡಾಡಲು, ಅದನ್ನು ತುರುಕರು ಕೇಳಿ, ಹಾಗಾದರೆ ನೀವೂ ಹಾಗೆ ಮಾಡಿ ತೋರಿಸಿರಿ ಎನ್ನಲಾಗಿ, ಆ ಒಡೆಯರು ಮರದಕುದುರೆಯನ್ನು ಹತ್ತಿ ಕುಣಿಸಿ, ಗೊಡ್ಡು ಹಸುವಿನಲ್ಲಿ ಹಾಲನ್ನು ಕರೆದು, ವಿಷಾನನ್ನು ಚಂದ್ರಕಾಂತಲಿಂಗವನ್ನಾಗಿ ಮಾಡಿ, ಹೋಳಾದ ಲಿಂಗವನ್ನು ಬಂದುಗೂಡಿಸುವರು. ಕುರುಪವೆಂಬೂರಿನಲ್ಲಿ ಸೊಪ್ಪಿನ ಬಸಪ್ಪನೆಂಬುವನು ಪ್ರತಿದಿನವೂ ಕಲ್ಲಿನ ಬಸವನಿಗೆ ಸೊಪ್ಪನ್ನು ತಿನ್ನಿಸುತ್ತಿರಲು, ಅದನ್ನು ಅಲ್ಲಿನ ಸುರಿತಾಳನು ಕೇಳಿ, ಅವನನ್ನು ಹಿಡಿತರಿಸಿ, ಮನೆಗೆ ಕೂಡಿ ಬೆಂಕಿಯನ್ನಿಕ್ಕಿಸಲಾಗಿ, ಬಸಪ್ಪನು ಆ ಮನೆಯಲ್ಲಿ ಇರದೆ ಸೊಪ್ಪಿನಂಗಡಿಯಲ್ಲಿರುವನು. ಅದನ್ನು ಸುರಿತಾಳನು ಕೇಳಿ ಆಶ್ಚರ್ಯಪಟ್ಟು, ಆ ಬಸಪ್ಪನಿಗೆ ಶರಣಾಗತನಾಗುವನು. ಬಿದರೆಯಲ್ಲಿ ಶಿವಶೆಷೀಶನೆಂಬುವವನು ಸುರಿತಾಳನೊಡನೆ ವಾದಮಾಡಿ, ಸತ್ತ ಕುದುರೆಗೂ ಸುರಿತಾಳನ ಸತ್ತಮಗನಿಗೂ ಹಾವ್ಕಚ್ಚಿ ಸತ್ತ ಇನ್ನೊಬ್ಬನಿಗೂ ಪ್ರಾಣದಾನ ಮಾಡುವನು. ಕೊಂಕಣದಲ್ಲಿ ದೋಪೀಶ್ವರದ ನೀಲಕಂಠದೇವಾಲಯದಲ್ಲಿ ಶೀಲವಂತ ಪೂಜಿಕಾಯಕದ ವೀರಪ್ಪನು ಪರವಾದಿಗಳನ್ನೆಲ್ಲ ಮಹಿಮೆಯಿಂದ ಗೆದ್ದು ಎಲ್ಲರೂ ನೋಡಿ ಆಶ್ಚರ್ಯಪಡುವಂತೆ ಕೈಲಾಸಕ್ಕೆ ಹೋಗುವನು. ಉಪ್ಪಲಿಕರಣ್ಣಪ್ಪನೆಂಬುವನು ವಿಷ್ಣುಭಕ್ತನಾಗಿರಲು, ಶಿವನು ಕಾಲಿನಲ್ಲಿ ವೈಷ್ಣವಮುದ್ರೆಗಳನ್ನು ಹೊಂದಿ ವೇಷಾಂತರದಿಂದ ಅವನಲ್ಲಿಗೆಬಂದು ಶಿವಭಕ್ತನಾಗೆಂದು ಹೇಳಲು, ವೈಷ್ಣವರೆಲ್ಲ ವಾದಮಾಡಲಾಗಿ, ಕಡು ಬೇಸಗೆಯಲ್ಲಿ ಮಳೆಯನ್ನು ಕರೆದು ಕೆರೆಗಳನ್ನೆಲ್ಲ ತುಂಬಿಸಿ, ವೈಷ್ಣವರನ್ನು ಬೆರಗುಗೊಳಿಸಿ, ಸೋಲಿಸಿ, ಶಿವಭಕ್ತರನ್ನು ಮಾಡುವನು. ಸುಗ್ಗಲೂರಿನಲ್ಲಿ ಕಾಟನಾಯಕನೆಂಬ ವಿಷ್ಣುಭಕ್ತನು ಬೇಟೆಗೆಹೋಗಿ ಒಂದು ಮೊಲವನ್ನು ಬೆನ್ನಟ್ಟಿಹೋಗಲು ಅದು ಕೆರೆಯಲ್ಲಿ ಬಿದ್ದು ಮುಳುಗಿಕೊಳ್ಳುವುದು. ತಾನೂ ಅದರೊಡನೇ ಬಿದ್ದು ಹಿಡಿಯುವಲ್ಲಿ ಅದು ಲಿಂಗವಾಗಿರುವುದು. ಅದನ್ನು ತಾನು ಭಕ್ತಿಯಿಂದ ಧರಿಸಿಕೊಂಡು ಮಹಾಲಿಂಗದೇವಯ್ಯನೆಂದು ಹೆಸರು ಇರಿಸಿಕೊಂಡು ಕಡೆಗೆ ಆ ಲಿಂಗದಲ್ಲೇ ಐಕ್ಯನಾಗುವನು. ಅಸಗೋಡ ಮಲ್ಲಪ್ಪಯ್ಯನು ತನ್ನ ಹೋರಿಗೆ ಮುದ್ರೆಯನ್ನೊತ್ತಿ ಬಸವನನ್ನಾಗಿ ಬಿಟ್ಟಿರಲು, ಅದು ಕೆಲಕಾಲದ ಮೇಲೆ ಸಾ

ಯುಲು, ತಾನು, ತನ್ನ ಹೆಂಡತಿ, ಮಗ, ಮಗನ ಹೆಂಡತಿಸಹ ಅವರ ಜತೆಗೆ ಸಮಾಧಿಯಲ್ಲಿ ಕುಳಿತು ಬಸವನ ಪ್ರಾಣವನ್ನು ಬರಮಾಡುವನು. ಇವರೇ ಮೊದಲಾದ ಶಿವಶರಣರು ಅಲ್ಲಲ್ಲಿ ಹೀಗೆ ನಾನಾ ಮಹಿಮೆಗಳನ್ನು ತೋರಿಸಿ ಕೈಲಾಸವನ್ನು ಸೇರುವರು. ಮುಂದೆ ಹೊಸಮಲೆಯಲ್ಲಿ ಕಂಪಲನೆಂಬ ರಾಜನಿರುವನು. ಅವನ ಕುಮಾರನಾದ ರಾಮನಾಥನು ತನಗಾಗಿ ಕುಮ್ಮಟವೆಂಬ ದುರ್ಗವನ್ನು ಕಟ್ಟಿಸಿಕೊಂಡು ವಾಸಮಾಡುತ್ತ ಸುತ್ತಣ ರಾಜರನ್ನೆಲ್ಲ ಗೆದ್ದು ಅಧಿರಾಜನಾಗಿ ಹೊಗಳಿಸಿಕೊಳ್ಳುತ್ತಿರುವನು. ಡಿಲ್ಲಿಯ ಖಾನರು ಇವನ ಏಳ್ಗೆಯನ್ನು ಕೇಳಿ ಲಕ್ಷದ ತೊಂಭತ್ತಾರುಸಾವಿರ ರಾವುತರನ್ನು ಕೂಡಿಕೊಂಡು ಆ ಕುಮ್ಮಟಕ್ಕೆ ಮುತ್ತಿಗೆಯನ್ನು ಹಾಕುವರು. ಆಗ ತಂದೆಮಕ್ಕಳುಗಳು ಅವರಮೇಲೆ ಕಾದು ಅಲ್ಲೇ ಮಡಿಯುವರು. ಅಲ್ಲಿಗೆ ಕುಮ್ಮಟವು ಹಾಳಾಗುವುದು, ಎಂದು ಸಿದ್ಧರಾಮೇಶನು ನುಡಿದನೆಂಬಲ್ಲಿಗೆ ಒಂಭತ್ತನೇ ಅಧ್ಯಾಯವು ಸಂಪೂರ್ಣವು.

## ೧೦ ನೇ ಅಧ್ಯಾಯವು.

### ನೂರೊಂದು ವಿರಕ್ತರವತರಣವು.

ಎಲೆ ಸಿದ್ಧರಾಮೇಶನೆ, ಶಾಲೀವಾಹನ ಶಕ ೧೨೫೮ ರ ಬಳಿಕ ಬರುವ ಧಾತುಸಂವತ್ಸರದ ವೈಶಾಖ ಶುದ್ಧ ೭ ಯ ದಿವಸ ಹರಿಹರನಿಗೆ ಪಟ್ಟವಾಗುವುದು. ಅವನ ಸಂತತಿಯವರು ೧೩ ಪಟ್ಟದವರೆಗೂ ರಾಜ್ಯವನ್ನಾಳುವರು. ಆ ಹರಿಹರನ ವಂಶೋದ್ಭವನಾದ ರಾಜನೊಬ್ಬನು ಆನೆಗುಂದಿಯಲ್ಲಿರುತ್ತ, ಹಂಪೆಯ ವಿರೂಪಾಕ್ಷದೇವಾಲಯದ ಹತ್ತಿರ ವಿದ್ಯಾನಗರಿ (ವಿಜಯನಗರ) ಯೆಂಬ ಪಟ್ಟಣವನ್ನು ಕಟ್ಟಿಸುವನು. ಅತ್ತ ದೇವೇಂದ್ರನು ಕೈಲಾಸಕ್ಕೆ ನೈಭವದಿಂದ ಹೋಗುತ್ತ, ಅಲ್ಲಿದ್ದ ವಿಕಟರೂಪಿನ ಗಣಾಧೀಶ್ವರರನ್ನು ನೋಡಿ, ಇವರಿಗೆ ಶಿವಲಾಂಛನವೆಂಬುದು ಸ್ವಲ್ಪವೂ ಇಲ್ಲ, ಇವರ ರೀತಿಯೇ ಬೂದು ತೆರನಾಗಿದೆ, ಇವರೇನು ಭವಿಗಳೋ ಏನೋ ತಿಳಿಯದು, ಎಂದು ತನ್ನವರೊಡನೆ ನುಡಿವನು. ಆ ಮಾತನ್ನು ಗಣಾಧೀಶ್ವರರು ಕೇಳಿ, ಕೋಪವನ್ನು ತಾಳಿ, ಎಲೆ ಸುರಪಾಲನೆ, ನೀನು ಮೂಢತನದಿಂದ ನಮ್ಮ ಮಹಿಮೆಯನ್ನರಿಯದೆ, ನಿಂದಾವಚನಗ

ಳನ್ನಾಡಿದುದರಿಂದ ನೀನು ಭೂಮಿಯಲ್ಲಿ ಭವಿಯಾಗಿ ಹುಟ್ಟು ಎಂದು ಶಾಪವೀಯುವರು. ಆ ಸಂಗತಿಯನ್ನು ದೇವೇಂದ್ರನು ಶಿವನೊಡನೆ ಬಿನ್ನೈಸಿ ವ್ಯಸನಪಡಲು, ಗಣವರರ ಶಾಪವನ್ನು ಮಿಾರುವುದಕ್ಕಿಲ್ಲವಾದಕಾರಣ ಪ್ರೌಢದೇವೇಂದ್ರನೆಂಬ ಹೆಸರಿನಿಂದ ನೀನು ಭೂಮಿಯಲ್ಲಿ ಅವತರಿಸು ಎಂದು ಪರಶಿವನು ಹೇಳಿ, ಆ ಗಣಾಧೀಶರನ್ನು ಕುರಿತು, ನೀವೂ ಭೂಮಿಯಲ್ಲಿ ಅವತರಿಸಿ, ಶಿವಭಕ್ತಿಮಹತ್ತ್ವವನ್ನು ಪ್ರಕಾಶಪಡಿಸಿ ಬನ್ನಿರೆಂದು ಬೆಸಸಿ ಕಳುಹಿಕೊಡುವನು. ಇಂದ್ರನು ಆ ವಿದ್ಯಾನಗರಿಯಲ್ಲಿ ಹರಿಹರಬುಕ್ಕರಾಯರ ವಂಶದಲ್ಲಿ ಹುಟ್ಟಿ, ಪ್ರೌಢದೇವೇಂದ್ರನೆಂಬ ಹೆಸರನ್ನು ತಾಳಿ ರಾಜ್ಯವಾಳುತ್ತಿರುವನು. ಗಣಾಧೀಶ್ವರರು ೧೦೧ ವಿರಕ್ತರಾಗಿ ಭೂಮಿಯಲ್ಲಿ ಅವತರಿಸುವರು. ಅವರಲ್ಲಿ ಕೆರಸ್ಥಲದ ವೀರಣ್ಣೊಡೆಯರೆಂಬುವರೊಬ್ಬರಿರುವರು. ಅವರಿಗೆ ಅಕ್ಕಸಾಲೆನಾಗಯ್ಯನೆಂಬ ಶಿಷ್ಯನಿರುವನು. ಅವನು ಒಂದು ದಿನ ವ್ಯಭಿಚಾರಕ್ಕಾಗಿ ಒಂದು ಮನೆಗೆ ನುಗ್ಗುವನು. ಮನೆಯವರು ಎಚ್ಚರಗೊಂಡು ಅವನನ್ನು ಹಿಡಿದುಕೊಳ್ಳುವರು. ಆಗ ಅವನಿಗೆ ಜ್ಞಾನೋದಯವಾಗಲು, ಪರಮವೈರಾಗ್ಯವನ್ನು ತಾಳಿ ಸಂಸಾರವನ್ನು ಪರಿತ್ಯಜಿಸುವನು. ಪೀಠವನ್ನು ಕಳೆದುಬಿಟ್ಟು, ಲಿಂಗವನ್ನು ಕರಪೀಠದಲ್ಲೇ ಸದಾ ಧರಿಸಿಕೊಳ್ಳುವನು. ಮೈಗೆ ಬೂದಿಯನ್ನು ಬಳಿದು ಬತ್ತಲೆಯಾಗಿ ಹುಚ್ಚನಂತೆ ತಿರುಗುತ್ತಲಿರಲು, ಊರಜನರೆಲ್ಲರೂ ನೋಡಿ ಆಶ್ಚರ್ಯಪಡುತ್ತಿರುವರು. ಬಳಿಕಾ ನಾಗಯ್ಯನು ತನ್ನ ಗುರುವಿದ್ದ ಊರಿಗೆ ಬರಲು, ಅವರು ಇದೇನು ವೈಚಿತ್ರ್ಯವೆಂದು ಕೇಳಲು, ತನಗೆ ಸಂಭವಿಸಿದ ವಿಷಯವನ್ನೆಲ್ಲ ಹೇಳಿ ಹಸ್ತಲಿಂಗವನ್ನು ತೋರಿಸುವನು. ಗುರುಗಳು ಆಲಿಂಗವನ್ನು ಮತ್ತೊಂದು ಪೀಠದಲ್ಲಿ ನಿಯೋಜಿಸಿ, ಬಾಹ್ಯಕ್ರಿಯೆಗಳು ಅಳಿವವರೆಗೂ ಈ ಲಿಂಗವನ್ನು ಪೀಠದಿಂದ ತೊಲಗಿಸಬೇಡವೆಂದು ಬೋಧಿಸಿ, ತನ್ನ ಪ್ರಸಾದವನ್ನು ಕೊಟ್ಟು, ಕಳುಹಿಕೊಡುವರು. ನಾಗಯ್ಯನು ದೇಶಾಂತರಗಳನ್ನೆಲ್ಲ ಸುತ್ತಿಕೊಂಡು ಮತ್ತೆ ವೀರಣ್ಣೊಡೆಯರ ಮನೆಗೆ ಬರುವನು. ಆಗಲವರು ನಾಗಯ್ಯನನ್ನು ಶಿಷ್ಯನೆಂದು ಭಾವಿಸದೆ, ಅರ್ಘ್ಯಪಾದ್ಯಾಚಮನಗಳನ್ನಿತ್ತು ಭಕ್ತಿಯಿಂದ ಅವನನ್ನು ಸತ್ಕರಿಸಿ, ಮಣೆಮಂಚದಲ್ಲಿ ಕುಳ್ಳಿರಿಸಿ, ತಾವು ಹೂವನ್ನೆತ್ತಿತರುವುದಕ್ಕೆ ಹೋಗುವರು. ಇತ್ತ

ನಾಗಯ್ಯನು ಮನೆಯೊಳಗೆ ಮೂರುತಾವಿನಲ್ಲಿ ಮಲವಿಸರ್ಜನೆಯನ್ನು ಮಾಡಿ, ವೀರಣ್ಣೊಡೆಯರ ಹೆಂಡಿತಿಯನ್ನು ಕುರಿತು– ಅವ್ವಾ! ನಿನ್ನ ಗಂಡನು ಈ ಮಲಕ್ಕೆ ಒಳಗಾಗಿದ್ದರೆ ಇಲ್ಲೇ ಸುಖವಾಗಿರಲಿ, ಹಾಗಿಲ್ಲದಿದ್ದರೆ ನಮ್ಮೊಡನೆ ಬರಲಿ; ಎಂದು ಹೇಳಿ, ಹೊರಟು ಹೋಗುವನು. ಬಳಿಕ ವೀರಣ್ಣೊಡೆಯನು ಬಂದು ಹೆಂಡಿತಿಯಿಂದ ಎಲ್ಲ ಸಂಗತಿಯನ್ನೂ ಕೇಳಿ, ಆಶ್ಚರ್ಯಪಟ್ಟು, ತಾನೂ ಘನವಿರಕ್ತಿಯಿಂದ ಎಲ್ಲವನ್ನೂ ತೊರೆದು, ಮನೆಯನ್ನು ಬಿಟ್ಟು, ನಾಗಯ್ಯನನ್ನು ಅರಸಿಕೊಂಡು ಹೊರಡುವನು. ದಾರಿಯಲ್ಲಿ ಒಂದುಮೆಳೆಗೆ ತಲೆಯ ಕೂದಲು ಸಿಕ್ಕಿ ಪರಮಶಿವಯೋಗದಿಂದ ನಾಗಯ್ಯನು ಅಲ್ಲೇ ನಿಂತಿರುವುದನ್ನು ವೀರಣ್ಣೊಡೆಯನು ಕಾಣುವನು. ಅವನ ಕೂದಲನ್ನು ಮೆಲ್ಲಗೆ ಬಿಡಿಸುವನು. ನಾಗಯ್ಯನು ಕಣ್ಣನ್ನು ಬಿಟ್ಟು ಒಡೆಯನನ್ನು ನೋಡಿ, ನೀನು ಸಂಸಾರವನ್ನು ಬಿಟ್ಟು ಬಂದೆಯಾ? ಭಲಾ! ಎಂದು ಹೊಗಳುವನು. ಅವರೀರ್ವರೂ ಕೂಡಿಕೊಂಡು ವಿದ್ಯಾನಗರಿಗೆ ಬರುವರು. ಅಲ್ಲಿ ಹುಚ್ಚುರಾವುತನ ಮನೆಯಲ್ಲಿ ಲಿಂಗಾರ್ಪಿತದ ಭಿಕ್ಷೆಯನ್ನು ಕೇಳಲು, ಮನೆಯಾಕೆಯು ಭಸ್ಮವನ್ನು ತಂದು ಮುಂದಿರಿಸಿ, ತನ್ನನ್ನೇ ಪರಿಗ್ರಹಿಸಬೇಕೆಂದು ಬೇಡುವಳು. ಇವರು ಆಕೆಯನ್ನು ಮನೆಯ ಮುಂದೆಯೇ ಸಂಭೋಗಿಸುತ್ತಿರಲು, ಯಜಮಾನನು ಬಂದು ಇದನ್ನು ಕಂಡು ಕಡುಸಿಟ್ಟಿನಿಂದ ಕತ್ತಿಯನ್ನು ಹಿರಿದು ಇಬ್ಬರನ್ನೂ ಎಷ್ಟು ತಿವಿದರೂ ದೇಹದಲ್ಲಿ ಗಾಯವೂ ರಕ್ತವೂ ಕಾಣದಿರುವುದನ್ನು ನೋಡಿ ಆಶ್ಚರ್ಯಪಟ್ಟು, ಕಡೆಗೆ ತಾನು ಮಾಡಿದಪರಾಧದಿಂದ ಭಯಗೊಂಡು ನಡುಗುತ್ತಿರುವನು. ಆಗ ಅವರಿಬ್ಬರೂ–ಎಲೆ ರಾವುತನೇ! ಹೆದರಬೇಡ, ನೀನೊಂದು ವಿಧದ ಭಿಕ್ಷೆಯನ್ನು ಕೊಟ್ಟೆ, ನಿನ್ನ ಹೆಂಡಿತಿಯು ಒಂದು ತೆರದ ಭಿಕ್ಷೆಯನ್ನಿತ್ತಳು, ಇವೆರಡೂ ನಮಗೆ ಒಂದೇಸಮ, ಎಂದುಹೇಳಿ ಅಭಯದಾನ ಮಾಡುವರು. ಬಳಿಕ ಆ ರಾವುತನು ಈ ಸಂಗತಿಯನ್ನೆಲ್ಲ ತನ್ನದೊರೆಯಾದ ಪ್ರೌಢದೇವೇಂದ್ರನಿಗೆ ಬಿನ್ನೈಸುವನು. ಅವನು ಭಕ್ತಿಯಿಂದ ಇವರಿಬ್ಬರನ್ನೂ ಬರಮಾಡಿ, ನಮಸ್ಕರಿಸಿ, ಗುರುಬಸವೇಶನರಮನೆಗೆ ಇವರನ್ನು ಶಿವಾರ್ಪಣಕ್ಕಾಗಿ ಕಳಿಸಿಕೊಡುವನು. ಆ ಗುರುಬಸವದೇವರು ಪೂಜಾಸಾಮಗ್ರಿಗಳನ್ನನಂತವಾಗಿಟ್ಟು

ಕೊಂಡು ಶಿವಾರ್ಚನೆಯನ್ನು ಮಾಡುತ್ತಿರಲು, ನಾಗಿದೇವಯ್ಯನು ಅದೆಲ್ಲವನ್ನೂ ನೋಡಿ, ಎತ್ತಿ ಬಿಸುಡಿ ಚೆಲ್ಲಿಡಲು; ಬಸವದೇವರು ಅದೇಕೆಂದು ಕೇಳುವಲ್ಲಿ, ನಾಗಯ್ಯನು— ನಿನ್ನ ಮನೋಭಾವಗಳು ಲಿಂಗವನ್ನು ಬಿಟ್ಟು ಎಲ್ಲಿ ಹರಿದಾಡುತ್ತಿದ್ದುವು ? ಬಾಹ್ಯಾಡಂಬರಗಳಿಂದೆಲ್ಲ ಬರುವ ಫಲವೇನು ? ಅರ್ಪಣಾನುಸಂಧಾನಕ್ರಮವನ್ನರಿಯದೆ ಬರಿಯ ಡಾಂಭಿಕ ಪೂಜೆಯನ್ನು ಎಷ್ಟು ದಿನ ಮಾಡಿದರೂ ವ್ಯರ್ಥವು, ಎಂದು ಹೇಳುವನು. ಆಗ ಬಸವದೇವರು ಜ್ಞಾನೋದಯಗೊಂಡು, ನಾಗಿದೇವನಿಗೆ ನಮಿಸಿ, ವಿರಕ್ತಿಯಿಂದ ಅವರೊಡನೆಯೇ ಮಧುವನದ ಕಡೆಗೆ ಹೊರಡುವನು. ಅಲ್ಲಿ ಬಹುಮಂದಿ ವಿರಕ್ತರು ಸೇರಿ ತೆಂಗಿನಮರದಮೇಲಿರುವ ಎಳನೀರನ್ನು ನೋಡಿ, ತಮ್ಮ ಲಿಂಗಕ್ಕೆ ಅವು ಅರ್ಪಿತವಾದುವೆಂದು ಹೇಳಲು, ತೋಟಗಾರನು ಅವರಿಷ್ಟವನ್ನು ತಿಳಿದು, ಬೇಕಾದಷ್ಟು ಎಳನೀರುಗಳನ್ನು ಕಿತ್ತುಕೊಡುವನು. ಎಲ್ಲರೂ ತಾವು ಮನವಿಕ್ಕಿದ್ದುವುಗಳನ್ನು ಮೊಗಚುತ್ತೆಗೆಯುವಲ್ಲಿ, ನೀರುತುಂಬಿರುವುದು. ನಾಗಿದೇವರು ನೋಡಿದ್ದ ಎಳನೀರಿನಲ್ಲಿ ಮಾತ್ರ ನೀರೇ ಇರುವುದಿಲ್ಲ. ಆಗ ವೀರಣ್ಣೊಡೆಯರು ನೋಡಿ, ನಮ್ಮಂತೆ ಕ್ರಿಯಾಸ್ಥಲದಿಂದ ಶಿವನಿಗೆ ಸಮರ್ಪಿಸಿ ಯಾವುದೊಂದನ್ನೂ ಪರಿಗ್ರಹಿಸುವುದೊಂದು ರೀತಿ; ಅಪಿಲ್ಲದಿದ್ದರೆ ಈ ನಾಗಿದೇವನಂತೆ ಕ್ರಿಯೆಯನ್ನುಳಿದು ಹೀಗೆ ಅರ್ಪಣಾನುಸಂಧಾನದಿಂದ ನಡೆಯಬೇಕು. ಇವೆರಡು ರೀತಿಯನ್ನೂ ಬಿಟ್ಟು ತಾಯಿ ತಪ್ಪಿದ ಕರುವಿನಂತೆ ಕಳವಳಗೊಳ್ಳುವುದು ನಡೆಯಲ್ಲವೆಂದು ಹೇಳಿ, ಷಟ್ಸ್ಥಲಾಚರಣರಹಸ್ಯವನ್ನು ಅಲ್ಲಿದ್ದ ವಿರಕ್ತರಿಗೆಲ್ಲ ಬೋಧಿಸಿ, ನಾಗಿದೇವನೂ ವೀರಣ್ಣೊಡೆಯರೂ ಶ್ರೀಶೈಲಕ್ಕೆ ತೆರಳುವರು. ವೀರಣ್ಣೊಡೆಯರು ನಾಗಿದೇವನನ್ನು ಕುರಿತು ನಾವಿನ್ನು ನಿರ್ವಾಣವನ್ನೈದಬೇಕೆಂದು ಹೇಳಲು, ಆತನು ಮೋಹಿನೀಗಜವಿರುವ ಸ್ಥಲಕ್ಕೆ ಹೋಗಿ, ಆನೆಗೆ ಹಗ್ಗವನ್ನು ಕಟ್ಟಿ ಮೇಲಕ್ಕೆ ಹತ್ತಿ, ಗುರುವೆ ನೋಡೆಂದು ಹೇಳಲು, ವೀರಣ್ಣೊಡೆಯರು ಹಗ್ಗಗಳೆಲ್ಲ ಸುವರ್ಣಮಯವಾಗಿರುವುವೆಂದು ನುಡಿವರು. ಹಾಗಾದರೆ, ನೀವು ಇನ್ನು ಕೆಲಕಾಲ ರಾಜಪೂಜೆಯನ್ನು ಕೈಕೊಳ್ಳುತ್ತಿದ್ದು ಬರಬೇಕೆಂದು ಹೇಳಲು, ಮಗನೇ ಅನಂತರ ನಾನು ಮುಕ್ತನಾಗುವುದು ನಿಜವೆ? ಎನ್ನಲು, ಅದಕ್ಕೆ ಸಂಶಯವಿಲ್ಲ, ನಾ

ನೇ ನೀವಿದ್ದಲ್ಲಿಗೆ ಬಂದು ಎಲ್ಲರೂ ಕಾಣುವಂತೆಯೇ ನಿಮಗೆ ನಿರವಯವ
ವನ್ನೈದಿಸುವೆನು, ಎಂದು ಹೇಳಿ ನಂಬುಗೆಗೊಟ್ಟು ಕಳಿಸಿ, ತಾನು ಬಯ
ಲಾಗುವನು. ಒಡೆಯರು ಚಿಂತೆಯಿಂದ ವಿದ್ಯಾನಗರಿಗೆ ಬರಲು, ಪ್ರೌಢದೇ
ವೇಂದ್ರನು ತನ್ನ ಮಗಳನ್ನು ಅವರಿಗೆ ಕೊಟ್ಟು ಮದುವೆ ಮಾಡುವನು.
ನಾಗಿದೇವನು ಬರುವವರೆಗೂ ನಾವು ಈ ಊರನ್ನು ಬಿಟ್ಟು ಹೊರಗೆ
ಹೋಗಬಾರದೆಂದು ನಿರ್ಧರಿಸಿ, ಶಿವಾನುಭವಪ್ರಸಂಗದಲ್ಲಿ ಒಡೆಯರು ಕಾಲ
ಯಾಪನೆ ಮಾಡುತ್ತಿರುವರು. ಒಂದು ದಿನ ಒಡೆಯರು ರಾಜನೊಡನೆ ಹಂ
ಪೆಯ ತುಂಗಭದ್ರಾನದೀತೀರದಲ್ಲಿ ಬಂದು ನಿಂತಿರಲು, ಮೀನ್ಬಲಿಗನೆಂಬ
ಪಕ್ಷಿಯು ಆಕಾಶದಲ್ಲಿ ಹಾರುತಿದ್ದು, ನೀರಿನಲ್ಲಿ ಮುಳುಗಿ, ಒಂದು ಮೀನ
ನ್ನು ಕಚ್ಚಿ ಮೇಲಕ್ಕೆ ಹಾರುವಾಗ, ಮೀನು ಕಳೆದು ನೀರಿಗೆ ಬೀಳಲು,
ಪಕ್ಷಿಯು ಒಡನೆಯೇ ದುಮುಕಿ ಅದೇ ಮೀನನ್ನು ಹಿಡಿದುಕೊಳ್ಳಲು, ಪಕ್ಷಿ
ಯ ಚಟುವಟಿಕೆಗೆ ಒಡೆಯರು ಮೆಚ್ಚಿ, ತನ್ನ ಕೈಯಲ್ಲಿದ್ದ ರನ್ನದ ಒಂದು
ಕಟಕವನ್ನು ತೆಗೆದು ಆ ಪಕ್ಷಿಗಾಗಿ ಎಸೆವರು. ಅದು ನೀರಿನಲ್ಲಿ ಮುಳುಗು
ವುದು. ದೊರೆಯು ಕಂಡು ಇದೇಕೆ ಕಟಕವನ್ನು ಬಿಸುಡಿದೆ ? ಎಂದು ಕೇಳ
ಲು, ಪಕ್ಷಿಗಾಗಿ ಮೆಚ್ಚಿ ಕೊಟ್ಟೆನೆಂಬನು. ಎಲ್ಲಿ ಬಿಸುಡಿದೆ ಯೆನ್ನಲು, ಮ
ತ್ತೊಂದು ಕಟಕವನ್ನೂ ಕಳೆದು ಮೊದಲುಬಿಸುಡಿದ್ದ ಸ್ಥಳಕ್ಕೇ ಅದನ್ನೂ
ಇಟ್ಟು ತೋರಿಸುವನು. ದೊರೆಯು ಬೆಲೆಯುಳ್ಳ ರತ್ನದ ಕಟಕಗಳು ಹಾ
ಳಾದವೆಂದು ವ್ಯಸನಪಡುತ್ತಿರಲು, ಒಡೆಯರು—ರಾಜನೆ, ಅದೇಕೆ ಚಿಂತಿಸು
ತ್ತೀಯೆ ? ನಿನ್ನ ಕಟಕಗಳು ಬೊಕ್ಕಸದಲ್ಲೇ ಇವೆ, ನೋಡಿಸು, ಎನ್ನ
ಲು, ದೊರೆಯು ಹುಡುಕಿಸುವಾಗ ಪೆಟ್ಟಿಗೆಯಲ್ಲೇ ಆ ಕಟಕಗಳಿರುವುವು.
ದೊರೆಯು ಬೆರಗಾಗುವನು. ಅಗಸರ ಹೊನ್ನಯ್ಯನು ಎರಡು ಚಂದ್ರಗಾ
ವಿಯ ಪಚ್ಚಡವನ್ನು ಮಡಿ ಮಾಡಿ, ವೀರಣ್ಣೊಡೆಯರಿಗೊಂದನ್ನೂ ಅವ
ರ ಹೆಂಡತಿಗೊಂದನ್ನೂ ಕೊಡುವನು. ಆಕೆಯು ಪಚ್ಚಡವನ್ನುಟ್ಟು ತಂ
ದೆಯಾದ ದೊರೆಯ ಬಳಿಗೆ ಹೋಗಲು, ತನ್ನ ಈ ಪಚ್ಚಡವನ್ನು ಅಗಸ
ನು ಆಕೆಗೆ ಹೇಗೆ ಕೊಟ್ಟನೆಂದು ಕರಿಸಿ ಕೇಳುವಲ್ಲಿ, ಪ್ರಭುವೇ ತಮ್ಮಪ
ಚ್ಚಡವು ಬೊಕ್ಕಸದಲ್ಲೇ ಇದೆ, ನನ್ನ ಗುರುವಿನ ಒಡವೆಯನ್ನು ಗುರುವಿಗೆ
ಒಪ್ಪಿಸಿದೆನು, ಎಂದು ಅಗಸನು ನುಡಿವನು. ದೊರೆಯು ನೋಡಿಸುವಲ್ಲಿ

ಹಚ್ಚಡವು ಬೊಕ್ಕಸದಲ್ಲೇ ಇರುವುದು. ಹೊನ್ನಯ್ಯನೆ, ನೀನು ಸಾಧಾರಣನಾದ ಅಗಸನಲ್ಲ; ಮಹಾಮಹಿಮ; ಎಂದು ದೊರೆಯು ಕೊಂಡಾಡಲು, ತನ್ನ ಸ್ವರೂಪವು ಪ್ರಕಟವಾಯ್ತೆಂದುತಿಳಿದು, ಹೊನ್ನಯ್ಯನು ಬಯಲಾಗುವನು. ಮಿಡಿಬಿಲ್ಲಶಾಂತಿದೇವನು ಬಿಲ್ಲಿಗೆ ತನ್ನಲಿಂಗವನ್ನು ಸೇರಿಸಿ, ಎಲ್ಲರಿಗೂ ಹೊಡೆಯುವುದಕ್ಕೆ ಹೋಗುವನು. ಇವನನ್ನು ಹುಚ್ಚನೆಂದು ತಿಳಿದು ಇತರರು ಓಡುವರು. ಹೀಗೆಯೇ ವೀರಣ್ಣೊಡೆಯರ ಬಳಿಗೆ ಇವನು ಹೋಗಲು, ಅವರು—"ಲಿಂಗಾನುಸಂಧಾನವಾಯಿತು, ಹೊಡೆಯಬಹುದು" ಎನ್ನಲು, ಆತನು ಲಿಂಗವನ್ನು ಬಿಲ್ಲಿನಿಂದ ಪ್ರಯೋಗಿಸಿ, ಅದರೊಡನೆಯೇ ಪ್ರಾಣವನ್ನೂ ಬಿಡುವನು. ಹೇಟಯಮರುಳನೆಂಬುವನು ಹುಂಜಗಳನ್ನು ಕಾಯಿಸುತ್ತ, ಗೆದ್ದುಕೊಂಡಕೋಳಿಗಳನ್ನು ಎತ್ತಿಕೊಂಡು ಹೋಗುತ್ತಿರಲು, ವೀರಣ್ಣೊಡೆಯರು ಬಂದು ನೋಡುವಾಗ, ಕೋಳಿಗಳನ್ನೆಲ್ಲ ಈತನು ಬಯಲು ಮಾಡುವನು. ನಿನ್ನ ರಹಸ್ಯವು ನನಗೆ ತಿಳಿಯಿತೆಂದು ಒಡೆಯರು ನುಡಿಯಲು, ಮರುಳಯ್ಯನುನಿರ್ವಾಣವನ್ನೈದುವನು. ತಗರ ಕಾಳಗವನ್ನು ಮಾಡಿಸುತ್ತಿದ್ದ ಪ್ರಭುವು ಅಂಗಡಿಗಳಿಗೆ ನುಗ್ಗಿ ಕಜ್ಜಾಯವನ್ನು ಎತ್ತಿ ತಿಂದು ಅಂಗಡಿಯವರಿಂದ ಹೊಡಿಸಿಕೊಳ್ಳುತ್ತಿರುವನು. ವೀರಣ್ಣೊಡೆಯರು ಬಂದು "ಅವನನ್ನು ಹೊಡೆಯಬೇಡಿರಿ, ಆತನು ಮಹಾಶಿವಯೋಗಿ" ಎಂದು ಹೇಳಲು, ತನ್ನ ಸ್ವರೂಪವು ಬಯಲಾಯ್ತೆಂದು ಯೋಚಿಸಿ, ಪ್ರಭುವು ಬಯಲಾಗುವನು. ಬಾಲಲಿಂಗಣ್ಣನು ವೀರಣ್ಣೊಡೆಯರ ಮನೆಗೆ ಬಂದು ಭಿಕ್ಷೆಯನ್ನು ಬೇಡಲು, ಮನೆಯವರು ಅವನನ್ನು ಒಳಗೆ ಕರೆದುಕೊಂಡುಹೋಗಿ ಮಂಚದಮೇಲೆ ಮಲಗಿಸಿ ನಿದ್ರೆಯಲ್ಲಿದ್ದಾಗ, ಅವನ ಕೈಯಲ್ಲಿದ್ದ ಲಿಂಗವನ್ನು ಲಿಂಗಣ್ಣೊಡೆಯರು ಹಾಸ್ಯಕ್ಕಾಗಿ ತೆಗೆದುಕೊಳ್ಳುವರು. ಊಟಕ್ಕೆ ಕಾಲವಾಗ ಬಾಲಲಿಂಗಣ್ಣನನ್ನು ಏಳಿಸುವುದಕ್ಕೆ ಹೋಗಲು, ಲಿಂಗಣ್ಣನ ಪ್ರಾಣವು ಅಳಿದು, ಡಿಂಬವು ಮಾತ್ರವಿರುವುದು. ಆಗ ಒಡೆಯರು ಉಳಿದ ವಿರಕ್ತರನ್ನೆಲ್ಲ ಕೂಡಿಕೊಂಡು ಬಂದು, ಮೊದಲು ತಾವು ತೆಗೆದುಕೊಂಡಿದ್ದ ಲಿಂಗವನ್ನು ಅವನ ಅಂಗೈಯಲ್ಲಿರಿಸಲು, ಲಿಂಗಣ್ಣನು ಕಣ್ದೆರೆದು ಏಳುವನು. ಊಟಕ್ಕೇಳೆಂದು ಅವರು ಕರೆಯಲು, ನಾನು ಆಗಲೇ ನಿಮ್ಮೊಡನೆ ಉಂಡೆನೆಂದು ನು

ಡಿಯುವನು. ಅದುಹೇಗೆ ಉಂಡೆ? ಯೆಂದು ಒಡೆಯರು ಕೇಳಲು, ಅವರು ಊಟಮಾಡಿದ ಪದಾರ್ಥಗಳ ಹೆಸರು ರುಚಿ ಮೊದಲಾದ ಗುಣಂಗಳನ್ನೆಲ್ಲ ಹೇಳುವನು. ಆಗ ಅವನ ಪ್ರಾಣಲಿಂಗಾನುಸಂಧಾನಕ್ರಮವನ್ನು ಒಡೆಯರು ತಿಳಿದು, ಕೊಂಡಾಡಲು, ನಾಗಿದೇವನು ಅವರಿಬ್ಬರನ್ನೂ ಆಗ ನಿರವಯವಗೊಳಿಸುವನು. ಇನ್ನೊಬ್ಬ ವಿರಕ್ತನು ಕಾಲಿನಹಗ್ಗಕ್ಕೆ ಲಿಂಗವನ್ನು ಕಟ್ಟಿಕೊಂಡು ಮಲಗಿರುವನು. ಪ್ರೌಢರಾಯನು ನೋಡಿ ಆ ಲಿಂಗವನ್ನು ಬಿಚ್ಚಿಸಲು, ಮಲಗಿದ್ದವನ ಪ್ರಾಣವೇ ಹೋಗುವುದು. ದೊರೆಯು ಬೆಚ್ಚಿ, ಮತ್ತೆ ಲಿಂಗವನ್ನು ಹಗ್ಗಕ್ಕೆ ಕಟ್ಟಿಸಲು, ಪ್ರಾಣ ಬರುವುದು. ಆಗ ತನ್ನ ಸ್ಥಿತಿಯು ಭೂಜನಕ್ಕೆ ಗೊತ್ತಾಯ್ತೆಂದು ಯೋಚಿಸಿ ವಿರಕ್ತನು ಬಯಲಾಗುವನು. ಬತ್ತಲೇಶ್ವರನೆಂಬ ಶಿವಯೋಗಿಯೊಬ್ಬನು ಕೃಶನಾಗಿ ಗುಹೆಯಲ್ಲಿ ತಪಸ್ವಿಯಾಗಿರಲು, ದೊರೆಯು ಪದ್ಮಾವತಿಯೆಂಬ ವಾರಾಂಗನೆಗೆ ಆ ಯತಿಯನ್ನು ತೋರಿಸಿ, ನೀನು ಈತನನ್ನು ವರಿಸುವೆಯಾ ? ಎಂದು ಕೇಳಲು, ಈತನನ್ನು ವಶಮಾಡಿಕೊಂಡು ಮಗನನ್ನು ಹೆತ್ತು ಬರುತ್ತೇನೆಂದು ಆಕೆಯು ಹೇಳಿ, ಅದರಂತೆಯೇ ಯತಿಯನ್ನು ವಶಮಾಡಿಕೊಂಡು, ಅವನಿಂದ ಮಗನನ್ನು ಹೆರುವಳು. ಒಂದು ದಿನ ವಿರೂಪಾಕ್ಷರಥೋತ್ಸವಕ್ಕೆ ಪದ್ಮಾವತಿಯು ಆ ತನ್ನ ನಾಯಕನೊಡನೆ ಕೂಡಿ ಬರುವಳು. ಆಗ ಮಗನನ್ನು ಅವನ ಕೈಗೆ ಕೊಟ್ಟು, ಅಲ್ಲಿಗೆ ಬಂದಿದ್ದ ದೊರೆಗೆ ತನ್ನ ವಲ್ಲಭನನ್ನು ತೋರಿಸಿ, ಈತನೇ ಬತ್ತಲೆಯೋಗೀಶ್ವರನೆಂದು ಹೇಳುವಳು. ಆಗ ಯತಿಯು ಇನ್ನು ನಾವಿಲ್ಲಿರಬಾರದೆಂದು ಮಗುವನ್ನು ಆಕಾಶಕ್ಕೆಸೆದು ತಾನೂ ಬಯಲಾಗುವನು. ಪ್ರೌಢರಾಯನ ಗುರುವಾದ ಬಸವೇಶನು ವಾದದಲ್ಲಿ ಗೆದ್ದು ಅಲ್ಲಿನ ಶಾರದಾಪೀಠವನ್ನು ಏರಿ, ಅಲ್ಲಿಂದ ರಾಜನರಮನೆಗೆ ಬಂದು ಸುಖವಾಗಿರುತ್ತಿರಲು, ಒಬ್ಬ ಯೋಗೀಶನು ಆಕಾಶಸಂಚಾರಿಯಾಗಿ ದೊರೆಯ ಕಣ್ಣಿಗೆ ಗೋಚರಿಸಲು, ಆತನು ಅತ್ಯಾಶ್ಚರ್ಯಪಟ್ಟನು. ಅವನ ಭಾವವನ್ನು ಗುರುಬಸವೇಶನು ತಿಳಿದು, ತನ್ನ ಕ್ರಿಯಾಸಿದ್ಧಿಯ ಬಲದಿಂದ ಆ ಯೋಗೀಶನಿಗಿಂತಲೂ ಮೇಲಾಗಿ ಆಕಾಶದಲ್ಲಿ ವಿಹರಿಸುತ್ತ, ರಾಗಾಲಾಪಗಳನ್ನು ಮಾಡುತ್ತ ಇದ್ದು, ಬಯಲಾಗುವನು. ನಿರ್ವಾಣಿಜೋಳೇಶನೆಂಬುವನು ನಾನಾಮಹಿಮೆ

ಗಳನ್ನು ತೋರಿಸಿ, ಆಲದ ಮರದ ಜಡೆಯನ್ನು ಹಿಡಿದು ಜೋಲುತ್ತ, ಶಿವಯೋಗನಿಷ್ಠನಾಗಿರಲು, ಅಲ್ಲಿನ ಭಕ್ತಜನರು ಈತನು ಅಳಿವನೆಂದು ಯೋಚಿಸಿ, ಅವನ ದೇಹವನ್ನು ಹಿಡಿದು ಎಳೆಯಲು, ಅಲ್ಲೇ ಬಯಲಾಗುವನು. ಪರಪಟ್ಟ ಯೆಂಬ ವಿರತನು ಹುಚ್ಚನಂತೆ ಮಕ್ಕಳೊಡನೆ ಆಡಿಕೊಂಡಿರಲು, ದೊರೆಯು ಅವನ ರೀತಿಯನ್ನು ನೋಡಿ, ಈತನು ಪರಮಶಿವಯೋಗಿಯಾಗಿರಬಹುದೆಂದು ಊಹಿಸಲು, ತನ್ನ ಇರವನ್ನು ರಾಜನು ಅರಿತನೆಂದು ತಿಳಿದು ವಿರತನು ಬಯಲಾಗುವನು. ಹೀಗೆ ನೂರೆಂದು ಮಂದಿ ವಿರತರೂ ಭೂಮಿಯಲ್ಲಿದ್ದು ನಿರ್ವಾಣವನ್ನೈದುವರು. ಇವರಲ್ಲದೆ ಮೊಗ್ಗೆಯಮಾಯಿದೇವಪ್ರಭುವು ಸಕಲ ಷಟ್ಸ್ಥಲತತ್ತ್ವರಹಸ್ಯವನ್ನು ಜಗತ್ತಿಗೆ ತಿಳಿಯಪಡಿಸುವುದಕ್ಕಾಗಿ ಅನುಭವಸೂತ್ರ ಮೊದಲಾದ ಗ್ರಂಥಗಳನ್ನು ಬರೆದು ಪ್ರೌಢರಾಯನಿಂದ ಪೂಜ್ಯನಾಗಿದ್ದು, ಶಿವಯೋಗಸಮಾಧಿಯಿಂದ ಮುಕ್ತನಾಗುವನು. ಬಳಿಕ ಪ್ರೌಢದೇವೇಂದ್ರನು ಅಳಿವನು. ಅವನ ವಂಶೋದ್ಭವನಾದ ವಿರೂಪಾಕ್ಷರಾಯನೆಂಬುವನು ದೇಶವನ್ನಾಳುತ್ತಿರುವಲ್ಲಿ ನರಸಿಂಹರಾಯನೆಂಬುವನು ಅವನನ್ನು ಸೋಲಿಸಿ, ವಿದ್ಯಾನಗರಿಯನ್ನು ತಾನು ಹಿಡಿದುಕೊಳ್ಳುವನು. ಅವನ ಮಗನು ೪೦ ವರ್ಷಗಳ ವರೆಗೆ ಆ ರಾಜ್ಯವನ್ನಾಳುವನು. ಅವನ ವಂಶಕ್ಕೆ ಅಚ್ಯುತರಾಜನೇ ಕಡೆಯವನು. ಪ್ರೌಢರಾಯನು ಅಳಿದ ಬಳಿಕ ರಾಜ್ಯದಲ್ಲಿ ಅನಾಚಾರವು ಹೆಚ್ಚಿ, ವೀರಶೈವಾಚಾರವು ಕುಗ್ಗಿ, ಪರಮತವಾದಿಗಳು ಪ್ರಬಲಿಸುವರು. ಆಗ ನಾರದನು ಕೈಲಾಸಕ್ಕೆ ಹೋಗಿ, ಶಿವನಿಗೆ ಭಕ್ತಿಯಿಂದ ನಮಸ್ಕರಿಸಿ, ಭೂಲೋಕದಲ್ಲಿ ಶಿವಾಚಾರವು ತಗ್ಗಿ, ಅನಾಚಾರವು ಹೆಚ್ಚಿಕೊಂಡಿರುವುದರಿಂದ ನೀನೇ ಭೂಮಿಯಲ್ಲವತರಿಸಿ ಷಟ್ಸ್ಥಲಾಚಾರವನ್ನುದ್ಧರಿಸಬೇಕೆಂದು ಬಿನ್ನೈಸುವನು. ಆಗ ಶಂಕರನು ನಿರಂಜನಗಣೇಶನನ್ನು ಕರೆದು, ನೀನು ಏಳ್ನೂರುಮಂದಿ ಗಣೇಶ್ವರರನ್ನು ಕರೆದುಕೊಂಡು ಭೂಲೋಕಕ್ಕೆ ಹೋಗಿ ಜಂಗಮಸ್ಥಲವನ್ನಾಶ್ರಯಿಸಿ, ಷಟ್ಸ್ಥಲಾಚಾರವನ್ನುದ್ಧರಿಸಿ ಬಾರೆಂದು ಅಪ್ಪಣೆ ಮಾಡುವನು. ಅದರಂತೆಯೇ ನಿರಂಜನಗಣೇಶ್ವರನು ಸಿದ್ಧೇಶನೆಂಬ ಹೆಸರಿನಿಂದ ಗೋಸಲಚೆನ್ನಬಸವೇಶ್ವರನ ಶಿಷ್ಯನಾಗಿ ಅವತರಿಸಿ, ಕಗ್ಗೆರೆಯ ಗ್ರಾಮದ ಬಳಿಯಣ ತೋಟಕ್ಕೆ

ಹೋಗಿರುವನು. ಆ ಪ್ರಾಂತದಲ್ಲಿದ್ದ ನಂಬಿಯಣ್ಣನೆಂಬ ಭಕ್ತನು ತೋಟಕ್ಕೆ
ಬಂದು ಸಿದ್ಧೇಶನನ್ನು ಕಂಡು ಭಕ್ತಿಯಿಂದ ನಮಸ್ಕರಿಸಿ, ತನ್ನ ಮನೆಯ
ಭಿಕ್ಷೆಯನ್ನು ಕೈಕೊಂಡು ಧನ್ಯನು ಮಾಡಬೇಕೆಂದು ಬಿನ್ನೈಸಿ, ಮನೆಗೆ
ಹೋಗಿ ಮತ್ತೆ ಬರುವೆನೆಂದು ಹೇಳಿ ತೆರಳಿದನು. ಅವನು ಹೋದ ಬಳಿ
ಕ ಊರಿನೊಳಗೆ ದೊಡ್ಡ ಜಗಳವು ಹುಟ್ಟಿ, ಕೆಲವು ದಿನಗಳವರೆಗೂ ಅವ
ನು ಹಿಂತಿರುಗಿ ಬರುವುದಕ್ಕವಕಾಶವಿಲ್ಲದೆ ಹೋಗಿ, ಅನಂತರ ತೋಟಕ್ಕೆ
ಬಂದು ನೋಡುವಲ್ಲಿ, ಸಿದ್ಧೇಶನು ಶಿವಧ್ಯಾನಪರವಶನಾಗಿ ಕುಳಿತಲ್ಲಿಂದ
ಕದಲದೆ ಇರಲು, ಆತನ ಮೇಲೆ ಗೆದ್ದಲು ಹುತ್ತುವನ್ನು ಕಟ್ಟಿರುವುದು.
ಜನವೆಲ್ಲವೂ ಇದನ್ನು ನೋಡಿ ಆಶ್ಚರ್ಯಪಟ್ಟು, ಈ ಸಿದ್ಧಲಿಂಗೇಶನು
ಮಹಾಮಹಿಮನೆಂದು ಬಹುಭಕ್ತಿಯಿಂದ ಪೂಜಿಸುವರು. ಬಳಿಕ ಸಿದ್ಧ
ಲಿಂಗೇಶನು ಆ ಭಕ್ತರ ಭಕ್ತಿಯನ್ನೆಲ್ಲ ಸ್ವೀಕರಿಸುತಲಿರುವನು. ಉಳಿದ
ಗಣನಾಥರೆಲ್ಲ ನಾನಾದೇಶಗಳಲ್ಲಿ ಜಂಗಮರಾಗಿ ಚರಿಸುತ್ತ, ಅನೇಕ ಮ
ಹತ್ತ್ವಗಳನ್ನು ಪ್ರದರ್ಶನ ಮಾಡಿ, ಶಿವಭಕ್ತ್ಯಾಚಾರಗಳಲ್ಲಿ ಶ್ರದ್ಧೆಯ
ನ್ನು ಹೆಚ್ಚಿಸುತ್ತ ಸಿದ್ಧಲಿಂಗೇಶನ ಬಳಿಗೆ ಬರುವರು. ಆ ವಿರಕ್ತರೊ
ಡನೆಲ್ಲ ಸಿದ್ಧೇಶನು ಷಟ್ಸ್ಥಲಾನುಭವಪ್ರಸಂಗವನ್ನು ಮಾಡುತ್ತಲಿರುವ
ನು. ಆಗ– ಸಿದ್ಧಲಿಂಗೇಶ್ವರ, ಕಂಬಳಿಯದೇವ, ಸಿದ್ಧನಂಜೇಶ್ವರ, ಚೆನ್ನ
ದೇವ, ದೊಡ್ಡಸಿದ್ಧಲಿಂಗೇಶ್ವರ, ಗುಮ್ಮಳಾಪುರದ ಸಿದ್ಧಲಿಂಗೇಶ, ಕಂಕ
ಣದದೇವ, ಲಂಬಕರ್ಣದದೇವ, ಸಿದ್ಧಮಲ್ಲೇಶ, ಎಡತೊರೆಯ ಗುರುಸಿ
ದ್ಧವೀರಣ್ಣೊಡೆಯ, ಘನಲಿಂಗದೇವ, ಚಿಕ್ಕಮಲ್ಲೇಶ, ಮರುಳಸಿದ್ಧೇ
ಶ್ವರ, ಚಂದ್ರಶೇಖರ, ಸುರಗಿಯಾರ್ಯ, ಶಾಂತಮಲ್ಲಿಕಾರ್ಜುನದೇವ, ಬೆಡ
ಗಿನ ಪರ್ವತೇಶ್ವರ, ಪಟ್ಟಣದದೇವ, ಜಗುನಿಮರುಳದೇವ, ಮಳೆಯದೇ
ವ, ಬತ್ತಲೆಯದೇವ, ಸಂಪಗೆಯ ರಾಚನಟ್ಟದೇವ, ಸಪ್ಪೆಯಯ್ಯ, ಉ
ಪ್ಪಿನಹಳ್ಳಿಯಯ್ಯ, ಶೀಲವಂತಯ್ಯ, ಕೊಡಗಿ ಹಳ್ಳಿಯಯ್ಯ, ಜೋಲಿ
ಯ ಬಸವೇಶ, ರಾಚವಟ್ಟಿಯ ಕೋರಿ ಸಿದ್ಧಬಸವೇಶ, ಹಿರಣ್ಯಯ್ಯ,
ಶಿವಪೂಜೆಯಯ್ಯ, ಜೋಳಬಸವೇಶ, ಕಿತ್ತಾಂವರದ ಚೆನ್ನಮಲ್ಲೇಶ, ಮೊ
ದಲಾದ ಪರಿಪರಿಯ ಹೆಸರಿನ ೭೦೦ ಮಂದಿ ವಿರಕ್ತರುಗಳು ತೋಂಟದ
ಸಿದ್ಧಲಿಂಗೇಶ್ವರನ ಜತೆಯಲ್ಲಿರುವರು. ಇವರೆಲ್ಲರೂ ಭೂಮಿಯಲ್ಲಿ ಷಟ್ಸ್ಥ

ಲಾಚಾರವನ್ನು ವಿಸ್ತರಿಸುತಲಿದ್ದು ಮುಕ್ತರಾಗುವರು. ಹುಚ್ಚನಂಜೇಶ, ಹುಚ್ಚವಿರೂಪಾಕ್ಷ, ಎಂಬವರಿಬ್ಬರೂ ಶ್ರೀಶೈಲದಲ್ಲಿರುವ ನೋಹಿನೀಗಜವನ್ನು ಹತ್ತಿ ಬಯಲಾಗುವರು. ಮಾದಾಪುರದ ಮರುಳದೇವರು ಪರಮತದವರೊಡನೆ ವಾದ ಮಾಡಿ, ಸತ್ತಿದ್ದವರ ಪ್ರಾಣವನ್ನು ಬರಿಸಿ, ಬಿತ್ತಿದ ಆರು ತಿಂಗಳಿಗೆ ತೆಂಗಿನಗಿಡದಿಂದ ಫಲವನ್ನು ಬಿಡಿಸುವರು. ಹೊನ್ನವಳ್ಳಿಯ ಸಿದ್ಧವೀರೇಶನು ಹಲವುಪವಾಡಗಳನ್ನು ಮೆರೆದು ಮುಕ್ತನಾಗುವನು. ನಿಜುವಮಾವುಡಿಯ ಕೆರಿಬಸವೇಶನು ತೆಂಗಿನಮರವನ್ನು ಭಿಕ್ಷೆಯನ್ನು ಬೇಡಲು, ಅದು ಬಗ್ಗಿ ಫಲವನ್ನು ಕೊಟ್ಟು ಮೊದಲಂತೆ ನಿಲ್ಲುವುದು. ಕರಡಿಯ ಹಾಲದೇವರು, ಸರವಿಯ ಸಿದ್ಧರಾಮೇಶ ಮೊದಲಾದವರೂ ಹೀಗೆಯೇ ಬೇರೆ ಬೇರೆ ಪವಾಡಗಳನ್ನು ತೋರಿಸುವರು. ಯತಿಕುಲಶೇಖರನಂತಿರುವ ಕೋರನ್ನದಾರ್ಯ, ಬುಕ್ಕಸಾಗರದ ಕೆರೆಯ ಸಿದ್ಧೇಶ, ನಾರಕೆಂಥೆಯದೇವ, ಚೆಂಗಡಹಳ್ಳಿ ವೀರಪ್ಪ, ಮಾವಿನಹಳ್ಳಿ ಮಲ್ಲಪ್ಪ, ಗ್ರಾಮದ ಸಂಗಮೇಶ, ಗುಮ್ಮಳಾಪುರದ ವೀರಪ್ಪ, ಪ್ರಸಾದಿ ದೇವಯ್ಯ ಮೊದಲಾದ ಚರಮೂರ್ತಿಗಳೆಲ್ಲರೂ ಬಂದ ಜಂಗಮರಿಗೆ ಮೃಷ್ಟಾನ್ನಭೋಜನವನ್ನು ಮಾಡಿಸುತ್ತಿರುವರು. ಜಂಗಮರಿಗೆ ದಾಸೋಹವನ್ನು ನಡಿಸುತ್ತಿರುವ ದೊರೆಗಳು ಯಾರೆಂದರೆ_ ನಂಜರಾಯ, ಕೆಂಚಸೋಮಣ್ಣನಾಯಕ, ಎಳಂದೂರರಸು, ಚೆನ್ನೊಡೆಯ, ಬರಗಿಯದೇವಿನಾಯಕ, ಬುಕ್ಕಣ್ಣೊಡೆಯ, ಸಿದ್ಧಮಲ್ಲಿನಾಯಕ, ಸಂಕಣ್ಣನಾಯಕ, ಜಂಬೂರದಾಸಿವಾಸದ ಅರಸರು, ಕೇತಸಾಗರದ ಚಿಕ್ಕಣ್ಣಸೆಟ್ಟಿ, ಬಿಜಾಜ್ಜವರದ ಪ್ರಭು, ಚಿಕ್ಕಣ್ಣಗೌಡ, ಸುಕುಟೂರ ತಮ್ಮಣ್ಣಗೌಡ, ತಗಡೂರಪ್ರಭುವು, ತಲಕಾಡ ಚಂದ್ರಶೇಖರ ರಾಜ, ಭೋಗವಾಡಿಯ ಲಿಂಗರಾಜ, ಉಡುವಂಕೆನಾಡಪ್ರಭು ಮೊದಲಾದವರು. ಇವರಲ್ಲದೆ, ಸೋಲೂರ ಬಸವಪ್ಪ, ಸಂಗಯ್ಯ, ಮಹಾಂತಯ್ಯ, ಸುಂಡಿಗೆಯ ಸಿದ್ದಪ್ಪ, ಮುದ್ದಗಂಗಪ್ಪ, ದಾಸೋಹದಲಿಂಗಪ್ಪ, ಮಲ್ಲಪ್ಪ, ಕಾಬಣದ ಗಂಗಾಧರಪ್ಪ, ಕಳಲೆಯ ವೀರಪ್ಪ, ದೂಳಾಭಕ್ತ, ಹೊಸಹಳ್ಳಿ ನಾಗಪ್ಪ, ಬಸವಪ್ಪ, ಮೋಳಿಗಯ್ಯ, ಬಾಣಾವರದ ಸಿದ್ದಪ್ಪ, ಶೀಲವಂತ ಸಿರಿಯಾಳಯ್ಯ, ಹೋಳಿಸಿದ್ದಪ್ಪ, ದುರ್ಗದ ಕಲ್ಲಪ್ಪ, ವಿರಕ್ತಬಸವಪ್ಪ, ಮರುಳಪ್ಪ,

ಮಾನಂಗಿಶಿಖರಪ್ಪ, ಬಿಟ್ಟಮುಂಡೆಯುವ್ರಭು, ಬಯಲಪ್ರಭು, ಕಳಲಿ ಕಂಚಿದೇವ, ಕಾನಾಪುರದ ಮುರುಳಸಿದ್ಧೇಶ, ಉಪ್ಪಲಗುಡಿ ಸಂಗಮೇಶ, ಕೊಟ್ಟೂರು ಬಸವಲಿಂಗೇಶ, ಆನೆಯಗುಂದಿ ಬೆಟ್ಟದ ಹುಚ್ಚದೇವ, ಬೆಳುಗಾವಿಯ ಹುಚ್ಚಸಿದ್ಧರಾಮೇಶ, ಇವರೆಲ್ಲ ಜಂಗಮರಿಗೆ ದಾಸೋಹ ಮಾಡಿ, ಹಲವು ಪವಾಡಗಳನ್ನು ಮೆರೆಯುವರು. ಹಿಂದೆ ಹೇಳಿದ ನರಸಿಹ್ಮರಾಯನ ಮಕ್ಕಳೆಲ್ಲ ಅಳಿದ ನಂತರ, ನರಸಿಹ್ಮರಾಜನ ಅಳಿಯಂದಿರು ಮೂವರು ಕೂಡ ತುರುಕರೊಡನೆ ಕಾದು ಸಾಯುವರು. ಹಿರಿಯನ ತಲೆಯು ಕಾಶಿಯಲ್ಲಿ ಸದಾ ಪೂಜೆಗೊಳ್ಳುತ್ತಿರುವುದು. ತುರುಕರು ಊರನ್ನೆಲ್ಲ ಸುಲಿಯುವರು. ಹಂಪೆಯ ವಿರೂಪಾಕ್ಷದೇವಾಲಯದ ಗೋಪುರವನ್ನು ಕೆಡಹಿಸುವರು ಆನೆಯಿಂದ ವೀರೇಶವಿಗ್ರಹವನ್ನು ಕೀಳಿಸಿ, ವಿಷ್ಣು ಮೊದಲಾದವರ ಪ್ರತಿಮೆಗಳನ್ನು ಒಡೆದು, ಸಿಕ್ಕಿದವರನ್ನೆಲ್ಲ ಸಹ್ಮರಿಸಿ, ಕೆಲದಿನಗಳವರೆಗೆ ಅಲ್ಲಿದ್ದು ಹೊರಟುಹೋಗುವರು. ಬಳಿಕ ಪಟ್ಟಣಗಳೆಲ್ಲ ಕೆಟ್ಟು, ರಾಜ್ಯಗಳೆಲ್ಲ ಅನಾಯಕವಾಗಿ, ಅಲ್ಲಲ್ಲಿ ಬಲಶಾಲಿಗಳಾದ ಶೆಟ್ಟರುಗಳು ಗುಂಪು ಕಟ್ಟಿ ಸಿಕ್ಕಿದ ಕಡೆಯಲ್ಲಿ ಕೊಳ್ಳೆಹೊಡೆಯುತ್ತಾ, ಭಕ್ತಮಾಹೇಶ್ವರಾದಿಗಳು ತಂತಮ್ಮ ಆಚಾರಗಳನ್ನು ಬಿಟ್ಟು ಸ್ವೇಚ್ಛೆಯಿಂದ ನಡೆಯುತ್ತ, ಧರ್ಮಭ್ರಷ್ಟರಾಗುವರು. ಮಾರಿ ಮಸಣಿ ದುರ್ಗಿಯರು ಮನುಜರನ್ನು ಬೇಟೆಯಾಡುವರು. ಅಪರಿಮಿತಪ್ರಜೆಗಳು ಇಲ್ಲವಾಗಿ, ಕುಲಕ್ಕೊಬ್ಬೊಬ್ಬರಂತೆ ಅಲ್ಲಲ್ಲಿ ಸತ್ಯಪರರಾದ ಶರಣರುಳಿಯುವರು. ಕಲಿಯುಗದಲ್ಲಿ ೪೭೮೩ ನೇ ಸ್ವಭಾನುಸಂವತ್ಸರದ ಮಾಘಬಹುಳ ಚತುರ್ದಶಿ ಸೋಮವಾರದ ದಿವಸ ೨೮ ಗಳಿಗೆಯ ಸಮಯದಲ್ಲಿ ಕರ್ಣಾಟದೇಶಕ್ಕೆ ವೀರವಸಂತನೆಂಬ ರಾಜನು ಗುಟ್ಟಿನಿಂದ ಬರುವನು. ಆತನು ಶಿವಭಕ್ತಕ್ಷತ್ರಿಯರಲ್ಲಿ ಹುಟ್ಟುವನು. ಎಣ್ಣೆಹೊಳೆಗೂ ಕಾವೇರೀನದಿಗೂ ಮಧ್ಯದಲ್ಲಿರುವ ಬಸವಪಟ್ಟಣಕ್ಕೆ ಹೋಗುವನು. ಆಗ ನಾವು ಬ್ರಾಹ್ಮಣಜಾತಿಯಲ್ಲಿ ಹುಟ್ಟಿ ಕುಟ್ಸಲವನ್ನುದ್ಧಾರಮಾಡುವೆವು. ಬಸವೇಶನು ಸಕಲ ಗಣಸಮೂಹದೊಡನೆ ಅಲ್ಲಿಗೆ ಬರುವನು. ನರಸಿಹ್ಮರಾಜನ ವಂಶದ ಅಳಿಯರ ಮಕ್ಕಳು ಅಷ್ಟರಲ್ಲಿ ಪ್ರಬಲರಾಗಿ ತುರುಕರಾಜ್ಯಕ್ಕೆ ಹೋಗಿ, ಬಿದರೆಕೋಟೆಯನ್ನು ಕೆಡಹಿ, ಕಾಶಿಯವರೆಗೂ ತುರುಕರನ್ನು ಅಟ್ಟಿಕೊಂಡು ಹೋಗಿ ಸಹ್ಮರಿಸಿ, ಅಲ್ಲಲ್ಲಿಗೆ ಅವರ ಗುಮ್ಮಟಗೋರಿ

ಮೊದಲಾದ ಗುರ್ತಿನ ಜಾಗಗಳನ್ನು ಹಾಳ್ಮಾಡುವರು. ಈ ಸುದ್ದಿಯನ್ನು ದಿಳ್ಳಿಯ ಸುಲ್ತಾನರು ಕೇಳಿ ಕೆರಳಿ, ಆ ತೆಲುಗಾಣ್ಯದರಸರಮೇಲೆ ದಂಡೆತ್ತಿ ಹೊರಟು, ರಾಮೇಶ್ವರದವರೆಗೂ ಅಟ್ಟಿಕೊಂಡು ಬರುವರು. ತುರುಕರ ಕಡೆಯ ೧೮ ಮಂದಿ ಖಾನರುಗಳು ತಮ್ಮ ೧೮ ಲಕ್ಷ ರಾವುತರೊಡನೆ ಸಕಲ ದೇಶಗಳನ್ನೆಲ್ಲ ಗೆದ್ದು ಹಾಳ್ಮಾಡುತ್ತ, ರಾಮಸೇತುವಿನ ಬಳಿಗೆ ಹೋಗಿ, ಅಲ್ಲಿಂದ ಹಿಂತಿರುಗುವರು. ಕಾಡನಬೇಡರು ಅವರೊಡನೆ ಕಾದಿ, ಅವರ ಕುದುರೆಗಳನ್ನೆಲ್ಲ ಹಿಡಿದು ಕಾಡಿನ ಗಿಡವೊಂದಕ್ಕೊಂದೊಂದರಂತೆ ಕಟ್ಟಿಹಾಕುವರು. ಕಡೆಗೆ ತುರುಕರು ದಂಡಿನೊಳಗೆ ಅರ್ಧಭಾಗವನ್ನು ಕಳೆದುಕೊಂಡು, ಆನೆಯಗುಂದಿಗೆ ಹೋಗಿ, ಪಾಳಯವನ್ನು ಮಾಡಿ, ವಾಲಿಯ ಬಂಡಾರವನ್ನು ತೆಗಿಸಿ, ಅದರಲ್ಲಿದ್ದ ದ್ರವ್ಯರಾಶಿಯನ್ನು ನನಗೆ ತನಗೆಂದು ಹಂಚಿಕೊಳ್ಳುವುದಕ್ಕಾಗಿ ಕಡಿದಾಡಿ ಸಾಯುವರು. ತುರುಕರಿಗೆ ಶಿವನು ಕೊಟ್ಟಿದ್ದ ವರವು ಅಲ್ಲಿಗೆ ಸಮಾಪ್ತವಾಗುವುದು. ನರಸಿಹ್ಮನ ವಂಶವೂ ಅಲ್ಲಿಗೆ ಕೊನೆಮುಟ್ಟುವುದು. ಬಳಿಕ ಜೇಡರು ಆನೆಗುಂದಿಗೆ ಬಂದು, ಅಲ್ಲಿ ಹೊಸದಾಗಿ ಪಟ್ಟಣವನ್ನು ಕಟ್ಟಿ, ವಾಸ ಮಾಡುತ್ತ, ಆರು ತಿಂಗಳವರೆಗೆ ಪಟ್ಟವನ್ನನುಭವಿಸುವರು. ಅಷ್ಟರಲ್ಲಿ ಅತ್ತ ಬಸವ ಪಟ್ಟಣದೊಳಗೆ ವೀರವಸಂತರಾಯನಿಗೆ ಪಟ್ಟವಾಗುವುದು. ಆತನು ವಿದ್ಯಾನಗರಿಗೆ ಬಂದು, ವಾಲಿ ಬಂಡಾರದ ಹೂವನ್ನೆಲ್ಲ ಸ್ವಾಧೀನ ಮಾಡಿಕೊಂಡು, ಆ ರಾಜ್ಯವನ್ನೆಲ್ಲ ತಾನೇ ಆಳುತ್ತಲಿರುವನು. ಕಲ್ಯಾಣಪಟ್ಟಣವನ್ನು ಮತ್ತೆ ಚೆನ್ನಾಗಿ ಕಟ್ಟಿಸುವನು. ಕೋಟೆ ಕೊತ್ತಳ ಮಹಾದ್ವಾರ ತ್ರಿಪುರಾಂತಕದೇವಾಲಯಾದಿಗಳೆಲ್ಲ ನಿರ್ಮಿಸಲ್ಪಡುವುವು. ಬಸವೇಶ ಮೊದಲಾದವರ ಅರಮನೆಗಳೂ, ಜಂಗಮರ ಮಠಗಳೂ ರಚಿಸಲ್ಪಡುವುವು. ಆ ಪಟ್ಟಣದಲ್ಲಿ ಭಕ್ತ್ಯಾಚಾರಸದ್ಧರ್ಮಾದಿಗಳು ವೃದ್ಧಿಗೊಳ್ಳುವುವು. ಬಳಿಕ ವೀರವಸಂತನು ವಿದ್ಯಾನಗರಿಯಿಂದ ಕಲ್ಯಾಣಕ್ಕೆ ಬಂದು, ಅಳಿಯಬಿಜ್ಜಳನರಮನೆಯಲ್ಲೇ ವಾಸಮಾಡುವನು. ಬಸವೇಶನು ೭೭೦ ಅಮರಗಣಂಗಳನ್ನು ಕೂಡಿಕೊಂಡು ಬಂದು, ತನ್ನರಮನೆಯಲ್ಲಿ ವಾಸ ಮಾಡುವನು. ವೀರವಸಂತನು ನಮಗೆ ಪ್ರಧಾನಿಪಟ್ಟವನ್ನು ಕಟ್ಟಲು, ನಾವು ನಮ್ಮರಮನೆಯಲ್ಲಿರುವೆವು. ಇದೇ ಮುಂದೆ ನಡೆಯುವ ಸಂಗತಿಯ ಸಂಕ್ಷಿಪ್ತವಿವರಣವು. ನೀನು ಸೊನ್ನಲಾಪುರಕ್ಕೆ

ಹೋಗಿ ನಾವು ಮತ್ತೆ ಬರುವವರೆಗೂ ಅಲ್ಲೇ ಶಿವಯೋಗಸಮಾಧಿಯಲ್ಲಿರು. ಎಂದು ಚೆನ್ನಬಸವೇಶರು ಅಪ್ಪಣೆ ಕೊಡಿಸಲು, ಸಿದ್ಧರಾಮೇಶನು ಎದ್ದು, ಆ ತನ್ನ ಗುರುವಿಗೂ ಬಸವಾದಿಪ್ರಮಥರಿಗೂ ಸಾಷ್ಟಾಂಗನಮಸ್ಕಾರ ಮಾಡಿದನು. ಅವರೆಲ್ಲರೂ ಪ್ರತಿನಮಸ್ಕಾರ ಮಾಡಲು, ಸಿದ್ಧರಾಮೇಶನು ಸಾಗಗಳಿಸಿಕೊಂಡು ಸೊನ್ನಲಾಪುರಕ್ಕೆ ದಯಮಾಡಿಸಿ, ಶಿವಯೋಗಸಮಾಧಿಯಲ್ಲಿದ್ದನು. ಕಲ್ಯಾಣಪಟ್ಟಣದಲ್ಲಿ ಚೆನ್ನಬಸವೇಶ ಬಸವೇಶ ಮೊದಲಾದ ಶರಣರೆಲ್ಲರೂ ಶಿವಾನುಭವಾನಂದಸಂದೋಹತುಂದಿಲರಾಗಿ ವಿರಾಜಿಸುತ್ತಿದ್ದರು.

ಶಾಲಿವಾಹನಶಕ ೧೫೦೭ ನೇ ತಾರಣಸಂವತ್ಸರ ಶ್ರಾವಣ ಬಹುಳ ದಶಮಿ ಗುರುವಾರದ ದಿವಸ ಶ್ರೀ ವಿರೂಪಾಕ್ಷಪಂಡಿತರು ವಾರ್ಧಿಕಷಟ್ಪದಿಯ ಕಾವ್ಯವಾಗಿ ರಚಿಸಿ ಪೂರ್ಣಗೊಳಿಸಿದ ಚೆನ್ನಬಸವೇಶ್ವರಪುರಾಣವು, ಶಾಲಿವಾಹನಶಕ ೧೮೨೮ ನೇ ಪರಾಭವಸಂವತ್ಸರ ಕಾರ್ತಿಕ ಶುದ್ಧ ೭ ಬುಧವಾರದ ದಿವಸ, ಎಮ್. ಆರ್. ಕರಿಬಸವಶಾಸ್ತ್ರಿಯಿಂದ ಲೋಕಹಿತಾರ್ಥವಾಗಿ ಬಿಡುಗನ್ನಡನುಡಿಯಿಂದ ರಚಿಸಿ ಪೂರ್ಣಗೊಳಿಸಲ್ಪಟ್ಟಿತು. ಜಗಜ್ಜನನೀಜನಕರಾದ ಪಾರ್ವತೀಪರಮೇಶರೂ, ಪವಿತ್ರಚರಿತರೂ ಕರುಣಾಮಯರೂ ಆದ ಬಸವಾದಿಪ್ರಮಥರೂ, ಈ ಗ್ರಂಥವನ್ನೋದುವ ಕೇಳುವ ಸಕಲಸಜ್ಜನರಿಗೂ ಇಷ್ಟಾರ್ಥವನ್ನಿತ್ತು ಕಾಪಾಡಲಿ.

ಶ್ರೀಮತ್ಸಚ್ಚಿದಾನಂದಮೂರ್ತಿಯಾದ ಯಾವ ಸದಾಶಿವನ ಇಚ್ಛಾಮಾತ್ರವು ಸಕಲಜಗತ್ಸೃಷ್ಟಿಸ್ಥಿತಿಲಯಗಳಿಗೆ ಹೇತುವಾಗಿರುವುದೋ, ಯಾವ ಮಹಾದೇವನ ಘನತರಲೀಲಾಸಂದೋಹಗಳು ಜಗದುದ್ಧರಣಕ್ಕೆ ಕಾರಣವಾಗಿರುವುವೋ, ಯಾವ ಪರಮೇಶ್ವರನ ಕರುಣಾಕಟಾಕ್ಷಲೇಶವೂ ಭವಭಯನಿವಾರಕವಾಗಿರುವುದೋ, ಯಾವ ಶಂಕರನ ಪರಮಾನುಗ್ರಹವು ಸಕಲಸೌಭಾಗ್ಯಪ್ರದಾಯಕವೋ, ಭಕ್ತೈಕಸುಲಭನಾದ ಆ ನನ್ನ ದಯಾಳುಪ್ರಾಣನಾಥನನ್ನು ಸದಾ ನನ್ನ ಮನೋಮಂದಿರದಲ್ಲಿಟ್ಟು ಸೇವಿಸುತ್ತಿರುವೆನು.

ಶ್ರೀಮದ್ವೀರಶೈವಮತಸುಧಾಶರಧಿಯನ್ನಭಿವೃದ್ಧಿಗೊಳಿಸಿ, ಭಕ್ತಜನಮನಶ್ಚಕೋರಗಳನ್ನು ಪರಿತುಷ್ಟಪಡಿಸಿ, ಕಲ್ಯಾಣಭಾಗ್ಯಕುವಲಯವನ್ನು ವಿಕಸನಗೊಳಿಸಿ, ತನ್ನ ಶುದ್ಧವರ್ತನಾಮೃತಕಿರಣಜಾಲದಿಂದ

ಭಕ್ತಿಮಾರ್ಗವನ್ನು ಪ್ರದರ್ಶನ ಮಾಡಿದ ಪ್ರಣವಮೂರ್ತಿಯಾದ ಶ್ರೀ ಬಸವೇಶಚಂದ್ರಮನ ತಳಿರಡಿಗೆರಗಿ ಭವಸಂತಾಪಶಾಂತಿಯನ್ನು ಪ್ರಾರ್ಥಿಸುವೆನು.

ಜಗತ್ತಿನಲ್ಲಿ ಆವರಿಸಿದ್ದ ಅಜ್ಞಾನಾಂಧಕಾರವನ್ನು ತನ್ನ ಉಪದೇಶವಾಗ್ಜಾಲಕಿರಣಗಳಿಂದ ಕಡೆದೊಲಗಿಸಿ, ಷಟ್ಸ್ಥಲಸಿದ್ಧಾಂತ ಕಮಲದ ಸುಜ್ಞಾನಪರಿಮಳವನ್ನು ಹರಡಿ, ನಿತ್ಯಸುಖತೇಜಸ್ಸಿನಲ್ಲಿ ಶಿವಶರಣರೆಲ್ಲರೂ ವಿಹರಿಸುವಂತೆ ಮಾಡಿದ, ಚಿತ್ಕಳಾಮೂರ್ತಿಯಾದ ಶ್ರೀ ಚೆನ್ನಬಸವೇಶ್ವರಭಾಸ್ಕರನ ಪಾದಕಮಲಕ್ಕೆ ಮಣಿದು ಶಿವಜ್ಞಾನಾರೋಗ್ಯಭಾಗ್ಯವನ್ನು ಕೋರುವೆನು.

ಮಾಯಾಟವಿಯನ್ನು ದಹಿಸಿ, ಬಸವಾದಿಪ್ರಮಥರೆಲ್ಲರ ಮನೋಮಾಲಿನ್ಯವನ್ನು ತೊಡೆದು, ಚಿಜ್ಜ್ಯೋತಿಪ್ರಭೆಯಿಂದ ಆಶ್ರಿತರ ಚಿತ್ತಗುಹಾಂತರವನ್ನೆಲ್ಲ ಬೆಳಗಿ, ವೈರಾಗ್ಯವನ್ನು ಬಿತ್ತರಿಸಿದ, ಮಹಾನಿರಂಜನಮೂರ್ತಿಯಾದ ಶ್ರೀ ಅಲ್ಲಮಪ್ರಭುವರನ ಪಾದಾಶ್ರಯವನ್ನು ನಂಬಿ ಚಿತ್ತಶುದ್ಧಿಯನ್ನು ಬೇಡುವೆನು.

ಭೂತಭವಿಷ್ಯದ್ವರ್ತಮಾನಕಾಲದ ಸಕಲ ಶಿವಶರಣರ ಪಾದಪಯೋಜಕ್ಕೆ ಕೈಂಕರ್ಯದಿಂದ ತಲೆವಾಗುವೆನು.

ಶ್ರೀಸದಾಶಿವಾನುಗ್ರಹಬಲದಿಂದ ಬರೆಯಲ್ಪಟ್ಟಿರುವ ಈ "ಚೆನ್ನಬಸವೇಶವಿಜಯ" ಕೃತಿಯು, ಶ್ರೀ ಶಿವಶರಣರ ಮೆಚ್ಚುಗೆಗೆ ಪಾತ್ರವಾಗಿ, ಸಕಲ ಸದ್ಭಕ್ತಜನಗಳಿಂದ ಅಂಗೀಕೃತವಾಗಿ, ಆಚಂದ್ರತಾರಕವಾಗಿ ವಿರಾಜಿಸುತ್ತಿರಲಿ.

ಶ್ರೀ ಸರ್ವಮಂಗಳಾವರನು ಸಕಲರಿಗೂ ಸನ್ಮಂಗಳವನ್ನುಂಟುಮಾಡಲಿ. ಎಂಬಲ್ಲಿಗೆ ೧೦ ನೇ ಅಧ್ಯಾಯದೊಡನೆ ಚೆನ್ನಬಸವೇಶವಿಜಯವು

ಸಂಪೂರ್ಣವು.

---

ಕಂ ॥ ನೆರೆವ ಪರಾಭವಸಂವ ।
ತ್ಸರಕಾರ್ತಿಕಶುದ್ಧಸಪ್ತಮೀಬುಧದಿನದೊಳ್ ।
ಕರಿಬಸವಶಾಸ್ತ್ರಿರಚಿತಂ ।
ಸಂಪೂರ್ಣವಿದಾಯ್ತು ಪರಮಶಿವಸತ್ಕೃಪೆಯಿಂ ॥

